# RIG-VEDA SAMHITA

# ಋಗ್ವೇದಸಂಹಿತಾ

ಭಾಗ ೧೨

ದ್ವಿತೀಯಾಷ್ಟಕದಲ್ಲಿ ೩ನೇ ಅಧ್ಯಾಯವು

ಅನುವಾದಕ :

ಆಸ್ಥಾನ ಮಹಾವಿದ್ವಾನ್,

ಹೆಚ್. ಪಿ. ವೆಂಕಟರಾವ್.

ಶ್ರೀ ವಿನಾಯಕ ಪ್ರೆಸ್

ಮೈಸೂರು.



ಋಗ್ವೇದಸಂಹಿತಾ
ಭಾಗ—೧೨
ದ್ವಿತೀಯಾಷ್ಟಕದಲ್ಲಿ ಮೂರನೇ ಅಧ್ಯಾಯ
ಪ್ರಥಮ ಮಂಡಲದ ಸೂಕ್ತಗಳು ೧೫೮–೧೬೫

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೧೨

# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದ ಸಂಹಿತಾ

(ಕರ್ಣಾಟಕ ಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ—೧೨

ಎರಡನೆಯ ಅಷ್ಟಕದಲ್ಲಿ ಮೂರನೆಯ ಅಧ್ಯಾಯವು.

ಪ್ರಥಮ ಮಂಡಲದ ಸೂಕ್ತಗಳು ೧೫೮–೧೬೫

———:o:———

*Translated with Exhaustive Critical Notes*

*by*


ASTHANA MAHAVIDWAN

H. P. VENKATA RAO.

*Editor.*



*Printed at*

SREE VINAYAK PRINTING WORKS, MYSORE.

1951

Published by the gracious permission of

His Highness

Sri Jayachamarajendra Wadiyar Bahadur,

G.C.B., G.C.S.I., Maharaja of Mysore.



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ
**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ. ಸಿ. ಬಿ., ಜಿ. ಸಿ. ಎಸ್. ಐ. ರವರು.**

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನ ವಿದ್ವನ್ಮಂಡಲಿ

ಅಧ್ಯಕ್ಷರು :

ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಿಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು.**

—o—

Translator & Editor :

ಆಸ್ಥಾನ ಮಹಾವಿದ್ವಾನ್ H. P. ವೆಂಕಟರಾವ್

Associate :

ಶ್ರೀ. G. N. ಚಕ್ರವರ್ತಿ M. A.

Professor of Sanskrit, St. Philomina's College, Mysore.

---

ಸಹಾಯಕ ವಿದ್ವನ್ಮಂಡಲಿ

1. ಬ್ರ॥ ಶ್ರೀ॥ ಜಿ. ವಿಷ್ಣುಮೂರ್ತಿಭಟ್ಟರು, ವ್ಯಾಕರಣವಿದ್ವಾನ್, ಶ್ರೀಮನ್ಮಹಾರಾಜರವರ ಸಂಸ್ಕೃತಮಹಾಪಾಠಶಾಲಾ, ಮೈಸೂರು.
2. ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥ H. ಗಂಗಾಧರಶಾಸ್ತ್ರಿಗಳು, ಜ್ಯೌತಿಷ ವಿದ್ವಾನ್ ಮತ್ತು ಕರ್ಣಾಟಕ ಭಾಷಾಪಂಡಿತರು,
3. ಬ್ರ॥ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು, ಋಗ್ವೇದ ಘನಪಾಠಿಗಳು.
4. ಬ್ರ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು, ಶ್ರೌತ ವಿದ್ವಾನ್.
5. ಬ್ರ॥ ಶ್ರೀ॥ ಹಿಟ್ಟವಳ್ಳಿ ದೇವರಭಟ್ಟರು, ಮೀಮಾಂಸಾದರ್ಶನ ಪಂಡಿತರು.
6. ಬ್ರ॥ ಶ್ರೀ॥ ವೆಂಕಟರಮಣಾಚಾರ್, M. A., B. T., ಸಾಹಿತ್ಯವಿದ್ವಾನ್.
7. ಬ್ರ॥ ಶ್ರೀ॥ S. ರಂಗನಾಥನ್, ಸಾಹಿತ್ಯವಿದ್ವಾನ್, ಅರಮನೆ ಸರಸ್ವತೀ ಭಂಡಾರ.
8. ಬ್ರ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್, ಸಾಹಿತ್ಯ ವಿದ್ವಾನ್, Govt. Oriental Research Institute. Mysore.
9. ಬ್ರ॥ ಶ್ರೀ॥ S. ಸೀತಾರಾಮಶಾಸ್ತ್ರಿಗಳು, ರಿಟೈರ್ಡ್ ಪಂಡಿತರು. Govt. Oriental Research Institute, Mysore.



ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ
**ಶಿಲ್ಪಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು**
ವೇದವಿಮರ್ಶನ ವಿದ್ವನ್ಮಂಡಲಿಯ ಅಧ್ಯಕ್ಷರು

# ಪೀಠಿಕೆ.

---

ಋಗ್ವೇದಸಂಹಿತೆಯ ಈ ಭಾಗದಲ್ಲಿ ಇತರ ಭಾಗಗಳಲ್ಲಿರುವುದಕ್ಕಿಂತ ಪ್ರತ್ಯೇಕವಾದ ಒಂದುವಿಧ ವೈಶಿಷ್ಟ್ಯವಿದೆ. ೧೬೨ ಮತ್ತು ೧೬೩ ನೇ ಸೂಕ್ತಗಳಲ್ಲಿರುವ ಅಶ್ವಸ್ತುತಿಯೇ ಅಶ್ವಮೇಧಯಜ್ಞದಲ್ಲಿ ಆಚರಿಸಲ್ಪಡುವ ನಾನಾವಿಧಕರ್ಮಗಳಿಗೆ ತಳಹದಿಯಾಗಿದೆ. ಈ ಸೂಕ್ತಗಳನ್ನು ಬಿಟ್ಟರೆ ಅಶ್ವಮೇಧದಲ್ಲಿ ಪಠಿಸಬೇಕಾದ ಪ್ರಾಮುಖ್ಯವಾದ ಬೇರೆ ಮಂತ್ರಗಳೇ ಇಲ್ಲ. ಇದರಿಂದ ಈ ಸೂಕ್ತಗಳ ಪ್ರಾಮುಖ್ಯತೆಯು ಎಷ್ಟಿರುವುದೆಂಬುದನ್ನು ಹೇಳಬೇಕಾದ ಅವಶ್ಯಕತೆ ಇಲ್ಲ. ಅದರಂತೆ ೧೬೪ ನೆಯ ಸೂಕ್ತವೂಸಹ ಅನೇಕ ಉದಾತ್ತವಾದ ಮತ್ತು ಗಹನವಾದ ತತ್ತ್ವಗಳಿಂದ ತುಂಬಿದೆ. ಇದರಲ್ಲಿರುವ ತತ್ತ್ವಗಳೂ, ವಿಷಯಗಳೂ ಈಗ ಪ್ರಚಾರದಲ್ಲಿರುವ ದ್ವೈತಾದ್ವೈತ ವಿಶಿಷ್ಟಾದ್ವೈತ ಮುಂತಾದ ವಿಧವಿಧವಾದ ಮತಗಳಿಗೂ ಮುಖ್ಯವಾದ ಅನೇಕ ಉಪನಿಷತ್ತುಗಳಿಗೂ, ಪ್ರಪಂಚಸೃಷ್ಟಿ, ಏಕದೇವತಾಪ್ರತಿಪಾದನೆ, ಜೀವಾತ್ಮಪರಮಾತ್ಮರ ಸ್ವರೂಪ, ಮೊದಲಾದ ಅನೇಕ ಗಹನವಿಷಯಗಳ ನಿರೂಪಣೆಗೂ ಆಧಾರಭೂತವಾಗಿವೆ. ಆದುದರಿಂದ ಈ ಸೂಕ್ತಗಳನ್ನು ನಾವು ಸ್ವಲ್ಪ ವಿಸ್ತಾರವಾಗಿಯೇ ವಿವರಿಸಿದ್ದೇವೆ. ವಿವರಿಸಬೇಕಾದ ವಿಷಯಗಳು ಇನ್ನೂ ಬೇಕಾದಷ್ಟಿದ್ದರೂ ಗ್ರಂಥವು ಅತಿವಿಸ್ತಾರವಾಗುವುದೆಂಬ ಭಯದಿಂದಲೂ ಇತರ ಅನಿವಾರ್ಯಗಳಿಂದಲೂ ಆ ಕಾರ್ಯವನ್ನು ಅಷ್ಟಕ್ಕೇ ಬಿಡಬೇಕಾಯಿತು.

ಈ ಗ್ರಂಥಮುದ್ರಣವ ವಿಚಾರದಲ್ಲಿ ಇದುವರೆಗೂ ನಡೆದುಬರುತ್ತಿದ್ದ ಪ್ರಭುತ್ವವರ್ಗದವರ ಉದಾರನೀತಿಯಿಂದ ಕೂಡಿದ ಆಡಳಿತವು ಬದಲಾಗಿ ಸರ್ಕಾರದವರು ಈ ಮಹತ್ಕಾರ್ಯವನ್ನು ವಹಿಸಿರುವರು ಇದರ ಪರಿಣಾಮವಾಗಿ ಗ್ರಂಥಮುದ್ರಣಕಾರ್ಯವು ಒಂದುವರ್ಷದಿಂದಲೂ ನಿಂತುಹೋಗಿ ಈಗತಾನೇ ಪುನಃ ಪ್ರಾರಂಭವಾಗಿದೆ. ಆದರೂ ಗ್ರಂಥಮುದ್ರಣಕ್ಕಾಗಿ ಬೇಕಾದ ದ್ರವ್ಯಸಹಾಯವು ಸಾಕಾದಷ್ಟು ಇಲ್ಲವಾದ್ದರಿಂದ ಈ ಕಾರ್ಯವು ನಿಧಾನವಾಗಿ ಸಾಗಬೇಕಾಗಿದೆ. ಆದರೂ ಇದಕ್ಕೆ ಸಂಬಂಧಪಟ್ಟ ಅಧಿಕಾರಿವರ್ಗದವರು ಬೇಕಾದ ಸಹಾಯವನ್ನು ಒದಗಿಸಿಕೊಟ್ಟು ಸಹಕರಿಸಿದಲ್ಲಿ ಗ್ರಂಥವು ಮುಂದುವರಿಯುವುದೆಂಬ ಭರವಸೆಯು ನಮಗಿದೆ ಈ ಗ್ರಂಥಪ್ರಕಟನಕ್ಕೆ ಪ್ರಾರಂಭದಿಂದಲೂ ವಿಶೇಷವಾಗಿ ಆಸಕ್ತಿಯನ್ನು ವಹಿಸಿ ಸಮಸ್ತಸಹಾಯಗಳನ್ನು ಒದಗಿಸಿಕೊಟ್ಟು ತಮ್ಮ ಪ್ರಜಾವರ್ಗದ ಶ್ರೇಯಸ್ಸನ್ನೇ ಮುಖ್ಯಧ್ಯೇಯವನ್ನಾಗಿ ಭಾವಿಸಿರುವ ಶ್ರೀಮನ್ಮಹಾರಾಜರವರ ಘನವಾದ ಕೃಪಾಶ್ರಯದಲ್ಲಿಯೇ ಈ ಕಾರ್ಯವು ನೆರವೇರುತ್ತಿರುವುದರಿಂದ ಈ ಸತ್ಕಾರ್ಯವು ನಿರ್ವಿಘ್ನವಾಗಿ ಪೂರ್ಣವಾಗುವುದೆಂಬ ಭರವಸೆಯೂ ನಮಗಿದೆ.

ಅತಿ ಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನು ಸರಳವಾದ ಕನ್ನಡಭಾಷೆಯಲ್ಲಿ ವಿಮರ್ಶಾನುವಾದಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರಾದಿ ಸಕಲಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ ಕರ್ನಾಟಕ ಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುವರ್ಯರು ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟಣೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಿಸುತ್ತಿರುವುದು ಕರ್ನಾಟಕಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ

ಅವರ ಕುಟುಂಬಕ್ಕೂ (ವೇದಮಂತ್ರಗಳಲ್ಲಿ ಅತಿಮುಖ್ಯವೆಂದು ಪರಿಗಣಿಸಲ್ಪಟ್ಟಿರುವ ಗಾಯತ್ರೀ ಎಂಬ ಮಂತ್ರ ನಾಮಾಂಕಿತರಾದ) ರಾಜಕುಮಾರಿಗೂ, ಸಮಸ್ತಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕ ಫಲಗಳಾದ. ಆಯುರಾರೋಗ್ಯೈಶ್ವರ್ಯಾದಿಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು
ಖರನಾಮ ಸಂ॥ ಶ್ರಾವಣ ಶುದ್ಧ ಪಂಚಮೀ ಮಂಗಳವಾರ
7—8—1951

ಆಸ್ಥಾನ ಮಹಾವಿದ್ವಾನ್
**ಹೆಚ್. ಪಿ. ವೆಂಕಟರಾವ್,**
**Editor**

|| ಶ್ರೀಃ ||

# ವಿ ಷ ಯಾ ನು ಕ್ರ ಮ ಣಿ ಕೆ.

## ದ್ವಿತೀಯಾಷ್ಟಕದಲ್ಲಿ ತೃತೀಯಾಧ್ಯಾಯವು

## ಪ್ರಥಮಮಂಡಲದ ಸೂಕ್ತಗಳು ೧೫೮—೧೬೩

ಪುಟಸಂಖ್ಯೆ

ಪುಟಸಂಖ್ಯೆ

॥ ವಿಷಯಾನುಕ್ರಮಣಿಕೆ ಸಮಾಪ್ತವು ॥

——:0:——

## ಸಂಕೇತಾಕ್ಷರಗಳ ವಿವರಣೆಯು.

---

ಅಥ. ಸಂ.—ಅಥರ್ವವೇದಸಂಹಿತಾ
ಆಪ. ಸೂ.—ಆಪಸ್ತಂಬಶ್ರೌತಸೂತ್ರ
ಆಪ. ಧ. ಸೂ —ಆಪಸ್ತಂಬ ಧರ್ಮ ಸೂತ್ರ
ಆಪ. ಪ. ಸೂ—ಆಪಸ್ತಂಬ ಪರಿಭಾಷಾಸೂತ್ರ
ಆ. ಸೂ. ಅಥವಾ ಆ. ಆಶ್ವಲಾಯನ ಶ್ರೌತಸೂತ್ರ
ಉ. ಸೂ.—ಉಣಾದಿ ಸೂತ್ರ
ಋ. ಸಂ.—ಋಗ್ವೇದ ಸಂಹಿತಾ
ಐ. ಆ.—ಐತರೇಯಾರಣ್ಯಕ
ಐ. ಉ.—ಐತರೋಯೋಪನಿಷತ್
ಐ. ಬ್ರಾ.—ಐತರೇಯ ಬ್ರಾಹ್ಮಣ
ಛಾ. ಉ.—ಛಾಂದೋಗ್ಯೋಪನಿಷತ್
ಜೈ. ಪೂ. ಸೂ.—ಜೈಮಿನೀಯ ಪೂರ್ವಮೀಮಾಂಸಾ ಸೂತ್ರ
ಜೈ. ನ್ಯಾ. ವಿ.—ಜೈಮಿನಿಯ ನ್ಯಾಯಮಾಲಾವಿಸ್ತರ
ತಾ. ಬ್ರಾ.—ತಾಂಡ್ಯಮಹಾ ಬ್ರಾಹ್ಮಣ
ತೈ. ಆ.—ತೈತ್ತಿರೀಯ ಆರಣ್ಯಕ
ತೈ. ಬ್ರಾ —ತೈತ್ತಿರೀಯ ಬ್ರಾಹ್ಮಣ
ತೈ. ಸಂ.—ತೈತ್ತಿರೀಯ ಸಂಹಿತಾ
ನಿ —ನಿರುಕ್ತ, ನಿಘಂಟು
ಪಾ. ಸೂ.—ಪಾಣಿನೀಯ ಸೂತ್ರ
ಪಾ. ಶಿ—ಪಾಣಿನೀಯ ಶಿಕ್ಷಾ
ಫಿ. ಅಥವಾ ಫಿ. ಸೂ.—ಫಿಟ್ ಸೂತ್ರ
ಬ್ರ. ಸೂ—ಬ್ರಹ್ಮ ಸೂತ್ರ
ಮ. ಭಾ.—ಮಹಾಭಾರತ
ಮ. ಸ್ಮೃ.—ಮನು ಸ್ಮೃತಿ
ಮೈ. ಸಂ.—ಮೈತ್ರಾಯಣೀಯಸಂಹಿತಾ
ಯಾ. ಸ್ಮೃ.—ಯಾಜ್ಞವಲ್ಕ್ಯ ಸ್ಮೃತಿ
ವಾ. ಸಂ.—ವಾಜಸನೇಯ ಸಂಹಿತಾ
ವಾ. ಪು.—ವಾಯುಪುರಾಣ
ವಿ. ಪು.—ವಿಷ್ಣುಪುರಾಣ
ವೇ. ಸೂ —ವೇದಾಂತ ಸೂತ್ರ
ಶ. ಬ್ರಾ.—ಶತಪಥಬ್ರಾಹ್ಮಣ
ಸಾ. ಸಂ.—ಸಾಮವೇದ ಸಂಹಿತಾ ಇತ್ಯಾದಿ.

---



॥ ಶ್ರೀ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಸಾಯಣಭಾಷ್ಯಸಹಿತಾ

# ಋಗ್ವೇದ ಸಂಹಿತಾ

ಭಾಗ—೧೨

## ॥ ದ್ವಿತೀಯಾಷ್ಟಕೇ ತೃತೀಯೋಽಧ್ಯಾಯಃ ॥

॥ ಎರಡನೆಯ ಅಷ್ಟಕದಲ್ಲಿ ಮೂರನೆಯ ಅಧ್ಯಾಯವು ॥

## ಪ್ರಥಮಮಂಡಲದಲ್ಲಿ ನೂರ ಐವತ್ತೆಂಟನೆಯ ಸೂಕ್ತವು

॥ ಸಾಯಣಭಾಷ್ಯಂ ॥

ವಸೂ ರುದ್ರೇತ್ಯೇತದನುವಾಕಾಪೇಕ್ಷಯಾ ದ್ವಿತೀಯಂ ಸೂಕ್ತಂ ಷಡೃಚಂ ದೈರ್ಘತಮಸಂ । ಪೂರ್ವತ್ರಾಶ್ವಿನಂ ತ್ವಿತ್ಯುಕ್ತತ್ವಾದಿದಮಪ್ಯಾಶ್ವಿನಂ । ಅನಾದೇಶಪರಿಭಾಷಯಾ ತ್ರೈಷ್ಟುಭಂ । ದೀರ್ಘತಮಾ ಮಾಮತೇಯ ಇತ್ಯಂತ್ಯಾನುಷ್ಟುಪ್ । ತಥಾ ಚಾನುಕ್ರಾಂತಂ । ವಸೂ ಅಂತ್ಯಾನುಷ್ಟುಬಿತಿ ॥ ಅಸ್ಯ ವಿಶೇಷ-ವಿನಿಯೋಗೋ ಲೈಂಗಿಕಃ ॥

ಅನುವಾದವು—ಈ ಸೂಕ್ತದಿಂದ ಎರಡನೆಯ ಅಷ್ಟಕದಲ್ಲಿ ಮೂರನೆಯ ಅಧ್ಯಾಯವು ಪ್ರಾರಂಭವಾಗುವುದು. ವಸೂ ರುದ್ರಾ ಎಂಬ ಈ ಸೂಕ್ತವು ಇಪ್ಪತ್ತೆರಡನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು ಇದರಲ್ಲಿ ಆರು ಋಕ್ಕುಗ

ಳಿರುವವು. ಈ ಸೂಕ್ತಕ್ಕೆ ಉಚಥ್ಯಪುತ್ರನಾದ ದೀರ್ಘತಮಸ್ ಎಂಬುವನು ಋಷಿಯು. ಹಿಂದಿನ ಸೂಕ್ತದಂತೆಯೇ ಈ ಸೂಕ್ತವೂ ಅಶ್ವಿನೀದೇವತಾಕವು. ತ್ರಿಷ್ಟುಪ್‌ಛಂದಸ್ಸು, ದೀರ್ಘತಮಾ ಮಾಮತೇಯ ಎಂಬ ಕೊನೆಯ ಋಕ್ಕು ಅನುಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ ವಸೂ ಅಂತ್ಯಾನುಷ್ಟುಪ್ ಎಂದು ಹೇಳಿರುವುದು. ಈ ಸೂಕ್ತದ ವಿಶೇಷ ವಿನಿಯೋಗವು ಲೈಂಗಿಕವು.

॥ ಓಂ ॥

## ಸೂಕ್ತ—೧೫೮

—

॥ ಮಂಡಲ—೧ ॥ ಅನುವಾಕ—೨೨ ॥ ಸೂಕ್ತ—೧೫೮ ॥

॥ ಅಷ್ಟಕ— ೨ ॥ ಅಧ್ಯಾಯ— ೩ ॥ ವರ್ಗ— ೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ-೬ ॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—ಅಶ್ವಿನೌ ॥

॥ ಛಂದಃ—೧-೫. ತ್ರಿಷ್ಟುಪ್ । ೬-ಅನುಷ್ಟುಪ್ ॥

—

ಸಂಹಿತಾಪಾಠಃ

ವಸೂ ರುದ್ರಾ ಪುರುಮಂತೂ ವೃಧಂತಾ ದಶಸ್ಯತಂ ನೋ ವೃಷಣಾವಭಿಷ್ಟೌ ।
ದಸ್ರಾ ಹ ಯದ್ರೇಕ್ಣ ಔಚಥ್ಯೋ ವಾಂ ಪ್ರ ಯತ್ಸಸ್ರಾಥೇ ಅಕವಾಭಿರೂತೀ। ॥ ೧ ॥

ಪದಪಾಠಃ

ವಸೂ ಇತಿ । ರುದ್ರಾ । ಪುರುಮಂತೂ ಇತಿ ಪುರುಽಮಂತೂ । ವೃಧಂತಾ । ದಶಸ್ಯತಂ । ನಃ । ವೃಷಣೌ । ಅಭಿಷ್ಟೌ ।
ದಸ್ರಾ । ಹ । ಯತ್ । ರೇಕ್ಣಃ । ಔಚಥ್ಯಃ । ವಾಂ । ಪ್ರ । ಯತ್ । ಸಸ್ರಾಥೇ ಇತಿ । ಅಕವಾಭಿಃ । ಊತೀ ॥೧॥

### ಸಾಯಣಭಾಷ್ಯಂ

ಹೇ ವೃಷಣೌ ಕಾಮಾನಾಂ ವರ್ಷಿತಾರೌ ದಸ್ರಾಸ್ಮದ್ವಿರೋಧ್ಯುಪಕ್ಷಪಯಿತಾರೌ ಹೇ ಅಶ್ವಿನೌ ಯುವಂ ನೋಽಸ್ಮಭ್ಯಂ ದಶಸ್ಯತಂ । ದತ್ತಂ ದಿತ್ಸಿತಂ ಫಲಂ । ಕೀದೃಶೌ ಯುವಾಂ । ವಸೂ ವಾಸಯಿತಾರೌ ಪ್ರಜಾನಾಂ । ವಸುನಾ ಧನೇನ ತದ್ವಂತೌ ವಾ ॥ ಮತ್ವರ್ಥೋ ಲುಪ್ಯತೇ ॥ ರುದ್ರಾ ರುದ್ರೌ । ರುದ್ದುಃಖಂ ತದ್ಧೇತುಭೂತಂ ಪಾಪಂ ವಾ । ತಸ್ಯ ದ್ರಾವಯಿತಾರೌ । ಸಂಗ್ರಾಮೇ ಭಯಂಕರಂ ಶಬ್ದಯಂತೌ ವಾ । ರುದ್ರೋ ರೌತೀತಿ ಸತಃ । ನಿ. ೧೦. ೫. । ಇತಿ ಯಾಸ್ಕಃ । ಪುರುಮಂತೂ ಬಹೂನಾಂ ಜ್ಞಾತಾರೌ ॥ ಮನೇರೌಣಾದಿಕಸ್ತುನ್ಪ್ರತ್ಯಯಃ ॥ ವೃಧಂತಾ ವರ್ಧಮಾನೌ ಸ್ತೋತ್ರಾದಿನಾ ಅಭಿಷ್ಟಾವಾಭಿಮುಖ್ಯೇನ ಪೂಜಿತೌ । ಅಭೀಷ್ಟಸಾಧಕೌ ವಾ । ಹಶಬ್ದ ಉಕ್ತಗುಣಪ್ರಸಿದ್ಧಿದ್ಯೋತನಾರ್ಥಃ । ಕಿಮರ್ಥಂ ದೀಯತ ಇತಿ ಚೇತ್ । ಯದ್ಯಸ್ಮಾದೌಚಥ್ಯ ಉಚಥ್ಯಸ್ಯ ಪುತ್ರೋ ದೀರ್ಘತಮಾ ವಾಂ ಯುವಾಂ ರೇಕ್ಣೋ ಧನಂ ಸ್ತುತಿವ್ಯಾಜೇನ ಪ್ರಾರ್ಥಯತೇ ತದರ್ಥಂ । ಯದ್ವಾ । ಅಯಂ ಯಜಮಾನೋ ಯದ್ಯಸ್ಮಾದ್ರೇಕ್ಣೋ ಹವಿರ್ಲಕ್ಷಣಮನ್ನಂ ವಾಂ ಯುವಾಭ್ಯಾಂ ದಾಸ್ಯತಿ ದದಾತೀತಿ ಶೇಷಃ । ಯಸ್ಮಾಚ್ಚಾಕವಾಭಿರಕುತ್ಸಿತೈರೂತ್ಯೂತಿಭೀ ರಕ್ಷಣೈಃ ॥ ಸುಪಾಂ ಸುಲುಗಿತಿ ತೃತೀಯಾಯಾಃ ಪೂರ್ವಸವರ್ಣದೀರ್ಘಃ ॥ ಪ್ರ ಸಸ್ರಾಥೇ ಪ್ರಸಾರಯಥಃ ಪ್ರಕರ್ಷೇಣ ದತ್ಥಃ ತಸ್ಮಾದ್ದಶಸ್ಯತಂ । ಯಸ್ಮಾದಭಿಮತಪ್ರದೌ ಯಸ್ಮಾಚ್ಚಾಯಂ ಪ್ರಾರ್ಥಯತೇ ದದಾತಿ ವಾ ಹವಿಃ ತಸ್ಮಾದ್ದಶಸ್ಯತಮಿತ್ಯರ್ಥಃ ॥

### । ಪ್ರತಿಪದಾರ್ಥ ।

ವೃಷಣೌ—ಇಷ್ಟಾರ್ಥಗಳನ್ನು ಸುರಿಸುವವರೂ । ವಸೂ—(ಪ್ರಜೆಗಳಿಗೆ) ವಾಸಸ್ಥಾನಗಳನ್ನು ಕೊಡುವವರೂ ಅಥವಾ ಧನವಂತರೂ । ರುದ್ರಾ—ದುಃಖವನ್ನೂ ಪಾಪವನ್ನೂ ಓಡಿಸು (ನಾಶಮಾಡು) ವವರೂ ಅಥವಾ (ಯುದ್ಧದಲ್ಲಿ) ಭಯಂಕರವಾಗಿ ಶಬ್ದಮಾಡುವವರೂ । ಪುರುಮಂತೂ—ಅನೇಕ ವಿಷಯಗಳನ್ನು ತಿಳಿಯುವವರೂ । ವೃಧಂತಾ-(ಸ್ತೋತ್ರಾದಿಗಳಿಂದ)ವೃದ್ಧಿಯಾಗುವವರೂ। ಅಭಿಷ್ಟಾ-ಇಷ್ಟಾರ್ಥಗಳನ್ನು ಕೊಟ್ಟು ತೃಪ್ತಿಪಡಿಸುವವರೂ ಅಥವಾ ಅಭಿಮುಖವಾಗಿ ಪೂಜಿಸಲ್ಪಡುವವರೂ । ದಸ್ರಾ—(ಶತ್ರುಗಳನ್ನು) ನಾಶಮಾಡುವುದೇ ಮೊದಲಾದ ಸಾಹಸ ಕಾರ್ಯಗಳನ್ನು ಮಾಡತಕ್ಕವರೂ ಆದ ಎಲೈ ಅಶ್ವಿನೀದೇವತೆಗಳೇ । ಯತ್—ಯಾವ ಕಾರಣದಿಂದ । ಔಚಥ್ಯಃ—ಉಚಥ್ಯನ ಪುತ್ರನಾದ ದೀರ್ಘತಮಸ್ಸು । ವಾಂ—ನಿಮ್ಮನ್ನು(ನಿಮ್ಮಿಂದ)। ರೇಕ್ಣಃ-(ಸ್ತುತಿಪೂರ್ವಕವಾಗಿ) ಧನವನ್ನು ಪ್ರಾರ್ಥಿಸುತ್ತಾನೆಯೋ) ಅಥವಾ [(ಈ ಯಜಮಾನನು) । ಯತ್—ಯಾವ ಕಾರಣದಿಂದ । ರೇಕ್ಣಃ—ಹವಿಸ್ಸಿನ ರೂಪದ ಅನ್ನವನ್ನು । ವಾಂ—ನಿಮಗೆ (ಅರ್ಪಿಸುತ್ತಾನೆಯೋ)] (ಅಲ್ಲದೆ ನೀವು ಯಾವಕಾರಣದಿಂದ) ಅಕವಾಭಿಃ-ಕುತ್ಸಿತವಲ್ಲದ ಎಂದರೆ ಶ್ರೇಷ್ಠವಾದ । ಊತೀ—ರಕ್ಷಣೆಗಳಿಂದ । ಪ್ರ ಸಸ್ರಾಥೇ—ಅತಿಶಯವಾಗಿಯೂ ಉದಾರವಾಗಿಯೂ (ನಿಮ್ಮ ಅನುಗ್ರಹವನ್ನು) ಹರಡುತ್ತೀರೋ (ಆ ಕಾರಣದಿಂದ) । ನಃ—ನಮಗೆ । ದಶಸ್ಯತಂ—ಇಷ್ಟವಾದ್ದನ್ನೆಲ್ಲಾ ಕೊಡಿರಿ.

### ಭಾವಾರ್ಥ

ನಮ್ಮ ಇಷ್ಟಾರ್ಥಗಳನ್ನು ಸುರಿಸುವವರೂ, ವಾಸಸ್ಥಾನವನ್ನು ಕೊಡುವವರೂ, ದುಃಖವನ್ನೂ ಪಾಪವನ್ನೂ ನಾಶಮಾಡುವವರೂ, ಅನೇಕ ವಿಷಯವನ್ನು ತಿಳಿಯುವವರೂ ಸ್ತೋತ್ರಾದಿಗಳಿಂದ ವೃದ್ಧಿಯಾಗುವವರೂ, ಇಷ್ಟಾರ್ಥ

ಗಳನ್ನು ಕೊಟ್ಟು ತೃಪ್ತಿಪಡಿಸುವವರೂ, ಶತ್ರುಗಳನ್ನು ನಾಶಮಾಡುವುದೇ ಮೊದಲಾದ ಸಾಹಸಕಾರ್ಯಗಳನ್ನು ಮಾಡುವವರೂ ಆದ ಎಲೈ ಅಶ್ವಿನೀದೇವತೆಗಳೇ, ಉಚಥ್ಯನ ಪುತ್ರನೂ, ದೀರ್ಘತಮಸ್ಸೂ ಆದ ನಾನು ನಿಮ್ಮನ್ನು ಸ್ತುತಿಸಿ ನಿಮ್ಮಿಂದ ಧನವನ್ನು ಅಪೇಕ್ಷಿಸುವುದರಿಂದಲೂ, ಮತ್ತು ನೀವೂ ಸಹ ನಿಮ್ಮ ಶ್ರೇಷ್ಠವಾದ ರಕ್ಷಣೆಗಳಿಂದ ಉದಾರವಾಗಿ ಅನುಗ್ರಹವನ್ನು ಬೀರುವುದರಿಂದಲೂ ಸಹ ನಮಗೆ ಅಪೇಕ್ಷಿತವಾದ ವಸ್ತುವನ್ನೆಲ್ಲಾ ಅನುಗ್ರಹಿಸಿ ಕೊಡಿರಿ.

## English Tranlation

Dasras, showerers (of benefits), granters of dwellings, dispellers of sin, cognizant of many (things) increasing (through praise), and fulfillers (of desires), inasmuch as Auchatthya offers you (sacrifical) wealth, and you protect (your worshippers) with unobjectionable aids, bestow upon us (our prayers).

### ವಿಶೇಷವಿಷಯಗಳು

ತುಷ್ಟಾವ ಚೈವ ಸೂಕ್ತಾಭ್ಯಾಂ ಅಬೋಧೀತ್ಯಶ್ವಿನಾವೃಷಿಃ ।
( ಬೃ. ದೇ. ೪-೨೧ )

ದೇವತೆಗಳಿಂದ ಉಪಕೃತನಾದ ದೀರ್ಘತಮಸ್ಸು ಅಬೋಧ್ಯಗ್ನಿರ್ಜ್ಮ ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವನ್ನೂ (೧-೧೫೭) ಮತ್ತು ಪ್ರಕೃತವಾದ (೧-೧೫೮) ಸೂಕ್ತವನ್ನೂ ರಚಿಸಿ ಅಶ್ವಿನೀದೇವತೆಗಳನ್ನು ಸ್ತುತಿಸಿದನು ಎಂದು ಬೃಹದ್ದೇವತಾವಾಕ್ಯವಿದೆ. ಬೃಹದ್ದೇವತೆಯಲ್ಲಿ ಮೊದಲು ದೀರ್ಘತಮಸ್ಸಿಗೊದಗಿದ ಕಷ್ಟವನ್ನು ವಿವರಿಸಿ ಅದನ್ನು ದೇವತೆಗಳು ಯಾವರೀತಿ ಪರಿಹರಿಸಿದರು ಎಂಬುದನ್ನೂ ತಿಳಿಸಿ ಅನಂತರ ಆ ಋಷಿಯು ಅಗ್ನ್ಯಾದಿದೇವತೆಗಳನ್ನು ಸ್ತುತಿಸಿದುದನ್ನು ತಿಳಿಸಿದೆ. ಉಚಥ್ಯಭಾರ್ಯೆಯಾದ ಮಮತೆಯಲ್ಲಿ ದೀರ್ಘತಮಸ್ಸಿನ ಉತ್ಪತ್ತಿಯನ್ನೂ, ಗರ್ಭಕಾಲದಲ್ಲಿ ಮಮತೆಗೆ ಅತ್ಯಾಚಾರವು ಸಂಭವಿಸಿದುದನ್ನೂ, ಅದರಿಂದ ದೀರ್ಘತಮಸ್ಸಿಗೆ ಒದಗಿದ ತೊಂದರೆಯನ್ನೂ ಹಿಂದೆ ಬೇರೆ ಸನ್ನಿವೇಶದಲ್ಲಿ ಆನುಷಂಗಿಕವಾಗಿ ಸೂಕ್ಷ್ಮವಾಗಿ ತಿಳಿಸಿದೆ. ಆದರೂ ಸಹ ಇಲ್ಲಿ ಸಾಕ್ಷಾತ್ತಾಗಿ ಆ ಋಷಿಯ ಕೃತಿಯೂ ಆ ಕೃತಿಯ ವೈಶಿಷ್ಟ್ಯವೂ ವಿವರಿಸಲ್ಪಡುವ ಸನ್ನಿವೇಶದಲ್ಲಿ ಔಚಥ್ಯಃ ಎಂದು ತಾನೇ ಹೇಳಿಕೊಳ್ಳುವುದರಿಂದ ಉಚಥ್ಯನ ಪುತ್ರನಾಗಿ ಅವನು ಉತ್ಪನ್ನನಾದ ಕಥೆಯನ್ನು ಬೃಹದ್ದೇವತೆಯಲ್ಲಿ ಉಕ್ತವಾಗಿರುವಂತೆ ತಿಳಿಸಲ್ಪಡುತ್ತದೆ.

ದ್ವಾವುಚಥ್ಯಬೃಹಸ್ಪತೀ ಋಷಿಪುತ್ರೌ ಬಭೂವತುಃ ।
ಆಸೀದುಚಥ್ಯಭಾರ್ಯಾ ತು ಮಮತಾ ನಾಮ ಭಾರ್ಗವೀ ॥
ತಾಂ ಕನೀಯಾನ್ಬೃಹಸ್ಪತಿರ್ಮೈಥುನಾಯೋಪಚಕ್ರಮೇ ।
ಶುಕ್ರಸ್ಯೋತ್ಸರ್ಗಕಾಲೇ ತು ಗರ್ಭಸ್ತಂ ಪ್ರತ್ಯಭಾಷತ ॥
ಇಹಾಸ್ಮಿ ಪೂರ್ವಸಂಭೂತೋ ನ ಕಾರ್ಯಃ ಶುಕ್ರಸಂಕರಃ ।
ತಚ್ಛುಕ್ರಪ್ರತಿಷೇಧಂ ತು ನ ಮಮರ್ಷ ಬೃಹಸ್ಪತಿಃ ॥
ಸ ವ್ಯಾಜಹಾರ ತೆ ಗರ್ಭಂ ತಮಸ್ತೇ ದೀರ್ಘತಮಸ್ತ್ವಿತಿ ।
ಸ ಚ ದೀರ್ಘತಮಾ ನಾಮ ಬಭೂವರ್ಷಿರುಚಥ್ಯಜಃ ॥

ಸ ಜಾತೋಽಭ್ಯತಪದ್ದೇವಾನಕಸ್ಮಾದಂಧತಾಂ ಗತಃ ।
ಧದುರ್ದೇವಾಸ್ತು ತನ್ನೇತ್ರೇ ತತೋಽನನ್ಧೋ ಬಭೂವ ಸಃ ॥
(ಬೃ. ದೇ. ೪–೧೧ರಿಂದ ೧೫)

ಉಚಥ್ಯ ಮತ್ತು ಬೃಹಸ್ಪತಿ ಎಂಬ ಇಬ್ಬರು ಸಹೋದರರಿದ್ದರು. ಉಚಥ್ಯನಿಗೆ ಮಮತಾ ಎಂಬ ಹೆಸರಿನ ಪತ್ನಿಯಿದ್ದಳು. ಅವಳು ಗರ್ಭವತಿಯಾಗಿದ್ದಾಗ ಉಚಥ್ಯನ ತಮ್ಮನಾದ ಬೃಹಸ್ಪತಿಯು ಅವಳೊಡನೆ ಸಂಭೋಗಿಸಿದನು. ಶುಕ್ರದ ಉತ್ಸರ್ಗಕಾಲದಲ್ಲಿ ಒಳಗಿದ್ದ ಗರ್ಭವು ಬೃಹಸ್ಪತಿಯ ಶುಕ್ರದ ಉತ್ಸರ್ಗವನ್ನು ತಡೆಯುವಂತೆ ಪ್ರಾರ್ಥಿಸಿತು. ಆದರಿಂದ ಕೋಪಗೊಂಡ ಬೃಹಸ್ಪತಿಯು ಆಜನ್ಮಾಂಧನಾಗಿ ಹುಟ್ಟಬೇಕೆಂದು ಗರ್ಭಕ್ಕೆ ಶಾಪವನ್ನು ಕೊಟ್ಟನು. ದೀರ್ಘವಾದ ತಮಸ್ಸಿನಿಂದ ಕೂಡಿ ಹುಟ್ಟಿದುದರಿಂದ ಆ ಮಗುವಿಗೆ ದೀರ್ಘತಮಸ್ ಎಂದು ಹೆಸರಾಯಿತು. ಅಂಧಕಾರಪೂರಿತನಾದ ಋಷಿಪುತ್ರನು ತಪಸ್ಸುಮಾಡಿ ದೇವತೆಗಳನ್ನು ಒಲಿಸಲು ಅವರು ಅನುಗ್ರಹಿಸಿ ಇವನಿಗೆ ಕಣ್ಣುಬರುವಂತೆ ಮಾಡಿದರು. ಕೂಡಲೇ ಇವನು ಕೆಲವು ಸೂಕ್ತಗಳ ದ್ರಷ್ಟೃವಾದನು ಎಂದು ಅಗ್ನ್ಯಾದಿ ದೇವತಾಕವಾದ ಸೂಕ್ತಗಳ ರಚನೆಯನ್ನು ತಿಳಿಸಿ ಪುನಃ ಇವನ ಅಂಧತ್ವದ ಕಾಲದಲ್ಲಿ ನಡೆದ ಕಥೆಯನ್ನು ಮುಂದುವರಿಸಿದೆ.

ಜೀರ್ಣಂ ತು ದೀರ್ಘತಮಸಂ ಖಿನ್ನಾಸ್ತತ್ಪರಿಚಾರಿಣಃ ।
ದಾಸಾ ಬದ್ಧ್ವಾ ನದೀತೋಯೇ ವೃಷ್ಟಿಹೀನಮುಪಾವಧುಃ ॥
ತತ್ರೈಕಸ್ತ್ರೈತನೋ ನಾಮ ಶಸ್ತ್ರೇಣೈನಮುಪಾಹನತ್ ।
ಶಿರಶ್ಚಾಂಸಾವುರಶ್ಚೈವ ಸ್ವಯಮೇವ ನ್ಯಕೃಂತತ ॥
ಹತ್ವಾ ದೀರ್ಘತಮಾಸ್ತಂತು ಪಾಪೇನ ಮಹತಾ ವೃತಂ ।
ಆತ್ಮಾಂಗಾನ್ಯನುದಚ್ಚೈವ ತತ್ರೋದೋನ್ಮೋಹಿತೋ ಭೃಶಂ ॥
ಅಂಗದೇಶಸಮೀಪೇ ತು ತಂ ನದ್ಯಃ ಸಮುದಕ್ಷಿಪನ್ ।
ಅಂಗರಾಜಗೃಹೇ ಯುಕ್ತಾಮುಶಿಜಂ ಪುತ್ರಕಾಮ್ಯಯಾ ॥
ರಾಜ್ಞಾ ಚ ಪ್ರಹಿತಾಂ ದಾಸೀಂ ಭಕ್ತಾಂ ಮತ್ವಾ ಮಹಾತಪಾಃ ।
ಜನಯಾಮಾಸ ಚೋಶಿಥಾಯ ಕಕ್ಷೀವತ್ಪ್ರಮುಖಾನೃಷೀನ್ ॥
ತುಷ್ಟಾವ ಚೈವ ಸೂಕ್ತಾಭ್ಯಾಂ ಅಬೋಧೀತ್ಯೃಷಿನಾವೃಷಿಃ ।
(ಬೃಹದ್ದೇವತಾ ೪-೨೧ರಿಂದ ೨೫)

ದೀರ್ಘತಮಸ್ಸು ಬಹಳ ದೀರ್ಘಕಾಲ ಅಂಧತ್ವದಲ್ಲಿದ್ದುದರಿಂದ ಅವನ ಪರಿಚಾರಕರು ಅವನ ಪರಿಚರ್ಯೆಯಿಂದ ಖೇದಗೊಂಡವರಾಗಿ ಜೀರ್ಣವಾದ ಅವನನ್ನು ಕಟ್ಟಿ ನದೀನೀರಿನೊಳಕ್ಕೆ ಹಾಕಿಬಿಟ್ಟರು. ಅವರಲ್ಲಿ ತ್ರೈತನನೆಂಬೊಬ್ಬನು ತನ್ನ ಕತ್ತಿಯಿಂದ ಅವನನ್ನು ಹೊಡೆಯಲು ಹೋಗಿ ತನ್ನ ತಲೆಯನ್ನೂ ಬಾಹುಗಳನ್ನೂ ತಾನೇ ಸೀಳಿಕೊಂಡನು. ಹೀಗೆ ತನ್ನ ಪಾಪಕ್ಕೆ ತಾನೇ ಪ್ರಾಯಶ್ಚಿತ್ತವನ್ನನುಭವಿಸಿದ ಆ ಸೇವಕನನ್ನು ದೀರ್ಘತಮಸ್ಸು ಪೂರ್ಣವಾಗಿ ಕೊಂದುಹಾಕಿ, ನೀರಿನ ಒತ್ತಡದಿಂದ ಉನ್ಮೋಹಿತನಾಗಿದ್ದರೂ ಸಹ ಕೈಕಾಲುಗಳನ್ನು ಚಾಚಲು ಪ್ರಯತ್ನಿಸಿದನು. ಆಗ ನದೀಪ್ರವಾಹವು ಅವನನ್ನು ಪಕ್ಕದಲ್ಲಿದ್ದ ಅಂಗದೇಶದ ಪ್ರಾಂತಕ್ಕೆ ತಳ್ಳಿ ದಡಕ್ಕೆ

ಹಾಕಿಬಿಟ್ಟಿತು. ಅಂಗದೇಶದ ದೊರೆಯು ತನ್ನಲ್ಲಿದ್ದ ಉಶಿಕ್ ಎಂಬ ಸ್ತ್ರೀಯನ್ನು ಪುತ್ರೋತ್ಪತ್ತಿಯಿಂದ ದೀರ್ಘತಮಸ್ಸಿನ ಹತ್ತಿರ ಕಳುಹಿದನು. ನೀರಿನಿಂದ ಹೊರಕ್ಕೆ ಬಂದ ದೀರ್ಘತಮಸ್ಸು ಇವಳ ಸೇವೆಗೂ ಪ್ರೀತಿಗೂ ಮೆಚ್ಚಿ ಇವಳಲ್ಲಿ ಕಕ್ಷೀವಂತನೇ ಮುಂತಾದ ಋಷಿಗಳು ಉತ್ಪನ್ನರಾಗುವಂತೆ ಮಾಡಿದನು ಎಂದು ಆ ಕಥೆಯನ್ನು ಹೇಳಿ ಅನಂತರ ಅವನು ಅಶ್ವಿನೀದೇವತಾಕವಾದ ಸೂಕ್ತಗಳನ್ನು ರಚಿಸಿ ಆ ದೇವತೆಗಳನ್ನು ಪ್ರಕೃತವಾದ ಋಕ್ಕುಗಳಲ್ಲಿ ಪ್ರಾರ್ಥಿಸಿದುದನ್ನು ತಿಳಿಸಿದೆ.

ವಸೂ, ರುದ್ರಾ, ಪುರುಮಂತೂ, ವೃಧಂತಾ, ವೃಷಣೌ ಇತ್ಯಾದಿ ವಿಶೇಷಣಗಳಿಂದ ಅಶ್ವಿನೀದೇವತೆಗಳ ಸ್ವರೂಪವನ್ನು ಋಷಿಯು ವರ್ಣಿಸಿದ್ದಾನೆ.

ವಸೂ—ವಾಸಯಿತಾರೌ ಪ್ರಜಾನಾಂ । ವಸುನಾ ಧನೇನ ತದ್ವಂತೌ ವಾ । ಭಕ್ತರಾದ ಪ್ರಜೆಗಳಿಗೆ ವಾಸಸ್ಥಾನಗಳನ್ನು ಒದಗಿಸುವವರೆಂದಾಗಲಿ ಅಥವಾ ಧನವಂತರೆಂದಾಗಲಿ ಎರಡುವಿಧವಾಗಿಯೂ ಅರ್ಥಮಾಡಬಹುದೆಂದು ತೋರಿಸಿದೆ.

ತ್ರಿರ್ನೋ ರಯಿಂ ವಹತಮಶ್ವಿನಾ ಯುವಂ ತ್ರಿರ್ದೇವತಾತಾ ತ್ರಿರುತಾವತಂ ಧಿಯಃ ।
ತ್ರಿಃ ಸೌಭಗತ್ವಂ ತ್ರಿರುತ ಶ್ರವಾಂಸಿ ನಸ್ತ್ರಿಷ್ಠಂ ವಾಂ ಸೂರೇ ದುಹಿತಾ ರುಹದ್ರಥಂ ॥

(ಋ. ಸಂ. ೧-೩೪-೫)

ಇತ್ಯಾದಿ ಋಕ್ಕುಗಳಲ್ಲಿ ಅನ್ನಾದಿಸಕಲಸಂಪತ್ತುಗಳನ್ನೂ ಒದಗಿಸಿಕೊಡಬೇಕೆಂದು ಪ್ರಾರ್ಥಿಸಿದೆ. ಮತ್ತು ಸಕಲ ವಿಧವಾದ ಸಂಪತ್ತಿಗೂ ಆಧಾರಭೂತರು ಎಂದೂ ಸೂಚಿಸಿದೆ. ನಿರಾಶ್ರಿತರೂ ದುಃಖಕ್ಕೆ ಸಿಕ್ಕಿದವರೂ ಆದ ಭುಜ್ಯುವೇ ಮುಂತಾದ ಭಕ್ತರಿಗೆ ಆಶ್ರಯದಾತರಾಗಿ ಅವರನ್ನು ಸುರಕ್ಷಿತವಾದ ಗೃಹಾದಿಗಳಿಗೆ ಸೇರಿಸಿದುದೂ ಅನೇಕಕಡೆ (ಋ. ಸಂ. ೧-೧೧೬-೩ ಇತ್ಯಾದಿ) ವರ್ಣಿತವಾಗಿದೆ. ಆದುದರಿಂದ ಈ ವಿಶೇಷಣಕ್ಕೆ ಯಾವ ಅರ್ಥವನ್ನು ಹೇಳಿದರೂ ಹೊಂದಿಕೊಳ್ಳುತ್ತದೆ

ರುದ್ರಾ—ರುತ್ ದುಃಖಂ ತದ್ಧೇತುಭೂತಂ ಪಾಪಂ ವಾ । ತಸ್ಯ ದ್ರಾವಯಿತಾರೌ । ಸಂಗ್ರಾಮೇ ಭಯಂಕರಂ ಶಬ್ದಯಂತೌ ವಾ । ರುತ್ ಎಂದರೆ ದುಃಖವೆಂದಾಗಲಿ ಅಥವಾ ಅದಕ್ಕೆ ಹೇತುಭೂತವಾದ ಪಾಪವೆಂದಾಗಲಿ ಅರ್ಥವಾಗುತ್ತದೆ ಆ ದುಃಖವನ್ನಾಗಲಿ ಪಾಪವನ್ನಾಗಲಿ ನಾಶಮಾಡುವವರೆಂದರ್ಥವೆಂದು ಒಂದು ವಿಧವಾಗಿಯೂ ಅಥವಾ ರಣರಂಗದಲ್ಲಿ ಭಯಂಕರವಾಗಿ ಶಬ್ದಮಾಡುವವರೆಂದು ಇನ್ನೊಂದು ವಿಧವಾಗಿಯೂ ಅರ್ಥ ಮಾಡಬಹುದೆಂದು ತೋರಿಸಿದೆ. ಮತ್ತು ರುದ್ರೋ ರೌತೀತಿ ಸತಃ ಇತಿ ಯಾಸ್ಕಃ । ಎಂದು ಯಾಸ್ಕರ ವಾಕ್ಯವನ್ನುದಹರಿಸಿ ಈ ಪದದ ನಿರ್ವಚನವನ್ನೂ ತಿಳಿಸಿದ್ದಾರೆ. ನಿರುಕ್ತಕಾರರು,

ಯದರುದತ್ತದ್ರುದ್ರಸ್ಯ ರುದ್ರತ್ವಂ (ಇತಿ ಕಾಠಕಂ) । ಯದರೋದೀತ್ತದ್ರುದ್ರಸ್ಯ ರುದ್ರತ್ವಂ (ಇತಿ ಹಾರಿದ್ರವಿಕಂ) ॥

(ನಿ. ೧೦-೭)

ಎಂಬ ಕಾಠಕವಾಕ್ಯವನ್ನೂ ಹಾರಿದ್ರವಿಕವಾಕ್ಯವನ್ನೂ ಉದಹರಿಸಿ ಅರ್ಭಟಧ್ವನಿಯಲ್ಲಿ ಶಬ್ದಮಾಡುವುದರಿಂದ ರುದ್ರ ಎಂಬ ಹೆಸರು ಪ್ರಸಿದ್ಧವಾಯಿತೆಂದು ತಿಳಿಸಿದ್ದಾರೆ. ದುಃಖನಾಶಕವೂ ಶಬ್ದಕಾರಕವೂ ಆದ ಎರಡುಗುಣಗಳೂ ಅಶ್ವಿನೀದೇವತೆಗಳಲ್ಲಿ ಇವೆಯೆಂದು ಹಿಂದೆ ಉದಾಹರಣೆಗಳೊಂದಿಗೆ ತಿಳಿಸಿದೆ. ಅಥವಾ,

ಆ ನೋ ರತ್ನಾನಿ ಬಿಭ್ರತಾವಶ್ವಿನಾ ಗಚ್ಛತಂ ಯುವಂ |
ರುದ್ರಾ ಹಿರಣ್ಯವರ್ತನೀ ಜುಷಾಣಾ ವಾಜಿನೀವಸೂ ಮಾಧ್ವೀ ಮಮ ಶ್ರುತಂ ಹವಂ ||

(ಋ. ಸಂ. ೫-೭೫-೩)

ಉತ ನೋ ರುದ್ರಾ ಚಿನ್ಮೃಳತಾಮಶ್ವಿನಾ ವಿಶ್ವೇ ದೇವಾಸೋ ರಥಸ್ಪತಿರ್ಭಗಃ |
ಋಭುರ್ವಾಜ ಋಭುಕ್ಷಣಃ ಪರಿಜ್ಮಾ ವಿಶ್ವವೇದಸಃ ||

(ಋ. ಸಂ. ೧೦-೯೩-೭)

ಇತ್ಯಾದಿಋಕ್ಕುಗಳಲ್ಲಿ ಸಾಯಣರು ರುದ್ರಾ ಎಂಬ ಪದಕ್ಕೆ ರುದ್ರಪುತ್ರೌ ಅಶ್ವಿನೌ ಎಂದು ಅರ್ಥಮಾಡಿದ್ದಾರೆ. ಅದರ ಜೊತೆಯಲ್ಲಿಯೇ ಸ್ತುತ್ಯಾ ವಾ ಸ್ತುತಿಗೆ ಅರ್ಹರಾದವರು ಎಂದೂ ಅರ್ಥವಾಗಬಹುದೆಂದು ಹೇಳಿದ್ದಾರೆ. ಮತ್ತು ರುದ್ರಶಬ್ದವು ಸ್ತೋತ್ರನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೯) ಇಲ್ಲಿ ಸ್ತುತಿಗೆ ಅರ್ಹರೆಂಬರ್ಥ ವನ್ನು ಮಾಡಿರಬಹುದು ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿ ಈ ಎಲ್ಲಾ ಅರ್ಥಗಳಿಗೂ ಅವಕಾಶವಿದೆ.

ಪುರುಮಂತೂ—ಬಹೂನಾಂ ಜ್ಞಾತಾರೌ—ಬಹುವಿಧವಾದ ಜ್ಞಾನವುಳ್ಳವರೆಂದರ್ಥ. ಅಶ್ವಿನೀದೇವತೆ ಗಳ ಪ್ರಜ್ಞೆಯು ಅತ್ಯಂತ ಪ್ರಶಸ್ಯವಾದುದು. ಆದುದರಿಂದಲೇ—

ಮೇಧಾಂ ಮೇ ಅಶ್ವಿನಾವುಭಾವಾಧತ್ತಾಂ |

(ತೈ. ಉ- ೪-೧೩-೫)

ನನಗೆ ಉತ್ತಮವಾದ ಪ್ರಜ್ಞೆಯನ್ನು ದಯಪಾಲಿಸಲಿ ಎಂದು ಪ್ರಾರ್ಥಿಸಿದೆ. ಋಕ್ಸಂಹಿತೆಯಲ್ಲಿಯೂ ಸಹ,

ಆ ನೂನಂ ಯಾತಮಶ್ವಿನಾ ರಥೇನ ಸೂರ್ಯತ್ವಚಾ |
ಭುಜೀ ಹಿರಣ್ಯಪೇಶಸಾ ಕವೀ ಗಂಭೀರಚೇತಸಾ ||

(ಋ. ಸಂ. ೮ ೮-೨)

ಎಂಬ ಋಕ್ಕಿನಲ್ಲಿ ಗಂಭೀರಚೇತಸಾ ಎಂಬ ವಿಶೇಷಣದಿಂದ ಅಶ್ವಿನೀದೇವತೆಗಳನ್ನು ಸ್ತುತಿಸಿದೆ. ಈ ವಿಶೇಷಣಕ್ಕೆ ಸಾಯಣರು ಪ್ರಶಸ್ತಜ್ಞಾನೌ ಶ್ರೇಷ್ಠವಾದ ಜ್ಞಾನವುಳ್ಳವರೆಂದರ್ಥಮಾಡಿದ್ದಾರೆ.

ರೇಕ್ಣಃ—ರೇಕ್ಣ ಇತಿ ಧನನಾಮ | ರಿಚ್ಯತೇ ಪ್ರಯತಃ | ಮೃತನಾದವನಿಂದ ತ್ಯಜಿಸಲ್ಪಟ್ಟು ಉಳಿದವರ ಸುಖಸಾಧನವಾದುದರಿಂದ ಧನಕ್ಕೆ ರೇಕ್ಣಃ ಎಂದು ಹೆಸರೆಂದು ನಿರುಕ್ತಕಾರರು ವಿವರಿಸಿದ್ದಾರೆ. (ನಿ. ೩-೨) ಪ್ರಕೃತವಾದ ಋಕ್ಕಿನಲ್ಲಿ ಸಾಯಣರು ಈ ಪದಕ್ಕೆ ಧನವೆಂದಾಗಲಿ ಅಥವಾ ಹವಿಸ್ಸಿನರೂಪವಾದ ಅನ್ನವೆಂದಾಗಲಿ ಅರ್ಥಮಾಡಬಹುದೆಂದು ಹೇಳಿದ್ದಾರೆ. ಧನವೆಂದರ್ಥಮಾಡಿದರೆ ಸ್ತುತಿವ್ಯಾಜೇನ ಪ್ರಾರ್ಥಯತೇ ಸ್ತುತಿಯ ಮೂಲಕವಾಗಿ ಪ್ರಾರ್ಥಿಸುತ್ತಾನೆಂದೂ, ಅಲ್ಲದೆ ಹವಿಸ್ಸಿನರೂಪವಾದ ಅನ್ನವೆಂದರ್ಥಮಾಡಿದರೆ ಹವಿರ್ಲಕ್ಷಣಮನ್ನಂ ವಾಂ ದಾಸ್ಯತಿ ದದಾತೀತಿ ಶೇಷಃ | ಈ ಅನ್ನವನ್ನು ನಿಮಗೆ ಅರ್ಪಿಸುತ್ತಾನೆಂದೂ ತಾತ್ಪರ್ಯವೆಂದು ವಿವರಿಸಿದ್ದಾರೆ.

ಅಕವಾಭಿಃ—ಅಕುತ್ಸಿತೈಃ | ಗರ್ಹ್ಯವಲ್ಲದ ಎಂದರೆ ದೂಷ್ಯವಲ್ಲದ ಊತಿಭಿಃ ರಕ್ಷಣೆಗಳಿಂದ, ಎಂದು ವಿವರಿಸಿದೆ. ಪ್ರಶಂಸೆಗೆ ಪಾತ್ರವಾದ ಎಂದರ್ಥ. ಕುತ್ಸಿತವಾದುದು ಎಂಬರ್ಥವನ್ನು ಕೊಡತಕ್ಕ ಕು ಧಾತುವಿ ನಿಂದ ನಿಷ್ಪನ್ನವಾದ ಕವ ಶಬ್ದಕ್ಕೆ ಅಲ್ಪವಾದುದು, ತಿರಸ್ಕೃತವಾದುದು, ದೂಷ್ಯವಾದುದು ಎಂದು ತಾತ್ಪರ್ಯವಾಗು

ತ್ತದೆ. ಈಧಾತುವಿನಿಂದ ಕವ, ಕವಾರಿ ಎಂಬ ಎರಡು ರೂಪಗಳೂ ನಿಷ್ಪನ್ನವಾಗುತ್ತವೆ. ಕವಾರಿಯೆಂಬ ಪದಕ್ಕೆ ಸಾಧಾರಣವಾಗಿ ಅತ್ಯಂತ ಸ್ವಾರ್ಥಿಯೂ, ಲೋಭಿಯೂ, ಯಜ್ಞಮಾಡದೆ ಕುತ್ಸಿತವಾದ ಜೀವನವುಳ್ಳವನೂ ಆದ ಪುರುಷನೆಂದರ್ಥವಾಗುತ್ತದೆ.

ದೈವೀ ಪೂರ್ತಿರ್ದಕ್ಷಿಣಾ ದೇವಯಜ್ಯಾ ನ ಕವಾರಿಭ್ಯೋ ನಹಿ ತೇ ಪೃಣಂತಿ ।
ಅಥಾ ನರಃ ಪ್ರಯತದಕ್ಷಿಣಾಸೋಽವದ್ಯಭಿಯಾ ಬಹವಃ ಪೃಣಂತಿ ॥

(ಋ. ಸಂ. ೧೦-೧೦೭-೩)

ಎಂಬಲ್ಲಿ ಕವಾರಿಭ್ಯಃ ಎಂಬ ಪದಕ್ಕೆ ಕುತ್ಸಿತಗಂತೃಭ್ಯಃ ಅಯಷ್ಟೃಭ್ಯಃ ಯಜ್ಞಯಾಗಾದಿಗಳನ್ನು ಮಾಡದೆ ಕುತ್ಸಿತವಾದ ಜೀವನವನ್ನು ನಡಿಸತಕ್ಕ ಸ್ವಾರ್ಥಿಗಳೂ, ಲೋಭಿಗಳೂ ಎಂದರ್ಥವಾಗುತ್ತದೆ. ಕವಾರಿಶಬ್ದಕ್ಕೆ ಇದು ಒಂದು ವಿಧವಾದ ಪ್ರಯೋಗ.

ಮರುತ್ವಂತಂ ವೃಷಭಂ ವಾವೃಧಾನಮಕವಾರಿಂ ದಿವ್ಯಂ ಶಾಸಮಿಂದ್ರಂ ।
ವಿಶ್ವಾಸಾಹಮವಸೇ ನೂತನಾಯೋಗ್ರಂ ಸಹೋದಾಮಿಹ ತಂ ಹುವೇಮ ॥

(ಋ. ಸಂ. ೩-೪೭-೫)

ಎಂಬ ಋಕ್ಕಿನಲ್ಲಿ ಕವ ಶಬ್ದಕ್ಕೆ ಸಣ್ಣವನು, ತಿರಸ್ಕೃತನು ಎಂಬರ್ಥವಾಗಿ ಕವನಾದ ಅರಿ; ಅಲ್ಪನಾದ ಶತ್ರುವು ಎಂಬ ಸಮಸ್ತಪದವಾಗಿದೆ. ಅಂತಹ ಕವಾರಿಯಲ್ಲದವನು ಅಕವಾರಿಯು ಎಂದರೆ ಮಹತ್ತಾದ ಶಕ್ತಿಯುಳ್ಳ ಶತ್ರುವು ಎಂದರ್ಥವಾಗಿದೆ. ಇಲ್ಲಿ ಈ ಪದವು ಇಂದ್ರನಿಗೆ ವಿಶೇಷಣವಾಗಿದೆ. ವೃತ್ರಾಸುರನ ಶಕ್ತಿಯು ಇನ್ನೂ ಮಹತ್ತಾದುದು. ಅವನನ್ನು ನಿಗ್ರಹಿಸಬೇಕಾದರೆ ವೃತ್ರನಿಗೆ ಶತ್ರುವಾದ ಇಂದ್ರನ ಶಕ್ತಿಯು ಇನ್ನೂ ಮಹತ್ತರ ವಾದುದು ಎಂದು ಇಂದ್ರನ ಪರಾಕ್ರಮವನ್ನು ತೋರಿಸತಕ್ಕ ವಿಶೇಷಣವಾಗಿದೆ. ಇದು ಕವಾರಯೆಂಬ ಪದದ ಇನ್ನೊಂದು ವಿಧವಾದ ಪ್ರಯೋಗ.

ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಕವ ಶಬ್ದಕ್ಕೆ ಅಲ್ಪವೆಂದರ್ಥವಾಗಿದೆ. ಕವವಲ್ಲದವು ಅಕವಗಳು. ಅಂತಹ ಅಕವಗಳಾದ ರಕ್ಷಣೆಗಳಿಂದ ಎಂದರೆ ಅತ್ಯಂತಮಹತ್ತಾದ ರಕ್ಷಣೆಗಳಿಂದ ಎಂಬರ್ಥವನ್ನು ಅಕವಾಭಿಃ ಊತೀ ಎಂಬ ಪದಗಳು ಸೂಚಿಸುತ್ತವೆ.

ದಸ್ರಾ—ಅಸ್ಮದ್ದ್ವಿರೋಧ್ಯುಪಕ್ಷಪಯಿತಾರೌ । ನಮ್ಮ ಶತ್ರುಗಳನ್ನು ಹಿಂಸಿಸಿ ನಾಶಮಾಡುವವರು ಎಂದು ಅಶ್ವಿನೀದೇವತೆಗಳ ಸ್ವರೂಪವನ್ನು ತಿಳಿಸುತ್ತದೆ. ಈ ಪದಕ್ಕೆ ಶತ್ರುನಾಶಕರೆಂದೂ ಅಥವಾ ಸುಂದರವಾದ ರೂಪ ವುಳ್ಳವರೆಂದೂ ಎರಡು ವಿಧವಾದ ಅರ್ಥವಾಗಬಹುದೆಂದು ಹಿಂದೆ ತಿಳಿಸಿದೆ.

### ವ್ಯಾಕರಣಪ್ರಕ್ರಿಯಾ

ವಸೂ—ವಸು ಅನಯೋಃ ಅಸ್ತಿ ಇತಿ ವಸೂ. ಮತುಪ್‌ಪ್ರತ್ಯಯ ಬಂದಾಗ ಛಾಂದಸವಾಗಿ ಅದಕ್ಕೆ ಲೋಪ ಬರುತ್ತದೆ.

**ರುದ್ರಾ**—ರುದಿರ್ ಅಶ್ರುವಿಮೋಚನೇ ಧಾತು. **ರೋದೇರ್ಣಿಲುಕ್ ಚ** ( ಉ. ಸೂ. ೨-೧೭೯ ) ಎಂಬುದರಿಂದ ರಕ್ ಪ್ರತ್ಯಯ. ಣಿಚಿಗೆ ಲೋಪ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿವಚನಪರ ವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ.

**ಪುರುಮಂತೂ**—ಮನ ಜ್ಞಾನೇ. ಧಾತು. ಔಣಾದಿಕ ತುನ್‌ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ವೃಧಂತಾ**—ವೃಧು ವೃದ್ಧೌ ಧಾತು. **ವ್ಯತ್ಯಯೋ ಬಹುಲಮ್** ಎಂಬುದರಿಂದ ಲಿಟಿಗೆ ಶತ್ರಾದೇಶ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. ದ್ವಿವಚನ ಪರವಾದಾಗ **ಸುಪಾಂ ಸುಲುಕ್**–ಸೂತ್ರದಿಂದ ಆಕಾರಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ದಶಸ್ಯತಮ್**—ದಶಸ್ ಎಂಬುದು ದಾನಾರ್ಥದಲ್ಲಿ ಪಠಿತವಾಗಿದೆ. **ಕಂಡ್ವಾದಿಭ್ಯೋ ಯಕ್** (ಪಾ. ಸೂ. ೩-೧-೨೭) ಎಂಬುದರಿಂದ ಸ್ವಾರ್ಥದಲ್ಲಿ ಯಕ್. ಇದರ ಮೇಲೆ ಲೋಟ್ ಮಧ್ಯಮಪುರುಷ ದ್ವಿವಚನದಲ್ಲಿ ತಮಾದೇಶ. ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಯಕ್‌ಸ್ವರ ಉಳಿಯುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ.

**ದಸ್ರಾ**—ದಸು ಉಪಕ್ಷಯೇ. ಧಾತು. **ಸ್ಫಾಯಿತಂಚಿವಂಚಿ**—(ಉ. ಸೂ. ೨-೧೩) ಎಂಬುದರಿಂದ ರಕ್ ಪ್ರತ್ಯಯ. ದ್ವಿವಚನ ಪರವಾದಾಗ ಅದಕ್ಕೆ ಆಕಾರಾದೇಶ. ಪಾದಾದಿಯಲ್ಲಿರುವುದರಿಂದ ಆಮಂತ್ರಿತನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಔಚಥ್ಯಃ**—ಉಚಥ್ಯಸ್ಯ ಅಪತ್ಯಂ ಪುಮಾನ್ ಔಚಥ್ಯಃ ತಸ್ಯಾಪತ್ಯಮ್ ( ಪಾ. ಸೂ. ೪-೧-೯೨ ) ಎಂಬುದರಿಂದ ಅಣ್‌ಪ್ರತ್ಯಯ ತದ್ಧಿತೇಷ್ವಚಾಮಾದೇಃ (ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಸಸ್ರಾಥೇ**—ಸೃ ಗತೌ ಧಾತು. ಛಾಂದಸವಾಗಿ ಲಿಟ್. ಮಧ್ಯಮಪುರುಷ ದ್ವಿವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಊತೀ**–**ಊತಿಯೂತಿಜೂತಿ**—(ಪಾ. ಸೂ. ೩-೩-೯೭) ಎಂಬುದರಿಂದ ಅವಧಾತುವಿಗೆ ಉದಾತ್ತಕ್ತಿನ್ ಬಂದು ನಿಪಾತಿತವಾಗಿದೆ. ಇದಕ್ಕೆ ತೃತೀಯಾ-ಬಹುವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣ ದೀರ್ಘ ಬರುತ್ತದೆ. ॥ ೧ ॥

———— :o: ————

ಸಂಹಿತಾಪಾಠಃ

ಕೋ ವಾಂ ದಾಶತ್ಸುಮತಯೇ ಚಿದಸ್ಯೈ ವಸೂ ಯದ್ಧೇಥೇ ನಮಸಾ ಪದೇ ಗೋಃ ।

ಜಿಗೃತಮಸ್ಮೇ ರೇವತೀಃ ಪುರಂಧೀಃ ಕಾಮಪ್ರೇಣೇವ ಮನಸಾ ಚರಂತಾ ।
॥ ೨ ॥

ಪದಪಾಠಃ

ಕಃ । ವಾಂ । ದಾಶತ್ । ಸುಽಮತಯೇ । ಚಿತ್ । ಅಸ್ಯೈ । ವಸೂ ಇತಿ । ಯತ್ । ಧೇಥೇ ಇತಿ । ನಮಸಾ । ಪದೇ । ಗೋಃ ।

ಜಿಗೃತಂ । ಅಸ್ಮೇ ಇತಿ । ರೇವತೀಃ । ಪುರಂಽಧೀಃ । ಕಾಮಪ್ರೇಣ್ಽಇವ । ಮನಸಾ । ಚರಂತಾ ॥ ೨ ॥

ಸಾಯಣಭಾಷ್ಯಂ

ಹೇ ವಸೂ ವಾಸಯಿತಾರಾವಶ್ವಿನೌ ವಾಂ ಯುವಯೋಃ ಸಂಬಂಧಿನ್ಯಾ ಅಸ್ಯೈ ವಕ್ಷ್ಯಮಾಣರೂಪಾಯೈ ಸುಮತಯೇ ಚಿತ್ ಶೋಭನಬುದ್ಧ್ಯೈ । ಚಿತ್ ಪೂಜಾಯಾಮಪ್ಯರ್ಥೇ ವಾ । ಸ್ವಲ್ಪೇನೈವ ಹವಿಷಾ ಮಹತ್ಫಲಪ್ರದಾನರೂಪಾಯಾ ಈದೃಶ್ಯಾ ಅಪಿ ಬುದ್ಧ್ಯೈ ಪ್ರೀಣನಾಯ ಕೋ ದಾಶತ್ । ಕೋ ದದ್ಯಾತ್ । ದಾತುಂ ಶಕ್ನುಯಾತ್ । ಯುವಯೋಃ ಪ್ರಭಾವಸ್ಯಾತಿಮಹತ್ತ್ವಾದಿತಿ ಭಾವಃ ॥ ದಾಶತೇರ್ಲೇಟ್ಯಡಾಗಮಃ ॥ ಕಥಂ ಮತೇಃ ಸೌಷ್ಠವಮಿತಿ ತದುಚ್ಯತೇ । ಯದ್ಯಸ್ಮಾತ್ಕಾರಣಾದ್ಗೋಃ ಪದೇ ಭೂಮ್ಯಾಃ ಸರ್ವೈರ್ಗಂತವ್ಯಾಯಾಃ ಸ್ತುತ್ಯಾಯಾ ವಾ ವೇದಿರೂಪಾಯಾಃ ಸ್ಥಾನೇ । ಏತಾವತೀ ವೈ ಪೃಥಿವೀ ಯಾವತೀ ವೇದಿರಿತಿ ಶ್ರುತೇಃ । ಗೌರಿತಿ ಭೂನಾಮ । ತಥಾ ಚ ನಿರುಕ್ತಂ । ಗೌರಿತಿ ಪೃಥಿವ್ಯಾ ನಾಮಧೇಯಂ ಯದ್ದೂರಂ ಗತಾ ಭವತಿ ಯಚ್ಚಾಸ್ಯಾಂ ಭೂತಾನಿ ಗಚ್ಛಂತಿ ಗಾತೇರ್ವೌಕಾರೋ ನಾಮಕರಣಃ । ನಿ. ೨-೫ । ಇತಿ । ತಾದೃಶೇ ಸ್ಥಾನೇಽಸ್ಮಾಭಿಃ ಪ್ರಾರ್ಥಿತೌ ಸಂತೌ ನಮಸಾ ಹವಿರ್ಲಕ್ಷಣೇನ ಯವಮಾತ್ರಪ್ರಕಾರೇಣಾನ್ನೇನ ಧೇಥೇ ಧಾರಯಥೋ ಬಹುಪ್ರದಾನವಿಷಯಾಂ ಬುದ್ಧಿಂ ॥ ದಧಾತೇರ್ಲಟಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಧಾತೋರ್ಹ್ರಸ್ವತ್ವಂ । ಆತೋ ಙಿತಃ । ಪಾ. ೭-೨-೮೧ । ಇತೀಯಾದೇಶಃ ॥ ಯಸ್ಮಾದೇವಂ ತಸ್ಮಾದಸ್ಮೇ ಅಸ್ಮಭ್ಯಂ ರೇವತೀಃ ಕ್ಷೀರಾದಿಧನವತೀಃ ಪುರಂಧೀಃ ಶರೀರಧಾರಿಕಾಃ ಶರೀರಾಭಿವೃದ್ಧಿಹೇತೂರ್ಗಾ ಜಿಗೃತಂ । ಶಬ್ದಯತಂ । ದತ್ತಮಿತ್ಯರ್ಥಃ ॥ ಗೃ ಶಬ್ದೇ ।; ಛಾಂದಸಃ ಶಪಃ ಶ್ಲುಃ । ಅಭ್ಯಾಸಸ್ಯೇತ್ವಂ ಹ್ರಸ್ವತ್ವಂ ಚ ॥ ಪುನಸ್ತಾವೇವ ವಿಶೇಷ್ಯೇತೇ । ಕಾಮಪ್ರೇಣೇವ । ಇವಶಬ್ದ ಏವಕಾರಾರ್ಥಃ । ಕಾಮಪೂರಕೇಣೈವ ಮನಸಾ ಸಹ ಚರಂತಾ ಚರಂತೌ । ಯಜಮಾನಸ್ಯ ಕಾಮಾಃ ಪೂರಣೀಯಾ ಇತಿ ಕೃತಸಂಕಲ್ಪಾವಿತ್ಯರ್ಥಃ ॥ ಪ್ರಾ ಪೂರಣೇ । ಕಾಮಂ ಪ್ರಾತೀತಿ ಕಾಮಪ್ರಃ । ಆತೋಽನುಪಸರ್ಗೇ ಕಃ ॥

### ಪ್ರತಿಪದಾರ್ಥ

ವಸೂ—ವಾಸಸ್ಥಾನವನ್ನು ಕಲ್ಪಿಸಿಕೊಡತಕ್ಕ ಎಲೈ ಅಶ್ವಿನೀದೇವತೆಗಳೇ। ಯತ್-(ನಮಗೆ ಒಳ್ಳೆಯದನ್ನು ಮಾಡಬೇಕೆಂಬ) ಯಾವ ಕಾರಣದಿಂದ। ಗೋಃ ಪದೇ—ಪೂಜ್ಯವಾದ ವೇದಿಕೆಯ ಸ್ಥಾನದಲ್ಲಿ। ನಮಸಾ—(ಅಲ್ಪ ಮಾತ್ರವಾಗಿರತಕ್ಕ) ಹವಿಸ್ಸಿನ ರೂಪದ ಅನ್ನದಿಂದ (ಅದಕ್ಕೆ ಪ್ರತಿಯಾಗಿ)। ಧೇಥೇ—(ಪ್ರಭೂತವಾಗಿ ನಮಗೆ ಕೊಡುವ ಬುದ್ಧಿಯನ್ನು) ಹೊಂದಿರುತ್ತೀರೋ, (ಆದ್ದರಿಂದಲೇ)। ಕಾಮಪ್ರೇಣೇವ—(ನಮ್ಮ) ಇಷ್ಟಗಳನ್ನು ಪೂರೈಸಿಯೇ ತೀರಬೇಕೆಂಬ। ಮನಸಾ—ಮನಸ್ಸಿನೊಡನೆ। ಚರಂತಾ—ಸಂಚರಿಸುತ್ತಾ। ಅಸ್ಮೇ· ನಮಗೆ। ರೇವತೀಃ—ಕ್ಷೀರಾದಿ ಸಂಪತ್ತುಗಳುಳ್ಳವೂ। ಪುರಂಧೀಃ—ಶರೀರದ ಬೆಳವಣಿಗೆಗೆ ಕಾರಣವಾದವೂ ಆದ ಗೋವು ಗಳನ್ನು। ಜಿಗೃತಂ—ಕೊಡುತ್ತೀರೋ (ಅಂತಹ)। ವಾಂ—ನಿಮ್ಮ। ಅಸ್ಯೈ ಸುಮತಯೇ ಚಿತ್—ಈ ಶ್ರೇಷ್ಠ ವಾದುದೂ ಅನುಗ್ರಹಾತ್ಮಕವಾದುದೂ ಆದ ಬುದ್ಧಿಗೆ ತೃಪ್ತಿಯನ್ನುಂಟುಮಾಡುವಷ್ಟು ಹೇರಳವಾಗಿ)। ಕಃ—ಯಾವ ಯಜ್ಞಕರ್ತನು ತಾನೇ। ದಾಶತ್—ಅರ್ಪಿಸಬಲ್ಲನು ?

### ಭಾವಾರ್ಥ

ವಾಸಸ್ಥಾನವನ್ನು ಕಲ್ಪಿಸಿಕೊಡತಕ್ಕ ಎಲೈ ಅಶ್ವಿನೀದೇವತೆಗಳೇ, ನೀವು ನಮಗೆ ಒಳ್ಳೆಯದನ್ನೇ ಮಾಡ ಬೇಕೆಂಬ ಉದ್ದೇಶದಿಂದ ಪೂಜ್ಯವಾದ ವೇದಿಕೆಯ ಸ್ಥಾನದಲ್ಲಿದ್ದು ನಾವು ಅರ್ಪಿಸುವ ಅಲ್ಪವಾದ ಹವಿಸ್ಸಿಗೆಪ್ರತಿಯಾಗಿ ಪ್ರಭೂತವಾಗಿ ನಮಗೆ ಧನಾದಿಗಳನ್ನು ಕೊಡುವ ಅನುಗ್ರಹ ಬುದ್ಧಿಯನ್ನು ಹೊಂದಿದ್ದೀರಿ. ಆದ್ದರಿಂದ ನಮ್ಮ ಇಷ್ಟಗಳನ್ನೆಲ್ಲಾ ಪೂರೈಸಿಯೇ ತೀರಬೇಕೆಂಬ ಮನಸ್ಸಿನೊಡನೆ ಸಂಚರಿಸುತ್ತಾ ನಮಗೆ ಕ್ಷೀರಾದಿಸಂಪತ್ತುಗಳುಳ್ಳವೂ ಶರೀರದ ಬೆಳವಣಿಗೆಗೆ ಕಾರಣವಾದವೂ ಆದ ಗೋವುಗಳನ್ನು ಕೊಡುತ್ತೀರಿ. ಇಂತಹ ಶ್ರೇಷ್ಠವಾದವೂ, ಅನುಗ್ರಹಾ ತ್ಮಕವಾದವೂ ಆದ ನಿಮ್ಮ ಮನಸ್ಸಿಗೆ ತೃಪ್ತಿಯನ್ನುಂಟುಮಾಡುವಷ್ಟು ಹೇರಳವಾಗಿ ಯಾವ ಯಜ್ಞಕರ್ತನು ತಾನೇ ನಿಮಗೆ ಹವಿಸ್ಸನ್ನು ಅರ್ಪಿಸಬಲ್ಲನು ? ನಮ್ಮ ಅಲ್ಪವಾದ ಅರ್ಪಣೆಯಿಂದಲೇ ನೀವು ತೃಪ್ತಿಯನ್ನು ಹೊಂದಬೇಕು.

### English Translation

Granters of dwellings, who may make you offerings so propitiatory of that your good will, that (invoked) by our adoration, to the site of the altar, you may entertain (favourable intentions towards us), and grant us cows rich in milk, coming with minds made up to grant the desires (of the worshipper).

### । ವಿಶೇಷವಿಷಯಗಳು ।

ಗೋಃ ಪದೇ—ಭೂಮ್ಯಾಃ ಸರ್ವೈರ್ಗಂತವ್ಯಾಯಾಃ ಸ್ತುತ್ಯಾಯಾ ವಾ ವೇದಿರೂಪಾಯಾಃ ಸ್ಥಾನೇ। ವೇದಿರೂಪವಾದ ಪೃಥ್ವಿಯ ಮೇಲೆ ಎಂದರ್ಥಮಾಡಿದೆ. ಗೋಶಬ್ದಕ್ಕೆ ಪೃಥ್ವಿಯೆಂಬ ಹೆಸರು ಹೇಗೆ ಸಾಧ್ಯವಾಗುತ್ತದೆಂದು ತಿಳಿದು ಅನಂತರ ಪೃಥ್ವಿಗೂ ವೇದಿಗೂ ಇರುವ ತಾದಾತ್ಮ್ಯವನ್ನು ತಿಳಿಯಬೇಕು. ನಿರುಕ್ತ ಕಾರರು ಗೋಶಬ್ದವನ್ನು ಪೃಥಿವೀನಾಮಗಳಲ್ಲಿ ಸೇರಿಸಿ (ನಿ. ೨-೫) ಅನಂತರ ಗೋಶಬ್ದಕ್ಕೆ ನಿರ್ವಚನವನ್ನು ಹೇಳಿದ್ದಾರೆ.

ಗೌರಿತಿ ಪೃಥಿವ್ಯಾ ನಾಮಧೇಯಂ । ಯದ್ದೂರಂಗತಾ ಭವತಿ । ಯಚ್ಚಾಸ್ಯಾಂ ಭೂತಾನಿ ಗಚ್ಛಂತಿ । ಗಾತೇರ್ವೌಕಾರೋ ನಾಮಕರಣಃ ।

( ನಿ. ೨-೫ )

ಅತ್ಯಂತ ವಿಸ್ತೃತವಾಗಿ ಹರಡಿರುವುದರಿಂದಲೂ ( ದೂರಂಗತಾ ಭವತಿ ); ಅಥವಾ ಭೂತಗಳು ಇದರಮೇಲೆ ಸಂಚರಿಸುವುದರಿಂದಲೂ ( ಭೂತಾನಿ ಗಚ್ಛಂತಿ ); ಗೌಃ ಎಂಬ ಪದವು ಪೃಥಿವಿಗೆ ಪರ್ಯಾಯಪದವಾಗಿದೆ. ಗಾ ಧಾತುವಿಗೆ ಔ ಎಂಬ ಪ್ರತ್ಯಯವನ್ನು ಸೇರಿಸಿದರೂ ಈ ಪದದ ನಿಷ್ಪತ್ತಿಯು ಸಾಧ್ಯವಾಗುತ್ತದೆ ಎಂಬುದಾಗಿ ನಿರುಕ್ತ ಕಾರರು ಪೃಥಿವಿಗೆ ಪರ್ಯಾಯ ಪದವಾದ ಈ ಶಬ್ದವನ್ನು ವಿವರಿಸಿ ಅನಂತರ,

ಅಥಾಪಿ ಪಶುನಾಮೇಹ ಭವತ್ಯೇತಸ್ಮಾದೇವ ।:

ಈ ಕಾರಣದಿಂದಲೇ ಎಂದರೆ ಮೇಲಿನ ಅರ್ಥವನ್ನು ಕೊಡತಕ್ಕ ಗಮ್ ಅಥವಾ ಗಾ ಧಾತುವಿನಿಂದ ನಿಷ್ಪನ್ನವಾಗಿರು ವುದರಿಂದಲೇ ಪಶುವಿಗೂ ಈ ಹೆಸರು ಪ್ರಸಿದ್ಧವಾಗಿದೆ ಎಂದು ಹೇಳಿ ಆದಿತ್ಯೋಽಪಿ ಗೌರುಚ್ಯತೇ, ಸರ್ವೇಽಪಿ ರಶ್ಮಯೋ ಗಾವ ಉಚ್ಯಂತೇ । ಆದಿತ್ಯ, ರಶ್ಮಿ ಇತ್ಯಾದ್ಯರ್ಥಗಳಲ್ಲಿಯೂ ಗೋಶಬ್ದದ ಪ್ರಯೋಗವಿದೆಯೆಂದು ತಿಳಿಸಿದ್ದಾರೆ. ಆ ಸನ್ನಿವೇಶಗಳಲ್ಲಿ ಮೂಲಧಾತುವಿನ ಅರ್ಥವನ್ನೂ ಮತ್ತು ಗೋಶಬ್ದದ ನಿಷ್ಪತ್ತಿಯನ್ನೂ ಆಯಾ ಸಂಧರ್ಭಗಳಲ್ಲಿ ತಿಳಿಸಿದೆ ಅಥವಾ ಮುಂದೆ ತಿಳಿಸಲಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಪೃಥಿವಿಯೆಂದರ್ಥ. ಈ ಅರ್ಥವನ್ನು ಇನ್ನೂ ವಿಸ್ತರಿಸಿದರೆ ವೇದಿರೂಪವಾದ ಪೃಥ್ವಿಯೆಂದು ತಾತ್ಪರ್ಯವಾಗುತ್ತದೆ.

ಚಂದ್ರಮಾ ಏವ ಪ್ರತ್ಯಕ್ಷಾದಾದಿತ್ಯೋ ಯಜಮಾನಸ್ತಸ್ಯೇಯಮೇವ ಪೃಥಿವೀ ವೇದಿಃ ।

( ಶ. ಬ್ರಾ. ೧೨-೮-೨-೩೬ )

ಇತ್ಯಾದಿವಾಕ್ಯಗಳಲ್ಲಿ ಪೃಥಿವಿಗೂ ವೇದಿಗೂ ತಾದಾತ್ಮ್ಯವನ್ನೇ ಹೇಳಿದೆ. ಮತ್ತು ಹೋತಾ ವೇದಿಷತ್ ಎಂಬ ಕಠೋಪನಿಷತ್ತಿನ ವಾಕ್ಯಕ್ಕೆ (೫-೨) ಶಂಕರಾಚಾರ್ಯರು ಭಾಷ್ಯವನ್ನು ಬರೆಯುವಾಗ,

ಇಯಂ ವೇದಿಃ ಪರೋಽಂತಃ ಪೃಥಿವ್ಯಾಃ । ಯಾ ಯಜ್ಞೇ ಪ್ರಸಿದ್ಧಾ ಇಯಂ ವೇದಿಃ ಪೃಥಿವ್ಯಾಃ ಪರೋಽಂತಃ ಪರಃ ಸ್ವಭಾವ ಇತಿ ವೇದ್ಯಾಃ ಪೃಥಿವೀಸ್ವಭಾವತ್ವಕೀರ್ತನಾತ್ ಪೃಥಿವೀ ವೇದಿ-ಶಬ್ದವಾಚ್ಯಾ ಭವತೀತ್ಯರ್ಥಃ ।

ಎಂದು ಪೃಥಿವೀ ಮತ್ತು ವೇದಿಗಳಿಗೆ ತಾದಾತ್ಮ್ಯಬೋಧಕವಾದ ಅರ್ಥವನ್ನು ಮಾಡಿದ್ದಾರೆ. ಇದಲ್ಲದೆ—

ಇಯಂ ವೇದಿಃ ಪರೋ ಅಂತಃ ಪೃಥಿವ್ಯಾ ಅಯಂ ಯಜ್ಞೋ ಭುವನಸ್ಯ ನಾಭಿಃ ।

(ಋ. ಸಂ. ೧-೧೬೪-೩೫)

ಎಂದು ಶ್ರುತಿವಾಕ್ಯವೇ ಇರುವುದು.

ಪ್ರಕೃತವಾದ ಋಕ್ಕಿನಲ್ಲಿ ಸಾಯಣರು ಸಕಲರಿಂದಲೂ ಸುಗಮ್ಯವಾದುದೂ, ಸ್ತುತ್ಯವಾದುದೂ ಆದ ವೇದಿ ರೂಪವಾದ ಪೃಥ್ವಿಯಮೇಲೆ ಎಂದು ಅರ್ಥಮಾಡಿದ್ದಾರೆ.

ನಮಸಾ—ಹವಿರ್ಲಕ್ಷಣೇನ ಅನ್ನೇನ । ಹವಿಸ್ಸಿನರೂಪವಾದ. ಅನ್ನದಿಂದ ನಮಃ ಎಂಬ ಪದವು ಅನ್ನನಾಮಗಳಲ್ಲಿಯೂ (ನಿ. ೩-೯); ವಜ್ರನಾಮಗಳಲ್ಲಿಯೂ ( ನಿ. ೩-೧೧ ) ಪಠಿತವಾಗಿದೆ. ಮತ್ತು ರೂಢ ವಾಗಿರತಕ್ಕ ನಮಸ್ಕಾರಾರ್ಥಬೊಡನೆ ಈ ಎರಡರ್ಥಗಳಲ್ಲಿಯೂ ಸಹ ಋಕ್ಸಂಹಿತೆಯಲ್ಲಿ ಈ ಪದದ ಪ್ರಯೋಗವಿವೆ.

ನಮಃಸಾಧನವಾದ ಸ್ತೋತ್ರವೆಂಬ ಅರ್ಥವೂ ಕೆಲವೆಡೆಗಳಲ್ಲಿದೆ. ಪ್ರಕೃತವಾದ ಋಕ್ಕಿನಲ್ಲಿ ಹವಿಸ್ಸಿನ ರೂಪವಾದ ಅನ್ನದಿಂದ ಎಂದರ್ಥವಾಗುತ್ತದೆ.

ಕಾಮಪ್ರೇಣೇವ—ಇವ ಶಬ್ದಃ ಏವಕಾರಾರ್ಥಃ । ಕಾಮಪೂರಕೇಣೈವ ಮನಸಾ । ಯಜಮಾನಸ್ಯ ಕಾಮಾಃ ಪೂರಣೀಯಾ ಇತಿ ಕೃತಸಂಕಲ್ಪಾವಿತ್ಯರ್ಥಃ । ಯಜ್ಞಕರ್ತನ ಮನಸ್ಸಿನ ಅಭೀಷ್ಟಗಳನ್ನು ಸಂಪಾದಿಸಿ ಕೊಟ್ಟು ಅವನನ್ನು ತೃಪ್ತಿಪಡಿಸಬೇಕು ಎಂದು ದೃಢವಾದಸಂಕಲ್ಪವನ್ನು ಮಾಡಿದ ಮನಸ್ಸುಳ್ಳವರಾಗಿ ಎಂದರ್ಥ ಮಾಡಿವೆ. ಅಥವಾ ಇಷ್ಟಾರ್ಥವನ್ನು ನೆರವೇರಿಸಿಕೊಡಬೇಕೆಂದು ಪ್ರೀತಿಯಿಂದ ಕೂಡಿದ ಮನಸ್ಸುಳ್ಳವರಾಗಿ ಎಂದೂ ಅರ್ಥವಾಗಬಹುದು. ಏತಕ್ಕೆಂದರೆ,

ಬೃಹಸ್ಪತೇ ಪ್ರಥಮಂ ವಾಚೋ ಅಗ್ರಂ ಯತ್ಪ್ರೈರತ ನಾಮಧೇಯಂ ದಧಾನಾಃ ।
ಯದೇಷಾಂ ಶ್ರೇಷ್ಠಂ ಯದರಿಪ್ರಮಾಸೀತ್ಪ್ರೇಣಾ ತದೇಷಾಂ ನಿಹಿತಂ ಗುಹಾವಿಃ॥
(ಋ. ಸಂ ೧೦-೭೧-೧)

ಎಂಬ ಋಕ್ಕಿನಲ್ಲಿ ಪ್ರೇಣಾ ಎಂಬ ಶಬ್ದಕ್ಕೆ ಮಕಾರಲೋಪಶ್ಛಾಂದಸಃ । ಪ್ರೇಮ್ಣಾವಿರ್ಭವತಿ ಪ್ರೇಮ್ಣಾ ಎಂಬ ಶಬ್ದದಲ್ಲಿ ವೈದಿಕವಾದ ಪದವಾದುದರಿಂದ ಮಕಾರವು ಲುಪ್ತವಾಗಿದೆ. ಪ್ರೇಮದಿಂದ ಎಂಬರ್ಥವಾಗುತ್ತದೆ ಎಂದು ಸಾಯಣರು ವಿವರಿಸಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಕಾಮಾಭಿಪೂರಕಪ್ರೇಮ್ಣಾ ಇವ। ಯಜ್ಞಕರ್ತನ ಇಷ್ಟಾರ್ಥಗಳನ್ನು ತುಂಬಿಸಿಕೊಡಲೇಬೇಕೆಂಬ ಅಭಿಮಾನದಿಂದ ಎಂದೂ ಸಹ ಅರ್ಥವಾಗಬಹುದು.

ರೇವತೀಃ—ಕ್ಷೀರಾದಿಧನವತೀಃ । ಕ್ಷೀರಾದಿಸಂಪತ್ತುಗಳಿಂದ ಕೂಡಿದ ಎಂದರ್ಥ. ಧನನಾಮಗಳಲ್ಲಿ ಪಠಿತವಾದ (ನಿ. ೩-೯) ರೈಶಬ್ದದಿಂದ ನಿಷ್ಪನ್ನವಾಗಿರುತ್ತದೆ. ರೇವತಿಶಬ್ದಕ್ಕೆ ಕೇವಲಧನವಂತನಾದ ಎಂದಾಗಲಿ ಅಥವಾ ಕ್ಷೀರಾದಿಗಳನ್ನು ಕೊಡತಕ್ಕ ಪಶುಗಳು ಎಂದಾಗಲಿ ಅರ್ಥವಾಗಬಹುದು.

ಆ ಶೂ ನ ಇಂದೋ ಶತದಾತ್ವಶ್ವ್ಯಂ ಸಹಸ್ರದಾತು ಪಶುಮದ್ಧಿರಣ್ಯವತ್ ॥
ಉಪ ಮಾಸ್ವ ಬೃಹತೀ ರೇವತೀರಿಷೋಽಧಿ ಸ್ತೋತ್ರಸ್ಯ ಪವಮಾನ ನೋ ಗಹಿ ॥
( ಋ. ಸಂ. ೯-೭೨-೯ )

ಎಂಬಲ್ಲಿ ರೇವತೀಃ ಧನವಂತಿ ಯದ್ವಾ ಪಯಸೋ ದಾತಾರಃ ಪಶವಃ ತದ್ವಂತಿ–ಧನವಂತವಾದ ಅಥವಾ ಕ್ಷೀರವನ್ನು ಕೊಡತಕ್ಕ ಪಶುಗಳುಳ್ಳ ಎಂದು ಎರಡರ್ಥಗಳನ್ನೂ ಮಾಡಿದ್ದಾರೆ. ಇಷಃ (ಅನ್ನಾನಿ) ಎಂಬ ಪದಕ್ಕೆ ವಿಶೇಷಣವಾಗಿದೆ. ಇದರಂತೆಯೇ ಇತರ ಕಡೆಗಳಲ್ಲಿಯೂ ಈ ಪದದ ಪ್ರಯೋಗವಿದೆ.

ಪುರಂಧೀಃ—ಶರೀರಧಾರಿಕಾಃ ಶರೀರಾಭಿವೃದ್ಧಿಹೇತೂಃ ಗಾಃ । ಶರೀರದ ಪೋಷಣೆಗೆ ಸಾಧಕಗಳಾದ ಗೋವುಗಳನ್ನು (ದತ್ತಂ) ಎಂದು ವಿವರಿಸಿದೆ. ಕ್ಷೀರದಿಂದ ತುಂಬಿದ ಎಂದು ಕ್ಷೀರಸಂಪತ್ತಿನ ಪೌಷ್ಕಲ್ಯದಲ್ಲಿ ತಾತ್ಪರ್ಯ. ಈ ಪದವು ಪ್ರಭೂತ, ಪೌಷ್ಕಲ್ಯ, ಸಮೃದ್ಧ ಎಂಬರ್ಥವನ್ನೇ ಎಲ್ಲಾ ಕಡೆಯೂ ಸೂಚಿಸಿದರೂ ಸಹ ಇದರ ಪ್ರಯೋಗವು ಅನೇಕ ಸಂದರ್ಭಗಳಲ್ಲಿರುವುದರಿಂದ ಆಯಾ ಸಂದರ್ಭಾನುಸಾರವಾಗಿ ಅರ್ಥವನ್ನು ವಿವರಿಸಬೇಕಾಗುತ್ತದೆಂದು ನಿರುಕ್ತಕಾರರ ವಾಕ್ಯದಿಂದಲೇ ತಿಳಿಯುತ್ತದೆ.

ತೇ ಹಿ ಯಜ್ಞೇಷು ಯಜ್ಞಿಯಾಸ ಊಮಾಃ ಸಧಸ್ಥಂ ವಿಶ್ವೇ ಅಭಿ ಸಂತಿ ದೇವಾಃ ।
ತಾँ ಅಧ್ವರ ಉಶತೋ ಯಕ್ಷ್ಯಗ್ನೇ ಶ್ರುಷ್ಟೀ ಭಗಂ ನಾಸತ್ಯಾ ಪುರಂಧಿಂ ।
(ಋ. ಸಂ. ೭-೩೯-೪)

ಎಂಬ ಋಕ್ಕಿನಲ್ಲಿರುವ ಪುರಂಧಿಂ ಎಂಬ ಪದದ ಅರ್ಥವನ್ನು ವಿವರಿಸುವಾಗ,

ಪುರಂಧಿರ್ಬಹುಧೀಸ್ತತ್ಕಃ ಪುರಂಧಿರ್ಭಗಃ ಪುರಸ್ತಾತ್ತಸ್ಯಾನ್ವಾದೇಶ ಇತ್ಯೇಕಂ । ಇಂದ್ರ ಇತ್ಯಪರಂ
ಸ ಬಹುಕರ್ಮತಃ ಪುರಾಂ ಚ ದಾರಯಿತೃತಮಃ । ವರುಣ ಇತ್ಯಪರಂ ತಂ ಪ್ರಜ್ಞಯಾ ಸ್ತೌತಿ ।
(ನಿ. ೬-೧೩)

ಸಮೃದ್ಧವಾದ ಧೀ(ಬುದ್ಧಿ)ಯುಳ್ಳವನು ಎಂದು ಪುರಂಧಿಶಬ್ದದ ಅರ್ಥ. ಆದರೆ ಅಂತಹವನು ಯಾರು ಎಂಬ ಪ್ರಶ್ನೆ. ಋಕ್ಕಿನಲ್ಲಿ ಭಗಶಬ್ದವು ಇದರ ಪೂರ್ವಭಾವಿಯಾಗಿರುವುದರಿಂದ ಅದರ ವಿಶೇಷಣವೆಂದು ಕೆಲವರ ಮತ. ಧೀಶಬ್ದವು ಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ ಪುರಂಧಿಯೆಂದರೆ ನಾನಾವಿಧವಾದ ಕರ್ಮವುಳ್ಳವನು ಎಂದಾಗಲಿ ಅಥವಾ ಶತ್ರುಪಟ್ಟಣಗಳನ್ನು ಸೀಳುವವನು ಎಂದಾಗಲಿ ಅರ್ಥವಾಗುವುದರಿಂದ ಇಂದ್ರನಿಗೆ ವಿಶೇಷಣವೆಂದು ಕೆಲವರ ಮತ. ಅಥವಾ 'ಇಮಾಮೂ ನು ಕವಿತಮಸ್ಯ ಮಾಯಾಂ' (ಋ. ಸಂ. ೫-೮೫-೬ ರಲ್ಲು) ಇತ್ಯಾದಿ ವಾಕ್ಯಗಳಲ್ಲಿ ವರುಣನ ಶ್ರೇಷ್ಠವಾದ ಪ್ರಜ್ಞೆಯನ್ನು ಸ್ತುತಿಸಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ (ನಿರುಕ್ತಕಾರರು ಉದಹರಿಸಿರುವ ೭-೯-೪ ರಲ್ಲು) ಅವನ ಪ್ರಜ್ಞೆಯನ್ನು ವರ್ಣಿಸುತ್ತಾ ವರುಣನಿಗೆ ಪರ್ಯಾಯಪದವಾಗಿರಬಹುದೆಂದು ಇನ್ನು ಕೆಲವರ ಮತ ಎಂದು ಅಭಿಪ್ರಾಯಭೇದಗಳನ್ನು ನಿರುಕ್ತಕಾರರು ತಿಳಿಸಿದ್ದಾರೆ. ಯಜ್ಞಕರ್ತರ ವಿಷಯದಲ್ಲಿ ದೇವತೆಗಳು ತೋರಿಸುವ ಔದಾರ್ಯದ ಆಧಿಕ್ಯವನ್ನು ತೋರಿಸುವಾಗಲೂ, ಯಜಮಾನರು ದೇವತೆಗಳಿಗೆ ಅರ್ಪಿಸತಕ್ಕ ಹವಿರಾದಿಗಳ ಸಮೃದ್ಧಿಯನ್ನು ಸೂಚಿಸುವಾಗಲೂ ಈ ಪದದ ಪ್ರಯೋಗವಿದೆಯೆಂದು ನಿರುಕ್ತಕಾರರು ಇನ್ನೂ ಕೆಲವು ಉದಾಹರಣೆಗಳಿಂದ ತಿಳಿಸುತ್ತಾರೆ.

ಆದಾಯ ಶ್ಯೇನೋ ಅಭರತ್ಸೋಮಂ ಸಹಸ್ರಂ ಸವಾಁ ಅಯುತಂ ಚ ಸಾಕಂ ।
ಅತ್ರಾ ಪುರಂಧಿರಜಹಾದರಾತೀರ್ಮದೇ ಸೋಮಸ್ಯ ಮೂರಾ ಅಮೂರಃ ।
(ಋ. ಸಂ. ೪-೨೬-೭)

ಎಂಬ ಋಕ್ಕಿನಲ್ಲಿರುವ ಪದಕ್ಕೆ ದುರ್ಗಾಚಾರ್ಯರು (ನಿ ೧೧-೨) ಪುರಂಧಿಃ ಬಹು ನಃ ಧನಸ್ಯ ದಾತಾ ಅಧಿಕವಾಗಿ ಧನದಾತನೆಂದೂ, ಸಾಯಣರು ಬಹುಕರ್ಮ ಎಂದೂ ಅರ್ಥಮಾಡಿದ್ದಾರೆ. ಇಂದ್ರನಿಗೆ ವಿಶೇಷಣವಾಗಿದೆ. ಉದಾರಿಯೆಂಬುದರಲ್ಲಿ ತಾತ್ಪರ್ಯ.

ನೃಧೂತೋ ಅದ್ರಿಷುತೋ ಬರ್ಹಿಷಿ ಪ್ರಿಯಃ ಪತಿರ್ಗವಾಂ ಪ್ರದಿವ ಇಂದುರ್ಋತ್ವಿಯಃ ।
ಪುರಂಧಿವಾನ್ಮನುಷೋ ಯಜ್ಞಸಾಧನಃ ಶುಚಿರ್ಧಿಯಾ ಪವತೇ ಸೋಮ ಇಂದ್ರ ತೇ ॥
(ಋ ಸಂ. ೯-೭೨-೪)

ಎಂಬ ಋಕ್ಕಿನಲ್ಲಿ ಬಹುಕರ್ಮವಾನ್ ಮನುಷಃ ದೇವತೆಗಳ ತೃಪ್ತ್ಯರ್ಥವಾಗಿ ನಾನಾವಿಧವಾದ ಕರ್ಮಗಳುಳ್ಳ ಮಾನವನ ಎಂದರ್ಥಮಾಡಿದೆ.

ಪಾವೀರವೀ ತನ್ಯತುರೇಕಪಾದಜೋ ದಿವೋ ಧರ್ತಾ ಸಿಂಧುರಾಪಃ ಸಮುದ್ರಿಯಃ ।
ವಿಶ್ವೇ ದೇವಾಸಃ ಶೃಣವನ್ ವಚಾಂಸಿ ಮೇ ಸರಸ್ವತೀ ಸಹ ಧೀಭಿಃ ಪುರಂಧ್ಯಾ ॥
(ಋ. ಸಂ. ೧೦-೬೫-೧೩)

ಎಂಬ ಋಕ್ಕಿನಲ್ಲಿ ಈ ಪದಕ್ಕೆ ನಿರುಕ್ತಕಾರರು (ನಿ. ೧೨-೩೦) ಪುರಂಧ್ಯಾ ಸ್ತುತ್ಯಾ ಪ್ರಯುಕ್ತಾನಿ ಬಹುವಿಧವಾದ ಸ್ತುತಿಗಳಿಂದ ಕೂಡಿಕೊಂಡಿರತಕ್ಕ ವಚಾಂಸಿ ವಚನಗಳನ್ನು ಎಂದರ್ಥಮಾಡಿದ್ದಾರೆ. ಸಾಯಣರು ಬಹುವಿಧಯಾ ಪ್ರಜ್ಞಯಾ ಸಹಿತಾ ಸರಸ್ವತೀ । ಬಹುವಿಧವಾದ ಪ್ರಜ್ಞೆಯಿಂದ ಕೂಡಿದ ಎಂದು ಸರಸ್ವತಿಗೆ ವಿಶೇಷಣವೆಂದು ತಿಳಿಸಿದ್ದಾರೆ ಆದರೆ ದುರ್ಗಾಚಾರ್ಯರು ಮಾಡಿರುವ (ನಿ. ೧೨–೩೦) ಬಹುಧಾತ್ರ್ಯಾ ಮಾಧ್ಯಮಿಕಯಾ ವಾಚಾ ಎಂಬ ವಿವರಣೆಯಿಂದ ಸರಸ್ವತೀಸದೃಶವಾದ ಒಂದು ದೇವತಾವಿಶೇಷವೆಂದೂ ತಿಳಿಯುತ್ತದೆ. ಇದರಂತೆಯೇ,

ಶಂ ನೋ ಭಗಃ ಶಮು ನಃ ಶಂಸೋ ಅಸ್ತು ಶಂ ನಃ ಪುರಂಧಿಃ ಶಮು ಸಂತು ರಾಯಃ ।
ಶಂ ನಃ ಸತ್ಯಸ್ಯ ಸುಯಮಸ್ಯ ಶಂಸಃ ಶಂ ನೋ ಅರ್ಯಮಾ ಪುರುಜಾತೋ ಅಸ್ತು ।

(ಋ. ಸಂ. ೭-೩೫-೨)

ಇತ್ಯಾದಿಋಕ್ಕುಗಳಲ್ಲಿ ಪುರಂಧಿಯೇ ಪ್ರತ್ಯೇಕವಾದ ದೇವತೆಯೆಂದು ತಿಳಿಯುತ್ತದೆ ಸಾಯಣರೂ ಸಹ ಈ ಋಕ್ಕಿನಲ್ಲಿರುವ ಭಗಾದಿಪದಗಳಿಗೆ ವಿಶೇಷಣವನ್ನಾಗಿ ಮಾಡಿಲ್ಲ. ಮತ್ತು

ದೇವೋ ಭಗಃ ಸವಿತಾ ರಾಯೋ ಅಂಶ ಇಂದ್ರೋ ವೃತ್ರಸ್ಯ ಸಂಜಿತೋ ಧನಾನಾಂ ।
ಋಭುಕ್ಷಾ ವಾಜ ಉತ ವಾ ಪುರಂಧಿರವಂತು ನೋ ಅಮೃತಾಸಸ್ತುರಾಸಃ ॥

(ಋ. ಸಂ. ೫–೪೨–೫)

ಎಂಬಲ್ಲಿ ವಿಭ್ವನಿಗೆ ಪರ್ಯಾಯಪದವಾಗಿದೆ.

ಪುರಾಣೀ ದೇವಿ ಯುವತಿಃ ಪುರಂಧಿರನು ವ್ರತಂ ಚರಸಿ ವಿಶ್ವವಾರೇ ।

(ಋ. ಸಂ. ೩–೬೧–೧)

ಇತ್ಯಾದಿ ಕಡೆಗಳಲ್ಲಿ ಉಷಸ್ಸಿಗೆ ವಿಶೇಷಣವಾಗಿದೆ. ಬಹುಸ್ತೋತ್ರವತಿಯೆಂದರ್ಥ.

ಅನೇಕಕಡೆಗಳಲ್ಲಿ ಈ ಪದವು ಪತ್ನಿಯಪರವಾಗಿಯೂ ಅಥವಾ ಸ್ತ್ರೀಸಾಮಾನ್ಯದ ಪರವಾಗಿಯೂ ಉಪಯೋಗಿಸಲ್ಪಟ್ಟು ಬಂಜೆಯರಲ್ಲದ, ಸಂತಾನಸಂಪತ್ತನ್ನು ಪಡೆಯಲು ಅರ್ಹರೂ ಪುಷ್ಟರೂ ಆದ ಸ್ತ್ರೀಯರೆಂದರ್ಥವನ್ನು ಕೊಡುತ್ತದೆ.

ಅಗ್ನಿಃ ಸಪ್ತಿಂ ವಾಜಂಭರಂ ದದಾತ್ಯಗ್ನಿರ್ವೀರಂ ಶ್ರುತ್ಯಂ ಕರ್ಮನಿಷ್ಠಾಂ ।
ಅಗ್ನೀ ರೋದಸೀ ವಿ ಚರತ್ಸಮಂಜನ್ನಗ್ನಿರ್ನಾರೀಂ ವೀರಕುಕ್ಷಿಂ ಪುರಂಧಿಂ ॥

(ಋ. ಸಂ. ೧೦–೮೦.೧)

ಇತ್ಯಾದಿ ಋಕ್ಕುಗಳಲ್ಲಿ (೧–೧೧೬-೧೩, ೧–೧೧೭-೧೯) ಪ್ರಸವಸಮರ್ಥಳಾದ ಪತ್ನಿಯೆಂದೂ,

ವಾಯುರ್ಯುಂಕ್ತೇ ರೋಹಿತಾ ವಾಯುರರುಣಾ ವಾಯೂ ರಥೇ ಅಜಿರಾ ಧುರಿ ವೋಳ್ಹವೇ
ವಹಿಷ್ಠಾ ಧುರಿ ವೋಳ್ಹವೇ ।
ಪ್ರ ಬೋಧಯಾ ಪುರಂಧಿಂ ಜಾರ ಆ ಸಸತೀಮಿವ ।
ಪ್ರ ಚಕ್ಷಯ ರೋದಸೀ ವಾಸಯೋಷಸಃ ಶ್ರವಸೇ ವಾಸಯೋಷಸಃ ॥

(ಋ. ಸಂ. ೧-೧೩೪-೩)

ಇತ್ಯಾದಿಋಕ್ಕುಗಳಲ್ಲಿ ಭೋಗಯೋಗ್ಯಳಾದ ಸ್ತ್ರೀಯೆಂದೂ ಅರ್ಥವಾಗುತ್ತವೆ. ಹೀಗೆ ನಾನಾವಿಧವಾದ ಗುಣಗಳನ್ನು ವರ್ಣಿಸುವಾಗ ಪುರಂಧಿ ಶಬ್ದವು ಆ ಗುಣಗಳ ಆಧಿಕ್ಯವನ್ನು ಸತ್ಸಮೃದ್ಧಿಯನ್ನೂ ಸೂಚಿಸುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಪ್ರಭೂತವಾಗಿ ಕ್ಷೀರವನ್ನು ಕೊಡತಕ್ಕ ಗೋವುಗಳೆಂದರ್ಥಮಾಡಿದೆ.

**ಜಿಗೃತಂ—ಶಬ್ದಯತಂ |** ಅಂಗೀಕಾರರೂಪವಾದ ಶಬ್ದವನ್ನು ಮಾಡಿ ಎಂದರೆ ಗೋವುಗಳನ್ನು ಕೊಡಿ ಎಂದು ತಾತ್ಪರ್ಯವು. **ಅವಿಷ್ಟಂ ಧಿಯೋ ಜಿಗೃತಂ** (ಋ. ಸಂ. ೪-೫೦-೧೧) ಎಂಬಲ್ಲಿ **ಪ್ರಬುಧ್ಯತಂ** ಎಚ್ಚರಗೊಳಿಸಿ ಎಂದರ್ಥವಾಗಿದೆ. ಅದರಂತೆಯೇ ಇಲ್ಲಿಯೂ ಸಹ ಗೋವುಗಳ ವಿಷಯದಲ್ಲಿ ನಮ್ಮನ್ನು ಪ್ರಬುದ್ಧರನ್ನಾಗಿ ಮಾಡಿ ಎಂದರೆ ಆ ಸಂಪತ್ತು ನಮಗಿದೆ. ಎಂಬ ತಿಳಿವಳಿಕೆಯನ್ನು ಕೊಡಿ ಎಂದೂ ಅರ್ಥಮಾಡಬಹುದು.

ವ್ಯಾಕರಣಪ್ರಕ್ರಿಯಾ

**ದಾಶತ್—**ದಾಶೃ ದಾನೇ ಧಾತು. ಲೇಟ್ ಪ್ರಥಮಪುರುಷಏಕವಚನದಲ್ಲಿ ತಿಪ್‌ಪ್ರತ್ಯಯ. **ಇತಶ್ಚ ಲೋಪಃ** (ಪಾ- ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ಸುಮತಯೇ—**ಶೋಭನಾ ಮತಿಃ ಯಸ್ಯ ಸಃ ತಸ್ಮೈ. **ನಞ್‌ಸುಭ್ಯಾಮ್** (ವಾ ಸೂ. ೬-೨-೧೭೨) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ.

**ವಸೂ—**ವಸ ನಿವಾಸೇ ಧಾತು. ಅಂತರ್ಭಾವಿತಣ್ಯರ್ಥಕವಾಗಿದೆ. **ಶೃಸ್ವೃಸ್ನಿಹಿತ್ರಪಿ—**(ಉ.ಸೂ. ೧-೧೦) ಎಂಬುದರಿಂದ ಉಪ್ರತ್ಯಯ. ಪಾದಾದಿಯಲ್ಲಿರುವುದರಿಂದ ಆಮಂತ್ರಿತನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಧೇಥೇ—**ಡುಧಾಞ್ ಧಾರಣಪೋಷಣಯೋಃ ಧಾತು. ಲಟ್ ಮಧ್ಯಮಪುರುಷದ್ವಿವಚನದಲ್ಲಿ ಆಥಾಮ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ (ಶ್ಲು) ಲುಕ್. ಧಾತುವಿಗೆ ಹ್ರಸ್ವ. **ಆತೋಙಿತಃ** (ಪಾ. ಸೂ. ೭-೨-೮೧) ಎಂಬುದರಿಂದ ಪ್ರತ್ಯಯದ ಆಕಾರಕ್ಕೆ ಇಯಾದೇಶ—**ಟಿತ ಆತ್ಮನೇ—**ಎಂಬುದರಿಂದ ಟಿಗೆ ಏತ್ವ. **ಲೋಪೋವ್ಯೋರ್ವಲಿ** ಎಂಬುದರಿಂದ ಅವರ ಯಕಾರಕ್ಕೆ ಲೋಪ. **ಆದ್ಗುಣಃ** ಎಂಬುದರಿಂದ ಗುಣ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಪದೇ—ಊಡಿದಂ ಪದಾದಿ—**(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಜಿಗೃತಮ್—**ಗೄ ಶಬ್ದೇ ಧಾತು. ಲೋಟ್ ಮಧ್ಯಮಪುರುಷದ್ವಿವಚನಕ್ಕೆ ತಮಾದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಶ್ಲು ಆದೇಶ. **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ ಬಂದಾಗ **ಬಹುಲಂ ಛಂದಸಿ** ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಸ್ಮೇ—ಸುಪಾಂ ಸುಲುಕ್—**(ಪಾ. ಸೂ. ೭-೧-೩೯) ಎಂಬುದರಿಂದ ಚತುರ್ಥಿಗೆ ಶೇ ಆದೇಶ.

**ರೇವತೀಃ—**ರಯಿಃ ಆಸಾಂ ಅಸ್ತಿ ಇತಿ ರೇವತ್ಯಃ **ರಯೇರ್ಮತೌ ಬಹುಲಮ್** ಎಂಬುದರಿಂದ ಮತುಪ್ ಪರವಾದಾಗ ಯಕಾರಕ್ಕೆ ಸಂಪ್ರಸಾರಣ. ಪೂರ್ವರೂಪ. **ಛಂದಸೀರಃ** (ಪಾ ಸೂ. ೮-೨-೧೫) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ಗುಣ. ಶಪ್ ಪರವಾದಾಗ ಪೂರ್ವಸವರ್ಣದೀರ್ಘ. **ರೇ ಶಬ್ದಾಚ್ಚ** (ಪಾ. ಸೂ. ೬-೧-೧೭೬-೧)ಎಂಬುದರಿಂದ ಮತುಪಿಗೆ ಉದಾತ್ತಸ್ವರ ಬರುತ್ತದೆ

ಕಾಮಪ್ರೇಣ ಇವ—ಪ್ರಾ ಪೂರಣೇ ಧಾತು. ಕಾಮಂ ಪ್ರಾತಿ ಪೂರಯತಿ ಇತಿ ಕಾಮಪ್ರಃ ಆತೋಽನುಪ-ಸರ್ಗೇ ಕಃ (ಪಾ. ಸೂ ೩-೨-೩) ಎಂಬುದರಿಂದ ಕ ಪ್ರತ್ಯಯ. ಕಿತ್ತಾದುದರಿಂದ ಇದು ಪರವಾದಾಗ ಆತೋ-ಲೋಪ ಇಟಿಚ (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ತೃತೀಯಾಂತರೂಪ.

ಚರಂತಾ—ಚರ ಗತಿಭಕ್ಷಣಯೋಃ ಧಾತು. ಲಟಿಗೆ ಶತೃ ಪ್ರತ್ಯಯ. ದ್ವಿವಚನ ಪರವಾದಾಗ ಉಗಿತ್ತಾದುದರಿಂದ ನುಮಾಗಮ. ಸುಪಾಂ ಸುಲುಕ್ (ಪಾ. ಸೂ. ೭-೧-೩೯) ಎಂಬುದರಿಂದ ದ್ವಿವಚನಕ್ಕೆ ಆಕಾರಾದೇಶ- ಲಸಾರ್ವಧಾತುಕ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ. ॥ ೨ ॥

———:o:———

ಸಂಹಿತಾಪಾಠಃ

ಯುಕ್ತೋ ಹ ಯದ್ವಾಂ ತೌಗ್ರ್ಯಾಯ ಪೇರುರ್ವಿ ಮಧ್ಯೇ ಅರ್ಣಸೋ ಧಾಯಿ ಪಜ್ರಃ ।

ಉಪ ವಾಮವಃ ಶರಣಂ ಗಮೇಯಂ ಶೂರೋ ನಾಜ್ಮ ಪತಯದ್ಭಿರೇವೈಃ ।

॥ ೩ ॥

। ಪದಪಾಠಃ ।

ಯುಕ್ತಃ । ಹ । ಯತ್ । ವಾಂ । ತೌಗ್ರ್ಯಾಯ । ಪೇರುಃ । ವಿ । ಮಧ್ಯೇ । ಅರ್ಣಸಃ । ಧಾಯಿ । ಪಜ್ರಃ ।

ಉಪ । ವಾಂ । ಅವಃ । ಶರಣಂ । ಗಮೇಯಂ । ಶೂರಃ । ನ । ಅಜ್ಮ । ಪತಯತ್ಽಭಿಃ । ಏವೈಃ ॥ ೩ ॥

ಸಾಯಣಭಾಷ್ಯಂ

ಅತ್ರೇತಿಹಾಸಮಾಹುಃ । ತೌಗ್ರ್ಯನಾಮಕಂ ರಾಜಾನಂ ಯುದ್ಧೇ ಶತ್ರವಃ ಪರಾಭಾವ್ಯ ಪಾಶೈ-ರ್ದೃಢಂ ಬದ್ಧ್ವಾ ಸಮುದ್ರಮಧ್ಯೇ ಪ್ರಚಿಕ್ಷಿಪುಃ । ಸ ಚೋತ್ತರೀತುಮಶಕ್ತಃ ಸನ್ನಶ್ವಿನೌ ತುಷ್ಟಾವ । ತೌ ಚ ತುಷ್ಟೌ ಶೀಘ್ರಮೇವ ರಥಮಶ್ವ್ಯೈರ್ಯೋಜಯಿತ್ವಾ ಸಮುದ್ರಮಾಗತ್ಯ ತಮುತ್ತಾರ್ಯಾಪಾಲಯತಾ-ಮಿತಿ । ಅಯಮರ್ಥೋಽಜೋಹವೀದಶ್ವಿನಾ ತೌಗ್ರ್ಯಃ । ಋ. ೧-೧೧೭-೧೫ । ಇತ್ಯಾದಿಮಂತ್ರಾಂತರೇ ಪ್ರಸಿದ್ಧಃ । ಸೋಽತ್ರೋಚ್ಯತೇ ॥ ಹೇ ಅಶ್ವಿನೌ ವಾಂ ಯುವಯೋಃ ಸಂಬಂಧೀ ಪೇರುಃ ಪಾರಣಕುಶಲೋ ರಥೋ ಯುಕ್ತೋ ಹ । ಅಶ್ವೈರ್ಯುಕ್ತಃ ಖಲು । ಹಶಬ್ದೋ ಮಂತ್ರಾಂತರಪ್ರಸಿದ್ಧಿದ್ಯೋತನಾರ್ಥಃ । ಸ ಚೋದಾಹೃತಃ । ಕಸ್ಮೈ । ತೌಗ್ರ್ಯಾಯೈತನ್ನಾಮ್ನೇ ರಾಜ್ಞೇ ತದ್ಬಂಧಮೋಚನಾರ್ಥಂ । ಕುತ್ರೇತಿ

ತದುಚ್ಯತೇ। ಅರ್ಣಸೋಽಂಭಸೋ ಮಧ್ಯೇ ಸಮುದ್ರಸ್ಯ ಮಧ್ಯೇ। ಸ ಚ ಪಜ್ರಃ ಪಾಜಸಾ ಬಲೇನ ತೀರ್ಣಃ ಸನ್ ವಿ ಧಾಯಿ । ಧಾರಿತಃ । ಸ್ಥಾಪಿತಃ । ಯಸ್ಮಾದೇವಂ ತಸ್ಮಾದ್ವಾಂ ಯುವಯೋರವೋ ರಕ್ಷಣಂ ಶರಣಮುಪ ಗಮೇಯಂ । ಸಂಪ್ರಾಪ್ನುಯಾಂ । ಐಹಿಕದುಃಖಾದ್ವಿಮುಕ್ತೋ ಯುಷ್ಮತ್ಸ್ಥಾನಂ ಸಂಭಜೇಯಂ । ಗತೌ ವೃಷ್ಟಾಂತಃ । ಪತಯದ್ಭಿರೇವೈರಶ್ವೈಃ ಶೂರೋ ನ ಶೂರ ಇವ । ಸ ಯಥಾಜ್ಮ ಜಿತ್ವಾ ನಿರ್ಭಯಂ ಸ್ವಗೃಹಂ ಪ್ರಾಪ್ನೋತಿ ತದ್ವತ್ ॥

### ಪ್ರತಿಪದಾರ್ಥ

(ಹೇ ಅಶ್ವಿನೌ—ಎಲೈ ಅಶ್ವಿನೀದೇವತೆಗಳೇ) । ಯತ್—ಯಾವ ಕಾರಣದಿಂದ ಎಂದರೆ ಯಾವ ರೀತಿಯಲ್ಲಿ । ವಾಂ—ನಿಮ್ಮ । ಪೇರುಃ—ರಕ್ಷಿಸುವುದರಲ್ಲಿ ಸಮರ್ಥವಾದ ರಥವು । ತೌಗ್ರ್ಯಾಯ—ತುಗ್ರಪುತ್ರನಿಗಾಗಿ । ಅರ್ಣಸಃ ಮಧ್ಯೇ—ಆಳವಾದ ನೀರುಳ್ಳ ಸಮುದ್ರ ಮಧ್ಯದಲ್ಲಿ । ಯುಕ್ತೋ ಹ—(ಅಶ್ವಗಳೊಡನೆ) ಕೂಡಿಕೊಂಡು । ಪಜ್ರಃ—( ಸಮುದ್ರವನ್ನು ) ದಾಟುವ ಸಾಮರ್ಥ್ಯವುಳ್ಳದ್ದಾಗಿ । ವಿಧಾಯಿ—ಸ್ಥಾಪಿಸಲ್ಪಟ್ಟದೆಯೋ । ( ತಸ್ಮಾತ್—ಆದ್ದರಿಂದಲೇ ) । ಪತಯದ್ಭಿಃ—ವೇಗವಾಗಿ ಓಡತಕ್ಕ । ಏವೈಃ—ಅಶ್ವಗಳೊಡನೆ । ಶೂರೋ ನ ಅಜ್ಮ—ಪರಾಕ್ರಮವುಳ್ಳ ಶೂರನು ಯಾವ ರೀತಿ ಜಯಶಾಲಿಯಾಗಿ ಸುರಕ್ಷಿತವಾದ ಗೃಹವನ್ನು ಸೇರುತ್ತಾನೆಯೋ ಹಾಗೆ । ವಾಂ—ನಿಮ್ಮ । ಅವಃ—ರಕ್ಷಣೆಯನ್ನೂ । ಶರಣಂ—ಆಶ್ರಯವನ್ನೂ । ಉಪ ಗಮೇಯಂ—ಹೊಂದುತ್ತೇನೆ.

### ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಸಮುದ್ರಮಧ್ಯದಲ್ಲಿ ಮುಳುಗುತ್ತಿದ್ದ ತುಗ್ರಪುತ್ರನನ್ನು ರಕ್ಷಿಸುವ ಕಾಲದಲ್ಲಿ ರಕ್ಷಿಸಲು ಸಮರ್ಥವಾದ ನಿಮ್ಮ ರಥವು ಅಶ್ವಗಳೊಡನೆ ಕೂಡಿಕೊಂಡು ಸಮುದ್ರವನ್ನು ದಾಟುವ ಸಾಮರ್ಥ್ಯವನ್ನು ವ್ಯಕ್ತಪಡಿಸಿದೆ. ಆದುದರಿಂದ ನಿಮ್ಮ ಆಶ್ರಯವು ಯಾವಾಗಲೂ ರಕ್ಷಣೆಯನ್ನು ಕೊಡತಕ್ಕದ್ದಾಗಿದೆ. ಪರಾಕ್ರಮಿಯಾದ ಶೂರನು ಅಶ್ವಗಳ ಸಹಾಯದಿಂದ ಜಯಶಾಲಿಯಾಗಿ ಸುರಕ್ಷಿತವಾದ ಗೃಹವನ್ನು ಸೇರುವಂತೆ ನಾನೂ ಸಹ ನಿಮ್ಮ ರಕ್ಷಣೆಯನ್ನೂ ಆಶ್ರಯವನ್ನೂ ಪಡೆಯುತ್ತೇನೆ.

### English Translation

In like manner, Ashwins, as your strong-drawn(car) able to cross (the sea), was placed, harnessed, in the middle of the water, for (the rescue of) the son of Tugra, so may I attain to your preserving protection (with the same alacrity) as a victorious hero (returns home) with bounding steeds.

### ವಿಶೇಷವಿಷಯಗಳು

ತೌಗ್ರ್ಯನೆಂಬ ದೊರೆಯನ್ನು ಒಂದುಸಲ ಶತ್ರುಗಳು ಸೋಲಿಸಿ ಅವನ ಕೈಕಾಲುಗಳನ್ನು ಕಟ್ಟಿ ಸಮುದ್ರಮಧ್ಯದಲ್ಲಿ ಎಸೆದುಬಿಟ್ಟರು. ಆವನು ಸಮುದ್ರವನ್ನು ದಾಟಲಾರದೆ ಸಹಾಯಕ್ಕಾಗಿ ಅಶ್ವಿನೀದೇವತೆಗಳನ್ನು ಪ್ರಾರ್ಥಿ

ಸಿದನು. ಒಡನೆಯೇ ಅವರು ತಮ್ಮ ರಥಕ್ಕೆ ಅಶ್ವಗಳನ್ನು ಕಟ್ಟಿ ಸಮುದ್ರದಲ್ಲಿಳಿಸಿ ಅವನನ್ನು ದಡಕ್ಕೆ ಸೇರಿಸಿದರು ಎಂದು ಸಾಯಣರು ಪೂರ್ವಕಥೆಯನ್ನುದಹರಿಸಿದ್ದಾರೆ. ಈ ತುಗ್ರಪುತ್ರನಿಗೆ ಭುಜ್ಯುವೆಂಬ ಹೆಸರು ಪ್ರಸಿದ್ಧ ವಾಗಿದೆ.

ಸಮುದ್ರದಲ್ಲಿ ಮುಳುಗುತ್ತಿದ್ದ ಇದೇ ತುಗ್ರಪುತ್ರನನ್ನು ಅಶ್ವಿನೀದೇವತೆಗಳು ರಕ್ಷಿಸಿದುದನ್ನು ದೀರ್ಘತಮಸ್ಸಿನ ಪುತ್ರನಾದ ಕಕ್ಷೀವಂತನು ೧-೧೧೬ ಮತ್ತು ೧-೧೧೭ನೇ ಸೂಕ್ತಗಳಲ್ಲಿಯೂ, ಅಗಸ್ತ್ಯ ಮೈತ್ರಾವರುಣಿಯು ೧-೧೮೨ನೇ ಸೂಕ್ತದಲ್ಲಿಯೂ, ಕಣ್ವಗೋತ್ರದ ಬ್ರಹ್ಮಾತಿಥಿಯು ೮-೫ನೇ ಸೂಕ್ತದಲ್ಲಿಯೂ; ಕಕ್ಷೀವಂತನ ಪುತ್ರಿಯಾದ ಘೋಷೆಯು ೧೦-೩೯ರಲ್ಲೂ ವರ್ಣಿಸಿದ್ದಾರೆ. ೧-೧೮೨ನೇ ಸೂಕ್ತದಲ್ಲಿ ಇವರು ದೋಣಿಗಳನ್ನು ಕಳುಹಿದುದೂ ತುಗ್ರಪುತ್ರನು ಆಶಾಪೂರಿತನಾಗಿ ಆ ದೋಣಿಗಳನ್ನು ಅಪ್ಪಿಕೊಂಡುದೂ ಈರೀತಿ ವರ್ಣಿತವಾಗಿದೆ.

ಯುವಮೇತಂ ಚಕ್ರಥುಃ ಸಿಂಧುಷು ಪ್ಲವಮಾತ್ಮನ್ವಂತಂ ಪಕ್ಷಿಣಂ ತೌಗ್ರ್ಯಾಯ ಕಂ ।
ಯೇನ ದೇವತ್ರಾ ಮನಸಾ ನಿರೂಹಥುಃ ಸುಪಪ್ತನೀ ಪೇತಥುಃ ಕ್ಷೋದಸೋ ಮಹಃ ।
ಅವವಿದ್ಧಂ ತೌಗ್ರ್ಯಮಪ್ಸ್ವಂತರನಾರಂಭಣೇ ತಮಸಿ ಪ್ರವಿದ್ಧಂ ।
ಚತಸ್ರೋ ನಾವೋ ಜಠಲಸ್ಯ ಜುಷ್ಟಾ ಉದಶ್ವಿಭ್ಯಾಮಿಷಿತಾಃ ಪಾರಯಂತಿ ॥
ಕಃ ಸ್ವಿದ್ವೃಕ್ಷೋ ನಿಷ್ಠಿತೋ ಮಧ್ಯೇ ಅರ್ಣಸೋ ಯಂ ತೌಗ್ರ್ಯೋ ನಾಧಿತಃ ಪರ್ಯಷಸ್ವಜತ್ ।
ಪರ್ಣಾ ಮೃಗಸ್ಯ ಪತರೋರಿವಾರಭ ಉದಶ್ವಿನಾ ಊಹಥುಃ ಶ್ರೋಮತಾಯ ಕಂ ॥
(ಋ. ಸಂ. ೧-೧೮೨-೫ ರಿಂದ ೭)

ಎಲೈ ಅಶ್ವಿನೀದೇವತೆಗಳೇ, ತುಗ್ರಪುತ್ರನಾದ ಭುಜ್ಯುವಿಗಾಗಿ ನೀವು ಸಚೇತನವಾದುದೂ ರೆಕ್ಕೆಗಳಿಂದ ಕೂಡಿದುದೂ ಆದ ಈ ದೋಣಿಯನ್ನು ನಿರ್ಮಿಸಿದಿರಿ. ಅಗಾಧವಾದುದೂ, ಅಂಧಕಾರಪೂರಿತವಾದುದೂ ಆದ ಸಮುದ್ರದಲ್ಲಿ ಬಿದ್ದು ಮುಳುಗುತ್ತಿದ್ದ ತುಗ್ರಪುತ್ರನಿಗಾಗಿ ನಾಲ್ಕು ದೋಣಿಗಳನ್ನು ಕಳುಹಿದಿರಿ. ಹಾರುವ ಪಕ್ಷಿಗಳಿಗೆ ಅಂತರಿಕ್ಷದಲ್ಲಿ ಅವಲಂಬನವಾದ ರೆಕ್ಕೆಗಳಂತೆ ಸಮುದ್ರದಲ್ಲಿ ಮುಳುಗುತ್ತಿದ್ದ ಭುಜ್ಯುವಿಗೆ ಅವಲಂಬನವಾದುದೂ ಮತ್ತು ರಕ್ಷಕ ವಾದುದೂ ಆದ ದೋಣಿಯ ಅವಯುವಗಳನ್ನು ಯಾವ ವೃಕ್ಷದಿಂದ ನಿರ್ಮಿಸಿದಿರಿ ಎಂದು ಶ್ಲಾಘಿಸಿದೆ. ಅದೇ ಅಂಶ ವನ್ನು ಪ್ರಕೃತವಾದ ಋಕ್ಕಿನಲ್ಲಿಯೂ ಸೂಚಿಸಿದೆ. ಮತ್ತು ಈ ಆಶ್ರಯವನ್ನೂ ರಕ್ಷಣೆಯನ್ನೂ ಉಪಮಾನ ಗಳೊಂದಿಗೂ ವರ್ಣಿಸಿದೆ.

ಪೇರುಃ—ಉಪದ್ರವೇಭ್ಯಃ ಪಾರಯಿತಾ । ಆಪತ್ತುಗಳಿಂದ ದಾಟಿಸುವುದು. ಶಂ ನೋ ಅಪಾಂ ನಪಾತ್ಪೇರುರಸ್ತು (ಋ.ಸಂ. ೭-೩೫-೧೩) ಇತ್ಯಾದಿಕಡೆಗಳಲ್ಲಿ ಅಗ್ನ್ಯಾದಿಗಳಿಗೆ ವಿಶೇಷಣವಾಗಿರುವಂತೆ ಇಲ್ಲಿ ಅಶ್ವಿನೀ ದೇವತೆಗಳ ರಥಕ್ಕೆ ವಿಶೇಷಣವಾಗಿದೆ.

ಪಜ್ರಃ—ಪಜ್ರಶಬ್ದವು ಕಕ್ಷೀವಂತನ ವಂಶದ ಹೆಸರಾಗಿಯೇ ಪ್ರಸಿದ್ಧವಾಗಿದೆ. ಇದರ ವಿವರವನ್ನು ಹಿಂದೆ ತಿಳಿಸಿದೆ. ವೇಗವಾನ್ ಬಲವಾನ್ ವಾ ಎಂದು ಋ. ಸಂ. ೮-೬೩-೧೨ನೇ ಋಕ್ಕಿನ ಪಜ್ರಪದಕ್ಕೆ ಅರ್ಥಮಾಡಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಅದೇ ಅರ್ಥವನ್ನು ಹೇಳಿದೆ. ಪಾಜಸಾ ಬಲೇನ ತೀರ್ಣ-ಸ್ಸನ್ । ತನ್ನ ಸ್ವಶಕ್ತಿಯಿಂದ ಸಮುದ್ರವನ್ನು ದಾಟಿ ನಿಂತಿದೆಯೆಂದು ರಥದ ಶಕ್ತಿಯನ್ನು ತೋರಿಸುತ್ತದೆ.

ಏವೈಃ—ಕಾಮ್ಯೈರಯನೈರವನೈರ್ವಾ (ನಿ. ೧೨-೨೧) ಸ್ವತಂತ್ರವಾದುದೂ, ತಡೆಯಿಲ್ಲದುದೂ ಆದ ಸಂಚಾರವನ್ನು ತೋರಿಸುತ್ತಾ, ಗಮನದ ಶಕ್ತಿಯನ್ನೂ ಈ ಪದವು ಸೂಚಿಸುತ್ತದೆ. ಈ ಪದವು ಸಾಧಾರಣವಾಗಿ ಯಾವಾಗಲೂ ಸಂಚಾರ ಸ್ವಭಾವವುಳ್ಳವರೂ, ಇಂದ್ರನಿಗೆ ಮಿತ್ರಭೂತರೂ ಆದ ಮರುತ್ತುಗಳಿಗೆ ವಿಶೇಷಣವಾಗಿರುವುದು. ಪ್ರಕೃತವಾದ ಋಕ್ಕಿನಲ್ಲಿ ವೇಗವಾಗಿ ಓಡತಕ್ಕದ್ದೂ ಶಕ್ತಿಯುತವಾದುದೂ ಆದ ಶೂರನ ಕುದುರೆಗಳಿಗೆ ಪರ್ಯಾಯಪದವಾಗಿದೆ.

ಅಜ್ಮ—ಈಪದವು ಸಂಗ್ರಾಮನಾಮಗಳಲ್ಲಿಯೂ (ನಿ. ೩-೯), ಗೃಹನಾಮಗಳಲ್ಲಿಯೂ (ನಿ. ೩-೧೩) ಪಠಿತವಾಗಿದೆ. ಈ ಎರಡರ್ಥಗಳಲ್ಲಿಯೂ ಇರುವ ಪ್ರಯೋಗಗಳ ಜೊತೆಗೆ,

ಉಚಥ್ಯೇ ೩ ವಪುಷಿ ಯಃ ಸ್ವರಾಳುತ ವಾಯೋ ಘೃತೆಸ್ನಾಃ ।
ಅಶ್ವೇಷಿತಂ ರಜೇಷಿತಂ ಶುನೇಷಿತಂ ಪ್ರಾಜ್ಮ ತದಿದಂ ನು ತತ್ ॥

:(ಋ. ಸಂ. ೮-೪೬-೨೮)

ಎಂಬಲ್ಲಿ ಅಜ್ಮಶಬ್ದಕ್ಕೆ ಅನ್ನವೆಂದೂ ಅರ್ಥಮಾಡಿದೆ.

ಅಚ್ಯುತಾ ಚಿದ್ವೋ ಅಜ್ಮನ್ನಾ ನಾನದತಿ ಪರ್ವತಾಸೋ ವನಸ್ಪತಿಃ। ಭೂಮಿರ್ಯಾಮೇಷು ರೇಜತೇ।

(ಋ. ಸಂ. ೮-೨೦-೫)

ಎಂಬಲ್ಲಿ ಅಜ್ಮನಿ ಗಮನೇ ಸತಿ । ಸಂಚಾರವಿರಲಾಗಿ ಎಂದು ಗಮನಾರ್ಥಕವಾದ ಪ್ರಯೋಗವೆಂದು ತಿಳಿಸಿದೆ.

ಯೇ ಪಾತಯಂತೇ ಅಜ್ಮಭಿರ್ಗಿರೀಣಾಂ ಸ್ನುಭಿರೇಷಾಂ ।
ಯಜ್ಞಂ ಮಹಿಷ್ವಣೀನಾಂ ಸುಮ್ನಂ ತುವಿಷ್ವಣೀನಾಂ ಪ್ರಾಧ್ವರೇ ॥

(ಋ. ಸಂ. ೮-೪೬-೧೮)

ಎಂಬ ಕಡೆಯಲ್ಲಿ ಅಜ್ಮಭಿಃ ಬಲೈಃ ಬಲಕರೈರುದಕೈಃ ಸಹ-ಬಲಕರವಾದ ಉದಕವೆಂದು ಅರ್ಥಮಾಡಿದ್ದಾರೆ. ಹೀಗೆ ಈ ಪದಕ್ಕೆ ನಾನಾರ್ಥಗಳಲ್ಲಿ ಪ್ರಯೋಗವಿರುವುದು. ಪ್ರಕೃತವಾದ ಋಕ್ಕಿನಲ್ಲಿ ಸುಖದಾಯಕವೂ ರಕ್ಷಕವೂ ಆದ ಗೃಹವೆಂದರ್ಥ.

ಶೂರಃ—ಶೂರಃ ಶವತೇರ್ಗತಿಕರ್ಮಣಃ । ಗತ್ಯರ್ಥಕವಾದ ಶು ಧಾತುವಿನಿಂದ ನಿಷ್ಪನ್ನವಾಗಿ ವೀರ್ಯವುಳ್ಳವನು ಎಂಬ ತಾತ್ಪರ್ಯವನ್ನು ಕೊಡುತ್ತದೆ. (ನಿ. ೪-೧೩)

॥ ವ್ಯಾಕರಣಪ್ರಕ್ರಿಯಾ ॥

ಪೇರುಃ—ಪಿ ಗತೌ ಧಾತು. ಮಿಪಿಭ್ಯಾಂ ರುಃ (ಉ. ಸೂ. ೪-೫೪೧) ಎಂಬುದರಿಂದ ರು ಪ್ರತ್ಯಯ. ಸಾರ್ವಧಾತುಕಾರ್ಧಧಾ—ಎಂಬುದರಿಂದ ಇಕಿಗೆ ಗುಣ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಅರ್ಣಸಃ—ಋ ಗತೌ ಧಾತು. ಉದಕೇನುಟ್ ಚ (ಉ. ಸೂ. ೪-೬೩೯) ಎಂಬುದರಿಂದ ಅಸುನ್ ಪ್ರತ್ಯಯ. ಧಾತುವಿಗೆ ನುಡಾಗಮ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಧಾಯಿ—ಡುಧಾಞ್ ಧಾರಣಪೋಷಣಯೋಃ ಧಾತು. ಲುಙ್ ಪ್ರಥಮಪುರುಷಏಕವಚನಾಂತರೂಪ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

ಅವಃ–ಅವ ರಕ್ಷಣೇ ಧಾತು. ಔಣಾದಿಕ ಅಸುನ್ ಪ್ರತ್ಯಯ. ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಗಮೇಯಮ್—ಗಮ್ಲೃ ಗತೌ ಧಾತು. ಲಿಙ್ ಉತ್ತಮಪುರುಷ ಏಕವಚನದಲ್ಲಿ ಮಿಪ್. ತಸ್‌ಥಸ್‌ಥ— ಎಂಬುದರಿಂದ ಅಮಾದೇಶ. ಅದಕ್ಕೆ ಯಾಸುಟಾಗಮ. ಅದಕ್ಕೆ ಇಯಾದೇಶ. ವ್ಯತ್ಯಯದಿಂದ ಛಾದೇಶ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

ಅಜ್ಮ—ಅಜ ಗತಿಕ್ಷೇಪಣಯೋಃ ಧಾತು. ಮನಿನ್ ಪ್ರತ್ಯಯ. ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಪತಯದ್ಭಿಃ—ಪತ್ಲೃ ಗತೌ ಧಾತು. ಣಿಜಂತದ ಮೇಲೆ ಶತೃ ಪ್ರತ್ಯಯ. ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಣಿಚ್‌ಸ್ವರ ಉಳಿಯುತ್ತದೆ. ತೃತೀಯಾಂತರೂಪ.

ಏನ್ವೈಃ—ಇಣ್ ಗತೌ ಧಾತು. ಇಣ್‌ಶೀಙ್‌ಭ್ಯಾಂ ವನ್ (ಉ. ಸೂ. ೧–೧೫೦) ಎಂಬುದರಿಂದ ವನ್ ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತುವಿಗೆ ಗುಣ. ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೩ ॥

———— :o: ————

ಸಂಹಿತಾಪಾಠಃ

ಉಪಸ್ತುತಿರೌಚಥ್ಯಮುರುಷ್ಯೇನ್ಮಾ ಮಾಮಿಮೇ ಪತತ್ರಿಣೀ ವಿ ದುಗ್ಧಾಂ ।
ಮಾ ಮಾಮೇಧೋ ದಶತಯಶ್ಚಿತೋ ಧಾಕ್ ಪ್ರ ಯದ್ವಾಂ ಬದ್ಧಸ್ತ್ಮನಿ-
ಖಾದತಿ ಕ್ಷಾಂ ॥ ೪ ॥

॥ಪದಪಾಠಃ॥

ಉಪಸ್ತುತಿಃ । ಔಚಥ್ಯಂ । ಉರುಷ್ಯೇತ್ । ಮಾ । ಮಾಂ । ಇಮೇ ಇತಿ । ಪತತ್ರಿಣೀ ಇತಿ । ವಿ । ದುಗ್ಧಾಂ ।

ಮಾ । ಮಾಂ । ಏಧಃ । ದಶತಯಃ । ಚಿತಃ । ಧಾಕ್ । ಪ್ರ । ಯತ್ । ವಾಂ । ಬದ್ಧಃ । ತ್ಮನಿ । ಖಾದತಿ । ಕ್ಷಾಂ ॥ ೪ ॥

ಸಾಯಣಭಾಷ್ಯಂ

ಅತ್ರಾಖ್ಯಾನಮಾಹುಃ । ಜರಾಝುರ್ಝುರಿತಗಾತ್ರಂ ಜಾತ್ಯಂಧಂ ದೀರ್ಘತಮಸಂ ಮಾಮತೇಯಂ ವರಿವಸಿತುಮಶಕ್ನುವಾನಾಃ ಸ್ವಗರ್ಭದಾಸಾ ಅಗ್ನೌ ಪ್ರದಾಹಾಯ ಪ್ರಚಿಕ್ಷಿಪುಃ । ತತ್ರ ಕ್ಷಿಪ್ತೋಽಶ್ವಿನಾವಸ್ತಾವೀತ್ । ತೌ ಚೈನಮರಕ್ಷತಾಂ । ತತೋಽಪ್ಯಮ್ರಿಯಮಾಣಮುದಕೇಽಪ್ಯಪಾತಯನ್ । ತತ್ರ ನಿಮಗ್ನಃ ಪುನರಶ್ವಿನೌ ತುಷ್ಟಾವ । ತುಷ್ಟೌ ಸಂತೌ ತೌ ಜಲಾದುದಹಾರ್ಷ್ಟಾಂ । ಏವಮವಧ್ಯಂ ತಂ ತ್ರೈತನೋ ನಾಮಕಃ ಕಶ್ಚಿದ್ದಾಸೋಽಸ್ಯ ಶಿರೋ ವಕ್ಷಶ್ಚ ವ್ಯತಕ್ಷತ್ । ತತೋಽಪ್ಯಪಾಲಯತಾಮಿತಿ । ತದಿದಮೃಗ್ದ್ವಯಾಭ್ಯಾಮುಚ್ಯತೇ । ಹೇ ಅಶ್ವಿನೌ ಉಪಸ್ತುತಿರ್ಯುವಾಂ ಬುದ್ಧ್ಯೋಪೇತ್ಯ ಕ್ರಿಯಮಾಣಾ ಸ್ತುತಿರೌಚಥ್ಯಮುಚಥಸ್ಯ ಪುತ್ರಂ ದೀರ್ಘತಮಸಂ ಮಾಮುರುಷ್ಯೇತ್ । ರಕ್ಷೇದ್ದಾಹಾದ್ಯುಪದ್ರವಾತ್ । ಉರುಷ್ಯತೀ ರಕ್ಷಾಕರ್ಮೇತಿ ಯಾಸ್ಕಃ । ನಿ. ೫. ೨೩. । ಏವಂ ಸಾಮಾನ್ಯೇನೋಕ್ತ್ವಾ ವಿಶೇಷೇಣ ಪ್ರತ್ಯುಪದ್ರವಪರಿಹಾರಂ ಪ್ರಾರ್ಥಯತೇ । ಇಮೇ ಪ್ರಸಿದ್ಧೇ ಪತತ್ರಿಣೀ ಪತನಶೀಲೇ ಪುನರಾವರ್ತನಶೀಲೇ ಅಹೋರಾತ್ರೇ ಮಾಂ ಮಾ ವಿ ದುಗ್ಧಾಂ । ವಿಶೇಷೇಣ ದೋಹಗತಸಾರಂ ಮಾ ಕಾರ್ಷ್ಟಾಂ । ಪ್ರಾಣನಿರ್ಗಮನಾನುಕೂಲ್ಯಂ ಮಾ ಕುರುತಾಮಿತ್ಯರ್ಥಃ । ಕಿಂಚ ಮಾಂ ದಶತಯೋ ದಶವಾರಶ್ಚಿತಃ ಸಂಚಿತಃ ಸಂಪಾದಿತ ಏಧಃ ಪ್ರಜ್ವಾಲಿತೇಂಧನಸಂಘೋ ಮಾ ಧಾಕ್ । ಮಾ ಧಾಕ್ಷೀತ್ ॥ ದಹತೇರ್ಲುಙಿ ಸಿಚಿ ಹಲಂತಲಕ್ಷಣಾ ವೃದ್ಧಿಃ । ಬಹುಲಂ ಛಂದಸೀತೀಡಭಾವಃ । ಹಲ್ಙ್ಯಾದಿಸಂಯೋಗಾಂತಲೋಪೌ ॥ ದುಃಸಹದುಃಖಪ್ರಾಪ್ತಿಂ ದರ್ಶಯತಿ । ಯದ್ಯಸ್ಮಾದ್ವಾಂ ಯುವಯೋಃ ಸಂಬಂಧ್ಯಯಂ ಜನೋ ಬದ್ಧಃ ಪಾಶೈರ್ಗಾಢಂ ವೇಷ್ಟಿತಃ ಸನ್ ತ್ಮನ್ಯಾತ್ಮನ್ಯಾತ್ಮನಾ ಕ್ಷಾಂ ಭೂಮಿಂ ಖಾದತಿ ಭಕ್ಷಯತಿ । ಗಂತುಮಶಕ್ತಃ ಸನ್ ಭೂಮೌ ಪರಿಲುಠತೀತ್ಯರ್ಥಃ । ತಸ್ಮಾದುಪಸ್ತುತಿರೌಚಥ್ಯಮುರುಷ್ಯೇದಿತಿ ॥

ಪ್ರತಿಪದಾರ್ಥ

(ಹೇ ಅಶ್ವಿನೌ—ಎಲೈ ಅಶ್ವಿನೀದೇವತೆಗಳೇ) । ಔಚಥ್ಯಂ—ಉಚಥ್ಯಪುತ್ರನಾದ ದೀರ್ಘತಮಸ್ಸಿನಿಂದ ನಿರ್ಮಿತವಾದುದೂ । ಉಪಸ್ತುತಿಃ—(ನಿಮ್ಮನ್ನು ಉದ್ದೇಶಿಸಿದುದೂ ಆದ) ಈ ಸ್ತೋತ್ರವು । ಮಾಂ—ನನ್ನನ್ನು । ಉರುಷ್ಯೇತ್—ರಕ್ಷಿಸಲಿ । ಇಮೇ ಪತತ್ರಿಣೀ—ಆವೃತ್ತಿಯಿಂದ ಸಂಚರಿಸುವ ಈ ಅಹೋರಾತ್ರಗಳು । ಮಾ ವಿ ದುಗ್ಧಾಂ—(ನನಗೆ ಜರೆಯನ್ನುಂಟುಮಾಡಿ) ನನ್ನನ್ನು ಶೋಷಿಸುವಂತೆ ಮಾಡದಿರಲಿ । ದಶತಯಃ—ಹತ್ತು ಬಾರಿ । ಚಿತಃ—ಪ್ರಜ್ವಲಿತವಾದ (ಮತ್ತು ಜ್ವಾಲಾತ್ಮಕವಾದ) । ಏಧಃ—ಅಗ್ನಿಕಣಗಳ ಸಮೂಹವು । ಮಾಂ—ನನ್ನನ್ನು । ಮಾ ಧಾಕ್—ದಹಿಸದಿರಲಿ । ಯತ್—ಯಾವ ಕಾರಣದಿಂದ (ಎಂದರೆ ಯಾವ ರೀತಿಯಲ್ಲಿ) । ವಾಂ—ನಿಮಗೆ ಸೇರಿದ ನಾನು । ಬದ್ಧಃ—(ದೇಹವೆಲ್ಲಾ) ಕಟ್ಟಲ್ಪಟ್ಟವನಾಗಿ । ತ್ಮನಿ—ನನ್ನಷ್ಟಕ್ಕೆ ನಾನೇ । ಕ್ಷಾಂ—ಭೂಮಿಯನ್ನು । ಖಾದತಿ—(ತಿವಳುತ್ತಾ) ನೆಕ್ಕುತ್ತಿದ್ದೇನೆಯೋ (ಅದನ್ನರಿತು ನನ್ನನ್ನು ರಕ್ಷಿಸಿರಿ) ॥

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಶತ್ರುಗಳಿಂದ ಹತ್ತು ಬಾರಿ ಪ್ರಜ್ವಲಿತವಾದ ಈ ಅಗ್ನಿಯು ನನ್ನನ್ನು ದಹಿಸದಿರಲಿ. ಪುನರಾವೃತ್ತಿಯಿಂದ ಸಂಚರಿಸತಕ್ಕ ಅಹೋರಾತ್ರಗಳು ಇದೇರೀತಿ ನನ್ನನ್ನು ವೃದ್ಧನನ್ನಾಗಿ ಮಾಡಿ ನನ್ನನ್ನು ಜೀರ್ಣನನ್ನಾಗಿ ಮಾಡದಿರಲಿ. ಉಚಥ್ಯಪುತ್ರನಾದ ನನ್ನಿಂದ ನಿರ್ಮಿತವಾದ ಈ ಸ್ತುತಿಯು ನಿಮ್ಮನ್ನು ತೃಪ್ತಿಗೊಳಿಸಲಿ

ಮತ್ತು ನನ್ನನ್ನು ರಕ್ಷಿಸಲಿ. ನಾನು, ಶತ್ರುಗಳಿಂದ ಬದ್ಧನಾಗಿ ನನ್ನಷ್ಟಕ್ಕೆ ನಾನೇ ತಿವಳಿಕೊಂಡು ಭೂಮಿಯನ್ನು ನೆಕ್ಕುತ್ತಿರುವ ನನ್ನ ದುಃಸ್ಥಿತಿಯನ್ನು ನೀವು ತಿಳಿದು ನನ್ನನ್ನು ರಕ್ಷಿಸಿರಿ.

### English Translation

May the praise addressed to you, Ashwins, preserve the son of Uchatthya: let not these revolving (days and nights) exhaust me: let not the ten times kindled fire consume me: let it not be, that one who is your (dependant), bound (with bonds), should of himself bite the earth.

#### ವಿಶೇಷವಿಷಯಗಳು

ವಾರ್ಧಕ್ಯದಿಂದ ಜೀರ್ಣವಾದ ಶರೀರವುಳ್ಳವನೂ, ಹುಟ್ಟಿದಾಗಿನಿಂದ ಕುರುಡನೂ ಆದ ದೀರ್ಘತಮಸ್ಸನ್ನು ಉಪಚರಿಸಲು ಜುಗುಪ್ಸಿತರಾದ ಅವನ ಸೇವಕರು ಅವನನ್ನು ಕೈಕಾಲುಕಟ್ಟಿ ಅಗ್ನಿಯಲ್ಲಿ ಹಾಕಿದರು ಆಗ ಅಶ್ವಿನೀ ದೇವತೆಗಳನ್ನು ಸ್ತುತಿಸಲು ಅವರು ಅಗ್ನಿಯಿಂದ ರಕ್ಷಿಸಿದರು. ಮೃತನಾಗದ ಅವನನ್ನು ಪುನಃ ನೀರಿನೊಳಕ್ಕೆ ತಳ್ಳಿಬಿಟ್ಟರು. ಆಗಲೂ ಸಹ ಅವನಿಂದ ಸ್ತುತರಾಗಿ ಪ್ರಾರ್ಥಿಸಲ್ಪಟ್ಟ ಅಶ್ವಿನೀದೇವತೆಗಳು ಅವನನ್ನು ರಕ್ಷಿಸಿದರು. ಅದರಿಂದಲೂ ಮೃತನಾಗದ ಅವನನ್ನು ತ್ರೈತನನೆಂಬ ಒಬ್ಬ ದಾಸನು ತನ್ನ ಶಕ್ತಿಯಿಂದ ತಲೆಗೂ ವಕ್ಷಸ್ಸಿಗೂ ಹೊಡದು ಗಾಯಪಡಿಸಿ ಓಡಿಹೋದನು. ಆ ಸನ್ನಿವೇಶವನ್ನು ಈ ಎರಡು ಋಕ್ಕುಗಳಲ್ಲಿಯೂ ಹೇಳಿದೆಯೆಂದು ಸಾಯಣರು ಪೂರ್ವಕಥೆಯನ್ನು ಹೇಳಿದ್ದಾರೆ. (ಋ. ಸಂ. ಭಾಗ ೫. ಪೇಜು 231 ನೋಡಿ.)

ಉರುಷ್ಯೇತ್— ಉರುಷ್ಯತೀ ರಕ್ಷಾಕರ್ಮ (ನಿ. ೫.೨೩) ರಕ್ಷಣಾರ್ಥದಲ್ಲಿ ಪ್ರಯೋಗಿಸಿದೆ. ನಿರುಕ್ತಕಾರರು—

ಸ ನೋ ಬೋಧಿ ಶ್ರುಧೀ ಹವಮುರುಷ್ಯಾ ಣೋ ಅಘಾಯತಃ ಸಮಸ್ಮಾತ್ ।

(ಋ. ಸಂ. ೫–೨೪–೩)

ಎಂಬ ಋಕ್ಕನ್ನುದಹರಿಸಿ ನಮ್ಮ ವಿಷಯದಲ್ಲಿ ಕೇಡನ್ನು ಬಯಸುವ ಸಮಸ್ತರಿಂದಲೂ ನಮ್ಮನ್ನು ರಕ್ಷಿಸು ಎಂದು ಉರುಷ್ಯಪದಕ್ಕೆ ಅರ್ಥವನ್ನು ಹೇಳಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿಯೂ ಅದೇ ಅರ್ಥವೆಂದು ಸಾಯಣರು ತಿಳಿಸಿದ್ದಾರೆ.

ಪತತ್ರಿಣೀ—ಪತನಶೀಲೇ ಪುನರಾವರ್ತನಶೀಲೇ । ಹುಟ್ಟುವುದು, ಅಸ್ತವಾಗುವುದು ಈರೀತಿ ಆವೃತ್ತಿಯಿಂದಲೂ ಅನುಸ್ಯೂತವಾದ ಸಂತತಿಯಿಂದಲೂ ಚಲಿಸುತ್ತಿರುವ ಅಹೋರಾತ್ರಗಳಿಗೆ ಪರ್ಯಾಯಪದವಾಗಿ ಉಪಯೋಗಿಸಿದೆ. ಈ ಪದವೂ ಸಹ ಚಲಿಸು ಎಂಬ ಅರ್ಥವನ್ನು ತೋರಿಸಿದರೂ ಸಹ ನಿರುಕ್ತಕಾರರು

ಯೋ ಹೋತಾಸೀತ್ಪ್ರಥಮೋ ದೇವಜುಷ್ಟೋ ಯಂ ಸಮಾಂಜನ್ನಾಜ್ಯೇನಾ ವೃಣಾನಾಃ ।
ಸ ಪತತ್ರೀತ್ವರಂ ಸ್ಥಾ ಜಗದ್ಯಚ್ಛ್ವಾತ್ರಮಗ್ನಿರಕೃಣೋಜ್ಜಾತವೇದಾಃ ।

(ಋ. ಸಂ. ೧೦–೮೮–೪)

ಎಂಬ ಋಕ್ಕನ್ನುದಹರಿಸಿ (ನಿ. ೫-೩) ಪಕ್ಷಿಗಳ ಪತನರೂಪವಾದ ಸಂಚಾರಕ್ಕೂ ಉಳಿದ ಜಂಗಮಾತ್ಮಕವಾದ ಸಕಲ ಪ್ರಾಣಿಗಳ ಸಂಚಾರಕ್ಕೂ ವ್ಯತ್ಯಾಸವನ್ನು ತೋರಿಸಿದ್ದಾರೆ. ಅಹೋರಾತ್ರಗಳ ಚಲನವಲನಗಳನ್ನು ಪಕ್ಷಿಗಳ ಪತನಕ್ಕೆ ಹೋಲಿಸಿರುವುದು ಆಲಂಕಾರಿಕವಾದ ದೃಷ್ಟಿಯಿಂದ ಅತ್ಯಂತ ಉಚಿತವಾಗಿದೆ. ವೇಗದಲ್ಲಿಯೂ ಸೌಂದರ್ಯವನ್ನು ಬೀರಿ ಆಕರ್ಷಕವಾಗಿರುವುದರಲ್ಲಿಯೂ ಈ ರೂಪಕದಲ್ಲಿರುವ ಉಪಮಾನವು ಹೊಂದಿಕೊಳ್ಳುತ್ತದೆ.

ದಶತಯೇಃ—ದಶವಾರಃ । ಹತ್ತುಸಲ

ಕ್ಷ್ಮಾಂ—ಭೂಮಿಂ । ಗೌಃ, ಗ್ಮಾ, ಜ್ಮಾ, ಕ್ಷ್ಮಾ, ಕ್ಷ್ಮಾ । ಇತ್ಯಾದಿ ಪೃಥಿವೀನಾಮುಗಳಲ್ಲಿ ಪಠಿತ ವಾಗಿದೆ. (ನಿ. ೨-೫). ಕ್ಷ್ಮಾ ಕ್ಷಿಯತೇರ್ನಿವಾಸಕರ್ಮಣಃ (ನಿ. ೨-೬). ವಸಿಸು ಎಂಬರ್ಥವನ್ನು ಕೊಡುವ ಕ್ಷೀ ಧಾತುವಿನಿಂದ ನಿಷ್ಪನ್ನವಾಗಿ ವಾಸಮಾಡುವ ಭೂಮಿಯೆಂದರ್ಥವಾಗುತ್ತದೆ.

## ವ್ಯಾಕರಣಪ್ರಕ್ರಿಯಾ

ಉಪಸ್ತುತಿಃ—ಷ್ಟುಞ್ ಸ್ತುತೌ ಧಾತು. ಕ್ತಿನ್ ಪ್ರತ್ಯಯ. ತಾದೌ ಚ ನಿತಿ (ಪಾ. ಸೂ. ೫-೨-೫೦) ಎಂಬುದರಿಂದ ಗತಿಗೆ (ಉಪ) ಪ್ರಕೃತಿಸ್ವರ ಬರುತ್ತದೆ.

ಉರುಷ್ಯೇತ್—ಉರುಷ್ಯತೀ ರಕ್ಷಾ ಕರ್ಮಾ. (ನಿರು. ೫-೨೩) ಎಂದು ಯಾಸ್ಕರು ಹೇಳಿರುತ್ತಾರೆ. ಲಿಙ್ ಪ್ರಥಮಪುರುಷಏಕವಚನಾಂತರೂಪ. ಅತಿಙಂತವ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಪತತ್ರಿಣೀ—ಪತ್‌ಲೃ ಗತೌ ಧಾತು. ಪತೇರತ್ರಿನ್ (ಉ. ಸೂ. ೪-೫೯) ಎಂಬುದರಿಂದ ಅತ್ರಿನ್ ಪ್ರತ್ಯಯ. ದ್ವಿವಚನಾಂತರೂಪ. ಅಥವಾ ಅಮಿನಕ್ಷಿ-(ಉ. ಸೂ. ೩-೩೮೫) ಎಂಬುದರಿಂದ ಅತ್ರನ್ ಪ್ರತ್ಯಯ. ಪತತ್ರಮಸ್ಯಾಸ್ತಿ ಇತಿ ಪತತ್ರಿ. ಅತ ಇನಿ ಠನೌ ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ದುಗ್ಧಾಮ್—ದುಹ ಪ್ರಪೂರಣೇ ಧಾತು. ಅದಾದಿ. ಲೋಟ್ ಮಧ್ಯಮಪುರುಷಏಕವಚನದಲ್ಲಿ ತ ಪ್ರತ್ಯಯ. ಆಮೇತಃ ಎಂಬುದರಿಂದ ಟಿಗೆ ಆಮಾದೇಶ. ದಾದೇರ್ಧಾತೋರ್ಘಃ (ಪಾ. ಸೂ. ೮-೨-೩೨) ಎಂಬುದರಿಂದ ಹಕಾರಕ್ಕೆ ಘಕಾರಾದೇಶ. ಝಷಸ್ತಥೋರ್ಧೋಽಧಃ ಎಂಬುದರಿಂದ ಪ್ರತ್ಯಯಕ್ಕೆ ಧಕಾರಾದೇಶ. ಝಲಾಂ ಜಶ್‌ಝಶಿ ಎಂಬುದರಿಂದ ಜಸ್ತ್ವ. ತಿಙಂತನಿಘಾತಸ್ವರ ಬರುತ್ತದೆ.

ದಶತಯಃ—ಸಂಖ್ಯಾಯಾ ಅವಯವೇ ತಯಪ್ ಎಂಬುದರಿಂದ ತಯಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

ಚಿತೇಃ—ಚಿಞ್ ಚಯನೇ ಧಾತು. ಕರ್ಮಣಿಯಲ್ಲಿ ನಿಷ್ಠಾ ಎಂಬುದರಿಂದ ಕ್ತ ಪ್ರತ್ಯಯ. ಪ್ರತ್ಯಯಸ್ವರ ದಿಂದ ಅಂತೋದಾತ್ತವಾಗುತ್ತದೆ.

ಧಾಕ್—ದಹ ಭಸ್ಮೀಕರಣೇ ಧಾತು. ಮಾಙಿಲುಙ್ (ಪಾ. ಸೂ. ೩-೩-೧೭೫) ಎಂಬುದರಿಂದ ಲುಙ್. ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. ಇತಶ್ಚ ಎಂಬುದರಿಂದ ಇಕಾರ ಲೋಪ- ಚ್ಲಿಗೆ ಸಿಚಾದೇಶ. ಬಹುಲಂ ಛಂದಸಿ ಎಂಬುದರಿಂದ ಅದಕ್ಕೆ ಇಡಾಗಮ ಬರುವುದಿಲ್ಲ. ವದವ್ರಜಹಲಂತಸ್ಯಾಚಃ (ಪಾ. ಸೂ. ೭-೨ ೩) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಹಲ್ಙ್ಯಾಭ್ಯೋ-ಸೂತ್ರದಿಂದ ಅಪೃಕ್ತವಾದ ತಿಪಿಗೆ ಲೋಪ. ಸಂಯೋಗಾಂತಸ್ಯ ಲೋಪಃ ಎಂಬುದರಿಂದ ಸಕಾರಕ್ಕೆ ಲೋಪ. ಧಾತು ಹಕಾರಕ್ಕೆ ಹಿಂದಿನಂತೆ ಢತ್ವ ಬಂದಾಗ ಪದಾಂತದಲ್ಲಿ ಜಶ್ತ್ವ. ವಾವಸಾನೇ ಎಂಬುದರಿಂದ ಚರ್ತ್ವ. ಏಕಾಚೋ ಬಶೋ—(ಪಾ.ಸೂ. ೮-೧-೩೭) ಸೂತ್ರ ನಿಂದ ಧಾತುವಿನ ಆದಿಗೆ ಧತ್ವ. ಮಾಙ್ಯೋಗವಿರುವುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

ಬದ್ಧಃ—ಬಧ ಬಂಧನೇ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಝಷಸ್ತಥೋ—ಸೂತ್ರದಿಂದ ಪ್ರತ್ಯಯಕ್ಕೆ ಧತ್ವ. ಝಲಾಂಜಶ್ಝಶಿ ಎಂಬುದರಿಂದ ಜಶ್ತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ತ್ಮನಿ—ಆತ್ಮನಿ ಎಂದು ರೂಪವಾದಾಗ ಮಂತ್ರೇಷ್ವಾಙ್ಯಾದೇರಾತ್ಮನಃ- (ಪಾ. ಸೂ. ೬-೪-೧೪೧) ಎಂಬುದರಿಂದ ಆದಿಯ ಆಕಾರಕ್ಕೆ ಲೋಪ ಬರುತ್ತದೆ.

ಖಾದತಿ—ಖಾದೃ ಭಕ್ಷಣೇ ಧಾತು. ಲಟ್ ಪ್ರಥಮಪುರುಷಏಕವಚನಾಂತರೂಪ. ಯದ್ಯೋಗವಿರುವುದ ರಿಂದ ತಿಙಂತನಿಘಾತಸ್ವರ ಬರುವುದಿಲ್ಲ. ಶಪ್, ತಿಪ್, ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ. ॥ ೪ ॥

———:o:———

ಸಾಯಣಭಾಷ್ಯಂ

ನ ಮಾ ಗರನ್ನದ್ಯೋ ಮಾತೃತಮಾ ದಾಸಾ ಯದೀಂ ಸುಸಮುಬ್ಧಮ-
ವಾಧುಃ ।
ಶಿರೋ ಯದಸ್ಯ ತ್ರೈತನೋ ವಿತಕ್ಷತ್ಸ್ವಯಂ ದಾಸ ಉರೋ ಅಂಸಾವಪಿ ಗ್ಧ ।
॥ ೫ ॥

ಪದಪಾಠಃ

ನ । ಮಾ । ಗರನ್ । ನದ್ಯಃ । ಮಾತೃತಮಾಃ । ದಾಸಾಃ । ಯತ್ । ಈಂ । ಸುಸಮುಬ್ಧಂ । ಅವಅಧುಃ ।
ಶಿರಃ । ಯತ್ । ಅಸ್ಯ । ತ್ರೈತನಃ । ವಿತಕ್ಷತ್ । ಸ್ವಯಂ । ದಾಸಃ । ಉರಃ । ಅಂಸೌ । ಅಪಿ । ಗ್ಧೇತಿ ಗ್ಧ ।
॥ ೫ ॥

ಸಾಯಣಭಾಷ್ಯಂ

ಅಸ್ಯಾಃ ಪಂಚಮ್ಯಾ ವಿನಿಯೋಗಮಾಹ ಶೌನಕಃ । ಆತತಾಯಿನಮಾಯಾಂತಂ ದೃಷ್ಟ್ವಾ ವ್ಯಾಘ್ರಮಥೋ ವೃಕಂ । ನಮಾ ಗರನ್ನಿತಿ ಜಪಂಸ್ತೇಭ್ಯ ಏವ ಪ್ರಮುಚ್ಯತೇ । ತ್ರಿರಾತ್ರೋಪೋಷಿತೋ

ರಾತ್ರೌ ಜಪೇದಾಸೂರ್ಯದರ್ಶನಾತ್ । ಆಪ್ಲುತ್ಯ ಪ್ರಯತಃ ಸೂರ್ಯಮುಪತಿಷ್ಠೇದ್ದಿವಾಕರಂ । ಪಶ್ಯಂತಿ ತಸ್ಕರಾ ನೈನಂ ತಥಾನ್ಯೇ ಪಾಪಬುದ್ಧಯಃ । ಏಕಃ ಶತಾನಿ ತ್ರಾಯೇತ ತಸ್ಕರೇಭ್ಯಶ್ಚ ರಸ್ತಥಿ ॥ ಋಗ್ವಿ. ೧. ೨೫. । ಇತಿ ॥

ನದ್ಯೋ ನದನಶೀಲಾ ಮಾತೃತಮಾ ಮಾತೃವಜ್ಜಗತಾಂ ಹಿತಕಾರಿಣ್ಯ ಆಪೋ ಮಾ ಮಾಂ ದೀರ್ಘತಮಸಂ ಗರನ್ । ನ ಗಿರೇಯುಃ । ನಿಮಗ್ನಂ ಮಾ ಕುರ್ಯುಃ ॥ ಗೄ ನಿಗರಣೇ । ಲೇಟಿ ವ್ಯತ್ಯಯೇನ ಶಪ್ ॥ ಗಿರಣಪ್ರಾಪ್ತಿಂ ದರ್ಶಯತಿ । ಯದ್ಯಸ್ಮಾದ್ದಾಸಾ ಅಸ್ಮದುಪಕ್ಷಪಯಿತಾರೋ ಮದೀಯಗರ್ಭದಾಸಾ ಈಮೇನಂ ದೀರ್ಘತಮಸಂ ಮಾಂ ಸುಸಮುಬ್ಧಂ ಸುಷ್ಠು ಸಂಕುಚಿತಸರ್ವಾಂಗಂ ॥ ಸ್ತುತೀ ಪೂಜಾಯಾಂ । ಪಾ- ೨-೨-೧೮ । ಇತಿ ಪ್ರಾದಿಸಮಾಸೇऽವ್ಯಯಪೂರ್ವಪದಪ್ರಕೃತಿಸ್ವರತ್ವಂ ॥ ಅವಾಧುಃ ಅವಾಙ್ಮುಖಮಪಾತಯನ್ । ಕಿಂಚಾಸ್ಯ ಮಮ ಶಿರಃ ಸ ತ್ರೈತನ ಏತನ್ನಾಮಕೋ ದಾಸೋऽತ್ಯಂತನಿರ್ಘೃಣಃ ಸನ್ ಯದ್ಯಸ್ಮಾದ್ವಿತಕ್ಷತ್ ವಿವಿಧಂ ತಷ್ಟವಾನ್ ತಸ್ಮಾತ್ಸ ದಾಸಃ ಸ್ವಯಂ ಸ್ವಕೀಯಮೇವ ಶಿರಸ್ತಕ್ಷತು । ನ ಕೇವಲಂ ಶಿರ ಏವ ಅಪಿ ತು ಮದೀಯಮುರೋ ವಕ್ಷಸ್ಥಲಮಂಸೌ ಚ ಗ್ಧ । ಹತವಾನ್ । ವಿದಾರಿತವಾನಿತ್ಯರ್ಥಃ ॥ ಹಂತೇರ್ಲುಙಿ ಛಾಂದಸಮೇತದ್ರೂಪಂ ॥ ತತಃ ಸ್ವಕೀಯಮುರೋऽಂಸಾವಪಿ ಸ್ವಶಸ್ತ್ರೇಣೈವ ತಥಾ ಕೃತವಾನ್ । ತದ್ಯುವಯೋರ್ಮಾಹಾತ್ಮ್ಯಮಿತಿ ಭಾವಃ ॥

### ಪ್ರತಿಪದಾರ್ಥ

ಯತ್—ಯಾವ ಕಾರಣದಿಂದ । ದಾಸಾಃ—(ನನ್ನ) ಭೃತ್ಯರು । ಸುಸಮುಬ್ಧಂ—ಜರ್ಜರಿತವಾದ ದೇಹವುಳ್ಳ ಅಥವಾ ಕೈಕಾಲುಗಳನ್ನು ಮಡಿಸಿ ಕಟ್ಟಲ್ಪಟ್ಟ । ಈಂ—ಈ ನನ್ನನ್ನು । ಅವಾಧುಃ—ಅಧೋಮುಖನನ್ನಾಗಿಮಾಡಿ (ನದಿಯಲ್ಲಿ) ಎಸೆದುಬಿಟ್ಟರೋ (ಆರೀತಿ ನಿಸ್ಸಹಾಯಕನಾದುದರಿಂದಲೇ) । ಮಾತೃತಮಾಃ—ಮಾತೃವಿನಂತೆ ಜಗತ್ತಿಗೆ ಅತ್ಯಂತ ಹಿತಕಾರಿಗಳಾದ । ನದ್ಯಃ—ನದಿಗಳು । ಮಾ—ನನ್ನನ್ನು । ನ ಗರನ್—ಮುಳುಗಿಹೋಗುವಂತೆ ಮಾಡದಿರಲಿ । ಯತ್—ಯಾವ ಕಾರಣದಿಂದ । ಅಸ್ಯ—ಈ ನನ್ನ । ಶಿರಃ—ಶಿರಸ್ಸನ್ನು । ತ್ರೈತನಃ—ತ್ರೈತನನೆಂಬ ನನ್ನ ದಾಸನು । ವಿತಕ್ಷತ್—(ಕತ್ತಿಯಿಂದ) ಹೊಡೆದನೋ (ಆ ಕೂಡಲೇ) । ದಾಸಃ—ದಾಸನಾದ ಅವನು । ಸ್ವಯಂ—ತನ್ನಷ್ಟಕ್ಕೆ ತಾನಾಗಿಯೇ । ಉರಃ—(ತನ್ನ) ವಕ್ಷಸ್ಸನ್ನೂ । ಅಂಸೌ ಅಪಿ—ತನ್ನ ತೋಳುಗಳನ್ನೂ ಕೂಡ । ಗ್ಧ—ಕತ್ತರಿಸಿಕೊಂಡನು (ಅದು ನಿಮ್ಮ ಮಹಿಮೆ) ॥

### ॥ ಭಾವಾರ್ಥ ॥

ನನ್ನ ಭೃತ್ಯರು ವಾರ್ಧಕ್ಯದಿಂದ ಜರ್ಜರಿತವಾದ ದೇಹವುಳ್ಳ ನನ್ನನ್ನು ಅಧೋಮುಖನನ್ನಾಗಿ ಮಾಡಿ ನದಿಯಲ್ಲಿ ಎಸೆದುಬಿಟ್ಟರು. ನಾನು ನಿಸ್ಸಹಾಯಕನಾದುದನ್ನರಿತು ಮಾತೃವಿನಂತೆ ಜಗತ್ತಿಗೆ ಅತ್ಯಂತ ಹಿತಕಾರಿಗಳಾದ ನದಿಗಳು ನನ್ನನ್ನು ಮುಳುಗಿ ಹೋಗುವಂತೆ ಮಾಡದಿರಲಿ. ನನ್ನ ಭೃತ್ಯರಲ್ಲೊಬ್ಬನಾದ ತ್ರೈತನನೆಂಬ ದಾಸನು ಕತ್ತಿಯಿಂದ ನನ್ನ ತಲೆಗೂ ಭುಜಕ್ಕೂ ಹೊಡೆದು ಗಾಯಪಡಿಸಿದಾಗ ನಿಮ್ಮ (ಅಶ್ವಿನೀದೇವತೆಗಳ) ಅನುಗ್ರಹದಿಂದ ಅವನು ತಾನೇ ತನ್ನ ತಲೆಗೂ ಭುಜಕ್ಕೂ ಹೊಡೆದುಕೊಂಡು ಓಡಿಹೋಗುವಂತಾಯಿತು.

## English Translation

Let not the maternal waters swallow me, since the slaves hurled down this decrepit (old man); in like manner as Traitana wounded his head, so has the slave wounded his own, and has struck his breast and shoulders,

### ವಿಶೇಷವಿಷಯಗಳು

ನಮಾ ಗರನ್ ಎಂಬ ಈ ಐದನೆಯ ಋಕ್ಕಿನ ವಿನಿಯೋಗವನ್ನು ಶೌನಕಮಹರ್ಷಿಯು ಋಗ್ವಿಧಾನವೆಂಬ ಗ್ರಂಥದಲ್ಲಿ ಈರೀತಿ ಹೇಳಿರುವರು—ಹತ್ಯಾಕಾರಿಯೂ ಹಿಂಸಕನೂ ಆದ ಮನುಷ್ಯನು, ಹುಲಿ, ತೋಳ ಇವುಗಳು ಪ್ರಯಾಣಕಾಲದಲ್ಲಿ ಎದುರಾಗಿ ಬಂದಲ್ಲಿ ನ ಮಾ ಗರನ್ ಎಂಬ ಈ ಮಂತ್ರವನ್ನು ಜಪಿಸಿದರೆ ಅವರುಗಳಿಂದ ಉಂಟಾಗಬಹುದಾದ ಭಯವು ಪರಿಹಾರವಾಗುವುದು. ಮೂರು ರಾತ್ರಿಗಳು ಎಂದರೆ ಮೂರುದಿನಪರ್ಯಂತ ಉಪವಾಸ ಮಾಡಿ ರಾತ್ರಿಯಲ್ಲಿ ಈ ಮಂತ್ರವನ್ನು ಜಪಮಾಡಲು ಪ್ರಾರಂಭಿಸಿ ಸೂರ್ಯೋದಯವಾಗುವವರೆಗೂ ಜಪಮಾಡುತ್ತಿದ್ದು ಬಳಿಕ ನದಿಯಲ್ಲಿ ಸ್ನಾನಮಾಡಿ ಸೂರ್ಯನ ಅಭಿಮುಖವಾಗಿ ನಿಂತು ಸ್ತೋತ್ರಮಾಡಿದರೆ ಈರೀತಿ ಮಾಡುವ ಪುರುಷನ ಸಮೀಪಕ್ಕೆ ಕಳ್ಳರೂ ಪಾಪಿಷ್ಠರೂ ಸುಳಿಯುವುದಿಲ್ಲ ಮತ್ತು ಅಂತಹ ಪುರುಷನು ಪ್ರಯಾಣಮಾಡುವಾಗ ಮಾರ್ಗದಲ್ಲಿ ತನ್ನ ಜತೆಯಲ್ಲಿರುವ ನೂರುಜನಗಳನ್ನಾದರೂ ಒಬ್ಬನೇ ಕಾಪಾಡಬಲ್ಲನು ಎಂದು ಋಗ್ವಿಧಾನ ೧-೩೫ರಲ್ಲಿ ಹೇಳಿರುವರು. ಇಲ್ಲಿ ಆತತಾಯಿ ಎಂಬ ಶಬ್ದಕ್ಕೆ—

ಅಗ್ನಿದೋ ಗರದಶ್ಚೈವ ಶಸ್ತ್ರೋನ್ಮತ್ತೋ ಧನಾಪಹಃ ।
ಕ್ಷೇತ್ರದಾರಹರಶ್ಚೈತಾನ್ ಷಡ್ವಿದ್ಯಾದಾತತಾಯಿನಃ ॥
(ಶುಕ್ರನೀತಿ)

ಶುಕ್ರನೀತಿಯಲ್ಲಿ ಈ ವಿಧವಾದ ವಿವರಣೆ ಇರುವುದು—ಮನೆಗೆ ಬೆಂಕಿ ಇಡುವವನೂ, ವಿಷವನ್ನು ಕೊಟ್ಟು ಕೊಲ್ಲುವವನೂ, ಹರಿತವಾದ ಆಯುಧವನ್ನು ಕೈಯಲ್ಲಿ ಹಿಡಿದು ಇತರರಿಗೆ ಭಯವನ್ನುಂಟುಮಾಡುವವನೂ, ಪರರ ಧನವನ್ನಪಹರಿಸುವವನೂ, ಮೋಸದಿಂದ ಗದ್ದೆ, ಹೊಲ, ತೋಟ ಮೊದಲಾದ ಭೂಮಿಯನ್ನು ಅಪಹರಿಸುವವನೂ, ಇನ್ನೊಬ್ಬರ ಹೆಂಡತಿಯನ್ನು ಅಪಹರಿಸುವವನೂ—ಈ ಆರು ಜನರೂ ಆತತಾಯಿಗಳೆಂದು ಹೇಳಲ್ಪಡುವರು. ಇಂತಹ ಪಾಪಿಷ್ಠರನ್ನು ನೋಡಿದಲ್ಲಿ ನ ಮಾ ಗರನ್ ಎಂಬ ಋಕ್ಕನ್ನು ಪಠಿಸಿದಲ್ಲಿ ಆ ಪಾಪವು ಪರಿಹಾರವಾಗುವುದೆಂದು ಶೌನಕರು ಹೇಳಿರುವರು.

ಸುಸಮುಬ್ಧಂ— ಸುಷ್ಠು ಸಂಕುಚಿತಸರ್ವಾಂಗಂ । ಸಂಕುಚಿತವಾಗಿ ಮಾಡಲ್ಪಟ್ಟ ದೇಹವುಳ್ಳ ಎಂದರ್ಥಮಾಡಿದೆ. ವಾರ್ಧಕ್ಯದಿಂದ ಜರ್ಜರಿತವಾಗಿ ಸಂಕುಚಿತವಾದುದೇ ಅಥವಾ ಭೃತ್ಯರು ಇವನ ಕೈಕಾಲುಗಳನ್ನು ಕಟ್ಟಿಹಾಕಿದುದರಿಂದ ಸಂಕುಚಿತವಾದುದೇ ಎಂಬುದನ್ನು ವಿವರಿಸಿಲ್ಲ. ಈ ಪದವು ಯಾವ ಧಾತುವಿನಿಂದ ನಿಷ್ಪನ್ನವಾಗಿದೆಯೆಂದೂ ಹೇಳುವುದು ಕಷ್ಟ. Monier Williams ಪಂಡಿತನು ತನ್ನ Sanskrit—English Dictionaryಯಲ್ಲಿ ಸಮ್+ಉಭ್ (ಉಭ್ನಾತಿ) to cover up, confined ಎಂದು ವಿವರಿಸಿ ಉಭ್‌ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ತಿಳಿಸಿದ್ದಾನೆ. ಈ ಸಹಾಯದಿಂದ ಸಂಕುಚಿತವಾದ ಎಂಬ ಸಾಯಣರ ಪದಕ್ಕೆ

ಭೃತ್ಯರು ಬಂಧಿಸಿದುದರಿಂದ ಸಂಕುಚಿತವಾಗಿ ಮಾಡಲ್ಪಟ್ಟ ದೇಹವುಳ್ಳ ಎಂದರ್ಥವಾಗುತ್ತದೆ. ಆದರೆ Wilson ಎಂಬ ಪಂಡಿತನು ಈ ಪದಕ್ಕೆ decrepit ಎಂದು ಅರ್ಥಮಾಡಿದ್ದಾನೆ. ಆಗ ವಾರ್ಧಕ್ಯದಿಂದ ದೇಹವು ಗಳಿತವಾಗಿ ಸಂಕುಚಿತವಾಗಿದೆಯೆಂದು ತಿಳಿಯಬೇಕಾಗುತ್ತದೆ. ಸುಸಮುಬ್ಧಂ ಪದಕ್ಕೆ well-bound, feltered (ಪಾಶಗಳಿಂದ ಬಂಧಿತವಾದ) ಎಂದೇ ಅರ್ಥವೆಂದು Monier Williamsನು ಸ್ಪಷ್ಟವಾಗಿ ತಿಳಿಸಿದ್ದಾನೆ. ಋಕ್ಸಂಹಿತೆಯಲ್ಲಿ ಈ ಋಕ್ಕಿನಲ್ಲಲ್ಲದೇ ಇನ್ನೆರಡುಕಡೆಗಳಲ್ಲಿ ಈ ಪದದ ಪ್ರಯೋಗವಿದೆ. ಒಂದೆಡೆಯಲ್ಲಿ ಕೇವಲ ಉಬ್ಧಂ ಎಂದೂ ಇನ್ನೊಂದೆಡೆಯಲ್ಲಿ ಸಮುಬ್ಧಂ ಎಂದೂ ಪ್ರಯೋಗಿಸಿದೆ.

ತೇ ಗವ್ಯತಾ ಮನಸಾ ದೃಧ್ರಮುಬ್ಧಂ ಗಾ ಯೇಮಾನಂ ಪರಿ ಷಂತಮದ್ರಿಂ ।
ದೃಳ್ಹಂ ನರೋ ವಚಸಾ ದೈವ್ಯೇನ ವ್ರಜಂ ಗೋಮಂತಮುಶಿಜೋ ವಿ ವವ್ರುಃ ॥

(ಋ. ಸಂ. ೪-೧-೧೫)

ಎಂಬ ಋಕ್ಕಿನಲ್ಲಿ ಉಬ್ಧಂ ಎಂಬ ಪದಕ್ಕೆ ಸಮುಬ್ಧಂ ಸಂಹಿತಂ ಶೇಖರಿತವಾದ, ಒಟ್ಟಿಗೆ ಸೇರಿಸಲ್ಪಟ್ಟ ಎಂದು ಒಂದರ್ಥವನ್ನು ತಿಳಿಸಿ (ಇಲ್ಲಿಯೂ ಸಂಕೋಚಾರ್ಥವೇ ಆಗುತ್ತದೆ) ಅನಂತರ ಯದ್ವಾ ಉಭಿಃ ಪೂರಣಾರ್ಥಃ ಗೋಭಿಃ ಪೂರ್ಣಂ । ಪೂರಣಾರ್ಥಕವಾದ ಉಭ್‌ಧಾತುದಿನಿಂದ ನಿಷ್ಪನ್ನವಾಗಿ (ಗೋವುಗಳಿಂದ) ತುಂಬಿದ ಎಂದೂ ಸಹ ಅರ್ಥವಾಗಬಹುದೆಂದು ಹೇಳಿದ್ದಾರೆ. ಮತ್ತು,

ಕುಮಾರಂ ಮಾತಾ ಯುವತಿಃ ಸಮುಬ್ಧಂ ಗುಹಾ ಬಿಭರ್ತಿ ನ ದದಾತಿ ಪಿತ್ರೇ ।
ಅನೀಕಮಸ್ಯ ನ ಮಿನಜ್ಜನಾಸಃ ಪುರಃ ಪಶ್ಯಂತಿ ನಿಹಿತಮರತೌ ॥

(ಋ. ಸಂ. ೫-೨-೧)

ಎಂಬಲ್ಲಿಯೂ ಸಮುಬ್ಧಂ ಎಂಬ ಪದಕ್ಕೆ ಮೊದಲು ಚಕ್ರೇಣ ಹತಂ ಎಂದೂ ಎರಡನೆಯ ಸಲ ನಿಗೂಢಂ ಎಂದೂ ಅರ್ಥಮಾಡಿದ್ದಾರೆ. ಆದುದರಿಂದ ಸಾಯಣರೂ ನಿಷ್ಕೃಷ್ಟವಾದ ಅರ್ಥವನ್ನು ಹೇಳಿಲ್ಲ. ಪ್ರಕೃತವಾದ ಋಕ್ಕಿನಲ್ಲಿ ದೇಹದ ಸಂಕೋಚವು ತಾತ್ಪರ್ಯ. ಅದು ವಾರ್ಧಕ್ಯದಿಂದಾದರೂ ಆಗಿರಬಹುದು ಅಥವಾ ಬಂಧನದಿಂದಾದರೂ ಆಗಿರಬಹುದು.

ನದ್ಯಃ—ನದ್ಯಃ ಕಸ್ಮಾನ್ನದನಾ ಇಮಾ ಭವಂತಿ ಶಬ್ದವತ್ಯಃ ।

(ನಿ ೨-೨೪)

ಶಬ್ದಮಾಡು ಎಂಬರ್ಥವನ್ನು ಕೊಡುವ ನದ್ ಧಾತುವಿನಿಂದ ನಿಷ್ಪನ್ನವಾಗಿದೆ. ಈ ನದಿಗಳಿಗೆ ಮಾತೃತಮಾಃ ಎಂಬ ವಿಶೇಷಣವಿದೆ. ಮಾತೃವಿನಂತೆ ಅತ್ಯಂತ ಹಿತಕಾರಿಗಳಾಗಿರುವುವು ಎಂದರ್ಥಮಾಡಿದೆ. ನದಿಗಳು ಸಸ್ಯಾದಿರೂಪವಾದ ಅನ್ನಕ್ಕೆ ಆಸರೆಯಾಗಿ ಜಗತ್ತಿನ ಜೀವನಕ್ಕೆ ಆಧಾರವಾಗಿರುವುದೇ ಅಲ್ಲದೇ ಜಗತ್ತಿಗೆಲ್ಲಾ ಮಾತೃವಿನಂತೆ ತನ್ನ ಅಲೌಕಿಕವಾದ ಪ್ರೇಮುವನ್ನೂ ಬೀರಿ ಉಪಕಾರವನ್ನು ಮಾಡುತ್ತದೆ. ಈ ಸಂದರ್ಭದಲ್ಲಿ ನಿರುಕ್ತಕಾರರು ನದಿಯ ಮಾತೃಪ್ರೇಮುವನ್ನು ತೋರಿಸಲು ಒಂದು ಕಥೆಯನ್ನುದಹರಿಸಿದ್ದಾರೆ.

ವಿಶ್ವಾಮಿತ್ರ ಋಷಿಃ ಸುದಾಸಃ ಪೈಜವನಸ್ಯ ಪುರೋಹಿತೋ ಬಭೂವ । ಸ ವಿತ್ತಂ ಗೃಹೀತ್ವಾ ವಿಪಾಟ್ಛುತುದ್ರ್ಯೋಃ ಸಂಭೇದಮಾಯಯೌ । ಅನುಯಯುರಿತರೇ । ಸ ವಿಶ್ವಾಮಿತ್ರೋ

ನದೀಸ್ತುಷ್ಟಾವ 'ಗಾಥಾ ಭವತ' ಇತಿ ।

(ನಿ. ೨-೨೪)

ವಿಶ್ವಾಮಿತ್ರ ಋಷಿಯು ಪಿಜವನ ಪುತ್ರನಾದ ಸುದಾಸೆಂಬ ರಾಜನಿಗೆ ಪುರೋಹಿತನಾಗಿದ್ದನು. ಒಂದು ಸಲ ಯಜ್ಞಾರ್ಥವಾಗಿ ಧನಗಳನ್ನು ಸಂಗ್ರಹಿಸಿ ವಿಪಾಟ್ ಮತ್ತು ಶತದ್ರೀ ನದಿಗಳ ಸಂಗಮಸ್ಥಾನಕ್ಕೆ ಬಂದು ಕೆಳಗೆ ಉದಹರಿಸಿರುವ ಋಕ್ಕಿನಿಂದ ಸ್ತುತಿಸಿ ತಮಗೆ ದಾಟುವ ಸೌಕರ್ಯವನ್ನು ಕಲ್ಪಿಸಿಕೊಡಬೇಕೆಂದು ಪ್ರಾರ್ಥಿಸಿದನು.

ರಮಧ್ವಂ ಮೇ ವಚಸೇ ಸೋಮ್ಯಾಯ ಋತಾವರೀರುಪ ಮುಹೂರ್ತಮೇವೈಃ ।
ಪ್ರ ಸಿಂಧುಮಚ್ಛಾ ಬೃಹತೀ ಮನೀಷಾವಸ್ಯುರಹ್ವೇ ಕುಶಿಕಸ್ಯ ಸೂನುಃ ॥

( ಋ. ಸಂ. ೩-೩೩-೫ )

ಕುಶಿಕಪುತ್ರನಾದ ನಾನು ಅತ್ಯುತ್ತಮವಾದ ಸ್ತುತಿಯಿಂದ ಪ್ರಾರ್ಥಿಸಿಕೊಳ್ಳುತ್ತೇನೆ. ಕ್ಷಣಮಾತ್ರ ನಿಮ್ಮ ಪ್ರವಾಹವನ್ನು ನಿಲ್ಲಿಸಿ ನಮ್ಮ ಸಂಚಾರಕ್ಕೆ ಅನುಕೂಲವನ್ನು ಕಲ್ಪಿಸಿಕೊಡಿ ಎಂದು ಪಾರ್ಥಿಸಿದಾಗ ನದಿಗಳು,

ಇಂದ್ರೋ ಅಸ್ಮಾँ ಅರದದ್ವಜ್ರಬಾಹುರಪಾಹನ್ವೃತ್ರಂ ಪರಿಧಿಂ ನದೀನಾಂ ।
ದೇವೋಽನಯತ್ಸವಿತಾ ಸುಪಾಣಿಸ್ತಸ್ಯ ವಯಂ ಪ್ರಸವೇ ಯಾಮ ಉರ್ವೀಃ ॥

(ಋ. ಸಂ. ೩-೩೩-೬)

ವಜ್ರಬಾಹುವಾದ ಇಂದ್ರನು ನಮ್ಮ ಪ್ರವಾಹಮಾರ್ಗವನ್ನುಂಟುಮಾಡಿದನು. ಸುಂದರಹಸ್ತನಾದ ಸವಿತೃವು ನಮ್ಮನ್ನು ಇಲ್ಲಿಗೆ ಕರೆತಂದನು. ಅವನ ಪ್ರೇರಣೆಯಿಂದ ನಾವು ಪ್ರವಹಿಸುತ್ತಿದ್ದೇವೆ, ಆದರೂ ಸಹ

ಆ ತೇ ಕಾರೋ ಶೃಣವಾಮಾ ವಚಾಂಸಿ ಯಯಾಥ ದೂರಾದನಸಾ ರಥೇನ ।
ನಿ ತೇ ನಂಸೈ ಪೀಪ್ಯಾನೇವ ಯೋಷಾ ಮರ್ಯಾಯೇವ ಕನ್ಯಾ ಶಶ್ವಚೈ ತೇ ।

(ಋ. ಸಂ. ೩-೩೩-೧೦)

ನಾವು ನಿಮ್ಮ ಪ್ರಾರ್ಥನೆಯನ್ನಂಗೀಕರಿಸಿದ್ದೇವೆ. ಮಾತೆಯು ಮಗುವು ಸ್ತನ್ಯಪಾನಮಾಡಲೆಂದು ಪ್ರೇಮದಿಂದ ಬಗ್ಗುವಂತೆಯೂ, ಯುವತಿಯು ತನ್ನ ಪ್ರಿಯನ ಆಲಿಂಗನಕ್ಕಾಗಿ ಬಗ್ಗುವಂತೆಯೂ ಸಹ ಬಗ್ಗಿ ನಿಮಗೆ ದಾರಿಯನ್ನು ಮಾಡಿಕೊಡುತ್ತೇವೆಂದು ನದಿಗಳು ತಮ್ಮ ಮಾತೃಪ್ರೇಮವನ್ನು ತೋರಿಸುವ ಕಥೆಯನ್ನು ನಿರುಕ್ತಕಾರರು ಉದಹರಿಸಿದ್ದಾರೆ. ಇದೇ ಅಂಶವನ್ನು,

ಸೂಕ್ತೇ ಪ್ರೇತಿ ತು ನದ್ಯಶ್ಚ ವಿಶ್ವಾಮಿತ್ರಃ ಸಮೂದಿರೇ ॥
ಪುರೋಹಿತಃ ಸನ್ನಿಜ್ಯಾರ್ಥಂ ಸುದಾಸಾ ಸಹ ಯನ್ನೃಷಿಃ ।
ವಿಪಾಟ್ಛುತುದ್ರ್ಯೋಃ ಸಂಭೇದಂ ಶಮಿತ್ಯೇತೇ ಉವಾಚ ಹ ॥

(ಬೃ. ದೇ. ೪-೧೦೫-೬)

ಎಂಬ ವಾಕ್ಯಗಳಲ್ಲಿ ಬೃಹದ್ದೇವತಾಕಾರರೂ ಸಹ ವಿಶ್ವಾಮಿತ್ರನು ನದಿಗಳನ್ನು ಸ್ತುತಿಸಿ ಅವುಗಳ ಮಾತೃಪ್ರೇಮವನ್ನು ಸಂಪಾದಿಸಿದ ಸನ್ನಿವೇಶವನ್ನು ಸೂಚಿಸಿದೆ. ಇದಲ್ಲದೇ ನದಿಗಳ ಉಪಕಾರವನ್ನು ಮಾತೃಗಳ ಪ್ರೇಮಪೂರಿತವಾದ ಉಪಕಾರಕ್ಕೆ ಹೋಲಿಸಿರುವುದನ್ನು ಋಕ್ಸಂಹಿತೆಯಲ್ಲಿ ನೋಡಬಹುದು.

ಅಭಿ ತ್ವಾ ಸಿಂಧೋ ಶಿಶುಮಿನ್ನ ಮಾತರೋ ವಾಶ್ರಾ ಅರ್ಷಂತಿ ಪಯಸೇವ ಧೇನವಃ ।
ರಾಜೇವ ಯುಧ್ವಾ ನಯಸಿ ತ್ವಮಿತ್ಸಿಚೌ ಯದಾಸಾಮಗ್ರಂ ಪ್ರವತಾಮಿನಕ್ಷಸಿ ॥
(ಋ- ಸಂ. ೧೦-೭೫-೪)

ಎಂಬಲ್ಲಿ ಮಾತೃವಾದ ಧೇನುವು ಹಾಲನ್ನು ಕೊಡಲು ತನ್ನ ಕರುವಿನಲ್ಲಿಗೆ ಶಬ್ದಮಾಡಿಕೊಂಡು ಓಡಿಹೋಗುವಂತೆ ನದಿಯು ಶಬ್ದಮಾಡಿಕೊಂಡು ಪ್ರಜೆಗಳಿಗೆ ಉಪಕಾರಮಾಡಲು ಪ್ರವಾಹರೂಪದಲ್ಲಿ ಮುನ್ನುಗ್ಗುತ್ತಿದೆಯೆಂದು ವರ್ಣಿಸಿದೆ. ಮತ್ತು,

ಓಮಾನಮಾಪೋ ಮಾನುಷೀರಮೃಕ್ತಂ ಧಾತ ತೋಕಾಯ ತನಯಾಯ ಶಂ ಯೋಃ ।
ಯೂಯಂ ಹಿ ಷ್ಠಾ ಭಿಷಜೋ ಮಾತೃತಮಾ ವಿಶ್ವಸ್ಯ ಸ್ಥಾತುರ್ಜಗತೋ ಜನಿತ್ರೀಃ ॥
(ಋ. ಸಂ. ೬-೫೦-೭)

ಎಂಬಲ್ಲಿ ಚರಾಚರಾತ್ಮಕವಾದ ಸಮಸ್ತಲೋಕಕ್ಕೂ ಸಹ ಮಾತೃಗಳಿಗಿಂತಲೂ ಅಧಿಕವಾದ ಉಪಕಾರಗಳಾಗಿವೆ ಯೆಂದು ವರ್ಣಿಸಿದೆ.

ಅಂಬಿತಮೇ ನದೀತಮೇ ದೇವಿತಮೇ ಸರಸ್ವತಿ ।
ಅಪ್ರಶಸ್ತಾ ಇವ ಸ್ಮಸಿ ಪ್ರಶಸ್ತಿಮಂಬ ನಸ್ಕೃಧಿ ॥
(ಋ. ಸಂ. ೨-೪೧-೧೬)

ಎಂಬ ಋಕ್ಕಿನಲ್ಲಿ ನದಿಗಳಲ್ಲೆಲ್ಲಾ ಶ್ರೇಷ್ಠಳಾದ ಸರಸ್ವತಿಯು ಮಾತೃಗಳಲ್ಲೆಲ್ಲಾ ಶ್ರೇಷ್ಠಳೆಂದು ಸ್ತುತಿಸಿದೆ.

ಈ ವಿಧವಾಗಿ ನದಿಗಳ ಪ್ರೇಮಪೂರಿತವಾದ ಉಪಕಾರಗಳನ್ನು ಅನೇಕ ಕಡೆಗಳಲ್ಲಿ ವರ್ಣಿತವಾಗಿರುವಂತೆ ಪ್ರಕೃತವಾದ ಋಕ್ಕಿನಲ್ಲಿ ದೀರ್ಘತಮಸ್ಸೂ ಸಹ ಆ ಗುಣವನ್ನು ಪ್ರಶಂಸೆಮಾಡುತ್ತಾ ತನ್ನನ್ನು ಮುಳುಗುವಂತೆ ಮಾಡದೆ ರಕ್ಷಿಸಬೇಕಾಗಿ ಪ್ರಾರ್ಥಿಸುತ್ತಾನೆ.

ಗರನ್—ನುಂಗು ಎಂಬರ್ಥವನ್ನು ಕೊಡುವ ಗೃ ಧಾತುವಿನಿಂದ ನಿಷ್ಪನ್ನವಾಗಿ ಇಲ್ಲಿ ಮುಳುಗುವಂತೆ ಮಾಡು ಎಂಬರ್ಥವನ್ನು ಕೊಡುತ್ತದೆ. ನ ಗರನ್ ನನ್ನನ್ನು ಮುಳುಗುವಂತೆ ಮಾಡಬೇಡ ಎಂದು ಪ್ರಾರ್ಥಿಸಿದೆ.

ಯಥಾ ವಾ ಶೀರ್ಣೇ ಗರಮಭಿನಿದಧ್ಯಾದೇವಂ
(ಶ. ಬ್ರಾ. ೧೧-೫-೮-೬)

ಇತ್ಯಾದಿ ವಾಕ್ಯಗಳಲ್ಲಿ ಗರಶಬ್ದಕ್ಕೆ ಮಾದಕದ್ರವ್ಯವೆಂದರ್ಥಮಾಡಿದೆ.

ಗ್ಧ—ಹಿಂಸಾರ್ಥಕವಾದ ಹನ್ ಧಾತುವಿನಿಂದ ನಿಷ್ಪನ್ನನಾಗಿದೆ. ಹತವಾನ್ ಹೊಡೆದುಕೊಂಡನು ಎಂದರ್ಥ.

ದೀರ್ಘತಮಸ್ಸನ್ನು ಕತ್ತಿಯಿಂದ ಹೊಡೆಯಲುಪಕ್ರಮಿಸಿದಾಗ ಅಶ್ವಿನೀದೇವತೆಗಳು ದೀರ್ಘತಮಸ್ಸನ್ನು ಅನುಗ್ರಹಿಸಿ ಆ ಏಟುಗಳು ದೀರ್ಘತಮಸ್ಸಿನ ದಾಸನಾದ ತ್ರೈತನನಿಗೇ ಕತ್ತಿನ ಮೇಲೂ ತೋಳುಗಳಮೇಲೂ ಬೀಳುವಂತೆ ಮಾಡಿದರು ಎಂಬುದನ್ನು ಋಷಿಯು ಕೃತಜ್ಞತಾಪೂರ್ವಕವಾಗಿ ಹೇಳಿಕೊಳ್ಳುತ್ತಾನೆ.

### ವ್ಯಾಕರಣಪ್ರಕ್ರಿಯಾ

**ಗರನ್**—ಗೃ ನಿಗರಣೇ ಧಾತು. ಲೇಟ್ ಪ್ರಥಮಪುರುಷಬಹುವಚನದಲ್ಲಿ ಝಿ ಪ್ರತ್ಯಯ. **ವ್ಯತ್ಯಯೋ ಬಹುಲಮ್** ಎಂಬುದರಿಂದ ಶಪ್ ವಿಕರಣ ಬರುತ್ತದೆ. **ಇತಶ್ಚಲೋಪಃ** (ಪಾ. ಸೂ ೩-೪-೯೭) ಎಂಬುದರಿಂದ ಪ್ರತ್ಯಯದ ಇಕಾರಕ್ಕೆ ಲೋಪ. **ಝೋಂತಃ** ಎಂಬುದರಿಂದ ಅಂತಾದೇಶ ಸಂಯೋಗಾಂತಲೋಪದಿಂದ ತಕಾರ ಲೋಪ. ಶಪ್ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ದಾಸಾಃ**—ದಸಿ ಸೇವನೇ ಧಾತು. **ದಂಸೇಷ್ಟಟನೌನಆಚ** (ಉ, ಸೂ. ೬೮೮) ಎಂಬುದರಿಂದ ಟ, ಟನ್ ಪ್ರತ್ಯಯ. ನಕಾರಕ್ಕೆ ಆಕಾರಾದೇಶ. **ಚುಟೂ** ಸೂತ್ರದಿಂದ ಆದಿ ಟಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ,

**ಸುಸಮುಬ್ಧಮ್**—ಉಬ್ಜ ಆರ್ಜವೇ. ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ಸ್ವತೀ ಪೂಜಾಯಾಮ್** (ಪಾ. ಸೂ. ಮ. ೨-೨-೧೮-೪) ಎಂಬ ವಚನದಿಂದ ಸಮಾಸವಾದಾಗ **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಅವ ಅಧುಃ**— ಅವ ಉಪಸರ್ಗ. ಡುಧಾಞ್ ಧಾರಣಪೋಷಣಯೋಃ ಧಾತು. ಲುಙ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. ಚ್ಲಿಗೆ ಸಿಚಾದೇಶ ಬಂದಾಗ **ಗಾತಿಸ್ಥಾ ಘು**—(ಪಾ. ಸೂ. ೨-೪-೭೭) ಎಂಬುದ ರಿಂದ ಅದಕ್ಕೆ ಲುಕ್. **ಆತಃ** (ಪಾ. ಸೂ. ೩-೪-೧೧೦) ಎಂಬುದರಿಂದ ಝಿಗೆ ಉಸಾದೇಶ. **ಉಸ್ಯಪದಾಂತಾತ್** (ಪಾ. ಸೂ. ೬-೧-೯೬) ಎಂಬುದರಿಂದ ಪರರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾ ಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ. **ತಿಙಿಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಅವ) ನಿಘಾತಸ್ವರ ಬರುತ್ತದೆ.

**ವಿತಕ್ಷತ್**—ವಿ ಉಪಸರ್ಗ. ತಕ್ಷೂ ತನೂಕರಣೇ ಧಾತು. ಲಙ್ ಪ್ರಥಮಪುರುಷಏಕವಚನಾಂತರೂಪ. **ಬಹುಲಂ ಛಂದಸ್ಯಮಾಙ್ಯೋಗೇಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಹಿಂದಿ ನಂತೆ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ ಶಪ್ ಅನುದಾತ್ತವಾದುದರಿಂದ ಧಾತುಸ್ವರ ಉಳಿಯು ತ್ತದೆ. **ತಿಙಿಚೋದಾತ್ತವತಿ** ಸೂತ್ರದಿಂದ ಗತಿಗೆ ಅನುದಾತ್ತಸ್ವರ ಬರುತ್ತದೆ.

**ಅಂಸೌ**—ಅಮ ಗತ್ಯಾದಿಷು. **ಅಮೇಃಸನ್** (ಉ. ಸೂ. ೬೯೫) ಎಂಬುದರಿಂದ ಸನ್ ಪ್ರತ್ಯಯ. ಮಕಾ ರಕ್ಕೆ ಅನುಸ್ವಾರ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಗ್ಧ**—ಹನ ಹಿಂಸಾಗತ್ಯೋಃ ಧಾತು. ಲುಙ್ ಪ್ರಥಮಪುರುಷಏಕವಚನಾಂತರೂಪ. ಛಾಂದಸವಾಗಿ ಕಾರ್ಯ ಬರುತ್ತದೆ. ನಿಘಾತಸ್ವರ ಬರುತ್ತದೆ. ॥ ೫ ॥



ಸಂಹಿತಾಪಾಠಃ

ದೀರ್ಘತಮಾ ಮಾಮತೇಯೋ ಜುಜುರ್ವಾನ್ದಶಮೇ ಯುಗೇ ।
ಅಪಾಮರ್ಥಂ ಯತೀನಾಂ ಬ್ರಹ್ಮಾ ಭವತಿ ಸಾರಥಿಃ ॥ ೬ ॥

ಪದಪಾಠಃ

ದೀರ್ಘऽತಮಾಃ । ಮಾಮತೇಯಃ । ಜುಜುರ್ವಾನ್ । ದಶಮೇ । ಯುಗೇ ।
ಅಪಾಂ । ಅರ್ಥಂ । ಯತೀನಾಂ । ಬ್ರಹ್ಮಾ । ಭವತಿ । ಸಾರಥಿಃ ॥ ೬ ॥

॥ ಸಾಯಣಭಾಷ್ಯಂ ॥

ದೀರ್ಘತಮಾ ಏತನ್ನಾಮಾ ಮಹರ್ಷಿಃ ಸ ಚ ಮಾಮತೇಯೋ ಮಾಮತಾಯಾಃ ಪುತ್ರೋ ದಶಮೇ ಯುಗೇ ದಶಯುಗಪರ್ಯಂತಂ ಮಹಾನುಭಾವಯೋರಶ್ವಿನೋಃ ಪ್ರಭಾವಾತ್ಪೂರ್ವೋಕ್ತಾದ್ದುಃಖಾದ್ವಿಮುಕ್ತೋऽತ್ಯಂತಸುಖೀ ಸ್ವಪುತ್ರಭಾರ್ಯಾದಿಭಿಃ ಸಹಿತೋ ಜೀವಿತವಾನ್ । ದಶಮೇ ಯುಗೇऽತೀತೇ ಸತಿ ಜುಜುರ್ವಾಞ್ಜೀರ್ಣೋ ವಲೀಪಲಿತಗಾತ್ರೋ ಬಭೂವ । ಏವಂಭೂತಃ ಸನ್ನರ್ಥಂ ಪುರುಷೈರರ್ಥ್ಯಮಾನಂ ಕರ್ಮಫಲಂ ಸ್ವರ್ಗಾದಿಕಂ ಯತೀನಾಂ ಪ್ರಾಪ್ನುವತೀನಾಮಪಾಮಪ್ಸ್ವಾರ್ಯಾಣಾಂ ಪ್ರಜಾನಾಂ । ಯದ್ವಾ । ಅಪಾಮಪಸಾಂ ಕರ್ಮಣಾಮರ್ಥಂ ಪ್ರಯೋಜನಂ ಯತೀನಾಂ ತಾಸಾಂ ಪ್ರಜಾನಾಂ । ಬ್ರಹ್ಮಾ ಬ್ರಹ್ಮಸದೃಶಃ ಪರಿವೃಢೋ ಭವತಿ । ಕಿಂಚ ಸಾರಥಿಃ ತದ್ವನ್ನಿರ್ವಾಹಕೋ ಭವತಿ । ದೇವೋ ಭವತೀತ್ಯರ್ಥಃ । ಏವಮಸ್ಯ ವೃತ್ತಾಂತಂ ಮಂತ್ರೋऽನುವದತಿ । ಸ್ವಯಂ ವಾ ಸ್ವಾತ್ಮಾನಂ ಪಾರೋಕ್ಷ್ಯೇಣಾಶ್ವಿನೋರ್ಮಹಾನುಭಾವತ್ವಂ ಪ್ರಕಟಯಿತುಂ ಬ್ರವೀತಿ ॥

ಪ್ರತಿಪದಾರ್ಥ

ಮಾಮತೇಯಃ— ಮಮತೆಯ ಪುತ್ರನಾದ । ದೀರ್ಘತಮಾಃ— ದೀರ್ಘತಮಸ್ಸೆಂಬ ಋಷಿಯು । ದಶಮೇ ಯುಗೇ—(ತನ್ನ ಜೀವನದಲ್ಲಿ) ಹತ್ತನೇ ಯುಗದಲ್ಲಿ । ಜುಜುರ್ವಾನ್—ವಾರ್ಧಕ್ಯದಿಂದ ಗಳಿತವಾದ ದೇಹವುಳ್ಳವನಾದನು । ಅಪಾಂ—ಯಾಗಾದಿ ಕರ್ಮಗಳಿಗೆ । ಅರ್ಥಂ—ಫಲರೂಪವಾದ ತಮ್ಮ ಇಷ್ಟಾರ್ಥಗಳನ್ನು ಸಂಪಾದಿಸಲು । ಯತೀನಾಂ—ಕರ್ಮಕರ್ತರಾದ ಪ್ರಜೆಗಳಿಗೆಲ್ಲಾ । ಬ್ರಹ್ಮಾ—ಬ್ರಹ್ಮರೂಪಿಯಾದನು (ಯಜ್ಞಕರ್ತರಿಗೆ ನೇತೃವಾದನು) । ಸಾರಥಿಃ—(ರಥವನ್ನು ಹೊಡೆಯಲು ಸಾರಥಿಯಿರುವಂತೆ) ಯಾಗಾದಿಗಳನ್ನು ನಿರ್ವಹಿಸಲು ಯೋಗ್ಯವಾದವನಾಗಿ । ಭವತಿ—ಆದನು ॥

ಭಾವಾರ್ಥ

ಮಮತೆಯ ಪುತ್ರನಾದ ದೀರ್ಘತಮಸ್ಸು ತನ್ನ ಜೀವನದಲ್ಲಿ ಅಶ್ವಿನೀದೇವತೆಗಳ ಅನುಗ್ರಹದಿಂದ ಹತ್ತು ಯುಗಗಳ ಪರ್ಯಂತ ಸುಖವಾದ ಜೀವನವನ್ನನುಭವಿಸಿ ಹತ್ತನೇ ಯುಗವು ಕಳೆಯಲು ವಾರ್ಧಕ್ಯದಿಂದ ಶಿಥಿಲಿತವಾದ

ದೇಹವುಳ್ಳವನಾದನು ಇವನ ಉತ್ತಮವಾದ ಜೀವನದಿಂದ ಫಲವನ್ನಪೇಕ್ಷಿಸಿ ಯಜ್ಞಯಾಗಾದಿಗಳನ್ನು ನೆರವೇರಿಸುವ ಪ್ರಜೆಗಳಿಗೆಲ್ಲಾ ಅವರ ಇಷ್ಟಾರ್ಥವು ನೆರವೇರುವ ರೀತಿಯಲ್ಲಿ ಕರ್ಮವನ್ನು ಮಾಡಲು ಸಹಾಯಕನಾದ ಬ್ರಹ್ಮಪದವಿಯನ್ನು ಪಡೆದನು. ರಥವನ್ನು ಹೊಡೆಯಲು ಸಾರಥಿಯಿರುವಂತೆ ಯಾಗಾದಿಗಳನ್ನು ನಿರ್ವಹಿಸಲು ಶಕ್ತನಾದವನಾಗಿ ಆದನು.

## English Translation

Dirghatamas, the son of Mamata, has grown old after the tenth yuga (has passed): he is the Brahma of those who seek to obtain the object of their (pious) works: he is their charioteer.

### ವಿಶೇಷವಿಷಯಗಳು

ಸಾಧಾರಣವಾದ ಜೀವನವನ್ನೇ ನಡೆಸಲು ಅಶಕ್ತನಾದ ದೀರ್ಘತಮಸ್ಸು ಅಶ್ವಿನೀದೇವತೆಗಳ ಸಹಾಯದಿಂದ ತನಗೆ ಒದಗಿದ ಸಕಲವಿಧವಾದ ಆಪತ್ತುಗಳನ್ನೂ ಪರಿಹರಿಸಿಕೊಂಡು ಪುತ್ರಪೌತ್ರಾದಿಸಂಪತ್ತುಗಳಿಂದ ಕೂಡಿದುದೂ ಸುಖಮಯವಾದುದೂ ಆದ ಜೀವನವನ್ನು ಬಹುದೀರ್ಘಕಾಲ ಅನುಭವಿಸಿದುದೆ ಅಲ್ಲದೇ, ಪವಿತ್ರವಾದುದೂ ಶ್ರದ್ಧಾಭಕ್ತಿಗಳಿಂದ ಕೂಡಿದ ಕರ್ಮಾಚರಣೆಯನ್ನು ನೆರವೇರಿಸಿದುದೂ ಆದ ತನ್ನ ಶ್ರೇಷ್ಠವಾದ ಜೀವನದಿಂದ ಯಜ್ಞಕರ್ತರೆಲ್ಲರಿಗೂ ನೇತೃವಾದ ಬ್ರಹ್ಮನ ಸ್ಥಾನವನ್ನು ಪಡೆದನು ಎಂದು ಅವನ ಯೋಗ್ಯತೆಯನ್ನು ತಿಳಿಸಿದೆ.

ಬ್ರಹ್ಮಾ—ಬ್ರಹ್ಮಸದೃಶಃ ಪರಿವೃಢೋ ಭವತಿ । ಬ್ರಹ್ಮನಿಗೆ ಸಮಾನವಾದ ಶಕ್ತಿಯುಳ್ಳವನಾದನು. ಈ ಶಕ್ತಿಯು ಯಾವುದೆಂಬುದನ್ನು ನಿರುಕ್ತಕಾರರು,

ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್ ಗಾಯತ್ರಂ ತ್ವೋ ಗಾಯತಿ ಶಕ್ವರೀಷು ।
ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ ಯಜ್ಞಸ್ಯ ಮಾತ್ರಾಂ ವಿ ಮಿಮೀತ ಉ ತ್ವಃ ॥
(ಋ. ಸಂ. ೧೦-೭೧-೧೧)

ಎಂಬ ಋಕ್ಕನ್ನುದಹರಿಸಿ ಬ್ರಹ್ಮಪದವಿಯ ಸ್ವರೂಪವನ್ನು ವಿವರಿಸಿದ್ದಾರೆ.

ಬ್ರಹ್ಮೈಕೋ ಜಾತೇ ಜಾತೇ ವಿದ್ಯಾಂ ವದತಿ । ಬ್ರಹ್ಮಾ ಸರ್ವವಿದ್ಯಃ ಸರ್ವಂ ವೇದಿತುಮರ್ಹತಿ ।
ಬ್ರಹ್ಮಾ ಪರಿವೃಢಃ ಶ್ರುತತೋ ಬ್ರಹ್ಮ ಪರಿವೃಢಂ ಸರ್ವತಃ ॥
( ನಿ. ೧-೮ )

ಬ್ರಹ್ಮನು (ಜ್ಞಾನಿಯಾದುದರಿಂದ) ಸಕಲ ವಸ್ತುಗಳ ತತ್ತ್ವಗಳನ್ನೂ ಪ್ರತಿಪಾದಿಸುತ್ತಾನೆ. ಸಕಲವನ್ನೂ ತಿಳಿದವನು. ತತ್ತ್ವಜ್ಞನಾದುದರಿಂದಲೇ ಸಕಲರಿಗಿಂತಲೂ ಅತ್ಯುತ್ತಮನಾಗಿದ್ದಾನೆ ಎಂದು ನಿರುಕ್ತಕಾರರು ಬ್ರಹ್ಮನ ಶ್ರೇಷ್ಠವಾದ ಯೋಗ್ಯತೆಯನ್ನು ತಿಳಿಸಿದ್ದಾರೆ. ಅಂತಹ ಪದವಿಯನ್ನು ದೀರ್ಘತಮಸ್ಸು ಪಡೆದನು ಎಂದು ಹೇಳಿದೆ.

### ವ್ಯಾಕರಣಪ್ರಕ್ರಿಯಾ

ಮಾಮತೇಯಃ—ಮಮತಾಯಾಃ (ಪುತ್ರಃ) ಅಪತ್ಯಂ ಪುಮಾನ್. ಸ್ತ್ರೀಭ್ಯೋಢಕ್ (ಪಾ. ಸೂ.೪-೧-೧೨೦) ಎಂಬುದರಿಂದ ಢಕ್ ಪ್ರತ್ಯಯ. ಆಯನೇಯೀನೀ—(ಪಾ. ಸೂ ೭-೧-೨) ಎಂಬುದರಿಂದ ಏಯಾದೇಶ.

ಕಿತಿಚ (ಪಾ. ಸೂ. ೭-೨-೧೧೮) ಎಂಬುದರಿಂದ ಆದಿವೃದ್ಧಿ. ಯಸ್ಯೇತಿ ಚ (ಪಾ. ಸೂ. ೬-೪-೧೪೮) ಎಂಬುದರಿಂದ ಆಕಾರಲೋಪ.

ಜುಜುರ್ವಾನ್—ಜ್ಯಾಷ್ ವಯೋಹಾನೌ. ಧಾತು. ಲಿಟ್ ಬಂದಾಗ ಅದಕ್ಕೆ ಕ್ವಸುಶ್ಚ. (ಪಾ. ಸೂ. ೩-೨-೧೦೭) ಎಂಬುದರಿಂದ ಕ್ವಸುರಾದೇಶ. ಬಹುಲಂ ಛಂದಸಿ ಎಂಬುದರಿಂದ ಧಾತುವಿಗೆ ಉತ್ವ. ರ ಪರವಾಗಿ ಬರುತ್ತದೆ. ಪ್ರತ್ಯಯನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಪ್ರಥಮಾಏಕವಚನಾಂತರೂಪ ಪ್ರತ್ಯಯದ ಆದ್ಯುದಾತ್ತ ಸ್ವರ ಬರುತ್ತದೆ.

ದಶಮೇ—ಪೂರಣಾರ್ಥತೋರುವಾಗ ನಾಂತಾವಸಂಖ್ಯಾದೇರ್ಮಟ್ (ಪಾ. ಸೂ. ೫-೨-೪೯) ಎಂಬುದರಿಂದ ಡಟಿಗೆ ಮಟಾಗಮ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಅಪಾಮ್—ಊಡಿಪಂ ಪದಾದಿ—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಯತೀನಾಮ್—ಇಣ್ ಗತೌ ಧಾತು. ಲಟಿಗೆ ಶತ್ರಾದೇಶ. ಇಣೋ ಯಣ್ (ಪಾ. ಸೂ. ೬-೧-೮೧ ಎಂಬುದರಿಂದ ಧಾತುವಿಗೆ ಯಣಾದೇಶ. ಸ್ತ್ರೀತ್ವದಲ್ಲಿ ಉಗಿತಶ್ಚ (ಪಾ ಸೂ. ೪-೧-೬) ಎಂಬುದರಿಂದ ಙೀಪ್. ಶತುರನುಮೋ ನದ್ಯಜಾದೀ (ಪಾ. ಸೂ. ೬-೧-೧೭೩) ಎಂಬುದರಿಂದ ನುಮ್‌ರಹಿತತವಾದ ಶತೃವಿನ ಪರದಲ್ಲಿ ಙೀಪ್ ಬಂದುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ. ॥ ೬ ॥

ಇಲ್ಲಿಗೆ ೧೫೮ನೇ ಸೂಕ್ತವು ಮುಗಿದುದು.

:O:

## ನೂರ ಐವತ್ತೊಂಭನೆತ್ತಯ ಸೂಕ್ತವು

ಪ್ರ ದ್ಯಾವೇತಿ ಪಂಚರ್ಚಂ ತೃತೀಯಂ ಸೂಕ್ತಂ ದೈರ್ಘತಮಸಂ ಜಾಗತಂ ದ್ಯಾವಾಪೃಥಿವ್ಯಂ । ಅನುಕ್ರಾಂತಂ ಚ। ಪ್ರ ದ್ಯಾವಾ ಪಂಚ ದ್ಯಾವಾಪೃಥಿವ್ಯಂ ತು ಜಾಗತಂ ತ್ವಿತಿ ॥ ಅಗ್ನಿಷ್ಟೋಮೇ ಪೃಷ್ಠ್ಯಸ್ಯ ಷಷ್ಠೇಽಹನಿ ಚ ವ್ಯಾವಾಪೃಥಿವ್ಯನಿವಿದ್ಧಾನಮೇತತ್ಸೂಕ್ತಂ । ತಥಾ ಚ ಸೂತ್ರಂ । ಪ್ರ ದ್ಯಾವೇತಿ ದೈರ್ಘತ-ತಮಸಂ । ಆ. ೫-೧೮ । ಇತಿ ॥ ಆದ್ಯಾ ದ್ಯಾವಾಪೃಥಿವ್ಯೇ ಪಶೌ ಹವಿಷೋ ಯಾಜ್ಯಾ । ತಥಾ ಚ ಸೂತ್ರಿತಂ । ಪ್ರ ದ್ಯಾವಾ ಯಜ್ಞೈಃ ಪೃಥಿವೀ ಋತಾವೃಧಾ ಮ್ಯಳಾ ನೋ ರುದ್ರೋತ ನೋ ಮಯಸ್ಕೃಧೀತಿ ದ್ವೇ । ಆ. ೩-೮ । ಇತಿ ॥

ಅನುವಾದವು—ಪ್ರ ದ್ಯಾವಾ ಎಂಬ ಈ ಸೂಕ್ತವು ಇಪ್ಪತ್ತೆರಡನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು ಈ ಸೂಕ್ತಕ್ಕೆ ಉಚಥ್ಯಪುತ್ರನಾದ ದೀರ್ಘತಮಸ್ ಎಂಬುವನು ಋಷಿಯು. ದ್ಯಾವಾಪೃಥಿವಿಗಳು ದೇವತೆಯು. ಜಗತೀ ಛಂದಸ್ಸು. ಅನುಕ್ರಮಣಿಕೆಯಲ್ಲಿ—ಪ್ರ ದ್ಯಾವಾ ಪಂಚ ದ್ಯಾವಾ-

ಪೃಥಿವ್ಯಂ ತು ಜಾಗತಂ ತು ಎಂದು ಹೇಳಿರುವುದು. ಪೃಷ್ಠ್ಯವೆಂಬ ಅಗ್ನಿಷ್ಟೋಮಯಾಗವಿಶೇಷದಲ್ಲಿ ಆರನೆಯ ದಿವಸ ದ್ಯಾವಾಪೃಥಿವೀಸಂಬಂಧವಾದ ನಿವಿದ್ಧಾನಮಂತ್ರಪಠನೆಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ ಪ್ರ ದ್ಯಾವೇತಿ ದೈರ್ಘತಮಸಂ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೫-೧೮) ಮತ್ತು ಪಶುಯಾಗದಲ್ಲಿ ದ್ಯಾವಾಪೃಥಿವೀದೇವತೆಗಳನ್ನು ಉದ್ದೇಶಿಸಿ ಮಾಡುವ ಹವಿರ್ಹೋಮದಲ್ಲಿ ಈ ಸೂಕ್ತದ ಮೊದಲನೆಯ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— ಪ್ರ ದ್ಯಾವಾ ಯಜ್ಞೈಃ ಪೃಥಿವೀ ಋತಾವೃಧಾ ಮೃಳಾ ನೋ ರುದ್ರೋತ ನೋ ಮಯಸ್ಕೃಧೀತಿ ದ್ವೇ ಎಂಬ ಸೂತ್ರದಿಂದ ನಿರ್ದಿಷ್ಟವಾಗಿರುವುದು. (ಆ. ೩-೮).

---

॥ ಓಂ ॥

## ಸೂಕ್ತ—೧೫೯

॥ ಮಂಡಲ—೧ ॥ ಅನುವಾಕ—೨೨ ॥ ಸೂಕ್ತ— ೧೫೯ ॥

॥ ಅಷ್ಟಕ—೨ ॥ ಅಧ್ಯಾಯ—೩ ॥ ವರ್ಗ—೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—ದ್ಯಾವಾಪೃಥಿವ್ಯೌ ॥

॥ ಛಂದಃ—ಜಗತೀ ॥

---

ಸಂಹಿತಾಪಾಠಃ

ಪ್ರ ದ್ಯಾವಾ ಯಜ್ಞೈಃ ಪೃಥಿವೀ ಋತಾವೃಧಾ ಮಹೀ ಸ್ತುಷೇ ವಿದಥೇಷು
ಪ್ರಚೇತಸಾ ।
ದೇವೇಭಿರ್ಯೇ ದೇವಪುತ್ರೇ ಸುದಂಸಸೇತ್ಥಾ ಧಿಯಾ ವಾರ್ಯಾಣಿ
ಪ್ರಭೂಷತಃ ॥ ೧ ॥

ಪದಪಾಠಃ

ಪ್ರ । ದ್ಯಾವಾ । ಯಜ್ಞೈಃ । ಪೃಥಿವೀ ಇತಿ । ಋತಽವೃಧಾ । ಮಹೀ ಇತಿ । ಸ್ತುಷೇ । ವಿದಥೇಷು । ಪ್ರಽಚೇತಸಾ ।

ದೇವೇಭಿಃ । ಯೇ ಇತಿ । ದೇವಪುತ್ರೇ ಇತಿ ದೇವಽಪುತ್ರೇ । ಸುಽದಂಸಸಾ । ಇತ್ಥಾ । ಧಿಯಾ । ವಾರ್ಯಾಣಿ । ಪ್ರಽಭೂಷತಃ ॥ ೧ ॥

ಸಾಯಣಭಾಷ್ಯಂ

ದ್ಯಾವಾ ಪೃಥಿವೀ ದ್ಯಾವಾಪೃಥಿವ್ಯೌ ॥ ದಿವೋ ದ್ಯಾವೇತಿ ದ್ಯಾವಾದೇಶ ಆದ್ಯುದಾತ್ತಃ । ಪೃಥಿವೀಶಬ್ದೋ ಙೀಷಂತೋಽಂತೋದಾತ್ತಃ । ದೇವತಾದ್ವಂದ್ವೇ ಚೇತ್ಯುಭಯಪದಪ್ರಕೃತಿಸ್ವರತ್ವಂ । ಸಮಾಸಮಧ್ಯೇ ಪದಾಂತರಪಾಠಶ್ಛಾಂದಸಃ ॥ ಅಹಂ ಯಜಮಾನೋ ಯಜ್ಞೈರ್ಯಾಗೈಸ್ತತ್ಪ್ರದಾನೈರ್ನಿಮಿತ್ತಭೂತೈರ್ಹವಿಷ್ಪ್ರದಾನಾರ್ಥಂ ಪ್ರ ಸ್ತುಷೇ । ಪ್ರಕರ್ಷೇಣ ಸ್ತೌಮಿ ॥ ಪುರುಷವ್ಯತ್ಯಯಃ । ಕೀದೃಶೌ ತೇ । ಋತಾವೃಧಾ ಯಜ್ಞಸ್ಯ ವರ್ಧಯಿತ್ರ್ಯೌ ಮಹೀ ಮಹತ್ಯೌ ವಿದಥೇಷು ಯಾಗೇಷು ಪ್ರಚೇತಸಾ ಪ್ರಕರ್ಷೇಣಾಸ್ಮಾಂಶ್ಚೇತಯಿತ್ರ್ಯೌ ಅಸ್ಮಾಭಿಶ್ಚೇತಯಿತವ್ಯೇ ವಾ । ಈದೃಶ್ಯೌ ಸ್ತುಷೇ । ಅನಯೋಃ ಕೋಽತಿಶಯ ಇತಿ ಉಚ್ಯತೇ । ಯೇ ದ್ಯಾವಾಪೃಥಿವ್ಯೌ ದೇವೇಭಿರ್ಯಜಮಾನೈರ್ದೇವಪುತ್ರೇ ದೇವಾ ಯಜಮಾನಾಃ ಪುತ್ರಸ್ಥಾನೀಯಾಃ ಶುಶ್ರೂಷಕಾ ಯಯೋಸ್ತೇ ತಾದೃಶ್ಯೌ । ಯದ್ವಾ । ದೇವೇಭಿರ್ವಿಶಿಷ್ಟೇ ಸುದಂಸಸಾ । ದಂಸ ಇತಿ ಕರ್ಮನಾಮ । ಶೋಭನಕರ್ಮೋಪೇತೇ ಇತ್ಥಾ ಸತ್ಯಂ । ಇತ್ಥೇತಿ ಸತ್ಯನಾಮ ಸತ್ರೇತ್ಥೇತಿ ತನ್ನಾಮಸು ಪಾಠಾತ್ । ಸತ್ಯಂ ಧಿಯಾಸ್ಮದನುಗ್ರಹಬುದ್ಧ್ಯಾ ವಾರ್ಯಾಣಿ ವರಣೀಯಾನಿ ಧನಾನ್ಯಸ್ಮಭ್ಯಂ ಪ್ರಭೂಷತಃ ಅಲಂಕುರುತಃ । ದತ್ತ ಇತ್ಯರ್ಥಃ । ಯದ್ವಾ । ವಾರ್ಯಾಣಿ ಹವೀಂಷಿ ಧಿಯಾ ಕರ್ಮಣಾ ನಿಮಿತ್ತೇನ ಕರ್ಮಸಮಾಪ್ತ್ಯರ್ಥಂ ಪ್ರಭೂಷತಃ ಪ್ರಕರ್ಷೇಣ ಸ್ವೀಕುರುತಃ ॥

ಪ್ರತಿಪದಾರ್ಥ

ಋತಾವೃಧಾ— ಯಜ್ಞವನ್ನು ವೃದ್ಧಿಯಾಗುವಂತೆ ಮಾಡುವವರೂ । ಮಹೀ— ಮಹತ್ತಾದ ರೂಪವುಳ್ಳವರೂ । ವಿದಥೇಷು— ಯಜ್ಞಗಳಲ್ಲಿ । ಪ್ರಚೇತಸಾ— (ನಮಗೆ) ಚೈತನ್ಯದಾತ್ರಿಯರಾಗಿರುವವರೂ ಅಥವಾ (ನಮ್ಮಿಂದ) ಶ್ರದ್ಧೆಯಿಂದ ಪೂಜಿಸಲ್ಪಡತಕ್ಕವರೂ ಆದ । ದ್ಯಾವಾಪೃಥಿವೀ— ದ್ಯಾವಾಪೃಥಿವೀ ದೇವತೆಗಳನ್ನು । ಯಜ್ಞೈಃ— ಯಜ್ಞನಿಮಿತ್ತಕಗಳಾದ ಹವಿರಾದಿಗಳಿಂದ ಅಥವಾ ಹವಿರಾದಿಗಳನ್ನು ಅರ್ಪಿಸುವುದಕ್ಕಾಗಿ । ಸ್ತುಷೇ— ಸ್ತುತಿಸುತ್ತೇನೆ । ದೇವಪುತ್ರೇ— ಯಜಮಾನರೇ ಪುತ್ರರಾಗಿ ಉಳ್ಳ ಅಥವಾ ದೇವತೆಗಳೇ ಪುತ್ರರಾಗಿ ಉಳ್ಳ । ಯೇ— ಯಾವ ದ್ಯಾವಾಪೃಥಿವಿಗಳು । ದೇವೇಭಿಃ— ಯಜಮಾನರಿಂದ ನೆರವೇರಿಸಲ್ಪಟ್ಟ । ಸುದಂಸಸಾ— ಶ್ರೇಷ್ಠವಾದ ಕರ್ಮಗಳಿಂದ ಕೂಡಿದವರಾಗಿ । ಇತ್ಥಾ— ಖಂಡಿತವಾಗಿಯೂ । ಧಿಯಾ— ಅನುಗ್ರಹಾತ್ಮಕವಾದ ಬುದ್ಧಿಯಿಂದ । ವಾರ್ಯಾಣಿ— ಅಪೇಕ್ಷಿತಗಳಾದ ಹವಿಸ್ಸುಗಳನ್ನು । ಪ್ರಭೂಷತಃ— ಅಲಂಕರಿಸುತ್ತಾರೆ ಎಂದರೆ ಸ್ವೀಕರಿಸುತ್ತಾರೆ । [ ಅಥವಾ ವಾರ್ಯಾಣಿ— ಯಜಮಾನರಿಂದ ಅಪೇಕ್ಷಿತಗಳಾದ ಇಷ್ಟಾರ್ಥಗಳನ್ನು । ಪ್ರಭೂಷತಃ— ಒಪಗಿಸುತ್ತಾರೆ ॥ ]

ಭಾವಾರ್ಥ

ಯಜ್ಞವನ್ನು ವೃದ್ಧಿಯಾಗುವಂತೆ ಮಾಡುವವರೂ, ಮಹತ್ತಾದ ರೂಪವುಳ್ಳವರೂ ಯಜ್ಞಗಳಲ್ಲಿ ಸ್ತುತಿಸಲ್ಪಡುವವರೂ ಆದ ದ್ಯಾವಾಪೃಥಿವಿಗಳನ್ನು ಹವಿರಾದ್ಯರ್ಪಣೆಗಳಿಗಾಗಿ ಸ್ತುತಿಸಿ ಪ್ರಾರ್ಥಿಸುತ್ತೇನೆ. ದೇವತೆಗಳೇ ಪುತ್ರರಾಗಿ ಉಳ್ಳ ದ್ಯಾವಾಪೃಥಿವಿಗಳು ಯಜಮಾನರಿಂದ ನೆರವೇರಿಸಲ್ಪಟ್ಟ ಶ್ರೇಷ್ಠವಾದ ಕರ್ಮಗಳಿಂದ ಕೂಡಿದವರಾಗಿ ತಮ್ಮ ಅನುಗ್ರಹಾತ್ಮಕವಾದ ಬುದ್ಧಿಯಿಂದ ಯಜಮಾನರ ಇಷ್ಟಾರ್ಥಗಳನ್ನು ನೆರವೇರಿಸುತ್ತಾರೆ.

English Tranlation

I glorify with sacred rites the mighty Heaven and Earth, the augmenters of sacrifice, who (are to be contemplated) with devotion at holy ceremonies; those two, who, cherishing their worshippers as children, are venerated by the devout, and therefore with favour bestow (upon us) desirable blessings.

ವಿಶೇಷವಿಷಯಗಳು

ದ್ಯಾವಾಪೃಥಿವೀ—' ಬಳಿತ್ಥಾ ಪರ್ವತಾನಾಂ ' ಎಂಬ ಋಕ್ಕಿನಿಂದ ಆರಂಭವಾಗುವುದೂ ಪೃಥ್ವೀದೇವತಾಕವಾದುದೂ ಆದ ಸೂಕ್ತವೊಂದನ್ನು (ಋ. ಸಂ. ೫–೮೪) ಬಿಟ್ಟು ಕೇವಲ ಪೃಥ್ವೀದೇವತಾಕವಾದುದಾಗಲಿ ಅಥವಾ ದ್ಯುದೇವತಾಕವಾದುದಾಗಲಿ ಯಾವ ಸೂಕ್ತವೂ ಇಲ್ಲ. ದ್ಯಾವಾಪೃಥಿವಿಗಳು ಉಳಿದ ಕಡೆಗಳಲ್ಲಿ ಒಟ್ಟಿಗೇ ನಿರ್ದೇಶಿಸಲ್ಪಟ್ಟಿರುವರು. ಹೀಗೆ ಒಟ್ಟಿಗೆ ನಿರ್ದೇಶಿಸಲ್ಪಟ್ಟಿರುವಾಗ ಇಬ್ಬರಲ್ಲಿ ಯಾರಿಗೆ ಹೆಚ್ಚು ಪ್ರಾಶಸ್ತ್ಯವಿರುವುದು ಎಂಬ ವಿಷಯದಲ್ಲಿ ಆ ಶಂಕೆಯನ್ನು ನಿರೀಕ್ಷಿಸಿ ನಿರುಕ್ತಕಾರರು ಋಕ್ಸಂಹಿತೆಯ ಆಧಾರದಮೇಲೆ ಈರೀತಿ ವಿವರಿಸಿದ್ದಾರೆ.

ದ್ಯಾವಾಪೃಥಿವೀನಾಮಧೇಯಾನ್ಯುತ್ತರಾಣಿ ಚತುರ್ವಿಂಶತಿಃ । ಸ್ವಧೇ, ಪುರಂಧೀ, ಧಿಷಣೇ ರೋದಸೀ ಇತ್ಯಾದಿ ೨೪ ದ್ಯಾವಾಪೃಥಿವಿಗಳ ನಾಮಗಳು. (ನಿ. ೩–೩೦) ತಯೋರೇಷಾ ಭವತಿ ।

ಕತರಾ ಪೂರ್ವಾ ಕತರಾಪರಾಯೋಃ ಕಥಾ ಜಾತೇ ಕವಯಃ ಕೋ ವಿವೇದ ।
ವಿಶ್ವಂ ತ್ಮನಾ ಬಿಭೃತೋ ಯದ್ಧ ನಾಮ ವಿ ವರ್ತೇತೇ ಅಹನೀ ಚಕ್ರಿಯೇವ ॥
(ಋ. ಸಂ. ೧–೧೮೫.೧)

ಕತರಾ ಪೂರ್ವಾ ಕತರಾಪರಾ । ಏನಯೋಃ ಕಥಂ ಜಾತೇ ಕವಯಃ ಕ ಏನೇ ವಿಜಾನಾತಿ । ಸರ್ವಮಾತ್ಮನಾ ಬಿಭೃತೋ ಯದ್ಧೈನಯೋಃ ಕರ್ಮ ವಿವರ್ತೇತೇ ಚೈನಯೋರಹನೀ ಅಹೋರಾತ್ರೇ ಚಕ್ರಿಯೇವ ಚಕ್ರಯುಕ್ತೇ ಇವೇತಿ ದ್ಯಾವಾಪೃಥಿವ್ಯೋರ್ಮಹಿಮಾನಮಾಚಷ್ಟ ಆಚಷ್ಟೇ ।
(ನಿ. ೩–೨೨)

ಈ ಎರಡು ದೇವತೆಗಳಲ್ಲಿ ಪೂರ್ವಭಾವಿಯಾದ ದೇವತೆ ಯಾರು ? ಇವರ ಉತ್ಪತ್ತಿಯ ಕ್ರಮವೇನು ? ಎಲೈ ಋಷಿಗಳೇ, ನಿಮ್ಮಲ್ಲಿ ಯಾರಿಗೆ ಈ ರಹಸ್ಯವು ಗೊತ್ತಿದೆ ? ವಿಶ್ವದ ಸಕಲಭೂತಗಳಿಗೂ ಇವರೇ ಆಧಾರವು ರಥದ

ಎರಡು ಚಕ್ರಗಳಂತೆ ಇವೆರಡೂ ಅನುಸ್ಯೂತವಾಗಿ ಸ್ತುತಿಸಿದೆಯೆಂಬುದಾಗಿ ಋಕ್ಸಂಹಿತೆಯನ್ನುದಹರಿಸಿ ವಿವರಿಸಿದ್ದಾರೆ. ಈ ಋಕ್ಕನ್ನೇ ಐತರೇಯ ಬ್ರಾಹ್ಮಣದಲ್ಲೂ ಉದಹರಿಸಿದೆ. ಈ ದೇವತೆಗಳ ಉತ್ಪತ್ತಿಯ ವಿಷಯದಲ್ಲಿ ಒಂದೊಂದು ಸಲ ಆಶ್ಚರ್ಯವೂ ಕೆಲವು ಸಲ ಅನಿಶ್ಚಿತವಾದ ಊಹೆಯೂ ಸ್ವಾಭಾವಿಕವಾಗಿದೆ.

ಕಿಂ ಸ್ವಿದ್ವನಂ ಕ ಉ ಸ ವೃಕ್ಷ ಆಸ ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ ।
ಸಂತಸ್ಥಾನೇ ಅಜರೇ ಇತಊತೀ ಅಹಾನಿ ಪೂರ್ವೀರುಷಸೋ ಜರಂತೆ ॥

(ಋ. ಸಂ. ೧೧ ೩೧-೭)

ಅಸಂಖ್ಯಾಕವಾದ ಅಹಸ್ಸುಗಳೂ ಉಷಸ್ಸುಗಳೂ ಸಹ ಉರುಳಿಹೋಗುತ್ತಿರುವಾಗ ನಾಶರಹಿತವಾಗಿಯೂ ಅವಿಚ್ಛಿನ್ನ ವಾಗಿಯೂ ಸ್ಥಿರವಾಗಿಯೂ ನಿಂತಿರತಕ್ಕ ಈ ದ್ಯಾವಾಪೃಥಿವಿಗಳನ್ನು ಯಾವ ವನದ ಯಾವ ವೃಕ್ಷಗಳಿಂದ ನಿರ್ಮಿಸಿದೆ ಎಂದು ಋಷಿಯು ತನ್ನ ಪ್ರಶಂಸಾಪೂರ್ವಕವಾದ ಆಶ್ಚರ್ಯವನ್ನು ವ್ಯಕ್ತಪಡಿಸಿದ್ದಾನೆ.

'ಕಿಂ ಸ್ವಿದ್ವನಂ' ಎಂಬ ಋಕ್ಕಿನಲ್ಲಿ (ಋ. ಸಂ. ೧೦-೩೧-೭) ವ್ಯಕ್ತಪಡಿಸಿರುವ ಜಿಜ್ಞಾಸೆಯನ್ನು ಇನ್ನೂ ಅನೇಕಕಡೆಗಳಲ್ಲಿ ಸೂಚಿಸಿದೆ. ಕೆಲವೆಡೆಗಳಲ್ಲಿ ತಕ್ಕ ಉತ್ತರವನ್ನೂ ನೋಡಬಹುದು. ಉದಾಹರಣೆಗೆ

ಕಿಂ ಸ್ವಿದಾಸೀದಧಿಷ್ಠಾನಮಾರಂಭಣಂ ಕತಮತ್ಸ್ವಿತ್ಕಥಾಸೀತ್ ।
ಯತೋ ಭೂಮಿಂ ಜನಯನ್ ವಿಶ್ವಕರ್ಮಾ ವಿ ದ್ಯಾಮೌರ್ಣೋನ್ಮಹಿನಾ ವಿಶ್ವಚಕ್ಷಾಃ ॥

(ಋ. ಸಂ. ೧೦-೮೧-೨)

ಪೃಥಿವ್ಯಯನ್ನು ಸೃಷ್ಟಿಸಿ ಅಂತರಿಕ್ಷವನ್ನು ಹರಡುವಂತೆ ಮಾಡಿದ ವಿಶ್ವಚಕ್ಷುಸ್ಸಳ್ಳ ವಿಶ್ವಕರ್ಮನಿಗೆ ಇವುಗಳ ನಿರ್ಮಾಣಕ್ಕೆ ಇದ್ದ ಆಧಾರವೇನು ಎಂದು ಪ್ರಶ್ನಿಸಿದೆ. ಇದಕ್ಕೆ ಉತ್ತರರೂಪದಲ್ಲಿ,

ಕಿಗ್‌ಸ್ವಿದ್ವನಂ ಕ ಉ ಸ ವೃಕ್ಷ ಆಸೀತ್ । ಯತೋ ದ್ಯಾವಾ ಪೃಥಿವೀ ನಿಷ್ಟತಕ್ಷುಃ । ಮನೀಷಿಣೋ ಮನಸಾ ಪೃಚ್ಛತೇದು ತತ್ । ಯದಧ್ಯತಿಷ್ಠದ್ಭುವನಾನಿ ಧಾರಯನ್ । ಬ್ರಹ್ಮ ವನಂ ಬ್ರಹ್ಮ ಸ ವೃಕ್ಷ ಆಸೀತ್ । ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ । ಮನಿಷಿಣೋ ಮನಸಾ ವಿಬ್ರವೀಮಿ ವಃ । ಬ್ರಹ್ಮಾಧ್ಯತಿಷ್ಠದ್ಭುವನಾನಿ ಧಾರಯನ್ ॥

(ತೈ. ಬ್ರಾ. ೨-೮-೯-೬, ೭)

ಈ ದ್ಯಾವಾಪೃಥಿವಿಗಳ ಸೃಷ್ಟಿಗೆ ಬ್ರಹ್ಮನೇ (ನಾಶವಿಲ್ಲದ ಬ್ರಹ್ಮವೆಂಬ ವಸ್ತುವೇ) ವನವು ಮತ್ತು ಬ್ರಹ್ಮನೇ ವೃಕ್ಷವು. ಆದರಿಂದಲೇ ಇವುಗಳ ನಿರ್ಮಾಣವು ಎಂದು ತೈತ್ತಿರೀಯ ಬ್ರಾಹ್ಮಣದಲ್ಲಿ ಹೇಳಿದೆ.

ಇಯಂ ಪೃಥ್ವೀ ಭೂತಸ್ಯ ಪ್ರಥಮಜಾ ।

(ಶ. ಬ್ರಾ. ೧೪-೧-೨-೧೧)

ಈ ಪೃಥ್ವಿಯು ಸಕಲ ಭೂತಗಳಿಗಿಂತಲೂ ಪ್ರಥಮದಲ್ಲಿ ಉತ್ಪನ್ನವಾದುದೆಂದು ಶತಪಥಬ್ರಾಹ್ಮಣದ ವಿವರಣೆಯಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ಮಹೀ, ಋತಾವೃಧಾ, ಇತ್ಯಾದಿವಿಶೇಷಣಗಳಿಂದ ದ್ಯಾವಾಪೃಥಿವಿಗಳ ಮಹತ್ತ್ವವನ್ನು ಸ್ತುತಿಸಿದೆ.

ಋತಾವೃಧಾ—ಋತಸ್ಯ ಯಜ್ಞಸ್ಯ ಸತ್ಯಸ್ಯ ವಾ ವರ್ಧಯಿತ್ರ್ಯೌ । ಋತಶಬ್ದಕ್ಕೆ ಯಜ್ಞ, ಸತ್ಯ ಎಂಬ ಅರ್ಥಗಳಿರುವುದರಿಂದಲೂ ದ್ಯಾವಾಪೃಥಿವಿಗಳ ಸಹಾಯದಿಂದಲೇ ಯಜ್ಞವು ನೆರವೇರುವುದೂ ಸತ್ಯವು ಸ್ಥಾಪಿತವಾಗುವುದೂ ಆಗಬೇಕಾಗಿರುವುದರಿಂದಲೂ ಋತಾವೃಧಾ ಮತ್ತು ಋತಾವರೀ ಎಂಬ ವಿಶೇಷಣಗಳು ದ್ಯಾವಾಪೃಥಿವಿಗಳ ಪರವಾಗಿವೆ.

ಮಹೀ—ಮಹತ್ಯೌ । ಮಹತ್ತಾದ ರೂಪವುಳ್ಳವರು ಪ್ರಥನಾತ್ಪೃಥಿವೀತ್ಯಾಹುಃ ಕ ಏನಾಮಪ್ರಥಯಿಷ್ಯತ್ ಕಿಮಾಧಾರಶ್ಚೇತ್ಯಥ ವೈ ದರ್ಶನೇನ ಪೃಥುರಪ್ರಥಿತಾ ಚೇದಪ್ಯನ್ಯೈಃ (ನಿ. ೧-೧೪) ವಿಸ್ತೃತವಾಗಿ ಹರಡಿರುವುದರಿಂದ ಪೃಥಿವಿಯೆಂಬ ಹೆಸರು. ಅದನ್ನು ವಿಸ್ತೃತವಾಗಿ ಹರಡಿದವರು ಯಾರೆಂದರೆ ಅದಕ್ಕೆ ಉತ್ತರವನ್ನು ಹೇಳುವುದು ಶ್ರಮ. ಒಂದುವೇಳೆ ಯಾರು ಅದನ್ನು ಹರಡದೇ ಇದ್ದಿದ್ದರೂ ಸಹ ಅದು ತಾನಾಗಿಯೇ ಹರಡಿರುವುದು.

> ಆಪೋ ವಾ ಇದಮಗ್ರೇ ಸಲಿಲಮಾಸೀತ್ತಸ್ಮಿನ್ಪ್ರಜಾಪತಿರ್ವಾಯುರ್ಭೂತ್ವಾಚರತ್ಸ ಇಮಾಮಪಶ್ಯತ್ತಾಂ ವರಾಹೋ ಭೂತ್ವಾಹರತ್ತಾಂ ವಿಶ್ವಕರ್ಮಾಭೂತ್ವಾ ವ್ಯಮಾರ್ಟ್ಸಾ ಪ್ರಥತ ಸಾ ಪೃಥಿವ್ಯಭವತ್ತತ್ಪೃಥಿವ್ಯೈ ಪೃಥಿವಿತ್ವಂ ।
> (ತೈ. ಸಂ. ೭-೧-೫-೧)

ಎಂಬಲ್ಲಿಯೂ ಇದೇ ಗುಣವನ್ನು ಹೇಳಿ ಪೃಥಿವಿಯ ಮಹತ್ತ್ವವನ್ನು ತಿಳಿಸಿದೆ.

ವಿದಥೇಷು—ಯಜ್ಞೇಷು । ಯಜ್ಞಗಳಲ್ಲಿ ಎಂದರೆ ಯಜ್ಞಸ್ಥಾನಗಳಲ್ಲಿ ಎಂದರ್ಥ. ವೇದಯಿತ್ರುಸ್ತೋತ್ರೇಷು ನಿಮಿತ್ತಭೂತೇಷು ಎಂಬುದರಿಂದ ವಿದಥಶಬ್ದದ ನಿರ್ವಚನವನ್ನು ತೋರಿಸಿದೆ. ಈ ಪದವು ಯಜ್ಞಃ ವೇನಃ ಇತ್ಯಾದಿ ಯಜ್ಞನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೭) ಮತ್ತು,

> ಹೋತಾ ದೇವೋ ಅಮರ್ತ್ಯಃ ಪುರಸ್ತಾದೇತಿ ಮಾಯಯಾ । ವಿದಥಾನಿ ಪ್ರಚೋದಯನ್ ॥
> (ಋ. ಸಂ. ೩-೨೭-೭)

ಎಂಬ ಋಕ್ಕನ್ನುದಹರಿಸಿ ನಿರುಕ್ತಕಾರರು ಅಲ್ಲಿ ವಿದಥಶಬ್ದವು ಜ್ಞಾನಾರ್ಥಕವಾದ ವಿದ್ ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ತೋರಿಸಿದ್ದಾರೆ. ಈ ಪದಕ್ಕೆ ನಿಷ್ಕೃಷ್ಟವಾಗಿ ಅರ್ಥವನ್ನು ಹೇಳಲು ಪ್ರಯತ್ನಿಸಿ ತಮ್ಮತಮ್ಮ ಅಭಿಪ್ರಾಯಗಳನ್ನು ಹೇಳಿರುವ ಪಂಡಿತರ ಮತಗಳನ್ನು ಹಿಂದಿನ ಭಾಗದಲ್ಲಿ (ಎಂದರೆ ಋಗ್ವೇದ ಸಂಹಿತಾ. ಭಾಗ II. ಪೇಜು 321 ರಿಂದ 325) ತಿಳಿಸಿದೆ. Max Muller ಎಂಬ ಪಂಡಿತನು ಈ ಪದಕ್ಕೆ ಯಜ್ಞಸಭೆಯೆಂದೂ, Oldenberg ಎಂಬುವನು ಶಾಸ್ತ್ರವಿಹಿತವಾದ ಯಜ್ಞವೇ ವಿದಥಶಬ್ದಾರ್ಥವೆಂದೂ, Bloomfield ಎಂಬುವನು ಗೃಹವೆಂದೂ ಅರ್ಥಮಾಡಿರುವುದನ್ನು ಅವರ ವಾಕ್ಯಗಳನ್ನೇ ಉದಹರಿಸಿ ಹಿಂದೆ ತಿಳಿಸಿದೆ. ಈ ಪದಕ್ಕೆ ಗೃಹ, ಯಜ್ಞ, ಸಭಾ, ಎಂಬ ಬೇರೆಬೇರೆ ಅರ್ಥಗಳೆಲ್ಲವೂ ಸಾಧ್ಯವಾಗುವುದರಿಂದ ಎಲ್ಲವೂ ಸಂದರ್ಭಾನುಸಾರವಾಗಿ ಹೊಂದಿಕೊಳ್ಳುತ್ತವೆ. ಮತ್ತು ಸಾಯಣಭಾಷ್ಯದಲ್ಲಿಯೇ ಈ ಎಲ್ಲಾ ಅರ್ಥಗಳಿವೆಯೆಂದೂ ಸಹ ಹಿಂದೆ ಉದಾಹರಣೆಗಳೊಡನೆ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ವಿದಥೇಷು ಯಾಗೇಷು—ಯಾಗಗಳಲ್ಲಿ ಎಂದರ್ಥಮಾಡಿದೆ.

ದೇವಪುತ್ರೇ—ದೇವಾಃ ಸರ್ವೇ ಪುತ್ರಸ್ಥಾನೀಯಾ ಯಯೋಸ್ತೇ ದ್ಯಾವಾಪೃಥಿವ್ಯೌ । ಸಕಲ ದೇವತೆಗಳನ್ನೂ ಪುತ್ರರನ್ನಾಗಿ ಪಡೆದಿರತಕ್ಕ ದ್ಯಾವಾಪೃಥಿವಿಗಳು.

ಇಮೌ ವೈ ಲೋಕೌ ಸಹಾಸ್ತಾಂ ತೌ ವ್ಯೈತಾಂ ನಾವರ್ಷನ್ನ ಸಮತಪತ್ತೇ ಪಂಚಜನಾ ನ ಸಮ-
ಜಾನತ ತೌ ದೇವಾಃ ಸಮನಯಂಸ್ತೌ ಸಂಯಂತಾವೇತಂ ದೇವವಿವಾಹಂ ವ್ಯವಹೇತಾಂ ।
(ಐ. ಬ್ರಾ. ೪-೨೭)

ಎಂಬ ವಾಕ್ಯದಲ್ಲಿ ವಿವರಿಸಿರುವ ದ್ಯಾವಾಪೃಥಿವಿಗಳ ದಾಂಪತ್ಯಸಂಬಂಧವನ್ನೂ, ಸಮಸ್ತ ಲೋಕಗಳ ವ್ಯವಹಾರಕ್ಕೂ ಸಹ ಇವರೇ ಆಧಾರಭೂತರಾಗಿರುವರೆಂದು ತಿಳಿಸಿರುವ ಅಂಶವನ್ನೂ ಸಹ ಹಿಂದೆ ತಿಳಿಸಿದೆ.

ಯ ಇಮೇ ದ್ಯಾವಾಪೃಥಿವೀ ಜನಿತ್ರೀ ರೂಪೈರಪಿಂಶದ್ಭುವನಾನಿ ವಿಶ್ವಾ ।
ತಮದ್ಯ ಹೋತರಿಷಿತೋ ಯಜೀಯಾನ್ ದೇವಂ ತ್ವಷ್ಟಾರಮಿಹ ಯಕ್ಷಿ ವಿದ್ವಾನ್ ॥
(ಋ. ಸಂ. ೧೦-೧೧೦-೯)

ಎಂಬ ಋಕ್ಕಿನಲ್ಲಿ ಜನಿತ್ರೀ ಎಂಬ ಪದಕ್ಕೆ ವಿಶ್ವಸ್ಯ ಜನಯಿತ್ರ್ಯೌ । ದೇವಮಾನವಾದಿಸಕಲಭೂತಗಳಿಗೂ ಜನಯಿತ್ರಿಯರೆಂದು ಹೇಳಿದೆ. ಮತ್ತು

ದೇವೀ ದೇವಸ್ಯ ರೋದಸೀ ಜನಿತ್ರೀ ಬೃಹಸ್ಪತಿಂ ವಾವೃಧತುರ್ಮಹಿತ್ವಾ ।
ದಕ್ಷಾಯ್ಯಾಯ ದಕ್ಷತಾ ಸಖಾಯಃ ಕರದ್ಬ್ರಹ್ಮಣೇ ಸುತರಾ ಸುಗಾಧಾ ॥
(ಋ. ಸಂ. ೭-೯೭-೮ )

ಎಂಬಲ್ಲಿ ತಮ್ಮ ಪುತ್ರನಾದ ಬೃಹಸ್ಪತಿಯನ್ನು ಪೋಷಿಸಿದರೆಂದೂ

ಯಂ ತ್ವಾ ದ್ಯಾವಾಪೃಥಿವೀ ಯಂ ತ್ವಾಪಸ್ತ್ವಷ್ಟಾ ಯಂ ತ್ವಾ ಸುಜನಿಮಾ ಜಜಾನ ।
ಪಂಥಾಮನು ಪ್ರವಿದ್ವಾನ್ಪಿತೃಯಾಣಂ ದ್ಯುಮದಗ್ನೇ ಸಮಿಧಾನೋ ವಿ ಭಾಹಿ ॥
(ಋ. ಸಂ. ೧೦-೨-೭)

ಎಂಬಲ್ಲಿ ಅಗ್ನಿಯ ಪಿತೃಗಳೆಂದೂ (ಋ. ಸಂ. ೧೦-೨-೭) ಕೆಲವು ಕಡೆ ಪ್ರತ್ಯೇಕವಾಗಿ ಅಗ್ನ್ಯಾದಿದೇವತೆಗಳ ಜನಯಿತ್ರಿಯರೆಂದೂ ಇನ್ನು ಕೆಲವೆಡೆಗಳಲ್ಲಿ ಸಕಲ ದೇವತೆಗಳಿಗೂ ಮಾತಾಪಿತೃಗಳೆಂದೂ ಹೇಳಿದೆ. ಆದುದರಿಂದ

ಉಪಹೂತೇ ದ್ಯಾವಾಪೃಥಿವೀ ಪೂರ್ವಜೇ ಋತಾವರೀ ದೇವೀ ದೇವಪುತ್ರೇ ಇತಿ ।
(ಶ. ಬ್ರಾ. ೧-೮-೧-೩೯)

ಇತ್ಯಾದಿ ವಾಕ್ಯಗಳಲ್ಲೆಲ್ಲಾ ನಿರ್ದೇಶಿಸಿರುವ ದ್ಯಾವ್ಯಾಪೃಥಿವಿಗಳಿಗೆ ದೇವಪುತ್ರೇ ಎಂಬ ವಿಶೇಷಣವು ರೂಢವಾಗಿದೆ.

ದೇವೇಭಿಃ—ದೇವೋ ದಾನಾದ್ವಾ ದೀಪನಾದ್ವಾ । ದಾನಿಯೂ, ಪ್ರಕಾಶಕನೂ ಆದುದರಿಂದ ಈ ವಿಶೇಷಣವು ಎಂದು ಹೇಳಿರುವುದರಿಂದಲೂ (ನಿ. ೭-೧೫) ಯಜಮಾನನು ಹವಿರಾದಿದಾನಗಳಿಂದ ದೇವತೆಗಳನ್ನು ಪ್ರಕಾಶಿಸುವಂತೆ ಮಾಡುವುದರಿಂದಲೂ ಸಹ ದೇವ ಶಬ್ದಕ್ಕೆ ಯಜ್ಞಕರ್ತನೆಂದೂ ಕೆಲವು ವೇಳೆ ಅರ್ಥಮಾಡಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಯಜಮಾನೈಃ ಎಂದೇ ಅರ್ಥಮಾಡಿದೆ.

ಸುದಂಸಸಾ—ದಂಸ ಇತಿ ಕರ್ಮನಾಮ । ಶೋಭನಕರ್ಮೋಪೇತೇ । ಶ್ರೇಷ್ಠವಾದ ಕರ್ಮಯುಕ್ತರಾದ ಎಂದು ದ್ಯಾವಾಪೃಥಿವಿಗಳಿಗೆ ವಿಶೇಷಣವಾಗಿದೆಯೆಂದು ತೋರಿಸಿದೆ.

ಇತ್ಥಾ—ಬಟ್ ಶ್ರತ್ ಇತ್ಯಾದಿ ಸತ್ಯನಾಮಗಳಲ್ಲಿ ಪಠಿತವಾಗಿದೆಯಾದ್ದರಿಂದ (ನಿ. ೩-೧೩) ಈ ಋಕ್ಕಿನಲ್ಲಿಯೂ ಸಹ ಸತ್ಯವಾಗಿಯೂ ಎಂದರ್ಥಮಾಡಿದೆ.

## ವ್ಯಾಕರಣಪ್ರಕ್ರಿಯಾ

**ದ್ಯಾವಾಪೃಥಿವೀ**—ದಿವೋ ದ್ಯಾವಾ (ಪಾ. ಸೂ. ೬-೩-೨೯) ಎಂಬುದರಿಂದ ದಿವ್ ಶಬ್ದಕ್ಕೆ ದ್ವಂದ್ವದಲ್ಲಿ ದ್ಯಾವಾದೇಶ. ಇದು ಆದ್ಯುದಾತ್ತವಾಗಿದೆ. ಪೃಥಿವೀಶಬ್ದವು ಙೀಷಂತವಾದುದರಿಂದ ಅಂತೋದಾತ್ತವಾಗುತ್ತದೆ. ದೇವತಾದ್ವಂದ್ವೇ ಚ (ಪಾ. ಸೂ. ೬-೨-೧೪೧) ಎಂಬುದರಿಂದ ಉಭಯಪದಪ್ರಕೃತಿಸ್ವರ ಬರುತ್ತದೆ. ಛಾಂದಸವಾಗಿ ಸಮಾಸಮಧ್ಯದಲ್ಲಿ ಬೇರೊಂದು ಪದಪಾಠ ಮಾಡಿರುತ್ತದೆ.

**ಋತಾವೃಧಾ**—ವೃಧು ವೃದ್ಧೌ ಧಾತು. ಕ್ವಿಪ್ ಪ್ರತ್ಯಯ. ಅನ್ಯೇಷಾಮಪಿ ದೃಶ್ಯತೇ (ಪಾ. ಸೂ. ೬-೩-೧೩೭)ಎಂಬುದರಿಂದ ಪೂರ್ವಪದಕ್ಕೆ ದೀರ್ಘ. ದ್ವಿವಚನ ಪರವಾದಾಗ ಸುಪಾಂ ಸುಲುಕ್ (ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. ಗತಿಕಾರಕೋಪಪದಾತ್ ಕೃತ್ (ಪಾ. ಸೂ. ೬-೨-೪೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಸ್ತುಷೇ**—ಷ್ಟುಞ್ ಸ್ತುತೌ ಧಾತು. ಲಟ್ ಉತ್ತಮಪುರುಷಏಕವಚನದಲ್ಲಿ ವ್ಯತ್ಯಯೋ ಬಹುಲಮ್ ಎಂಬುದರಿಂದ ಥಾಸ್ ಪ್ರತ್ಯಯ. ಥಾಸಃ ಸೇ (ಪಾ. ಸೂ. ೩-೪-೮೦) ಎಂಬುದರಿಂದ ಸೇ ಆದೇಶ. ಅದಕ್ಕೆ ಆದೇಶಪ್ರತ್ಯಯಯೋಃ ಎಂಬುದರಿಂದ ಷತ್ವ. ವಿಕರಣಕ್ಕೆ ಲುಕ್. ತಿಙಂತನಿಘಾತಸ್ವರ ಬರುತ್ತದೆ.

**ವಿದಥೇಷು**—ವಿದ ಜ್ಞಾನೇ ಧಾತು. ಇದಕ್ಕೆ ಔಣಾದಿಕ ಅಥ ಪ್ರತ್ಯಯ. ಕಿತ್ವಾತಿದೇಶದಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಪ್ರಚೇತಸಾ**—ಪ್ರಕೃಷ್ಟಂ ಚೇತಃ ಯಯೋಸ್ತೇ. ಬಹುವ್ರೀಹಿಸಮಾಸದಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಹಿಂದಿನಂತೆ ದ್ವಿವಚನಕ್ಕೆ ಆಕಾರಾದೇಶ.

**ದೇವಪುತ್ರೇ**—ದೇವಾಃ ಪುತ್ರಾಃ ಯಯೋಸ್ತೇ ದೇವಪುತ್ರೇ. ಹಿಂದಿನಂತೆ ಬಹುವ್ರೀಹಿಯಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಸುದಂಸಸಾ**—ಶೋಭನಂ ದಂಸಃ ಯಾಸ್ಯಾಃ ಸಾ. ನಞ್‌ಸುಭ್ಯಾಮ್ (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಪ್ರಭೂಷತಃ**—ಭೂಷ ಅಲಂಕಾರೇ ಧಾತು. ಲಟ್ ಪ್ರಥಮಪುರುಷದ್ವಿವಚನಾಂತರೂಪ. ಯದ್ವೃತ್ತಾನ್ನಿತ್ಯಮ್ ಎಂಬುದರಿಂದ ನಿಘಾತಪ್ರತಿಷೇಧ ಬರುವುದರಿಂದ ಧಾತುಸ್ವರ ಉಳಿಯುತ್ತದೆ. ತಿಙಿ ಚೋದಾತ್ತವತಿ (ಪಾ. ಸೂ. ೮-೧-೭೧) ಎಂಬುದರಿಂದ ಪ್ರ ಎಂಬುದಕ್ಕೆ ಅನುದಾತ್ತಸ್ವರ ಬರುತ್ತದೆ. ॥ ೧ ॥



ಸಂಹಿತಾಪಾಠಃ

ಉತ ಮನ್ಯೇ ಪಿತುರದ್ರುಹೋ ಮನೋ ಮಾತುರ್ಮಹಿ ಸ್ವತವಸ್ತದ್ಧವೀ-
ಮಭಿಃ ।
ಸುರೇತಸಾ ಪಿತರಾ ಭೂಮ ಚಕ್ರತುರುರು ಪ್ರಜಾಯಾ ಅಮೃತಂ ವರೀ-
ಮಭಿಃ ॥ ೨ ॥

ಪದಪಾಠಃ

ಉತ । ಮನ್ಯೇ । ಪಿತುಃ । ಅದ್ರುಹಃ । ಮನಃ । ಮಾತುಃ । ಮಹಿ । ಸ್ವತವಃ । ತತ್ । ಹವೀಮಽಭಿಃ ।
ಸುಽರೇತಸಾ । ಪಿತರಾ । ಭೂಮ । ಚಕ್ರತುಃ । ಉರು । ಪ್ರಽಜಾಯಾಃ । ಅಮೃತಂ । ವರೀಮಽಭಿಃ ॥೨॥

ಸಾಯಣಭಾಷ್ಯಂ

ಉತಾಪಿ ಚ ಪಿತುಃ ಪಿತೃಸ್ಥಾನೀಯಾಯಾಃ ಪಾತ್ರ್ಯಾ ಅದ್ರುಹೋಽದ್ರೋಗ್ಧುಃ । ನ ಹಿ ಕದಾ-ಚಿತ್ಪಿತಾ ಸ್ವಪುತ್ರಾದಯೇ ದ್ರುಹ್ಯತಿ । ತಾದೃಶ್ಯಾಃ ಪೃಥಿವ್ಯಾಃ ಸ್ವತವಃ ಸ್ವಾಯತ್ತಂ ಬಲಂ ಸ್ವಯಮೇವಾ-ಸ್ಮದನುಗ್ರಹಾಯ ತ್ವರಮಾಣಂ ಅತ ಏವ ಮಹಿ ಮಹತ್ ತತ್ತಾದೃಶಮನುಗ್ರಹಯುಕ್ತಂ ಮನಶ್ಚಿತ್ತಂ ಹವೀಮಭಿರ್ಹವನೈರಾಹ್ವಾನೈರ್ಮನ್ಯೇ । ಜಾನಾಮಿ । ಪ್ರಸಾದಯಾಮೀತ್ಯರ್ಥಃ । ಯದ್ವಾ । ತತ್ತಾದೃಶ-ಮುಕ್ತಲಕ್ಷಣಂ ಮನೋ ಹವೀಮಭಿರ್ಹವನೈರ್ಮಹಿ ಮನ್ಯೇ । ಅತಿಮಹತ್ಪ್ರವೃದ್ಧಂ ಮನ್ಯೇ । ತಥಾ ಮಾತುಃ ಸರ್ವಸ್ಯೋತ್ಪಾದಯಿತುರಂತರಿಕ್ಷಸ್ಯ ದ್ಯುಲೋಕಸ್ಯ । ಮಾತಾಂತರಿಕ್ಷಂ ನಿರ್ಮೀಯಂತೇಽ-ಸ್ಮಿನ್ಭೂತಾನಿ । ನಿ. ೨-೮ । ಇತಿ ನಿರುಕ್ತಂ । ಯದ್ವಾ । ಪಿತುರ್ದ್ಯುಲೋಕಸ್ಯ ಮಾತುರ್ಭೂಮ್ಯಾಃ । ದ್ಯೌರ್ನಃ ಪಿತಾ ಪೃಥಿವೀ ಮಾತಾ । ಋ. ೧-೯೧-೬ । ಇತಿ ಶ್ರುತೇಃ । ತತ್ತಾದೃಶಮುಕ್ತಲಕ್ಷಣಂ ಮನೋ ಮನ್ಯೇ । ದ್ಯಾವಾಪೃಥಿವ್ಯೋರ್ಮನೋಽಸ್ಮದಾಹ್ವಾನೈಃ ಪ್ರೀಣಯಾಮೀತ್ಯರ್ಥಃ । ಕಿಂಚ ಪಿತರಾ ಮಾತಾ ಚ ಪಿತಾ ಚ ಪಿತರೌ ದ್ಯಾವಾಪೃಥಿವ್ಯೌ ಸುರೇತಸಾ ಶೋಭನಸಾಮರ್ಥ್ಯೇನ ಪ್ರಜಾಯಾ ಯಜಮಾನಾದಿ-ರೂಪಾಯಾ ವರೀಮಭಿರ್ವರಿಷ್ಠೈ ರಕ್ಷಣವಿಶೇಷೈರ್ಭೂಮ ಬಹುತರಮುರು ವಿಸ್ತೀರ್ಣಮಮೃತಮಮ-ರಣಭೂತಮಭಿಲಷಿತಂ ಚಕ್ರತುಃ । ಕುರುತಃ ॥

। ಪ್ರತಿಪದಾರ್ಥ ।

ಉತ—ಮತ್ತು । ಅದ್ರುಹಃ—ಯಾವಾಗಲೂ ಕೇಡಕನ್ನು ಮಾಡದಿರುವ । ಪಿತುಃ—ಪಿತೃಸ್ಥಾನದಲ್ಲಿರುವ ಪೃಥ್ವಿಯ । ಸ್ವತವಃ—ಸ್ವಾಯತ್ತವಾದ ಬಲವುಳ್ಳ । ಮಹಿ—(ಅವ್ವರಿಂದಲೇ) ಮಹತ್ತಾದ । ತತ್—ಅನುಗ್ರಹ ದಿಂದ ಕೂಡಿ ಪ್ರಸಿದ್ಧವಾದ । ಮನಃ – ಮನಸ್ಸನ್ನು । (ಹಾಗೆಯೇ) ಮಾತುಃ—ಮಾತೃರೂಪಿಯಾದ ದ್ಯುಲೋಕಾಧಿ

ದೇವತೆಯ । (ಮನಃ—ಮನಸ್ಸನ್ನು) । ಹವೀಮಭಿಃ—ಪ್ರಾರ್ಥನಾಪೂರ್ವಕವಾದ ಸ್ತೋತ್ರಗಳಿಂದ । ಮನ್ಯೇ—ತಿಳಿಯುತ್ತೇನೆ ಎಂದರೆ ತೃಪ್ತವಾದುದನ್ನಾಗಿ ಮಾಡುತ್ತೇನೆ । [ ಅಥವಾ—ಅದ್ರುಹಃ—ಯಾವಾಗಲೂ ಕೆಡಕನ್ನು ಮಾಡದಿರುವ । ಪಿತುಃ—ಪಿತೃರೂಪಿಯಾದ ದ್ಯುಲೋಕಾಧಿ ದೇವತೆಯ । ಸ್ವತವಃ—ಸ್ವಾಯತ್ತವಾದ ಬಲವುಳ್ಳ । ಮಹಿ—(ಅದ್ದರಿಂದಲೇ) ಮಹತ್ತಾದ । ತತ್—ಅನುಗ್ರಹದಿಂದ ಕೂಡಿ ಪ್ರಸಿದ್ಧವಾದ । ಮನಃ—ಮನಸ್ಸನ್ನು । (ಹಾಗೆಯೇ) ಮಾತುಃ—ಮಾತೃರೂಪಿಯಾದ ಪೃಥ್ವಿಯ । ಮನಃ—(ಮೇಲೆ ಹೇಳಿದ ಗುಣಗಳಿಂದ ಕೂಡಿದ) ಮನಸ್ಸನ್ನು । ಹವೀಮಭಿಃ—ಪ್ರಾರ್ಥನಾಪೂರ್ವಕವಾದ ಸ್ತೋತ್ರಗಳಿಂದ । ಮನ್ಯೇ—ತಿಳಿಯುತ್ತೇನೆ ಎಂದರೆ ತೃಪ್ತಿಗೊಳಿಸುತ್ತೇನೆ ] ಪಿತರಾ—ಜಗತ್ತಿಗೆಲ್ಲಾ ಮಾತಾಪಿತೃಗಳಾದ ದ್ಯಾವಾಪೃಥಿವಿಗಳು । ಸುರೇತಸಾ—ಶ್ರೇಷ್ಠವಾದ ತಮ್ಮ ಸಾಮರ್ಥ್ಯದಿಂದ । ಪ್ರಜಾಯಾಃ—ಯಜಮಾನರೂಪರಾದ ಪ್ರಜೆಗಳ (ಇಷ್ಟಾರ್ಥಗಳನ್ನು) ಭೂಮ—ಅತ್ಯಧಿಕವಾದುವನ್ನಾಗಿಯೂ । ಉರು—ವಿಸ್ತೃತವಾದುವನ್ನಾಗಿಯೂ । ಅಮೃತಂ—ಮರಣರಹಿತವಾದವನ್ನಾಗಿಯೂ ।ವರೀಮಭಿಃ—ತಮ್ಮ ರಕ್ಷಣಾಸಹಾಯಗಳಿಂದ । ಚಕ್ರತುಃ—ಮಾಡಿದರು.

### ಭಾವಾರ್ಥ

ಯಾವಾಗಲೂ ಕೆಡಕನ್ನು ಮಾಡದಿರುವ ಮತ್ತು ಪಿತೃರೂಪಿಯಾದ ದ್ಯುಲೋಕಾಧಿದೇವತೆಯ ಸ್ವಾಯತ್ತವಾದ ಬಲವುಳ್ಳದ್ದೂ ಆದ್ದರಿಂದಲೇ ಮಹತ್ತಾದದ್ದೂ ಮತ್ತು ಅನುಗ್ರಹಾತ್ಮಕವಾದದ್ದೂ ಆದ ಮನಸ್ಸನ್ನೂ ಮತ್ತು ಅದೇ ಗುಣಗಳುಳ್ಳ ಮಾತೃರೂಪಿಯಾದ ಪೃಥ್ವಿಯ ಮನಸ್ಸನ್ನೂ ಪ್ರಾರ್ಥನಾಪೂರ್ವಕವಾದ ಸ್ತುತಿಗಳಿಂದ ಪೂಜಿಸಿ ತೃಪ್ತಿಪಡಿಸುತ್ತೇನೆ. ಜಗತ್ತಿಗೆಲ್ಲಾ ಮಾತಾಪಿತೃಗಳಾದ ದ್ಯಾವಾಪೃಥಿವಿಗಳು ಶ್ರೇಷ್ಠವಾದ ತಮ್ಮ ಸಾಮರ್ಥ್ಯದಿಂದ ಯಜಮಾನರೂಪರಾದ ಪ್ರಜೆಗಳ ಇಷ್ಟಾರ್ಥಗಳನ್ನು ಅತ್ಯಧಿಕವಾದುದನ್ನಾಗಿಯೂ, ವಿಸ್ತೃತವಾದುದನ್ನಾಗಿಯೂ, ಶಾಶ್ವತವಾದುದನ್ನಾಗಿಯೂ ಸಹ ತಮ್ಮ ರಕ್ಷಣಾಸಹಾಯಗಳಿಂದ ಮಾಡುತ್ತಾರೆ.

## English Translation

Verily I propitiate, by my invocations, the mind of the benevolent father, and the great and spontaneous (affection) of the mother (of all beings): The parents, with kindness, have secured, by their excellent protections, the vast and manifold immortality of their progeny.

### । ವಿಶೇಷವಿಷಯಗಳು ।

ಈ ಋಕ್ಕಿನಲ್ಲಿ ದ್ಯಾವಾಪೃಥಿವಿಗಳನ್ನು ಪಿತರಾ ಎಂಬ ಪದದಿಂದ ನಿರ್ದೇಶಿಸಿದೆ. ಆದರೆ ಪಿತೃಯಾರು ಮಾತೃಯಾರು ಎಂಬುದು ಈ ಋಕ್ಕಿನಿಂದ ನಿಷ್ಕೃಷ್ಟವಾಗಿ ತಿಳಿಯುವುದಿಲ್ಲ. ಸಾಯಣರು ಎರಡು ವಿಧವಾಗಿಯೂ ಅರ್ಥಮಾಡಿದ್ದಾರೆ ಪಿತುಃ ಪಿತೃಸ್ಥಾನೀಯಾಯಾಃ ಪೃಥಿವ್ಯಾಃ, ಮಾತುಃ—ಮಾತಾಂತರಿಕ್ಷಂ ನಿರ್ಮೀಯಂತೇ ಅಸ್ಮಿನ್ ಭೂತಾನಿ (ನಿ. ೨–೮) ಎಂದು ವಿವರಿಸಿದ್ದಾರೆ. ಪಾಲನಾರ್ಥಕವಾದ ಪಾ ಧಾತುವಿನಿಂದ ನಿಷ್ಪನ್ನವಾಗಿ ಸಕಲ ಭೂತಗಳನ್ನೂ ಪಾಲಿಸತಕ್ಕ ಪೃಥಿವಿಗೆ ಪಿತೃವೆಂದೂ, ಅಂತರಿಕ್ಷದಲ್ಲೇ ಸಕಲಭೂತಗಳೂ ನಿರ್ಮಿತವಾಗುವುದರಿಂದ ಅಂತರಿಕ್ಷಕ್ಕೆ ಮಾತೃವೆಂದೂ ಹೆಸರು ಪ್ರಸಿದ್ಧವಾಗಿದೆಯೆಂದು ನಿರುಕ್ತಕಾರರ ವಚನವನ್ನುದ

ಹರಿಸಿ ಮೊದಲನೆಯ ಅರ್ಥವನ್ನು ಮಾಡಿದ್ದಾರೆ. ಇದೂ ಒಂದು ವಿಧದಲ್ಲಿ ಶಬ್ದನಿರ್ವಚನದ ದೃಷ್ಟಿಯಿಂದ ಸಾಧು ವಾಗಿದೆಯೇ ವಿನಹ, ಸಾಂಪ್ರದಾಯಿಕವಾದ ಅರ್ಥಕ್ಕೆ ಹೊಂದಲಾರದು. ಸಾಧಾರಣವಾಗಿ ಅಂತರಿಕ್ಷಕ್ಕೆ ಪಿತೃವೆಂದೂ ಪೃಥ್ವಿಗೆ ಮಾತೃವೆಂದೂ ನಿರ್ದೇಶಿಸುವ ವಾಕ್ಯಗಳೇ ಪ್ರಸಿದ್ಧವಾಗಿವೆ.

ತನ್ನೋ ವಾತೋ ಮಯೋಭು ವಾತು ಭೇಷಜಂ ತನ್ಮಾತಾ ಪೃಥಿವೀ ತತ್ ಪಿತಾ ದ್ಯೌಃ ।
ತದ್ಗ್ರಾವಾಣಃ ಸೋಮಸುತೋ ಮಯೋಭುವಸ್ತದಶ್ವಿನಾ ಶೃಣುತಂ ಧಿಷ್ಣ್ಯಾ ಯುವಂ ॥
(ಋ ಸಂ. ೧-೮೯-೪)

ಎಂಬಲ್ಲಿ ಪೃಥಿವಿಯನ್ನು ಮಾತೆಯೆಂದೂ ಅಂತರಿಕ್ಷವನ್ನು ಪಿತೃವೆಂದೂ ನಿರ್ದೇಶಿಸಿದೆ.

ಪ್ರೈಷಃ ಸ್ತೋಮಃ ಪೃಥಿವೀಮಂತರಿಕ್ಷಂ ವನಸ್ಪತೀँರೋಷಧೀ ರಾಯೇ ಅಶ್ಯಾಃ ।
ದೇವೋದೇವಃ ಸುಹವೋ ಭೂತು ಮಹ್ಯಂ ಮಾ ನೋ ಮಾತಾ ಪೃಥಿವೀ ದುರ್ಮತೌ ಧಾತ್ ।
(ಋ. ಸಂ ೫-೪೨-೧೬)

ಉಪ ದ್ಯಾಂ ಸ್ಕಂಭಥುಃ ಸ್ಕಂಭನೇನಾಪ್ರಥತಂ ಪೃಥಿವೀಂ ಮಾತರಂ ವಿ ।
(ಋ. ಸಂ. ೬-೭೨-೨)

ದ್ಯೌ ೩ ಷ್ಪಿತಃ ಪೃಥಿವಿ ಮಾತರಧ್ರುಗಗ್ನೇ ಭ್ರಾತರ್ವಸವೋ ಮೃಳತಾ ನಃ ।
ವಿಶ್ವ ಆದಿತ್ಯಾ ಅದಿತೇ ಸಜೋಷಾ ಅಸ್ಮಭ್ಯಂ ಶರ್ಮ ಬಹುಲಂ ವಿ ಯಂತ ॥
(ಋ- ಸಂ. ೬-೫೧-೫)

ಇತ್ಯಾದ್ಯನೇಕ ಋಕ್ಕುಗಳಲ್ಲಿ (ಋ. ಸಂ. ೧-೯೦-೭, ೧-೧೮೫-೧೧, ೬-೭೦-೬ ಇತ್ಯಾದಿ) ಅಂತರಿಕ್ಷವನ್ನು ಪಿತೃವೆಂದೂ ಪೃಥ್ವಿಯನ್ನು ಮಾತೃವೆಂದೂ ಸಂಬೋಧಿಸಿದೆ. ಹೀಗೆ ಸಂಹಿತಾ ವಾಕ್ಯಗಳಲ್ಲೇ ಅಲ್ಲದೆ,

ದ್ಯೌಃ ಪಿತಾ॥ ಪೃಥಿವೀ ಮಾತಾ (ತೈ. ಬ್ರಾ. ೩-೭-೫-೪-೫).

ಅಥ ಯತ್ರಾಹೋಪಹೂತೇ ದ್ಯಾವಾಪೃಥಿವೀ ಇತಿ । ತದಗ್ನೀಧ ಆ ದಧಾತಿ ತದಗ್ನೀತ್ಪ್ರಾಶ್ನಾ-
ತ್ಯುಪಹೂತಾ ಪೃಥಿವೀ ಮಾತೋಪ ಮಾಂ ಪೃಥಿವೀ ಮಾತಾ ಹ್ವಯತಾಮಗ್ನಿರಾಗ್ನಿಧ್ರಾತ್ಸ್ವ-
ಹೋಪಹೂತಾ ದ್ಯೌಷ್ಪಿತೋಪ ಮಾಂ ದ್ಯೌಷ್ಪಿತಾ ।
(ಶ. ಬ್ರಾ ೧-೮-೧-೪೧)

ಇತ್ಯಾದಿ ಬ್ರಾಹ್ಮಣ ವಾಕ್ಯಗಳಲ್ಲೂ,

ಮಧು ದ್ಯೌರಸ್ತು ನಃ ಪಿತಾ । (ಬೃ. ಉ. ೬-೩-೬) ಇತ್ಯಾದ್ಯುಪನಿಷದ್ವಾಕ್ಯಗಳಲ್ಲೂ ಸಹ ದ್ಯುಲೋಕಾಧಿ ದೇವತೆಗೆ ಪಿತೃವೆಂಬ ವಿಶೇಷಣವು ರೂಢವಾಗಿರುವುದರಿಂದ ಪ್ರಕೃತವಾದ ಋಕ್ಕಿನಲ್ಲಿ ಸಾಯಣರು ಯದ್ವಾ ಎಂದು ಎರಡನೆಯಸಲ ಹೇಳಿರುವ ಅರ್ಥವೇ ಸಾಧುವಾಗಿರುವುದು.

ಸುರೇತಸಾ—ಈ ಪದಕ್ಕೆ ಶೋಭನಸಾಮರ್ಥ್ಯೇನ ಎಂದರ್ಥಮಾಡಿದ್ದಾರೆ. ಸಾಧಾರಣವಾಗಿ ಈ ಪದಕ್ಕೆ ಸಂತಾನೋತ್ಪತ್ತಿಯ ಸಾಮರ್ಥ್ಯವೆಂಬ ಅರ್ಥವು ಪ್ರಸಿದ್ಧವಾಗಿದ್ದರೂ ಸಹ ಇತರ ಅರ್ಥಗಳಲ್ಲಿಯೂ ಈ ಪದದ ಪ್ರಯೋಗವಿದೆ

ನಿರುಕ್ತಕಾರರು ಈ ಪದವನ್ನು ಅರ್ಣಃ, ಕ್ಷೋದಃ ಇತ್ಯಾದ್ಯುದಕನಾಮುಗಳಲ್ಲಿ ಸೇರಿಸಿದ್ದಾರೆ. (ನಿ- ೨-೨೭)

ದಿವೋ ನ ಯಸ್ಯ ರೇತಸೋ ದುಘಾನಾಃ ಪಂಥಾಸೋ ಯಂತಿ ಶವಸಾಪರೀತಾಃ ।
ತರದ್ದ್ವೇಷಾಃ ಸಾಸಹಿಃ ಪೌಂಸ್ಯೇಭಿರ್ಮರುತ್ವಾನ್ನೋ ಭವತ್ವಿಂದ್ರ ಊತೀ ॥

(ಋ. ಸಂ. ೧-೧೦೦-೩)

ಇತ್ಯಾದಿ ಋಕ್ಕುಗಳಲ್ಲಿ ವೃಷ್ಟ್ಯುದಕಗಳೆಂದರ್ಥವಾಗುತ್ತದೆ.

ಕಥಾ ಮಹೇ ಪುಷ್ಟಿಂಭರಾಯ ಪೂಷ್ಣೇ ಕದ್ರುದ್ರಾಯ ಸುಮುಖಾಯ ಹವಿರ್ದೇ ।
ಕದ್ವಿಷ್ಣವ ಉರುಗಾಯಾಯ ರೇತೋ ಬ್ರವಃ ಕದಗ್ನೇ ಶರವೇ ಬೃಹತ್ಯೈ ॥

(ಋ. ಸಂ. ೪-೩-೭)

ಎಂಬಲ್ಲಿ ರೇತಸ್ ಶಬ್ದಕ್ಕೆ ಸಾಯಣರು ಕ್ಷಯಹೇತುವಾದ ಪಾಪವೆಂದರ್ಥಮಾಡಿದ್ದಾರೆ- ಸಂತಾನಜನಕವಾದ ವೀರ್ಯವೆಂಬರ್ಥದಲ್ಲಿ ಈ ಪದದ ಪ್ರಯೋಗವನ್ನೂ ರೇತಸ್ಸಿಗಿರತಕ್ಕ ಅತಿಶಯವಾದ ಶಕ್ತಿಯ ವಿವರಣೆಯನ್ನೂ ತೈತ್ತಿರೀಯ ಸಂಹಿತೆಯಲ್ಲಿ (೫-೬-೮) ವಿಸ್ತೃತವಾಗಿ ತಿಳಿಸಿದೆ.

ವ್ಯಾಕರಣಪ್ರಕ್ರಿಯಾ

ಮನ್ಯೇ—ಮನ ಜ್ಞಾನೇ ಧಾತು. ಲಟ್ ಉತ್ತಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಅದ್ರುಹಃ—ದ್ರುಹ ಜಿಘಾಂಸಾಯಾಮ್ ಧಾತು. ಸತ್ಸೂದ್ವಿಷ—(ಪಾ. ಸೂ. ೩-೨-೬೧) ಎಂಬುದರಿಂದ ಕ್ವಿಪ್ ಪ್ರತ್ಯಯ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಷಷ್ಠೀಏಕವಚನಾಂತರೂಪ.

ಮಹಿ—ಮಹ ಪೂಜಾಯಾಂ ಧಾತು. ಇನ್‌ಸರ್ವಧಾತುಭ್ಯಃ ಎಂಬುದರಿಂದ ಇನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಹವೀಮಭಿಃ—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಅನ್ಯೇಭ್ಯೋಽಪಿದೃಶ್ಯಂತೇ (ಪಾ. ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ. ಅದಕ್ಕೆ ಛಾಂದಸವಾಗಿ ಈಡಾಗಮ. ಬಹುಲಂ ಛಂದಸಿ (ಪಾ. ಸೂ. ೬-೧-೩೪) ಎಂಬುದರಿಂದ ಧಾತುವಿಗೆ ಸಂಪ್ರಸಾರಣ, ಪೂರ್ವರೂಪ. ಪ್ರತ್ಯಯನಿಮಿತ್ತವಾಗಿ ಉಕಾರಕ್ಕೆ ಗುಣ, ಅವಾದೇಶ. ಪ್ರತ್ಯಯನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಸುರೇತಸಾ—ಶೋಭನಂ ರೇತಃ ಯಸ್ಯ ತೇನ. ಆದ್ಯುದಾತ್ತಂ ದ್ವ್ಯಚ್ ಛಂದಸಿ (ಪಾ. ಸೂ. ೬-೨-೧೧೯) ಎಂಬುದರಿಂದ ಸು ಸ್ವರಕ್ಕೆ ಬಾಧಕವಾಗಿ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

ಪಿತರಾ—ಮಾತಾ ಚ ಪಿತಾ ಚ ಪಿತರಾ ಪಿತಾಮಾತ್ರಾ (ಪಾ. ಸೂ. ೧-೨-೭೦) ಎಂಬುದರಿಂದ ಏಕಶೇಷ ಬರುತ್ತದೆ. ಸುಪಾಂ ಸುಲುಕ್ (ಪಾ. ಸೂ೭-೧-೩೯) ಎಂಬುದರಿಂದ ದ್ವಿವಚನಕ್ಕೆ ಆಕಾರಾದೇಶ ಬರುತ್ತದೆ.

ಚಕ್ರತುಃ—ಡುಕೃಞ್ ಕರಣೇ ಧಾತು. ಲಿಟ್ ಪ್ರಥಮಪುರುಷದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಪ್ರಜಾಯೋಃ—ಜನೀ ಪ್ರಾದುರ್ಭಾವೇ ಧಾತು. ಉಪಸರ್ಗೇಸಂಜ್ಞಾಯಾಮ್ (ಪಾ. ಸೂ. ೩-೨-೯೯) ಎಂಬುದರಿಂದ ಪ್ರ ಉಪಪದವಾಗಿರುವಾಗ ಡ ಪ್ರತ್ಯಯ. ಡಿತ್ತಾದುದರಿಂದ ಧಾತುವಿನ ಟಿಗೆ ಲೋಪ. ಕೃದುತ್ತರ ಪದಪ್ರಕೃತಿಸ್ವರ ಬರುತ್ತದೆ.

ಅಮೃತಮ್—ನಞೋಜರಮರ—(ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರಪದಾದ್ಯುದಾತ್ತ ಸ್ವರ ಬರುತ್ತದೆ.

ವರೀಮಭಿಃ—ವೃಞ್ ವರಣೇ ಧಾತು. ಇದಕ್ಕೆ ಔಣಾದಿಕ ಮನಿನ್ ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರ ಪರವಾಗಿ ಬರುತ್ತದೆ. ನಿತ್ತಾದುದರಿಂದ ಞ್ನಿತ್ಯಾದಿರ್ನಿತ್ಯಮ್ (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾಬಹುವಚನಾಂತರೂಪ. ॥ ೨ ॥

ಸಂಹಿತಾಪಾಠಃ

ತೇ ಸೂನವಃ ಸ್ವಪಸಃ ಸುದಂಸಸೋ ಮಹೀ ಜಜ್ಞುರ್ಮಾತರಾ ಪೂರ್ವಚಿತ್ತಯೇ ।
ಸ್ಥಾತುಶ್ಚ ಸತ್ಯಂ ಜಗತಶ್ಚ ಧರ್ಮಣಿ ಪುತ್ರಸ್ಯ ಪಾಥಃ ಪದಮದ್ವಯಾವಿನಃ ॥ ೩ ॥

ಪದಪಾಠ

ತೇ । ಸೂನವಃ । ಸುಽಅಪಸಃ । ಸುಽದಂಸಸಃ । ಮಹೀ ಇತಿ । ಜಜ್ಞುಃ । ಮಾತರಾ । ಪೂರ್ವಽಚಿತ್ತಯೇ ।
ಸ್ಥಾತುಃ । ಚ । ಸತ್ಯಂ । ಜಗತಃ । ಚ । ಧರ್ಮಣಿ । ಪುತ್ರಸ್ಯ । ಪಾಥಃ । ಪದಂ । ಅದ್ವಯಾವಿನಃ ॥ ೩ ॥

ಸಾಯಣಭಾಷ್ಯಂ

ತೇ ಪ್ರಸಿದ್ಧಾಃ ಸೂನವೋ ಯುವಾಭ್ಯಾಮುತ್ಪನ್ನಾಃ ಪುತ್ರಸ್ಥಾನೀಯಾಃ ಪ್ರಜಾಃ ಸ್ವಪಸಃ ಶೋಭನಕರ್ಮಾಣಃ ಸುದಂಸಸಃ ಶೋಭನದರ್ಶನಾ ಯುವಾಂ ಮಹೀ ಮಹತ್ಯೌ ಮಾತರಾ ಮಾತೃವದ್ಧಿತಕಾರಿಣ್ಯೌ ಜಜ್ಞುಃ । ಜಾನಂತಿ । ಮಹಾನುಭಾವತಾಮವಗಚ್ಛಂತಿ । ಕಿಮರ್ಥಂ । ಪೂರ್ವಚಿತ್ತಯೇ ಪ್ರಥಮಬುದ್ಧಯೇಽನುಗ್ರಹರೂಪಾಯೈ । ಕಿಂಚ ತೇ ದ್ಯಾವಾಪೃಥಿವ್ಯೌ ಸ್ಥಾತುಃ ಸ್ಥಾವರಸ್ಯ ಜಗತೋ ಜಂಗಮಸ್ಯ ಪುತ್ರಸ್ಯ ಪುತ್ರಸ್ಥಾನೀಯಸ್ಯೋಭಯವಿಧಸ್ಯ ಜಗತೋಽದ್ವಯಾವಿನೋ ನ ವಿದ್ಯತೇ ದ್ವಯಂ ಯಸ್ಯ ತಾದೃಶಸ್ಯ । ಸ್ವಜೀವನಾಯ ಯುಷ್ಮದ್ವ್ಯತಿರಿಕ್ತಮಜಾನತ ಇತ್ಯರ್ಥಃ । ಈದೃಶಸ್ಯ ಧರ್ಮಣಿ ಧಾರಣೇ ರಕ್ಷಣೇ ನಿಮಿತ್ತಭೂತೇ ಸತಿ ಪದಂ ಸ್ಥಾನಂ ಸತ್ಯಮಬಾಧ್ಯಂ ಪಾಥಃ । ಸಕ್ಷಥಃ ದತ್ಥ ಇತ್ಯರ್ಥಃ । ಯದ್ವಾ ।

ತೇ ಪ್ರಸಿದ್ಧಾಃ ಸೂನವ ಉತ್ಪಾದ್ಯಮಾನಾಃ ಸ್ವಪಸಃ ಶೋಭನಪ್ರಕಾಶಾದಿಕರ್ಮಾಣಃ ಸುದಂಸಸಃ ಶೋಭನ-ದರ್ಶನಾಃ ಸುಷ್ಠೂಪಕ್ಷಯಂತೋ ವಾತ್ಮಾನಂ ಸ್ವವ್ಯಾಪಾರಾಯ ಈದೃಶಾ ರಶ್ಮಯೋ ಮಹೀ ಮಹತ್ಯೌ ದ್ಯಾವಾಪೃಥಿವ್ಯೌ ಪೂರ್ವಚಿತ್ತಯೇ ಪ್ರಾಣಿನಾಂ ಪೂರ್ವಜ್ಞಾನಾಯ ಜಜ್ಞುಃ । ಜಾತವಂತಃ । ದ್ಯಾವಾ-ಪೃಥಿವ್ಯೋರಂತರಾಲೇ ವ್ಯಾಪ್ತಾ ಇತ್ಯರ್ಥಃ । ಕಿಂಚ ಸ್ಥಾತುರ್ಜಗತಶ್ಚ ಧರ್ಮಣಿ ಧಾರಣೇ ತದರ್ಥಮ-ದ್ವಯಾವಿನೋ ಮಾರ್ಗದ್ವಯರಹಿತಸ್ಯ ॥ ಬಹುಲಂ ಛಂದಸೀತಿ ದ್ವಯಶಬ್ದಾನ್ಮತ್ವರ್ಥೀಯೋ ವಿನಿಃ । ಅನ್ಯೇಷಾಮಪಿ ದೃಶ್ಯತ ಇತಿ ದೀರ್ಘಃ ॥ ಪುತ್ರಸ್ಯ ಯುಷ್ಮತ್ಪುತ್ರಸ್ಥಾನೀಯಸ್ಯಾದಿತ್ಯಸ್ಯ ಪದಂ ಮಾರ್ಗಂ ಸತ್ಯಂ ಪಾಥಃ । ಅವಶ್ಯಂ ರಕ್ಷಥಃ ॥

### ಪ್ರತಿಪದಾರ್ಥ

ತೇ—ಪ್ರಸಿದ್ಧರಾದವರೂ । ಸ್ವಪಸಃ—ಶ್ರೇಷ್ಠವಾದ ಕರ್ಮವುಳ್ಳವರೂ । ಸುದಂಸಸಃ—ಉತ್ತಮವಾದ ರೂಪವುಳ್ಳವರೂ ಆದ । ಸೂನವಃ—ಪುತ್ರಸ್ಥಾನೀಯರಾದ ಯಜ್ಞಕರ್ತರು । ಮಹೀ—ಮಹತ್ತಾದ ಸ್ವರೂಪವುಳ್ಳವರೂ । ಮಾತರಾ—ಜನನಿಯರಂತೆ ಹಿತಕಾರಿಗಳೂ ಆದ ದ್ಯಾವಾಪೃಥಿವಿಗಳನ್ನು । ಪೂರ್ವಚಿತ್ತಯೇ—ಅನುಗ್ರಹ ರೂಪವಾದ ಪ್ರಥಮಜ್ಞಾನಕ್ಕಾಗಿ (ಅಥವಾ) (ನಿಮ್ಮ ಅನುಗ್ರಹವನ್ನು ಪಡೆದ) ಹಿಂದಿನ ಅನುಭವಗಳಿಂದ । ಜಜ್ಞುಃ—ತಿಳಿಯುತ್ತಾರೆ । (ಮತ್ತು ನೀವು) ಅದ್ವಯಾವಿನಃ—ಇವರಲ್ಲದೆ ಎರಡನೆಯ ಇನ್ನಾರನ್ನೂ ತುಂಬಿ ಕೊಳ್ಳದೇ ಇರತಕ್ಕ ಪೂರ್ಣವಾಗಿ ಇವರನ್ನೇ ನಂಬಿರತಕ್ಕ । ಸ್ಥಾತುಃ—ಸ್ಥಾವರಾತ್ಮಕವಾದುದೂ । ಜಗತಶ್ಚ ಪುತ್ರಸ್ಯ—ಜಂಗಮಾತ್ಮಕವಾದುದೂ ।ಆದ ಲೋಕದ ಪ್ರಜೆಗಳ । ಧರ್ಮಣಿ—ರಕ್ಷಣೆಯಲ್ಲಿ । ಸತ್ಯಂ—ಸತ್ಯ ವಾಗಿಯೂ (ನಿರ್ವಿಘ್ನವಾಗಿ) । ಪದಂ—(ತಮ್ಮ)ಸ್ಥಾನವನ್ನು । ಪಾಥಃ—ರಕ್ಷಿಸುತ್ತೀರಿ (ರಕ್ಷಣಾತ್ಮಕವಾದ ಕಾರ್ಯ ವನ್ನು ನೆರವೇರಿಸುತ್ತೀರಿ) । [ (ಅಥವಾ) ತೇ—ಜಗತ್ಪ್ರಸಿದ್ಧವಾದವೂ । ಸ್ವಪಸಃ—ಶ್ರೇಷ್ಠವಾದ ಪ್ರಕಾಶನವೇ ಮುಂತಾದ ಕರ್ಮವುಳ್ಳವೂ । ಸುದಂಸಸಃ—ಶ್ರೇಷ್ಠವಾದ ರೂಪವುಳ್ಳವೂ ಆದ । ಸೂನವಃ—ಉತ್ಪನ್ನವಾದವೂ ಆದ (ಆದಿತ್ಯನ) ರಶ್ಮಿಗಳು । ಮಹೀ—ಮಹತ್ತಾದ ಆಕಾರವುಳ್ಳ ದ್ಯಾವಾಪೃಥಿವಿಗಳನ್ನು । ಪೂರ್ವಚಿತ್ತಯೇ—(ಲೋಕದ ಪ್ರಾಣಿಗಳ) ಪ್ರಥಮಜ್ಞಾನಕ್ಕಾಗಿ । ಜಜ್ಞುಃ—ತಿಳಿಯುತ್ತವೆ ಎಂದರೆ ದ್ಯಾವಾಪೃಥಿವಿಗಳಲ್ಲೆಲ್ಲಾ ವ್ಯಾಪಿ ಸುತ್ತವೆ । ಮತ್ತು ಸ್ಥಾತುಃ—ಸ್ಥಾವರಾತ್ಮಕವಾದುದೂ । ಜಗತಶ್ಚ—ಜಂಗಮಾತ್ಮಕವಾದುದೂ ಆದ ಲೋಕದ । ಧರ್ಮಣಿ—ಧಾರಣರೂಪವಾದ ಕರ್ಮದಲ್ಲಿ ಅಥವಾ ಧಾರಣರೂಪವಾದ ಕರ್ತವ್ಯದ ನಿರ್ವಹಣೆಗಾಗಿ । ಅದ್ವಯಾ-ವಿನಃ—ಮಾರ್ಗದ್ವಯವಿಲ್ಲದೇ (ಯಾವಾಗಲೂ) ಒಂದೇ ಮಾರ್ಗವನ್ನು ಅನುಸರಿಸುವ । ಪುತ್ರಸ್ಯ—ನಿಮ್ಮ ಪುತ್ರ ರೂಪನಾದ ಆದಿತ್ಯನ । ಪದಂ—ಮಾರ್ಗವನ್ನು । ಸತ್ಯಂ—ಸತ್ಯವಾಗಿಯೂ । ಪಾಥಃ—(ನೀವು) ರಕ್ಷಿಸುತ್ತೀರಿ].

### ಭಾವಾರ್ಥ

ಜಗತ್ಪ್ರಸಿದ್ಧವಾದವೂ, ಶ್ರೇಷ್ಠವಾದ ಪ್ರಕಾಶನವೇ ಮುಂತಾದ ಕರ್ಮವುಳ್ಳವೂ, ಆಕರ್ಷಕವಾದ ರೂಪ ವುಳ್ಳವೂ, ಆದಿತ್ಯನಿಂದ ಉತ್ಪನ್ನವಾದವೂ ಆದ ಆದಿತ್ಯನ ರಶ್ಮಿಗಳು ಲೋಕವನ್ನು ಎಚ್ಚರಗೊಳಿಸುವುದಕ್ಕಾಗಿ ದ್ಯಾವಾ ಪೃಥಿವಿಗಳನ್ನೆಲ್ಲಾ ವ್ಯಾಪಿಸುತ್ತವೆ. ಎಲೈ ದ್ಯಾವಾಪೃಥಿವಿಗಳೇ, ಸ್ಥಾವರಾತ್ಮಕವಾದುದೂ, ಜಂಗಮಾತ್ಮಕವಾದುದೂ ಆದ ಲೋಕದ ಧಾರಣರೂಪದ ಕರ್ತವ್ಯದ ನಿರ್ವಹಣೆಗಾಗಿ ಯಾವಾಗಲೂ ಒಂದೇ ಮಾರ್ಗವನ್ನನುಸರಿಸುವ ನಿಮ್ಮ ಪುತ್ರನಾದ ಆದಿತ್ಯನ ಮಾರ್ಗವನ್ನು ನೀವು ಸತ್ಯವಾಗಿಯೂ ರಕ್ಷಿಸುತ್ತೀರಿ.

## English Translation

These, your children, the performers of good works, and of goodly appearance, recognize you as their great parents, through experience of former (kindness): preserve uninterrupted stability in the functions of your progeny, whether stationary or moving, (depending for existence) on none other than you.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಎರಡುವಿಧವಾದ ಅರ್ಥಗಳನ್ನು ಹೇಳಿರುವುದನ್ನು ಪ್ರತಿಪದಾರ್ಥದಲ್ಲಿ ತಿಳಿಸಿದೆ. ಮೊದಲನೆಯದಾಗಿ ಯಜ್ಞಕರ್ತರು ದ್ಯಾವಾಪೃಥಿವಿಗಳ ಸ್ವರೂಪವನ್ನು ತಿಳಿಯುತ್ತಾರೆಂದೂ ಅಂತಹ ಪ್ರಜೆಗಳನ್ನೆಲ್ಲಾ ದ್ಯಾವಾಪೃಥಿವಿಗಳು ರಕ್ಷಿಸುವರೆಂದೂ ಅರ್ಥಮಾಡಿದೆ. ಎರಡನೆಯದಾಗಿ ಆದಿತ್ಯರಶ್ಮಿಗಳು ದ್ಯಾವಾಪೃಥಿವಿಗಳನ್ನು ವ್ಯಾಪಿಸಿ ಲೋಕದಲ್ಲಿ ಯಜ್ಞಕರ್ತರಿಗೆ ಪೂರ್ವಭಾವಿಯಾಗಿ ಕರ್ತವ್ಯ ಜ್ಞಾನಗಳನ್ನು ಕೊಡುವುದೆಂದೂ ಮುತ್ತು ದ್ಯಾವಾಪೃಥಿವಿಗಳು ತಮ್ಮ ಪುತ್ರರೂಪನಾದ ಆದಿತ್ಯನ ಸ್ಥಿರವಾದ ಮಾರ್ಗವನ್ನು ರಕ್ಷಿಸಿ ಯಜ್ಞಕರ್ತರ ಕರ್ಮಾಚರಣೆಗೆ ಅನುಕೂಲಪಡಿಸುವರೆಂದೂ ತಿಳಿಸಿದೆ. ಮೊದಲನೆಯ ಅರ್ಥದಲ್ಲಿ ಸ್ವಪಸಃ, ಸುದಂಸಸಃ, ಸೂನವಃ ಇವು ಯಜಮಾನರಿಗೆ ವಿಶೇಷಣಗಳಾಗಿವೆ.

ಸ್ವಪಸಃ—ಅಪಃ, ಅಪ್ನಃ ಎಂದು ಕರ್ಮನಾಮಗಳಲ್ಲಿ ಅಪಸ್ ಶಬ್ದವು ಪಠಿತವಾಗಿದೆ (ನಿ. ೩-೧). ಶ್ರೇಷ್ಠವಾದ ಯಾಗಾದಿ ಕರ್ಮವುಳ್ಳವರೆಂದು ಒಂದು ಅರ್ಥವೂ, ಲೋಕಪ್ರಕಾಶನಾದಿ ಕರ್ಮವುಳ್ಳವರು (ಆದಿತ್ಯರಶ್ಮಿಗಳು) ಎಂದು ಇನ್ನೊಂದರ್ಥವೂ ಸಾಧ್ಯವಾಗುತ್ತದೆ.

ಸುದಂಸಸಃ—ದಂಸ ಶಬ್ದವೂ ಸಹ ಕರ್ಮನಾಮಗಳಲ್ಲಿಯೇ ಪಠಿತವಾಗಿದೆ. ಆದರೆ ಅಪಸ್ ಶಬ್ದವು ಇಲ್ಲಿ ಕರ್ಮವಾಚಕವಾಗಿರುವುದರಿಂದ ದಂಸಶಬ್ದಕ್ಕೆ ರೂಪವೆಂದರ್ಥಮಾಡಿದೆ. ದಸಿ ದಂಶದರ್ಶನಯೋಃ ಎಂದಿರುವುದರಿಂದ ಸುದರ್ಶನವೆಂದರ್ಥಮಾಡಬಹುದು. ಕರ್ಮವೆಂಬರ್ಥದಲ್ಲಿರುವ ಪ್ರಯೋಗಗಳಿಗಿಂತಲೂ ಅಧಿಕವಾಗಿ ದರ್ಶನವೆಂಬರ್ಥದಲ್ಲಿಯೇ ಈ ಪದದ ಪ್ರಯೋಗವಿರುವುದರಿಂದ ಇಲ್ಲಿ ಆಕರ್ಷಕವಾದ ರೂಪವುಳ್ಳವು ಎಂದು ಅರ್ಥಮಾಡಬಹುದು.

ಉಷಸ್ತಮಶ್ಯಾಂ ಯಶಸಂ ಸುವೀರಂ ದಾಸಪ್ರವರ್ಗಂ ರಯಿಮಶ್ವಬುಧ್ಯಂ ।
ಸುದಂಸಸಾ ಶ್ರವಸಾ ಯಾ ವಿಭಾಸಿ ವಾಜಪ್ರಸೂತಾ ಸುಭಗೇ ಬೃಹಂತಂ ॥
(ಋ. ಸಂ. ೧-೯೨-೮)

ಎಂಬ ಋಕ್ಕಿನಲ್ಲಿ ಸುದಂಸಸಾ ಎಂಬ ಪದವು ಉಷಸ್ಸಿನ ಪರವಾಗಿದೆ. ಉಷಸ್ಸಿನ ಮನೋಹರವಾದ ಕಾಂತಿಯುಳ್ಳ ರೂಪವನ್ನು ತಿಳಿಸುತ್ತದೆ. ಹೀಗೆಯೇ,

ತಂ ದೇವಾ ಬುಧ್ನೇ ರಜಸಃ ಸುದಂಸಸಂ ದಿವಸ್ಪೃಥಿವ್ಯೋರರತಿಂ ನ್ಯೇರಿರೇ ।
ರಥಮಿವ ವೇದ್ಯಂ ಶುಕ್ರಶೋಚಿಷಮಗ್ನಿಂ ಮಿತ್ರಂ ನ ಕ್ಷಿತಿಷು ಪ್ರಶಂಸ್ಯಂ ॥
(ಋ. ಸಂ. ೩-೨-೩)

ಎಂಬಲ್ಲಿಯೂ ಸಹ ಸುದಂಸಸಃ ಎಂಬ ಪದಕ್ಕೆ ಸಾಯಣರು ಶೋಭನದರ್ಶನಂ ಎಂದೇ ಅರ್ಥಮಾಡಿದ್ದಾರೆ. ಅಗ್ನಿಯ ರೂಪವನ್ನು ತಿಳಿಸುತ್ತದೆ. ಅದೇ ರೀತಿಯಲ್ಲಿ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಆದಿತ್ಯರಶ್ಮಿಗಳ ಮನೋಹರವಾದ ರೂಪವನ್ನು ವರ್ಣಿಸುತ್ತದೆ.

ಪೂರ್ವಚಿತ್ತಯೇ ಜಗ್ಮುಃ—ಎಂಬುದಕ್ಕೆ ಪ್ರಾಣಿನಾಂ ಪೂರ್ವಜ್ಞಾನಾಯ ದ್ಯಾವಾಪೃಥಿವ್ಯೋರಂತರಾಲೇ ವ್ಯಾಪ್ತಾಃ । ಪ್ರಾತಃಕಾಲದಲ್ಲೇ ಪ್ರಾಣಿಗಳ ಎಚ್ಚರಕ್ಕಾಗಿಯೂ ಕರ್ತವ್ಯಜ್ಞಾನಗಳನ್ನು ತಿಳಿಸುವುದಕ್ಕಾಗಿಯೂ ಸಹ ದ್ಯಾವಾಪೃಥಿವಿಗಳನ್ನು ಪ್ರವೇಶಿಸಿದವು ಎಂದು ವಿವರಿಸಿದ್ದಾರೆ ಈ ವಿವರಣೆಯು ಆದಿತ್ಯರಶ್ಮಿಗಳ ವ್ಯಾಪ್ತಿಯನ್ನು ತಿಳಿಸುತ್ತದೆ.

ಆದಿತ್ಯಸ್ಯ ರಶ್ಮಯ ಉಭೌ ಲೋಕೌ ಗಚ್ಛಂತಿ ।

(ಛಾ. ಉ. ೮-೬-೨)

ಇತ್ಯಾದ್ಯುಪನಿಷದ್ವಾಕ್ಯಗಳಲ್ಲಿ ಆದಿತ್ಯರಶ್ಮಿಗಳು ದ್ಯಾವಾಪೃಥಿವಿಗಳೆರಡನ್ನೂ ವ್ಯಾಪಿಸಿರುವುದನ್ನು ವರ್ಣಿಸಿರುವಂತೆ ಇಲ್ಲಿಯೂ ವರ್ಣಿಸಿದೆ.

ಪುತ್ರಸ್ಯ—ಯುಷ್ಮತ್ಪುತ್ರಸ್ಥಾನೀಯಸ್ಯ ಆದಿತ್ಯಸ್ಯ । ನಿಮ್ಮ ಪುತ್ರರೂಪನಾದ ಆದಿತ್ಯನ ಎಂಬರ್ಥವು ಹೆಚ್ಚು ಹೊಂದಿಕೊಳ್ಳುತ್ತದೆ.

ನಮೋ ಮಿತ್ರಸ್ಯ ವರುಣಸ್ಯ ಚಕ್ಷಸೇ ಮಹೋ ದೇವಾಯ ತದೃತಂ ಸಪರ್ಯತ ।
ದೂರೇದೃಶೇ ದೇವಜಾತಾಯ ಕೇತವೇ ದಿವಸ್ಪುತ್ರಾಯ ಸೂರ್ಯಾಯ ಶಂಸತ ॥

(ಋ. ಸಂ. ೧೦-೩೭-೧)

ಇತ್ಯಾದಿ ಋಕ್ಕುಗಳಲ್ಲಿ ಸೂರ್ಯನನ್ನು ವರ್ಣಿಸಿರುವ ಅಂಶವನ್ನು ಇಲ್ಲಿ ತಿಳಿಸಿದೆ. ಮಾರ್ಗದ್ವಯರಹಿತನಾದ ಈ ಆದಿತ್ಯನ ಲೋಕರಕ್ಷಣಾಕ್ರಮವು ಗುರುತರವಾದುದು.

ಮಹ ಇತ್ಯಾದಿತ್ಯಃ । ಆದಿತ್ಯೇನ ವಾವ ಸರ್ವೇ ಲೋಕಾ ಮಹೀಯಂತೇ ।

(ತೈ. ಉ. ೧-೫-೨)

ಇತ್ಯಾದಿಋಕ್ಕುಗಳಲ್ಲಿ ಲೋಕಗಳ ವೃದ್ಧಿಯೂ ಮಹಿಮೆಯೂ ಆದಿತ್ಯನ ಶಕ್ತಿಯಿಂದಲೇ ಸಾಧ್ಯವಾಗುವುದೆಂದು ವರ್ಣಿಸಿರುವ ಅಂಶವನ್ನು ಇಲ್ಲಿಯೂ ತಿಳಿಸಿ ಅಂತಹ ಆದಿತ್ಯನ ಮಾರ್ಗವನ್ನು ರಕ್ಷಿಸುತ್ತೀರಿ ಎಂದು ದ್ಯಾವಾಪೃಥಿವಿಗಳನ್ನು ಸ್ತುತಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

ಸ್ವಪಸಃ—ಶೋಭನಂ ಅಪಃ ಯೇಷಾಂ ತೇ ಸ್ವಪಸಃ ಆದ್ಯುದಾತ್ತಂದ್ವ್ಯಚ್ ಛಂದಸಿ (ಪಾ. ಸೂ ೬-೨-೧೧೯) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ. ಸುದಂಸಸಃ ಎಂಬಲ್ಲಿಯೂ ಹೀಗೆಯೇ ಸಮಾಸ ಸ್ವರಗಳು ಬರುತ್ತವೆ.

ಜಜ್ಞುಃ—ಜ್ಞಾ ಅವಬೋಧನೇ ಧಾತು. ಛಾಂದಸವಾಗಿ ಲಿಟ್ ಪ್ರಥಮಪುರುಷಬಹುವಚನಾಂತರೂಪ. ಅಥವಾ ಜನೀ ಪ್ರಾದುರ್ಭಾವೇ ಧಾತು. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಮಾತರಾ—ದ್ವಿತೀಯಾದ್ವಿವಚನ ಪರವಾದಾಗ ಸುಪಾಂ ಸುಲುಕ್ (ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ.

ಸ್ಥಾತುಃ—ಷ್ಠಾ ಗತಿನಿವೃತ್ತೌ ಧಾತು. ತೃಚ್ ಪ್ರತ್ಯಯ. ಷಷ್ಠೀಏಕವಚನ ಪರವಾದಾಗ ಋತ ಉತ್ (ಪಾ. ಸೂ. ೬-೧-೧೧೧) ಎಂಬುದರಿಂದ ಉಕಾರ ರಪರವಾಗಿ ಬರುತ್ತದೆ. ರಾತ್ಸಸ್ಯ (ಪಾ. ಸೂ. ೮-೨-೨೪) ಎಂಬುದರಿಂದ ಸಕಾರಕ್ಕೆ ಲೋಪ. ರೇಫಕ್ಕೆ ವಿಸರ್ಗ.

ಧರ್ಮಣಿ—ಧೃಞ್ ಧಾರಣೇ ಧಾತು. ಮನಿನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಪ್ತಮಿಯಲ್ಲಿ ನಙಿಸಂಬುದ್ಧ್ಯೋಃ ಎಂಬುದರಿಂದ ಅಲ್ಲೋಪ ಬರುವುದಿಲ್ಲ.

ಪಾಥಃ—ಪಾ ರಕ್ಷಣೇ ಧಾತು. ಲಟ್ ಮಧ್ಯಮಪುರುಷದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಅದ್ವಯಾವಿನಃ—ದ್ವಯಂ ಅಸ್ಯ ಅಸ್ತಿ ಇತಿ ದ್ವಯಾವೀ ಬಹುಲಂ ಛಂದಸಿ ಎಂಬುದರಿಂದ ದ್ವಯ ಶಬ್ದದ ಮೇಲೆ ಮತ್ವರ್ಥದಲ್ಲಿ ವಿನಿ ಪ್ರತ್ಯಯ. ಅನ್ಯೇಷಾಮಪಿ ದೃಶ್ಯತೇ (ಪಾ. ಸೂ. ೬-೩-೧೩೭) ಎಂಬುದರಿಂದ ಪೂರ್ವಕ್ಕೆ ದೀರ್ಘ. ನ ದ್ವಯಾವೀ ತಸ್ಯ. ತತ್ಪುರುಷೇತುಲ್ಯಾರ್ಥ. (ಪಾ. ಸೂ. ೬-೨-೨) ಎಂಬುದರಿಂದ ನಞ್‌ಪೂರ್ವಪದಪ್ರಕೃತಿಸ್ವರ ಬರುತ್ತದೆ. ॥ ೩ ॥

———— :o: — ————

ಸಂಹಿತಾಪಾಠಃ

ತೇ ಮಾಯಿನೋ ಮಮಿರೇ ಸುಪ್ರಚೇತಸೋ ಜಾಮೀ ಸಯೋನೀ ಮಿಥುನಾ ಸಮೋಕಸಾ ।
ನವ್ಯಂನವ್ಯಂ ತಂತುಮಾ ತನ್ವತೇ ದಿವಿ ಸಮುದ್ರೇ ಅಂತಃ ಕವಯಃ ಸುದೀತಯಃ ॥ ೪ ॥

### ಪದಪಾಠಃ

ತೇ । ಮಾಯಿನಃ । ಮಮಿರೇ । ಸುಽಪ್ರಚೇತಸಃ । ಜಾಮೀ ಇತಿ । ಸಯೋನೀ ಇತಿ ಸಽಯೋನೀ ।

ಮಿಥುನಾ । ಸಂಽಓಕಸಾ ।

ನವ್ಯಂಽನವ್ಯಂ । ತಂತುಂ । ಆ । ತನ್ವತೇ । ದಿವಿ । ಸಮುದ್ರೇ । ಅಂತಃ । ಕವಯಃ । ಸುಽದೀತಯಃ ।

॥ ೪ ॥

### ಸಾಯಣಭಾಷ್ಯಂ

ತೇ ಪ್ರಸಿದ್ಧೇ ದ್ಯಾವಾಪೃಥಿವ್ಯೌ ಮಾಯಿನಃ । ಮಾಯಾ ಪ್ರಜ್ಞಾ । ಸ್ವವಿಷಯಪ್ರಜ್ಞಾವಂತಃ ಪ್ರಜ್ಞೋಪಲಕ್ಷಿತಕರ್ಮವಂತೋ ವಾ ಸುಪ್ರಚೇತಸಃ ಸುಷ್ಠು ಪ್ರಕರ್ಷೇಣ ಚೇತಿತುಂ ಶಕ್ತಾ ರಶ್ಮಯೋ ಮಮಿರೇ । ಮಿಮತೇ । ಪ್ರಮಾಣೇನ ಪರಿಛಿಂದಂತಿ । ಕೀದೃಶ್ಯೌ ತೇ । ಜಾಮೀ ಪರಸ್ಪರಂ ಭಗಿನೀ । ಏತತ್ಕುತ ಇತಿ ಚೇತ್ ಉಚ್ಯತೇ । ಸಯೋನೀ ಸಮಾನೋತ್ಪತ್ತಿಸ್ಥಾನೇ ಮಿಥುನಾ ಪ್ರಾಣ್ಯುತ್ಪತ್ತಯೇ ಮಿಥುನಭೂತೇ । ಪರಸ್ಪರಮವಿಯುಕ್ತೇ ಇತ್ಯರ್ಥಃ । ಸಮೋಕಸಾ ಸಮಾನಸ್ಥಾನೇ । ದ್ಯುಪೃಥಿವ್ಯೋ-ರೇಕಸ್ಮಿನ್ನೇವಾವಕಾಶರೂಪ ಆಕಾಶೇಽವಸ್ಥಾನಾತ್ । ಸಮೀಚೀನಸ್ಥಾನೇ ವಾ । ಕಿಂಚ ಕವಯೋ ಮೇಧಾವಿನಃ ಸ್ವವ್ಯಾಪಾರವಿಷಯಜ್ಞಾನವಂತಃ ಸುದೀತಯಃ ಸುಷ್ಠುದ್ಯೋತನಾ ರಶ್ಮಯೋ ದಿವಿ ದ್ಯೋತಮಾನೇ ಸಮುದ್ರೇಂತರಿಕ್ಷೇಽಂತರ್ಮಧ್ಯೇ । ಸಮುದ್ರಶಬ್ದೋಽಂತರಿಕ್ಷನಾಮಸು ಪಾಠಾತ್ತದ್ವ-ಚನಃ । ಸ ಚೈವಂ ಯಾಸ್ಕೇನ ನಿರುಕ್ತಃ । ಸಮುದ್ರಃ ಕಸ್ಮಾತ್ಸಮುದ್ದ್ರವಂತ್ಯಸ್ಮಾದಾಪಃ ಸಮಭಿಪ್ರವಂ-ತ್ಯೇನಮಾಪಃ ಸಂಮೋದಂತೇಽಸ್ಮಿನ್ಭೂತಾನಿ ಸಮುದಕೋ ಭವತಿ ಸಮುನತ್ತೀತಿ ವಾ । ನಿ. ೨-೧೦ । ಇತಿ । ನವ್ಯಂ ನವ್ಯಂ ತಂತುಂ ತನನೀಯಂ ವಿಸ್ತಾರಣೀಯಂ । ಜಾತ್ಯೇಕವಚನಂ । ರಶ್ಮಿನಾ ತನ್ವತೇ । ಸಮಂತಾದ್ವಿಸ್ತಾರಯಂತಿ ॥

### ಪ್ರತಿಪದಾರ್ಥ

ಜಾಮೀ— ಸಹೋದರಿಯರೂ । ಸಯೋನೀ— ಒಂದೇ ಉತ್ಪತ್ತಿಸ್ಥಾನವುಳ್ಳವರೂ । ಮಿಥುನಾ— ಒಟ್ಟಿಗಿರುವವರೂ । ಸಮೋಕಸಾ—ಆಕಾಶರೂಪವಾದ ಒಂದೇ ವಾಸಸ್ಥಾನವುಳ್ಳವರೂ ಆದ । ತೇ—ಆ ದ್ಯಾವಾ ಪೃಥಿವಿಗಳು । ಮಾಯಿನಃ—(ತಮ್ಮ ವಿಷಯದಲ್ಲಿ ಪೂರ್ಣವಾದ) ಪ್ರಜ್ಞೆಯುಳ್ಳವೂ । ಸುಪ್ರಚೇತಸಃ—ಶ್ರೇಷ್ಠವಾದ ಚೈತನ್ಯದಾನದ ಶಕ್ತಿಯುಳ್ಳವೂ ಆದ ರಶ್ಮಿಗಳನ್ನು । ಮಮಿರೇ—ಪ್ರಮಾಣರೂಪದಲ್ಲಿ ನಿಯಮಿಸುತ್ತವೆ । ಕವಯಃ—ಮೇಧಾವಿಗಳೂ ಎಂದರೆ ತಮ್ಮ ಕರ್ತವ್ಯವನ್ನು ಚೆನ್ನಾಗಿ ತಿಳಿದವೂ । ಸುದೀತಯಃ—ಶ್ರೇಷ್ಠವಾಗಿ ಪ್ರಕಾಶಿಸುವುವೂ ಆದ ರಶ್ಮಿಗಳು । ದಿವಿ—ಪ್ರಕಾಶಮಾನವಾದ । ಸಮುದ್ರೇ ಅಂತಃ—ಅಂತರಿಕ್ಷದ ಮಧ್ಯಭಾಗ ದಲ್ಲಿ । ನವ್ಯಂನವ್ಯಂ—ಅತ್ಯಂತ ನೂತನವಾದುದೂ । ತಂತುಂ—ವಿಸ್ತೃತವಾಗತಕ್ಕದ್ದೂ ಆದ ತಮ್ಮ ಪ್ರಭೆಗಳನ್ನು । ಆ ತನ್ವತೇ—ಸುತ್ತಲೂ ಪ್ರಸರಿಸುತ್ತವೆ ॥

ಭಾವಾರ್ಥ

ಸಹೋದರಿಯರೂ, ಒಂದೇ ಉತ್ಪತ್ತಿಸ್ಥಾನವುಳ್ಳವರೂ, ಒಟ್ಟಿಗಿರುವವರೂ, ಆಕಾಶರೂಪವಾದ ಒಂದೇ ವಾಸಸ್ಥಾನವುಳ್ಳವರೂ ಆದ ದ್ಯಾವಾಪೃಥಿವಿಗಳು ತಮ್ಮ ವಿಷಯದಲ್ಲಿ ಪೂರ್ಣವಾದ ಪ್ರಜ್ಞೆಯುಳ್ಳವೂ ಶ್ರೇಷ್ಠವಾದ ಚೈತನ್ಯಪ್ರದಾನದ ಶಕ್ತಿಯುಳ್ಳವೂ ಆದ ರಶ್ಮಿಗಳನ್ನು ಪ್ರಮಾಣರೂಪದಲ್ಲಿ ನಿಯಮಿಸುತ್ತವೆ. ಮೇಧಾವಿಗಳೂ ಎಂದರೆ ತಮ್ಮ ಕರ್ತವ್ಯವನ್ನು ಚೆನ್ನಾಗಿ ತಿಳಿದವೂ, ಶ್ರೇಷ್ಠವಾಗಿ ಪ್ರಕಾಶಿಸುವುವೂ ಆದ ರಶ್ಮಿಗಳು ಪ್ರಕಾಶಮಾನವಾದ ಅಂತರಿಕ್ಷದ ಮಧ್ಯಭಾಗದಲ್ಲಿ ಅತ್ಯಂತ ನೂತನವಾದುದೂ ವಿಸ್ತೃತವಾಗತಕ್ಕದ್ದೂ ಆದ ತಮ್ಮ ಪ್ರಭೆಗಳನ್ನು ಸುತ್ತಲೂ ಪ್ರಸರಿಸುವಂತೆ ಮಾಡುತ್ತವೆ.

English Translation

Those provident and intlligent sisters, (the rays of light), conceived of the same womb, (ever) united (with each other), and dwelling in the same abode, mete out (all things) : knowing (their functions), and bright-shining, they spread in ever new (directions) throughout the radiant firmament.

ವಿಶೇಷವಿಷಯಗಳು

ಜಾಮೀ—ಜಾಮಿರನ್ಯೇಽಸ್ಯಾಂ ಜನಯಂತಿ ಜಾಮಪತ್ಯಂ । ಜಮತೇರ್ವಾ ಸ್ಯಾದ್ಗತಿಕರ್ಮಣೋ ನಿರ್ಗಮನಪ್ರಾಯಾ ಭವತಿ । (ನಿ. ೩-೬) ಇತರನು ಇವಳಲ್ಲಿ ಮಕ್ಕಳನ್ನು ಉತ್ಪನ್ನವಾಗುವಂತೆ ಮಾಡುತ್ತಾನೆ ಎಂಬ ಅಭಿಪ್ರಾಯವನ್ನು ಹೇಳುವುದೂ, ಹುಟ್ಟು ಎಂಬರ್ಥವನ್ನು ಕೊಡುವ ಜನ್ ಧಾತುವಿನಿಂದ ನಿಷ್ಪನ್ನವಾದುದೂ ಆದ ವ್ಯುತ್ಪತ್ತಿಯನ್ನು ಹೇಳುವುದು ಒಂದು ವಿಧ. ಅಥವಾ ಭರ್ತೃವಿನ ಮನೆಗೆ ಹೋಗುವವಳು ಎಂಬಭಿಪ್ರಾಯವನ್ನು ಕೊಡುವುದೂ, ಹೋಗು ಎಂಬರ್ಥವನ್ನು ಕೊಡುವ ಜಮ್ ಧಾತುವಿನಿಂದ ನಿಷ್ಪನ್ನವಾದುದೂ ಆದ ವ್ಯುತ್ಪತ್ತಿಯನ್ನು ಹೇಳುವುದು ಇನ್ನೊಂದು ವಿಧ. ಈ ಎರಡು ವಿವರಣೆಯ ಪ್ರಕಾರವೂ ಸಹ ಜಾಮಿ ಎನ್ನುವ ಪದಕ್ಕೆ ಸಹೋದರಿ ಎಂದರ್ಥವೆಂದು ನಿರುಕ್ತಕಾರರ ನಿರ್ವಚನದಿಂದ ತಿಳಿಯುತ್ತದೆ. ಈ ಅರ್ಥವನ್ನು ಸಮರ್ಥಿಸುವಂತೆ

ನ ಜಾಮಯೇ ತಾನ್ವೋ ರಿಕ್ಥಮಾರೈಕ್ಚಕಾರ ಗರ್ಭಂ ಸನಿತುರ್ನಿಧಾನಂ ।
ಯದೀ ಮಾತರೋ ಜನಯಂತ ವಹ್ನಿಮನ್ಯಃ ಕರ್ತಾ ಸುಕೃತೋರನ್ಯ ಋಂಧನ್ ॥

(ಋ. ಸಂ. ೩-೩೧-೨)

ಎಂಬ ಋಕ್ಕನ್ನುದಹರಿಸಿ ಜಾಮಿಶಬ್ದಕ್ಕೆ ಸಹೋದರಿಯೆಂದರ್ಥ ಮಾಡಿರುವರು ಇದರಂತೆಯೇ,

ಭಗಸ್ಯ ಸ್ವಸಾ ವರುಣಸ್ಯ ಜಾಮಿರುಷಃ ಸೂನೃತೇ ಪ್ರಥಮಾ ಜರಸ್ವ ।
ಪಶ್ಚಾ ಸ ದಧ್ಯಾ ಯೋ ಅಘಸ್ಯ ಧಾತಾ ಜಯೇಮ ತಂ ದಕ್ಷಿಣಯಾ ರಥೇನ ॥

(ಋ. ಸಂ. ೧-೧೨೩-೫)

ಎಂಬಲ್ಲಿಯೂ ಸಹ ಭಗಿನೀಸ್ಥಾನೀಯಾಸಿ ವರುಣನಿಗೆ ಸಹೋದರಿಯಂತಿದ್ದೀಯೆ ಎಂದರ್ಥಮಾಡಿದೆ. ಇದೇ ಅರ್ಥವು ವಿಸ್ತೃತವಾಗಿ ಈ ಪದಕ್ಕೆ ಬಂಧುಗಳು ಎಂದೂ ಸಹ ಆಗುವುದೆಂದು ಹಿಂದೆ ಉದಾಹರಣೆಗಳೊಡನೆ

ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ದ್ಯಾವಾಪೃಥಿವಿಗಳು ಪರಸ್ಪರ ಸಹೋದರಿಯರೆಂದು ಸಯೋನೀ ಇತ್ಯಾದಿ ವಿಶೇಷಣಗಳಿಂದ ವಿಶದಪಡಿಸಿದೆ.

ಸಯೋನೀ—ಸಮಾನೋತ್ಪತ್ತಿಸ್ಥಾನೇ । ಒಂದೇ ಉತ್ಪತ್ತಿಸ್ಥಾನವುಳ್ಳವರು ಎಂದಿದೆ. ಆದರೆ ಈ ಉತ್ಪತ್ತಿಸ್ಥಾನವು ಯಾವುದೆಂದು ನಿಷ್ಕೃಷ್ಟವಾಗಿ ತಿಳಿಸಿಲ್ಲ. ಆದರೆ ಇತರ ಕಡೆಗಳಲ್ಲಿ ದ್ಯಾವಾಪೃಥಿವಿಗಳ ಉತ್ಪತ್ತಿಯ ವಿಷಯವನ್ನು ತಿಳಿಸಿದೆ.

ಜನಿತಾ ದಿವೋ ಜನಿತಾ ಪೃಥಿವ್ಯಾಃ ಪಿಬಾ ಸೋಮಂ ಮದಾಯ ಕಂ ಶತಕ್ರತೋ ।

ಯಂ ತೇ ಭಾಗಮಧಾರಯನ್ವಿಶ್ವಾಃ ಸೇಹಾನಃ ಪೃತನಾ ಉರು ಜ್ರಯಃ ಸಮಪ್ಸುಜಿನ್ಮರುತ್ವಾ ಇಂದ್ರ ಸತ್ಪತೇ ॥

(ಋ. ಸಂ. ೮-೩೬-೪)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನೇ ದ್ಯಾವಾಪೃಥಿವಿಗಳ ಸೃಷ್ಟಿಕರ್ತನೆಂದು ಹೇಳಿದೆ. ಆದರೆ,

ಮಾ ನೋ ಹಿಂಸೀಜ್ಜನಿತಾ ಯಃ ಪೃಥಿವ್ಯಾ ಯೋ ದಿವಂ ಸತ್ಯಧರ್ಮಾ ಜಜಾನ ।
ಯಶ್ಚಾಪಶ್ಚಂದ್ರಾ ಬೃಹತೀರ್ಜಜಾನ ಕಸ್ಮೈ ದೇವಾಯ ಹವಿಷಾ ವಿಧೇಮ ।

(ಋ. ಸಂ. ೧೦-೧೨೧-೯)

ಎಂಬಲ್ಲಿ ಹಿರಣ್ಯಗರ್ಭನೂ,

ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋ ದ್ಯೌಃ ಸಮವರ್ತತ ।

ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್ತಥಾ ಲೋಕಾँ ಅಕಲ್ಪಯನ್ ।

(ಋ. ಸಂ. ೧೦-೯೦-೧೪)

ಎಂಬ ಋಕ್ಕಿನಲ್ಲಿ ವಿರಾಡ್ರೂಪಿಯಾದ ಪುರುಷನೂ ದ್ಯಾವಾಪೃಥಿವಿಗಳನ್ನು ಸೃಷ್ಟಿಸಿದನೆಂದು ಹೇಳಿದೆ. ಹೀಗೆ ಇವರ ಸೃಷ್ಟಿಯ ವಿಷಯವನ್ನು ವರ್ಣಿಸುವಾಗಲೆಲ್ಲಾ ಇಬ್ಬರ ಉತ್ಪತ್ತಿಗೂ ಒಂದೇ ಮೂಲವೆಂದು ಸ್ಪಷ್ಟವಾಗಿ ತಿಳಿಸಿದೆ. ಅದನ್ನೇ ಈ ಋಕ್ಕಿನಲ್ಲಿ ಸಯೋನೀ ಎಂಬ ವಿಶೇಷಣದಿಂದ ತಿಳಿಸಿದೆ.

ಮಾಯಿನಃ—ಮಾಯಾ ಪ್ರಜ್ಞಾ । ಸ್ವವಿಷಯಪ್ರಜ್ಞಾವಂತಃ । ತಮ್ಮ ಕರ್ತವ್ಯದ ವಿಷಯದಲ್ಲಿ ಪ್ರಜ್ಞೆಯುಳ್ಳವರೆಂದರ್ಥಮಾಡಿದೆ.

ಮಾಯೇತಿ ಪ್ರಜ್ಞಾನಾಮ । ನಿರುಕ್ತಕಾರರು ಮಾಯಾ, ವಯುನಂ, ಇತ್ಯಾದಿಪ್ರಜ್ಞಾನಾಮಗಳಲ್ಲಿ ಸೇರಿಸಿದ್ದಾರೆ. (ನಿ. ೩-೧೩) ಅಲ್ಲದೇ,

ಮಾಯಾಮೂ ತು ಯಜ್ಞಿಯಾನಾಮೇತಾಮಪೋ ಯತ್ತೂರ್ಣಿಶ್ಚರತಿ ಪ್ರಜಾನನ್ ।

(ಋ. ಸಂ. ೧೦-೮೮-೬)

ಎಂಬ ಋಕ್ಕನ್ನುದಹರಿಸಿ ಸ ಏವ ಪ್ರಜ್ಞಾಂ ತ್ವೇತಾಂ ಮನ್ಯಂತೇ । ಎಂದು ವಿವರಿಸಿ ಮಾಯಾ ಪದಕ್ಕೆ ಪ್ರಜ್ಞೆಯೆಂದರ್ಥವೆಂದು ತಿಳಿಸಿದ್ದಾರೆ. (ನಿ. ೭-೨೭) ಮತ್ತು,

ವಿಶ್ವಾ ಹಿ ಮಾಯಾ ಅವಸಿ ಸ್ವಧಾವೋ ಭದ್ರಾ ತೇ ಪೂಷನ್ನಿಹ ರಾತಿರಸ್ತು ।
(ಋ. ಸಂ. ೬-೫೮-೧)

ಎಂಬ ಋಕ್ಕನ್ನು ಸಹ ಉದಹರಿಸಿ (ನಿ. ೧೨-೧೭) ಇಲ್ಲಿಯೂ ಸಹ ಪ್ರಜ್ಞೆಯೆಂದರ್ಥಮಾಡಿದ್ದಾರೆ. ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿ ಮಾಯಿನಃ ಎಂದರೆ ಪ್ರಜ್ಞೆಯುಳ್ಳ ಎಂದು ರಶ್ಮಿಗಳಿಗೆ ವಿಶೇಷಣವಾಗಿದೆ.

ಸಮುದ್ರೇ ಅಂತಃ— ಸಮುದ್ರಶಬ್ದೋಽಂತರಿಕ್ಷನಾಮಸು ಪಾಠಾತ್ತದ್ವಚನಃ ಸ ಚೈವಂ ಯಾಸ್ಕೇನ ನಿರುಕ್ತಃ। ನಿರುಕ್ತಕಾರರು ಸಮುದ್ರಶಬ್ದವನ್ನು ಅಂತರಿಕ್ಷನಾಮಗಳಲ್ಲಿ ಸೇರಿಸಿರುವರೆಂದು ತಿಳಿಸಿ ಸಾಯಣರು ನಿರುಕ್ತವಾಕ್ಯವನ್ನುದಹರಿಸಿ ಸಮುದ್ರ ಶಬ್ದದ ನಿರ್ವಚನವನ್ನೂ ತಿಳಿಸಿದ್ದಾರೆ.

ಸಮುದ್ರಃ ಕಸ್ಮಾತ್ಸಮುದ್ದ್ರವಂತ್ಯಸ್ಮಾದಾಪಃ ಸಮಭಿದ್ರವಂತ್ಯೇನಮಾಪಃ ಸಂಮೋದಂತೇಽಸ್ಮಿನ್ ಭೂತಾನಿ ಸಮುದಕೋ ಭವತಿ ಸಮುನತ್ತೀತಿ ವಾ ।
(ನಿ. ೨-೧೧)

ಚಲಿಸು ಎಂದರ್ಥವನ್ನು ಕೊಡುವ ದ್ರು ಧಾತುವಿನೊಡನೆ ಸಂ, ಉದ್ ಎಂಬ ಎರಡು ಉಪಸರ್ಗಗಳೂ ಸೇರಿಕೊಂಡು ಮೇಲಕ್ಕೆ ಉಕ್ಕಿ ಹರಿಯುತ್ತವೆ ಎಂದು ತಾತ್ಪರ್ಯವನ್ನು ಕೊಡುತ್ತದೆಯಾದ್ದರಿಂದಲೂ, ಅಥವಾ ಎರಡನೆಯದಾಗಿ ಅದೇ ದ್ರು ಧಾತುವಿನೊಡನೆ ಸಮ್, ಅಭಿ ಎಂಬ ಉಪಸರ್ಗಗಳು ಸೇರಿಕೊಂಡು (ನದಿಯ) ನೀರುಗಳು ಇದರ ಕಡೆಗೆ ಹರಿದುಬರುತ್ತವೆಯೆಂಬ ಅರ್ಥವನ್ನು ಕೊಡುವುದರಿಂದಾಗಲಿ, ಅಥವಾ ಸಂತೋಷಪಡು ಎಂಬರ್ಥವನ್ನು ಕೊಡುವ ಮುದ್ ಧಾತುವಿನೊಡನೆ ಸಮ್ ಎಂಬ ಉಪಸರ್ಗವು ಸೇರಿ ಜಲಚರಪ್ರಾಣಿಗಳು ಇದರಲ್ಲಿ ಹರ್ಷವನ್ನನುಭವಿಸುತ್ತವೆ ಎಂಬರ್ಥವನ್ನು ಕೊಡುವುದರಿಂದಾಗಲಿ, ಅಥವಾ ಉದಕಕ್ಕೆ ನಿಧಿಯಾಗಿರುವುದರಿಂದಾಗಲಿ ಅಥವಾ ತೇವಮಾಡು ಎಂಬರ್ಥವನ್ನು ಕೊಡುವ ಉದ್ ಧಾತುವಿನೊಡನೆ ಸಮ್ ಉಪಸರ್ಗವು ಸೇರಿ ನೆನೆಯಿಸು ಎಂದು ತಾತ್ಪರ್ಯವನ್ನು ಕೊಡುವುದರಿಂದಾಗಲಿ ಸಮುದ್ರವೆಂಬ ಪದವು ನಿಷ್ಪನ್ನವಾಗಿದೆಯೆಂದು ನಿರುಕ್ತಕಾರರು ನಿರ್ವಚನವನ್ನು ತೋರಿಸಿದ್ದಾರೆ. (ನಿ. ೨-೧೦).

ಅನಂತರ ಪಾರ್ಥಿವವಾದ ಸಮುದ್ರಕ್ಕೂ ಅಂತರಿಕ್ಷಪರ್ಯಾಯವಾದ ಸಮುದ್ರಕ್ಕೂ ವ್ಯತ್ಯಾಸವನ್ನು ತೋರಿಸುತ್ತಾ ಇವೆರಡಕ್ಕೂ ವ್ಯತ್ಯಾಸವನ್ನು ತಿಳಿಯದೇ ಸಂದೇಹಕ್ಕವಕಾಶವನ್ನು ಕೊಡುವಂತೆ ಅರ್ಥಮಾಡುವವರನ್ನು ಕುರಿತು,

ತತ್ರ ಸಮುದ್ರ ಇತ್ಯೇತತ್ಪಾರ್ಥಿವೇನ ಸಮುದ್ರೇಣ ಸಂದಿಹ್ಯತೇ ।

ಅಂತರಿಕ್ಷಪರ್ಯಾಯವಾದ ಸಮುದ್ರವನ್ನು ಅನೇಕರು ಪಾರ್ಥಿವಸಮುದ್ರವೆಂದು ಭ್ರಮಿಸಿ ಅರ್ಥಮಾಡುತ್ತಾರೆ. ಅದು ಸರಿಯಲ್ಲ ಎಂದು ಈ ಸಂದರ್ಭದಲ್ಲಿ ಅಂತರಿಕ್ಷ ಪರ್ಯಾಯವಾದ ಸಮುದ್ರಕ್ಕೂ ಪಾರ್ಥಿವವಾದ ಸಮುದ್ರಕ್ಕೂ ವ್ಯತ್ಯಾಸವನ್ನು ತೋರಿಸುವುದಕ್ಕೆ ಒಂದು ಇತಿಹಾಸವನ್ನೂ ಉದಹರಿಸಿದ್ದಾರೆ

ತಯೋರ್ವಿಭಾಗಸ್ತತ್ರೇತಿಹಾಸಮಾಚಕ್ಷತೇ। ದೇವಾಪಿಶ್ಚಾರ್ಷ್ಟಿಷೇಣಃ ಶಂತನುಶ್ಚ ಕೌರವ್ಯೌ ಭ್ರಾತರೌ ಬಭೂವತುಃ। ಸ ಶಂತನುಃ ಕನೀಯಾನಭಿಷೇಚಯಾಂಚಕ್ರೇ। ದೇವಾಪಿಸ್ತಪಃ-ಪ್ರತಿಪೇದೇ। ತತಃ ಶಂತನೋ ರಾಜ್ಯೇ ದ್ವಾದಶವರ್ಷಾಣಿ ದೇವೋ ನ ವವರ್ಷ। ತಮೂ-

ಚುರ್ಬ್ರಾಹ್ಮಣಾ ಅಧರ್ಮಸ್ತ್ವಯಾಚರಿತೋ ಜ್ಯೇಷ್ಠಂ ಭ್ರಾತರಮಂತರಿತ್ಯಾಭಿಷೇಚಿತಂ ತಸ್ಮಾತ್ತ್ವೇ ದೇವೋ ನ ವರ್ಷತೀತಿ । ಸ ಶಂತನುರ್ದೇವಾಪಿಂ ಶಿಶಿಕ್ಷ ರಾಜ್ಯೇನ । ತಮುವಾಚ ದೇವಾಪಿಃ ಪುರೋಹಿತಸ್ತೇऽಸಾನಿ ಯಾಜಯಾನಿ ಚ ತ್ವೇತಿ ತಸ್ಯೈತದ್ವರ್ಷಕಾಮಸೂಕ್ತಂ ತಸ್ಯೈಷಾ ಭವತಿ ।

ಕುರುವಂಶಸ್ಥರೂ ಋಷ್ಟಿಷೇಣಪುತ್ರರೂ ಆದ ದೇವಾಪಿ ಮತ್ತು ಶಂತನು ಎಂಬಿಬ್ಬರಲ್ಲಿ ಚಿಕ್ಕವನಾದ ಶಂತನುವು ತಾನೇ ಪಟ್ಟಾಭಿಷಿಕ್ತನಾಗಿ ಆ ರಾಜ್ಯಕ್ಕೆ ದೊರೆಯಾದನು. ದೇವಾಪಿಯು ತಪಶ್ಚರಣೆನಾಗಿ ಕಾಡಿಗೆ ಹೊರಟು ಹೋದನು. ಅಲ್ಲಿಂದ ಮೊದಲು ಹನ್ನೆರಡು ವರ್ಷಗಳ ಕಾಲ ಶಂತನುವಿನ ರಾಜ್ಯದಲ್ಲಿ ಮಳೆಯಾಗಲಿಲ್ಲ. ಆಗ ಬ್ರಾಹ್ಮಣರು ಶಂತನುವನ್ನು ಕುರಿತು ನೀನು ದೊಡ್ಡವನಾದ ನಿಮ್ಮಣ್ಣನನ್ನು ಕಾಡಿಗೆ ಕಳುಹಿಸಿ ನೀನೇ ದೊರೆಯಾಗಿರುವುದರಿಂದ ನೀನು ಪಾಪಕೃತ್ಯವನ್ನು ಮಾಡಿದಂತಾಯಿತು. ಆದುದರಿಂದ ವೃಷ್ಟಿದೇವನು ನಿನ್ನ ರಾಜ್ಯದಲ್ಲಿ ಮಳೆಯನ್ನು ಸುರಿಸಿಲ್ಲ ಎಂದರು. ಆಗ ಶಂತನುವು ದೇವಾಪಿಯನ್ನು ರಾಜ್ಯಾಭಿಷಿಕ್ತನನ್ನಾಗಿ ಮಾಡಲು ಪ್ರಯತ್ನಿಸಿದಾಗ ದೇವಾಪಿಯು ನಾನು ನಿನಗೆ ಪುರೋಹಿತನಾಗಿದ್ದುಕೊಂಡು ನಿನಗಾಗಿ ಯಜ್ಞವನ್ನು ನೆರವೇರಿಸುತ್ತೇನೆ ಎಂದು ವೃಷ್ಟ್ಯರ್ಥವಾಗಿ ಯಜ್ಞವನ್ನು ಮಾಡಿಸಿದನು. ಅನಂತರ ಊರ್ಧ್ವಭಾಗದಲ್ಲಿರುವ ಸಮುದ್ರದಿಂದ ಅಧೋಭಾಗದಲ್ಲಿರುವ ಸಮುದ್ರಕ್ಕೆ ಮಳೆಯು ಸುರಿಯಿತು ಎಂದು ಎರಡು ಸಮುದ್ರಗಳಿಗೂ ವ್ಯತ್ಯಾಸವನ್ನು ತೋರಿಸುವ,

ಆರ್ಷ್ಟಿಷೇಣೋ ಹೋತ್ರಮೃಷಿರ್ನಿಷೀದನ್ ದೇವಾಪಿರ್ದೇವಸುಮತಿಂ ಚಿಕಿತ್ವಾನ್ ।
ಸ ಉತ್ತರಸ್ಮಾದಧರಂ ಸಮುದ್ರಮಪೋ ದಿವ್ಯಾ ಅಸೃಜದ್ವರ್ಷ್ಯಾ ಅಭಿ ॥

(ಋ. ಸಂ. ೧೦-೯೮-೫)

ಎಂಬ ಋಕ್ಕನ್ನುದಹರಿಸಿ ಇಲ್ಲಿ ವರ್ಣಿತವಾಗಿರುವ ಉತ್ತರ ಸಮುದ್ರಕ್ಕೂ ಅಧರ ಸಮುದ್ರಕ್ಕೂ ವ್ಯತ್ಯಾಸವನ್ನು ತೋರಿಸಿದ್ದಾರೆ. ಇಲ್ಲಿ ಉತ್ತರಸಮುದ್ರವೆಂದರೆ ಅಂತರಿಕ್ಷವೆಂದೂ ಅಧರಸಮುದ್ರವೆಂದರೆ ಪಾರ್ಥಿವಸಮುದ್ರವೆಂದೂ ಅರ್ಥ. ಹೀಗೆ ಈ ಪದಕ್ಕೆ ಸಂದರ್ಭಾನುಸಾರವಾಗಿ ಅರ್ಥವನ್ನು ಹೇಳಬೇಕಾಗುತ್ತದೆ. ಆದರೆ,

ಯಥಾ ವಾತೋ ಯಥಾ ವನಂ ಯಥಾ ಸಮುದ್ರ ಏಜತಿ ।
ಏವಾ ತ್ವಂ ದಶಮಾಸ್ಯ ಸಹಾವೇಹಿ ಜರಾಯುಣಾ ॥

(ಋ ಸಂ. ೫-೭೮-೮)

ಇತ್ಯಾದಿ ಋಕ್ಕುಗಳಲ್ಲಿ ಅಂತರಿಕ್ಷಪರ್ಯಾಯವೇ ಅಥವಾ ಪಾರ್ಥಿವ ಸಮುದ್ರವೇ ಎಂದು ಹೇಳಲು ಕಷ್ಟವಾಗುವುದು.

ಯಾ ಆಪೋ ದಿವ್ಯಾ ಉತ ವಾ ಸ್ರವಂತಿ ಖನಿತ್ರಿಮಾ ಉತ ವಾ ಯಾಃ ಸ್ವಯಂಜಾಃ ।
ಸಮುದ್ರಾರ್ಥಾ ಯಾಃ ಶುಚಯಃ ಪಾವಕಾಸ್ತಾ ಆಪೋ ದೇವೀರಿಹ ಮಾಮವಂತು ॥

(ಋ. ಸಂ. ೭-೪೯-೨)

ಇತ್ಯಾದಿನಾನಾಋಕ್ಕುಗಳಲ್ಲಿ ಪಾರ್ಥಿವಸಮುದ್ರವೆಂದು ನಿಸ್ಸಂಶಯವಾಗಿ ಹೇಳಬಹುದು. ಕೆಲವು ಕಡೆಗಳಲ್ಲಿ ಈ ಪದವು ವಿಶೇಷಣವಾಗಿ ಉಪಯೋಗಿಸಲ್ಪಟ್ಟು ಪ್ರವಿಸತಕ್ಕ ಎಂಬರ್ಥವನ್ನು ಕೊಡುತ್ತದೆ.

**ಅದ್ಭಿರ್ಯಾತಿ ವರುಣಃ ಸಮುದ್ರೈರ್ಯುಷ್ಮಾँ ಇಚ್ಛಂತಃ ಶವಸೋ ನಪಾತಃ ।**

(ಋ. ಸಂ. ೧-೧೬೧-೧೪)

ಎಂಬ ಋಕ್ಕಿನಲ್ಲಿ ಸಮುದ್ರೈಃ ಸಮುಂದನಸ್ವಭಾವೈಃ ಅದ್ಭಿಃ—ಸ್ರವಿಸತಕ್ಕ ಸ್ವಭಾವವುಳ್ಳ ಉದಕಗಳೊಡನೆ ಎಂದರ್ಥ. ಪ್ರಕೃತವಾದ ಋಕ್ಕಿನಲ್ಲಿ ಅಂತರಿಕ್ಷವೆಂದರ್ಥ. ಅಂತರಿಕ್ಷದ ಅಂತಃಪ್ರದೇಶದಲ್ಲೆಲ್ಲಾ ಆದಿತ್ಯರಶ್ಮಿಯ ವ್ಯಾಪ್ತಿಯನ್ನು ತಿಳಿಸಿದೆ.

### ವ್ಯಾಕರಣಪ್ರಕ್ರಿಯಾ

**ಮಾಯಿನಃ**—ಮಾಯಾ ಅಸ್ಯ ಅಸ್ತಿ ಮಾಯೀ. ವ್ರೀಹ್ಯಾದಿಭ್ಯಶ್ಚ (ಪಾ. ಸೂ. ೫-೨-೧೧೬) ಎಂಬುದರಿಂದ ಇನಿ'ಪ್ರತ್ಯಯ. ಪ್ರತ್ಯಯಸ್ವರ ಬರುತ್ತದೆ.

**ಮಮಿರೇ**—ಮಾಙ್ ಮಾನೇ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಯೋನೀ**—ಸಮಾನಂ ಯೋನಿಃ ಯಯೋಸ್ತೇ ಸಯೋನೀ ಸಮಾಸಸ್ಯ ಛಂದಸ್ಯ—(ಪಾ. ಸೂ. ೬-೩-೮೪) ಎಂಬುದರಿಂದ ಸಮಾನ ಎಂಬ ಪದಕ್ಕೆ ಸಭಾವ. ಬಹುವ್ರೀಹಿಯಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಮಿಥುನಾ**—ಮಿಥ ಎಂಬುದು. ಸೌತ್ರಧಾತು. ಕ್ಷುಧಿಪಿಶಿಮಿಥಿಭ್ಯಃಕಿತ್ (ಉ. ಸೂ. ೩೩೫) ಎಂಬುದರಿಂದ ಉನನ್ ಪ್ರತ್ಯಯ. ಕಿತ್ವವಿಧಾನ ಮಾಡಿರುವುದರಿಂದ ಲಘೂಪಧಗುಣ ಬರುವುದಿಲ್ಲ. ದ್ವಿವಚನ ಪರವಾದಾಗ ಸುಪಾಂ ಸುಲುಕ್ ಸೂತ್ರದಿಂದ ಅದಕ್ಕೆ ಆಕಾರಾದೇಶ.

**ಸಮೋಕಸಾ**—ಉಚ ಸಮವಾಯೇ ಧಾತು. ಬಹುವಚನದಿಂದ ಅಸುನ್‌ಪ್ರತ್ಯಯ ಬಂದಾಗ ಕುತ್ವ. ಓಕಉಚಃಕೇ (ಕಾ. ೭-೩-೬೪) ಎಂಬ ವಚನದಿಂದ ಇದು ಸಿದ್ಧವಾಗುತ್ತದೆ. ಬಹುವ್ರೀಹಿಯಲ್ಲಿ ಹಿಂದಿನಂತೇ ಪೂರ್ವಪದಪ್ರಪೃತಿಸ್ವರ ಬರುತ್ತದೆ.

**ನವ್ಯಂನವ್ಯಮ್**—ನಿತ್ಯವೀಪ್ಸಯೋಃ (ಪಾ. ಸೂ. ೮-೧-೪) ಎಂಬುದರಿಂದ ದ್ವಿರ್ವಚನ. ಅನುದಾತ್ತಂಚ (ಪಾ. ಸೂ. ೮-೧-೦) ಎಂಬುದರಿಂದ ಪರದ ಆಮ್ರೇಡಿತವು ಅನುದಾತ್ತವಾಗುತ್ತದೆ.

**ತೆನ್ವತೇ**—ತನು ವಿಸ್ತಾರೇ ಧಾತು. ಲಟ್ ಪ್ರಥಮಪುರುಷಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಸುದೀತಯಃ**—ಶೋಭನಾ ದೀತಿಃ ಯೇಷಾಂ ತೇ. ನಞ್‌ಸುಭ್ಯಾಮ್ (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ॥ ೪ ॥

——— :C: ———

ಸಂಹಿತಾಪಾಠಃ

ತದ್ರಾಧೋ ಅದ್ಯ ಸವಿತುರ್ವರೇಣ್ಯಂ ವಯಂ ದೇವಸ್ಯ ಪ್ರಸವೇ ಮನಾ-
ಮಹೇ ।

ಅಸ್ಮಭ್ಯಂ ದ್ಯಾವಾಪೃಥಿವೀ ಸುಚೇತುನಾ ರಯಿಂ ಧತ್ತಂ ವಸುಮಂತಂ
ಶತಗ್ವಿನಂ ॥ ೫ ॥

ಪದಪಾಠಃ

ತತ್ । ರಾಧಃ । ಅದ್ಯ । ಸವಿತುಃ । ವರೇಣ್ಯಂ । ವಯಂ । ದೇವಸ್ಯ । ಪ್ರ್ರಸವೇ । ಮನಾಮಹೇ ।

ಅಸ್ಮಭ್ಯಂ । ದ್ಯಾವಾಪೃಥಿವೀ ಇತಿ । ಸುಚೇತುನಾ । ರಯಿಂ । ಧತ್ತಂ । ವಸುಮಂತಂ । ಶತಗ್ವಿನಂ ॥೫॥

ಸಾಯಣಭಾಷ್ಯಂ

ವಯಂ ಯಜಮಾನಾಃ ಸವಿತುಃ ಸರ್ವಸ್ಯ ಪ್ರಸವಿತುರ್ದೇವಸ್ಯಾದಿತ್ಯಸ್ಯಾಂತರ್ಯಾಮಿ-ರೂಪಿಣಃ ಪ್ರಸವೇಽನುಜ್ಞಾಯಾಂ ಸತ್ಯಾಂ ತತ್ತಾದೃಶಂ ವರೇಣ್ಯಂ ವರಣೀಯಂ ರಾಧಃ ಪುರುಷಾರ್ಥ-ಸಾಧನಸಮರ್ಥಂ ಗವಾದಿ ಧನಂ ಮನಾಮಹೇ । ಯಾಚಾಮಹೇ ॥ ಮನ್ಯತಿರ್ಯಾಚ್ಞಾಕರ್ಮಾ । ಛಾಂದಸಃ ಶಪ್ ॥ ಯದ್ವಾ । ಪುನಃಪುನರಭ್ಯಸ್ಯಾಮಃ । ಲಪ್ಸೀಮಹೀತಿ ಯಾವತ್ ॥ ಮ್ನಾ ಅಭ್ಯಾಸೇ । ವ್ಯತ್ಯಯೇನಾತ್ಮನೇಪದಂ । ಶಪಿ ಪಾಘ್ರಾದಿನಾ ಮನಾದೇಶಃ ॥ ಕಿಂಚಾಸ್ಮಭ್ಯಂ ದ್ಯಾವಾಪೃಥಿವೀ ದ್ಯಾವಾ-ಪೃಥಿವ್ಯೌ ಸುಚೇತುನಾ ಶೋಭನಚೇತನೇನಾಸ್ಮದನುಗ್ರಹಬುದ್ಧ್ಯಾ ರಯಿಂ ಧನಂ ಧತ್ತಂ । ದತ್ತಂ । ಕೀದೃಶಂ । ವಸುಮಂತಂ ನಿವಾಸಯೋಗ್ಯಗೃಹಾದಿವಿಶಿಷ್ಟಂ ಶತಗ್ವಿನಂ ಶತಸಂಖ್ಯಾಕಗವಾದಿವಿಶಿಷ್ಟಂ ॥

ಪ್ರತಿಪದಾರ್ಥ

ವಯಂ—ಯಜಮಾನರಾದ ನಾವು । ಸವಿತುಃ—ಸಕಲವಾದ ಇಷ್ಟಾರ್ಥಗಳನ್ನೂ ಸುರಿಸತಕ್ಕ । ದೇವಸ್ಯ—ಪೂಜ್ಯನಾದ ಆದಿತ್ಯನ । ಪ್ರಸವೇ—ಅನುಗ್ರಹವಿರಲಾಗಿ । ವರೇಣ್ಯಂ—ಅತಿಶಯವಾಗಿ ಅಪೇಕ್ಷಿತವಾದ । ರಾಧಃ—ಗವಾದಿರೂಪವಾದ ಧನವನ್ನು । ಮನಾಮಹೇ—ಯಾಚಿಸುತ್ತೇವೆ ಅಥವಾ (ಅವನಿಂದ) ಪದೇ ಪದೇ ಪಡೆಯುತ್ತೇವೆ । (ಮತ್ತು) ಅಸ್ಮಭ್ಯಂ-ನಮಗೆ । ದ್ಯಾವಾಪೃಥಿವೀ—ದ್ಯಾವಾಪೃಥಿವಿಗಳು । ಸುಚೇತುನಾ-ನಮ್ಮಲ್ಲಿ ದಯೆಯುಳ್ಳ ಬುದ್ಧಿಯಿಂದ । ವಸುಮಂತಂ—ಗೃಹಾದಿ ವಾಸಸ್ಥಾನಗಳಿಂದ ಕೂಡಿದುದೂ । ಶತಗ್ವಿನಂ—ನೂರಾರು ಗೋವುಗಳಿಂದ ಕೂಡಿದುದೂ ಆದ । ರಯಿಂ—ಧನವನ್ನು । ಧತ್ತಂ—ಕೊಡಲಿ.

॥ ಭಾವಾರ್ಥ ॥

ಸಕಲ ಇಷ್ಟಾರ್ಥಗಳನ್ನೂ ಒದಗಿಸಿಕೊಡತಕ್ಕವನೂ ದೇವತಾತ್ಮನೂ ಆದ ಆದಿತ್ಯನ ಅನುಗ್ರಹವಿರಲಾಗಿ ನಾವು ಅತಿಶಯವಾಗಿ ಅಪೇಕ್ಷಿಸುವ ಗವಾದಿರೂಪವಾದ ಧನವನ್ನು ಯಾಚಿಸುತ್ತೇವೆ. ಅಥವಾ ಅವನಿಂದ ಪದೇ

ಪದೇ ಪಡೆಯುತ್ತೇವೆ. ಮತ್ತು ದ್ಯಾವಾಪೃಥಿವಿಗಳು ನಮ್ಮಲ್ಲಿ ದಯೆಯುಳ್ಳ ಬುದ್ಧಿಯಿಂದ ಗೃಹಾದಿವಾಸಸ್ಥಾನಗಳಿಂದ ಕೂಡಿದುದೂ ಮತ್ತು ನೂರಾರು ಗೋವುಗಳಿಂದ ಕೂಡಿದುದೂ ಆದ ಧನವನ್ನು ಕೊಡಲಿ.

## English Translation

We solicit to-day of the divine sun, his favour being propitiated, that wealth which is desirable, . Benignant Heaven and Earth, bestow upon us rieches, (consisting of) habitations and hundreds (of cattle and the like).

### ವಿಶೇಷವಿಷಯಗಳು

ಸವಿತುಃ—ಸವಿತಾ ಸರ್ವಸ್ಯ ಪ್ರಸವಿತಾ । ಸಕಲವನ್ನೂ ಪ್ರಚೋದಿಸತಕ್ಕವನು ಎಂದು ಸವಿತೃವಿನ ಸ್ವರೂಪವನ್ನು ತಿಳಿಸಿರುವುದನ್ನು ಹಿಂದೆ ವಿವರಿಸಿದೆ.

ರಾಧಃ—ಮಘಂ, ರೇಕ್ಣಃ ಇತ್ಯಾದಿಧನನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯). ರಾಧ ಇತಿ ಧನನಾಮ । ರಾಧ್ನುವಂತ್ಯನೇನ । ಇದರಿಂದ ಒಲಿಸಿಕೊಳ್ಳುತ್ತಾರೆ ಅಥವಾ ಸಮಾಧಾನಪಡಿಸುತ್ತಾರೆ ಎಂಬುದರಿಂದ ಧನಕ್ಕೆ ರಾಧಃ ಎಂಬ ಹೆಸರು ಪ್ರಸಿದ್ಧವಾಗಿದೆಯೆಂದು ಸಾಯಣರು ಈ ಪದದ ನಿರ್ವಚನವನ್ನು ತೋರಿಸಿದ್ದಾರೆ.

ಮನಾಮಹೇ—ಮನ್ಯತಿಃ ಯಾಚ್ಞಾಕರ್ಮಾ । ಯಾಚಾಮಹೇ ಯಾಚಿಸುತ್ತೇವೆ ಎಂಬ ಒಂದರ್ಥವನ್ನೂ ಯದ್ವಾ ಪುನಃಪುನರಭ್ಯಾಸ್ಯಾಮಃ । ಲಪ್ಸೀಮಹೀತಿ ಯಾವತ್ । ಅಥವಾ ಪದೇ ಪದೇ ಹೊಂದುತ್ತೇವೆ ಎಂಬ ಎರಡನೆಯ ಅರ್ಥವನ್ನೂ ಹೇಳಿದ್ದಾರೆ. ಸವಿತೃವಿನ ಅನುಗ್ರಹವನ್ನು ಪಡೆದು ಅವನಿಂದ ಧನವನ್ನು ಯಾಚಿಸುತ್ತೇವೆ ಎಂದಾಗಲಿ ಅಥವಾ ಅವನಿಂದ ಧನವನ್ನು ಪುನಃ ಪುನಃ ಪಡೆಯುತ್ತೇವೆ ಎಂದಾಗಲಿ ತಾತ್ಪರ್ಯ.

ಶತಗ್ವಿನಂ—ಶತಸಂಖ್ಯಾಕಗವಾದಿವಿಶಿಷ್ಟಂ । ನೂರಾರು ಸಂಖ್ಯೆಗಳುಳ್ಳ ಗೋವುಗಳುಳ್ಳ ಎಂದು ರಯಿ ಶಬ್ದಕ್ಕೆ ವಿಶೇಷಣವಾಗಿದೆ.

ಶನ್ನೈಶ್ಚಿಧ್ಯಂತೋ ಅದ್ರಿವೋಽಶ್ವಾವಂತಃ ಶತಗ್ವಿನಃ । ವಿರಕ್ಷ್ಣಾ ಅನೇಹಸಃ ।

(ಋ. ಸಂ. ೮-೪೫-೧೧)

ಇತ್ಯಾದಿಋಕ್ಕುಗಳಲ್ಲಿ ಶತಗ್ವಿನಃ ಎಂಬ ಶಬ್ದಕ್ಕೆ ಬಹುಧನಾಃ ಎಂದು ಮಾತ್ರ ಅರ್ಥಮಾಡಿದೆ.

### ॥ ವ್ಯಾಕರಣಪ್ರಕ್ರಿಯಾ ॥

ರಾಧಃ—ರಾಧ ಸಂಸಿದ್ಧೌ ಧಾತು. ಔಣಾದಿಕ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಸವಿತುಃ—ಷು ಪ್ರಸವೈಶ್ವರ್ಯಯೋಃ ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಧಾತುವಿಗೆ ಅದನ್ನು ನಿಮಿತ್ತೀಕರಿಸಿ ಗುಣ-ಅವಾದೇಶ. ಚಿತ್ತಾದುದರಿಂದ ಅಂತೋದಾತ್ತವಾಗುತ್ತದೆ. ಷಷ್ಠೀಏಕವಚನಾಂತರೂಪ.

ಪ್ರಸವೇ—ಪೂರ್ವೋಕ್ತವಾದ ಧಾತುವಿಗೆ ಅಚ್ ಪ್ರತ್ಯಯ. ಧಾತುವಿನ ಉಕಾರಕ್ಕೆ ಗುಣ. ಅವಾದೇಶ. ಚಿತ್ತ್ವಾದುದರಿಂದ ಅಂತೋದಾತ್ತವಾಗುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

ಮನಾಮಹೇ—ಮನ ಜ್ಞಾನೇ ಧಾತು. ಇಲ್ಲಿ ಬೇಡುವುದು ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ಲಟ್ ಉತ್ತಮಪುರುಷಬಹುವಚನ ಪರವಾದಾಗ ವ್ಯತ್ಯಯದಿಂದ ಶಪ್. ಅತೋ ದೀರ್ಘೋ ಯಞಿ (ಪಾ. ಸೂ. ೭-೩-೧೦೧) ಎಂಬುದರಿಂದ ಅದಂತಕ್ಕೆ ದೀರ್ಘ- ತಿಙಂತನಿಘಾತಸ್ವರ ಬರುತ್ತದೆ. ಎರಡನೇ ವ್ಯಾಖ್ಯಾನದಲ್ಲಿ ಮ್ನಾ ಅಭ್ಯಾಸೇ ಧಾತು. ವ್ಯತ್ಯಯೋ ಬಹುಲಂ ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಶಪ್ ಪರವಾದಾಗ ಪಾಘ್ರಾಧ್ಮಾ—(ಪಾ. ಸೂ.) ಎಂಬುದರಿಂದ ಧಾತುವಿಗೆ ಮನಾದೇಶ. ಸ್ವರಾದಿಗಳು ಹಿಂದಿನಂತೇ ಬರುತ್ತವೆ.

ಸುಚೇತುನಾ—ಶೋಭನಂ ಚೇತುಃ ಯಸ್ಯ ಸಃ ತೇನ. ನಞ್ಸುಭ್ಯಾಮ್ (ಪಾ. ಸೂ. ೬-೨-೭೦) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ

ಧತ್ತಮ್—ಡುಧಾಞ್ ಧಾರಣಪೋಷಣಯೋಃ ಧಾತು. ಲೋಟ್ ಮಧ್ಯಮಪುರುಷದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಶತಗ್ವಿನಮ್—ಛಾಂದಸವಾಗಿ ಬಹುವ್ರಿಹಿಸಮಾಸವಾದಾಗಲೂ ಮತ್ವರ್ಥದಲ್ಲಿ ಇನಿಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ. ॥ ೫ ॥

ಇಲ್ಲಿಗೆ ೧೫೯ನೇ ಸೂಕ್ತವು ಮುಗಿದುದು.

---

## ನೂರ ಅರವತ್ತನೆಯ ಸೂಕ್ತವು

---

ತೇಹೀತಿ ಪಂಚರ್ಚಂ ಚತುರ್ಥಂ ಸೂಕ್ತಂ ದೈರ್ಘತಮಸಂ ಜಾಗತಂ ದ್ಯಾವಾಪೃಥಿವ್ಯಂ । ತೇ ಹೀತ್ಯನುಕ್ರಾಂತಂ ॥ ಚತುರ್ವಿಂಶೇಽಹನಿ ವೈಶ್ವದೇವಶಸ್ತ್ರೇ ದ್ಯಾವಾಪೃಥಿವ್ಯನಿವಿದ್ಧಾನಮೇತತ್ಸೂಕ್ತಂ ತೇ ಹಿ ದ್ಯಾವಾಪೃಥಿವೀ ಯಜ್ಞಸ್ಯ ವೋ ರಥ್ಯಮಿತಿ ವೈಶ್ವದೇವಂ । ಆ. ೭-೪ । ಇತಿ ಸೂತ್ರಿತತ್ವಾತ್ ॥ ತಥಾ ಪೃಷ್ಠ್ಯಾಭಿಪ್ಲವಷಡಹಯೋರ್ದ್ವಿತೀಯೇಽಹನಿ ವೈಶ್ವದೇವೇ ದ್ಯಾವಾಪೃಥಿವ್ಯಂ ನಿವಿದ್ಧಾನೀಯಂ ಚಾತುರ್ವಿಂಶಿಕಂ ತೃತೀಯಸವನಂ । ಆ. ೭-೬ । ಇತ್ಯಾಭಿಪ್ಲವಿಕೇ ದ್ವಿತೀಯೇಽಹನ್ಯತಿದಿಷ್ಟತ್ವಾತ್ । ಆಭಿಪ್ಲಾವಿಕಾದ್ದ್ವಿತೀಯಾದಹ್ನಃ ಪೃಷ್ಠ್ಯಸ್ಯ ದ್ವಿತೀಯೇಽಹನ್ಯೇತತ್ಸೂಕ್ತಮತಿದೇಶತಃ ಪ್ರಾಪ್ತಂ ಪೃಷ್ಠ್ಯಸ್ಯಾಭಿಪ್ಲವೇನೋಕ್ತೇ ಅಹನೀ ಆದ್ಯೇ ಆದ್ಯಾಭ್ಯಾಂ । ಆ. ೭-೧೦ । ಇತಿ ಸೂತ್ರಿತತ್ವಾತ್ ॥ ಪ್ರಥಮಾಶ್ವಿನಶಸ್ತ್ರೇ ವಿನಿಯುಕ್ತಾ । ಸಂಸ್ಥಿತೇಷ್ವಾಶ್ವಿನಾಯೇತ್ಯತ್ರ ಸೂತ್ರಿತಂ । ತೇ ಹಿ ದ್ಯಾವಾಪೃಥಿವೀ ವಿಶ್ವಶಂಭುವಾ ವಿಶ್ವಸ್ಯ ದೇವೀಮ್ಮಚಯಸ್ಯ । ಆ. ೬-೫ । ಇತಿ ॥

ಅನುವಾದವು—ತೇ ಹೀ ದ್ಯಾವಾಪೃಥಿವೀ ಎಂಬ ಈ ಸೂಕ್ತವು ಇಪ್ಪತ್ತೆರಡನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಉಚಥ್ಯಪುತ್ರನಾದ ದೀರ್ಘತಮಸ್ ಎಂಬುವನು ಋಷಿಯು. ದ್ಯಾವಾಪೃಥಿವಿಗಳು ದೇವತೆಯು. ಜಗತೀಛಂದಸ್ಸು. ಅನುಕ್ರಮಣಿಕೆಯಲ್ಲಿ ತೇ ಹಿ ಎಂದು ಮೊದಲಾಗಿ ಹೇಳಿರುವುದು. ಯಾಗದ ಇಪ್ಪತ್ತನಾಲ್ಕನೆಯ ದಿವಸ ವೈಶ್ವದೇವಶಸ್ತ್ರಮಂತ್ರಪಠನಮಾಡುವಾಗ ದ್ಯಾವಾಪೃಥಿವೀಸಂಬಂಧವಾದ ನಿವಿದ್ಧಾನಮಂತ್ರಗಳ ಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು, ಆಶ್ವಲಾಯನಶ್ರೌತಸೂತ್ರದ ತೇ ಹಿ ದ್ಯಾವಾಪೃಥಿವೀ ಯಜ್ಞಸ್ಯ ವೋ ರಥ್ಯಮಿತಿ ವೈಶ್ವದೇವಂ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೭-೪) ; ಪೃಷ್ಠ್ಯ ಮತ್ತು ಅಭಿಪ್ಲವಷಡಹವೆಂಬ ಯಾಗಗಳ ಎರಡನೆಯ ದಿವಸದಲ್ಲಿ ವೈಶ್ವದೇವಶಸ್ತ್ರಮಂತ್ರಪಠನಮಾಡುವಾಗ ದ್ಯಾವಾಪೃಥಿವೀಸಂಬಂಧವಾದ ನಿವಿದ್ಧಾನಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ ಚಾತುರ್ವಿಂಶಿಕಂ ತೃತೀಯಸವನಮಿತ್ಯಾಭಿಪ್ಲವಿಕೇ ದ್ವಿತೀಯೇಽಹಸ್ಯತಿದಿಷ್ಟತ್ವಾತ್ ಎಂಬ ಸೂತ್ರದಿಂದಲೂ (ಆ. ೭-೬) ಅಭಿಪ್ಲವಿಕಾದ್ದ್ವಿತೀಯಾದಹ್ನಃ ಪೃಷ್ಠ್ಯಸ್ಯ ದ್ವಿತೀಯೇಽಹನ್ಯೇತತ್ಸೂಕ್ತಮತಿದೇಶತಃ ಪ್ರಾಪ್ತಂ ಪೃಷ್ಠಸ್ಯಾಭಿಪ್ಲವೇನೋಕ್ತೇ ಅಹನೀ ಆದ್ಯೇ ಆದ್ಯಾಭ್ಯಾಂ ಎಂಬ ಸೂತ್ರದಿಂದಲೂ ನಿರ್ದಿಷ್ಟವಾಗಿರುವುದು. (ಆ. ೭-೧೦) ; ಮತ್ತು ಈ ಸೂಕ್ತದ ಮೊದಲನೆಯ ಋಕ್ಕಿಗೆ ಆಶ್ವಿನಶಸ್ತ್ರಮಂತ್ರದಲ್ಲಿಯೂ ವಿನಿಯೋಗವಿರುವುದೆಂದು ಸಂಸ್ಥಿತೇಷ್ವಾಶ್ವಿನಾಯ ಎಂಬ ಸ್ಥಳದಲ್ಲಿ ತೇ ಹಿ ದ್ಯಾವಾಪೃಥಿವೀ ವಿಶ್ವಶಂಭುವಾ ವಿಶ್ವಸ್ಯ ದೇವೀಮೃಚಯೆಸ್ಯ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೬-೫).

---

॥ ಓಂ ॥

## ಸೂಕ್ತ—೧೬೦

---

॥ ಮಂಡಲ—೧ ॥ ಅನುವಾಕ—೨೨ ॥ ಸೂಕ್ತ—೧೬೦ ॥

॥ ಅಷ್ಟಕ— ೨ ॥ ಅಧ್ಯಾಯ—೩ ॥ ವರ್ಗ— ೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—ದ್ಯಾವಾಪೃಥಿವ್ಯೌ ॥

॥ ಛಂದಃ—ಜಗತೀ ॥

---

ಸಂಹಿತಾಪಾಠಃ

ತೇ ಹಿ ದ್ಯಾವಾಪೃಥಿವೀ ವಿಶ್ವಶಂಭುವ ಋತಾವರೀ ರಜಸೋ ಧಾರಯತ್ಕವೀ ।
ಸುಜನ್ಮನೀ ಧಿಷಣೇ ಅಂತರೀಯತೇ ದೇವೋ ದೇವೀ ಧರ್ಮಣಾ ಸೂರ್ಯಃ ಶುಚಿಃ ॥ ೧ ॥

ಪದಪಾಠಃ

ತೇ ಇತಿ । ಹಿ । ದ್ಯಾವಾಪೃಥಿವೀ ಇತಿ । ವಿಶ್ವಽಶಂಭುವಾ । ಋತವರೀ ಇತ್ಯೃತಽವರೀ । ರಜಸಃ । ಧಾರಯತ್ಕವೀ ಇತಿ ಧಾರಯತ್ಽಕವೀ ।
ಸುಜನ್ಮನೀ ಇತಿ ಸುಽಜನ್ಮನೀ । ಧಿಷಣೇ ಇತಿ । ಅಂತಃ । ಈಯತೇ । ದೇವಃ । ದೇವೀ ಇತಿ । ಧರ್ಮಣಾ । ಸೂರ್ಯಃ । ಶುಚಿಃ ॥ ೧ ॥

ಸಾಯಣಭಾಷ್ಯಂ

ತೇ ಹಿ ತೇ ಖಲು ಪ್ರಸಿದ್ಧೇ ದ್ಯಾವಾಪೃಥಿವೀ ಅಂತಸ್ತಯೋರಂತರಾಲೇ ಶುಚಿಃ ಶುದ್ಧೋ ವಿಶ್ವಸ್ಯ ಶೋಧಯಿತಾ ವಾ ದೇವೋ ದೀಪ್ಯಮಾನಃ ಸೂರ್ಯೋ ಧರ್ಮಣಾ ಪ್ರಕಾಶೋದಕದಾನಾದಿಧಾರಣೇನ ಯುಕ್ತಃ ಸನ್ನೀಯತೇ । ಸರ್ವದಾ ಗಚ್ಛತಿ ॥ ಈಙ್ ಗತೌ ದೈವಾದಿಕಃ ॥ ತಾದೃಶಂ ಕರ್ಮ ಯುವಯೋರನುಗ್ರಹಾದಿತಿ ಸ್ತುತಿಃ । ಕೀದೃಶ್ಯೌ ತೇ । ವಿಶ್ವಶಂಭುವಾ । ವಿಶ್ವಂ ಸುಖಭಾವಯಿತ್ರ್ಯ ಯಯೋಸ್ತೇ ವಿಶ್ವಶಂಭುವಾ । ವಿಶ್ವಸ್ಯ ಸುಖಯಿತ್ರ್ಯಾವಿತ್ಯರ್ಥಃ । ಋತಾವರೀ ಋತವತ್ಯೌ ॥ ಋತಶಬ್ದಾಚ್ಛಂದಸೀವನಿಪಾವಿತಿ ವನಿಪ್ । ವನೋ ರ ಚೇತಿ ಙೀಬ್ರೇಫೌ ॥ ರಜಸ ಉದಕಸ್ಯೋದಕೋತ್ಪತ್ತೌ । ಉದಕಂ ರಜ ಉಚ್ಯತ ಇತಿ ನಿರುಕ್ತಂ । ೪-೧೯ । ಧಾರಯತ್ಕವೀ ಅಕ್ಷಚ್ಛೇಣ ಧಾರಕಂ ಕವಿ ಯಯೋಸ್ತೇ ತಾದೃಶ್ಯೌ । ಉದಕೋತ್ಪಾದನಾಯಾ ಪ್ರಯತ್ನವತ್ಯಾವಿತ್ಯರ್ಥಃ । ಯದ್ವಾ । ಧಾರಯತ್ಕವಿರ್ಮನೀಷ್ಯಾದಿತ್ಯೋ ಯಯೋಸ್ತೇ ತಾದೃಶ್ಯೌ । ವೃಷ್ಟ್ಯುದಕಧಾರಯತ್ಸೂರ್ಯೋಪೇತೇ ಇತ್ಯರ್ಥಃ । ಸುಜನ್ಮನೀ ಶೋಭನಜನ್ಮವತ್ಯೌ ಧಿಷಣೇ ಧರ್ಷಣೋಪೇತೇ । ಸ್ವವ್ಯಾಪಾರೇಷು ಪ್ರಗಲ್ಭೇ ಇತ್ಯರ್ಥಃ । ದೇವೀ ದ್ಯೋತಮಾನೇ । ಅತ್ರ ಯದ್ಯಪಿ ಧಿಷಣೇ ಇತ್ಯೇತತ್ ಧಿಷಣೇ ರೋದಸೀ ಇತಿ ತನ್ನಾಮಸೂಕ್ತತ್ವಾದ್ದ್ಯಾವಾಪೃಥಿವೀನಾಮ ತಥಾಪಿ ದ್ಯಾವಾಪೃಥಿವೀ ಇತ್ಯಸ್ಯ ವಿದ್ಯಮಾನತ್ವಾದ್ಯೌಗಿಕಂ ದ್ರಷ್ಟವ್ಯಂ ॥

ಪ್ರತಿಪದಾರ್ಥ

ತೇ ಹಿ ದ್ಯಾವಾಪೃಥಿವೀ—ಪ್ರಸಿದ್ಧವಾದ ದ್ಯಾವಾಪೃಥಿವಿಗಳು | ವಿಶ್ವಶಂಭುವಾ—ಸಕಲಲೋಕಗಳಿಗೂ ಸೌಖ್ಯದಾತರೂ | ಋತಾವರೀ—ಋತದ ನಿಯಮವನ್ನು ಪಾಲಿಸುವವರೂ | ರಜಸಃ—ಉದಕವನ್ನು | ಧಾರಯತ್ಕವೀ—ಧಾರಣೆಮಾಡುವ ಸಾಮರ್ಥ್ಯವುಳ್ಳವರೂ | ಸುಜನ್ಮನೀ—ಶ್ರೇಷ್ಠವಾದ ಜನ್ಮವುಳ್ಳವರೂ | ಧಿಷಣೇ—ಕರ್ತವ್ಯ ಕುಶಲರೂ | ದೇವೀ—ಪ್ರಕಾಶಮಾನರೂ ಅಥವಾ ದೇವತಾತ್ಮರೂ (ಆಗಿದ್ದಾರೆ) | ಅಂತಃ—ಈ ದ್ಯಾವಾಪೃಥಿವಿಗಳ ನಡುವೆ | ಶುಚಿಃ—ಪವಿತ್ರಾತ್ಮನಾದವನೂ | ದೇವಃ—ಪ್ರಕಾಶಮಾನನೂ ಆದ | ಸೂರ್ಯಃ—ಸೂರ್ಯನು| ಧರ್ಮಣಾ—ಉದಕವನ್ನು ಧರಿಸುವುದು, ಲೋಕವನ್ನು ಬೆಳಗುವುದು ಇತ್ಯಾದಿ ಕರ್ಮಯುಕ್ತನಾಗಿ | ಈಯತೇ—ಸಂಚರಿಸುತ್ತಾನೆ.

ಭಾವಾರ್ಥ

ಲೋಕಪ್ರಸಿದ್ಧರಾದ ದ್ಯಾವಾಪೃಥಿವಿಗಳು ಸಕಲಲೋಕಗಳಿಗೂ ಸೌಖ್ಯದಾತರೂ, ಋತದ ನಿಯಮವನ್ನು ಪಾಲಿಸುವವರೂ, ಉದಕವನ್ನು ಧಾರಣೆಮಾಡುವ ಸಾಮರ್ಥ್ಯವುಳ್ಳವರೂ, ಕರ್ತವ್ಯಕುಶಲರೂ ಮತ್ತು ಪ್ರಕಾಶಮಾನರೂ ಆಗಿದ್ದಾರೆ. ಈ ದ್ಯಾವಾಪೃಥಿವಿಗಳ ಅಂತರದಲ್ಲಿ ಪವಿತ್ರಾತ್ಮನಾದವನೂ ಪ್ರಕಾಶಮಾನನೂ ಆದ ಸೂರ್ಯನು ಉದಕವನ್ನು ಧರಿಸುವುದು, ಲೋಕವನ್ನು ಬೆಳಗುವುದು ಇತ್ಯಾದಿ ಕರ್ಮಯುಕ್ತನಾಗಿ ಸಂಚರಿಸುತ್ತಾನೆ.

## English Translation

Those two, the divine Heaven and Earth, are the diffusers of happiness on all, encouragers of truth, able to sustain the water (of the rains), auspicious of birth, and energetic (in action) : in the interval between whom proceeds the pure and divine Sun for (the discharge of his) duties.

ವಿಶೇಷವಿಷಯಗಳು

ರಜಸಃ ಧಾರಯತ್ಕವೀ— ಉದಕವನ್ನು ಧಾರಣಮಾಡುವ ಶಕ್ತಿಯುಳ್ಳವರು. ಅದೂ ಅಲ್ಲದೇ ವಿಶ್ವಶಂಭುವಾ ಉದಕಾದಿ ದಾನಗಳಿಂದ ಅನ್ನಸಂಪತ್ತನ್ನು ಬೆಳೆಸಿ ಲೋಕಕ್ಕೆಲ್ಲಾ ಸೌಖ್ಯವನ್ನು ಕೊಡತಕ್ಕವರೆಂದೂ ಸಹ ದ್ಯಾವಾಪೃಥಿವಿಗಳ ಶಕ್ತಿಯನ್ನೂ ಔದಾರ್ಯವನ್ನೂ ಒಟ್ಟಿಗೆ ಹೇಳಿದೆ. ವೃಷ್ಟಿರೂಪವಾದ ಉದಕದ ಧಾರಣಕ್ಕೂ ಮತ್ತು ದಾನಕ್ಕೂ ಸಹ ದ್ಯಾವಾಪೃಥಿವಿಗಳ ಸಾಹಚರ್ಯವೂ ಸಂಬಂಧವೂ ಹೇತುವಾಗುವುದೆಂದು ಪ್ರಸಿದ್ಧವಾಗಿದೆ.

ಸ ಯದಿ ವೃಷ್ಟಿಕಾಮಃ ಸ್ಯಾತ್| ಏತೇನೈವಾದದೀತ ಸಂಜಾನಾಥಾಂ ದ್ಯಾವಾಪೃಥಿವೀ ಇತಿ ಯದಾ ವೈ ದ್ಯಾವಾಪೃಥಿವೀ ಸಂಜಾನಾಥೇ ಅಥ ವರ್ಷತಿ ತಸ್ಮಾದಾಹ ಸಂಜಾನಾಥಾಂ ದ್ಯಾವಾಪೃಥಿವೀ ಇತಿ ||

(ಶ. ಬ್ರಾ. ೧-೮-೩-೧೨)

ದ್ಯಾವಾಪೃಥಿವಿಗಳ ಸಂಗಮದಿಂದ ವೃಷ್ಟಿಯು ಉತ್ಪನ್ನವಾಗುವುದರಿಂದ ಅವರ ಸಾಮರಸ್ಯವನ್ನೂ ಸಾಹಚರ್ಯವನ್ನೂ ಶತಪಥಬ್ರಾಹ್ಮಣದಲ್ಲಿ ಪ್ರಾರ್ಥಿಸಿದೆ.

ಪೃಥಿವೀ ಪೂರ್ವರೂಪಂ ದ್ಯೌರುತ್ತರರೂಪಂ ವೃಷ್ಟಿಃ ಸಂಧಿಃ ಪರ್ಜನ್ಯಃ ಸಂಧಾತಾ । ತದುತಾಪಿ ತತ್ರೈತದ್ಬಲವದನುದ್ಗೃಹ್ಣನ್‌ಸಂದಧದಹೋರಾತ್ರೇ ವರ್ಷತಿ ದ್ಯಾವಾಪೃಥಿವ್ಯೌ ಸಮಧಾತಾ-ಮಿತ್ಯೇತಾಪ್ಯಾಹುಃ ॥

(ಐತರೇಯಾರಣ್ಯಕಂ ೩-೧-೨)

ಎಂಬ ಆರಣ್ಯಕ ಮಂತ್ರಗಳಲ್ಲಿಯೂ ಸಹ ಮೇಲೆ ಹೇಳಿದಂತೆಯೇ ದ್ಯಾವಾಪೃಥಿವಿಗಳ ಸಂಧಿಯಿಂದ ವೃಷ್ಟಿರೂಪದ ಉದಕದ ಪತನವೆಂದೂ ಮತ್ತು ಉದಕಸಂಘಾತವಾಗಿ ವೃಷ್ಟಿಪತನವಾದರೆ ಒಡನೆಯೇ ಸಕಲರೂ ಸಹ ದ್ಯಾವಾ ಪೃಥಿವಿಗಳ ಸಂಗಮವಾಯಿತೆಂದು ಹೇಳುವರೆಂದೂ ಹೇಳಿದೆ. ಮತ್ತು,

ಅಸೌ ಹಿ ತ್ರಿಷ್ಟುಪ್ತದೇನೇ ಸಯುಜೌ ಕರೋತಿ ತಸ್ಮಾದಿಮೇ ಸಂಭುಂಜಾತೇಽನಯೋರನು ಸಂಭೋಗಮಿಮಾಃ ಸರ್ವಾಃ ಪ್ರಜಾ ಅನು ಸಂಭುಂಜತೇ ॥

(ಶ. ಬ್ರಾ. ೧-೭-೨-೧೭)

ಈ ದ್ಯಾವಾಪೃಥಿವಿಗಳಿಗೆ ಒಟ್ಟಿಗೆ ಸೇರಿಸಿ ಹವಿರಾದ್ಯರ್ಪಣವಾದನಂತರ ಅವರು ವೃಷ್ಟಿಯನ್ನು ಸುರಿಸಿ ಸಕಲಭೂತ ಗಳಿಗೂ ಅನ್ನವು ದೊರಕುವುದು.

[The rain is the food of the earth, and the food, Produced thereby, in its turn furnishes food for the sky in the form of oblations.] ಎಂದು ಸಕಲಲೋಕಕ್ಕೂ ಸೌಖ್ಯದಾಯಕವಾದ ಅನ್ನಸಂಪತ್ತಿಗೆ ಹೇತುವಾಗಿರುತ್ತಾರೆಂಬ ಅಂಶವನ್ನು ವರ್ಣಿಸಿದೆ. ಕೇವಲ ಅನ್ನಸಂಪತ್ತನ್ನೇ ವೃದ್ಧಿಮಾಡುವವರಲ್ಲದೆ ಲೋಕವ್ಯವಹಾರಗಳಲ್ಲಿ ನಿಯಮವನ್ನು ಪಾಲಿಸತಕ್ಕ ಋತಾವರಿಗಳೂ ಆಗಿರುವರು. ಈ ಸಂದರ್ಭದಲ್ಲಿ ಜಗಚ್ಚಕ್ಷುವಾದ ಸೂರ್ಯನ ಮಾರ್ಗಕ್ಕೂ ದ್ಯಾವಾಪೃಥಿವಿಗಳ ಋತದ ನಿಯಮಕ್ಕೂ ಸಂಬಂಧವನ್ನು ತಿಳಿಸುತ್ತಾ ಶುಚಿಃ ಸೂರ್ಯಃ ಅಂತಃ ಈಯತೇ ಪ್ರಕಾಶಮಾನನಾದ ಸೂರ್ಯನು ಈ ದ್ಯಾವಾಪೃಥಿವಿಗಳ ನಡುವೆ ಸಂಚರಿಸುತ್ತಾನೆ ಎಂದು ವರ್ಣಿಸಿದೆ. ನಿಯಮಕ್ಕೆ ಅನುಸಾರವಾದುದೂ, ದ್ಯಾವಾಪೃಥಿವಿಗಳ ಮಧ್ಯವರ್ತಿಯಾ ದುದೂ ಆದ ಸೂರ್ಯನ ಪರಿಭ್ರಮಣವನ್ನು ಅನೇಕ ಕಡೆಗಳಲ್ಲಿ ಇದೇ ರೀತಿ ವರ್ಣಿಸಿದೆ.

ಅಹಮಪೋ ಅಪಿನ್ವಮುಕ್ಷಮಾಣಾ ಧಾರಯಂ ದಿವಂ ಸದನ ಋತಸ್ಯ ।
ಋತೇನ ಪುತ್ರೋ ಅದಿತೇರ್ಋತಾವೋತ ತ್ರಿಧಾತು ಪ್ರಥಯದ್ವಿ ಭೂಮ ॥

(ಋ. ಸಂ. ೪-೪೨-೪)

ಎಂಬಲ್ಲಿ ಋತದ ಸದನದಲ್ಲಿ ಅಂತರಿಕ್ಷವನ್ನು ಸ್ಥಾಪಿಸಿದುದಾಗಿ ವರುಣನು ಪ್ರಕಟಿಸಿದ್ದಾನೆ.

ಕವಿರ್ನೃಚಕ್ಷಾ ಅಭಿ ಷೀಮಚಷ್ಟ ಋತಸ್ಯ ಯೋನಾ ವಿಘೃತೇ ಮದಂತೀ ।
ನಾನಾ ಚಕ್ರಾತೇ ಸದನಂ ಯಥಾ ವೇಃ ಸಮಾನೇನ ಕ್ರತುನಾ ಸಂವಿದಾನೇ ॥

(ಋ. ಸಂ. ೩-೫೪-೬)

ಎಂಬ ಋಕ್ಕಿನಲ್ಲಿ ಋತದ ಗರ್ಭದಲ್ಲಿ ಹರ್ಷಿಸುತ್ತಿರುವ ದ್ಯಾವಾಪೃಥಿವಿಗಳನ್ನು ಅವುಗಳ ಅಂತರದಲ್ಲಿ ಸಂಚರಿಸುವ ಸೂರ್ಯನು ವೀಕ್ಷಿಸುತ್ತಿದ್ದಾನೆಂದೂ,

ಪರಿಕ್ಷಿತಾ ಪಿತರಾ ಪೂರ್ವಜಾವರೀ ಋತಸ್ಯ ಯೋನಾ ಕ್ಷಯತಃ ಸಮೋಕಸಾ ।
ದ್ಯಾವಾಪೃಥಿವೀ ವರುಣಾಯ ಸವ್ರತೇ ಘೃತವತ್ಪಯೋ ಮಹಿಷಾಯ ಪಿನ್ವತಃ ॥
(ಋ ಸಂ. ೧೦-೬೫-೮)

ಇತ್ಯಾದಿಋಕ್ಕುಗಳಲ್ಲಿ ಋತದ ಗರ್ಭವು ದ್ಯಾವಾಪೃಥಿವಿಗಳಿಗೆ ಸಮಾನವಾದ ನಿವಾಸಸ್ಥಾನವೆಂದೂ ತಿಳಿಸಿದೆ. ಈ ಎಲ್ಲಾ ವರ್ಣನೆಗಳ ಅಂಶಗಳನ್ನೂ ಸಹ ಪ್ರಕೃತವಾದ ಋಕ್ಕಿನಲ್ಲಿ ಸೂಚಿಸಿದೆ.

ಧಿಷಣೇ—ಸ್ವಧೇ, ಪುರಂಧೀ ಇತ್ಯಾದಿ ದ್ಯಾವಾಪೃಥಿವಿಗಳ ನಾಮಗಳಲ್ಲಿ ಪಠಿತವಾಗಿದೆ (ನಿ. ೩-೩೦). ಈ ಪದಕ್ಕೆ ಧಿಷಣಾ ವಾಕ್ ಧಿಷೇರ್ದಧಾತ್ಯರ್ಥೇ । ಧೀಸಾದಿನೀತಿ ವಾ । (ನಿ. ೮-೩) ಹಿಡಿದಿರುತ್ತದೆ ಎಂದಭಿಪ್ರಾಯವನ್ನು ಕೊಡುವ ಧಿಷ್ ಧಾತುವಿನಿಂದ ನಿಷ್ಪನ್ನವಾಗಬಹುದೆಂದು ತಿಳಿಸಿದೆ. ಧೀಸಾನಿನೀತಿ ವಾ ಬುದ್ಧಿಯನ್ನು ವಿಸ್ತರಿಸುತ್ತದೆ ಎಂದರೆ ಅರ್ಥವನ್ನು ವಿಶದವಾಗಿ ತಿಳಿಸುತ್ತದೆ ಎಂದಾದರೂ ಆಗಬಹುದೆಂದು ನಿರುಕ್ತಕಾರರ ನಿರ್ವಚನವಿದೆ.

ದ್ಯಾವಾಪೃಥಿವೀ ಗಚ್ಛ ಸ್ವಾಹೇತಿ । ಪ್ರಜಾಪತಿರ್ವೈ ಪ್ರಜಾಃ ಸೃಷ್ಟ್ವಾ ತಾ ದ್ಯಾವಾಪೃಥಿವೀಭ್ಯಾಂ ಪರ್ಯಗೃಹ್ಣಾತ್ತಾ ಇಮಾ ದ್ಯಾವಾಪೃಥಿವೀಭ್ಯಾಂ ಪರಿಗೃಹೀತಾಃ ।
(ಶ. ಬ್ರಾ. ೩-೮-೪-೧೭)

ಎಂಬಲ್ಲಿ ದ್ಯಾವಾಪೃಥಿವಿಗಳು ಪ್ರಜಾಪತಿಯಿಂದ ಸೃಷ್ಟರಾದ ಸಕಲ ಪ್ರಜೆಗಳನ್ನು ಹಿಡಿದು ತನ್ನ ನಿಯಮದಲ್ಲಿಟ್ಟು ಕೊಂಡರೆಂದು ಹೇಳಿದೆಯಾದ್ದರಿಂದ ಹಿಡಿದಿರು ಎಂಬರ್ಥವನ್ನು ಕೊಡುವ ಧಿಷ್‌ಧಾತುವಿನಿಂದ ನಿಷ್ಪನ್ನವಾಗಿ ಮೇಲಿನ ಅರ್ಥವನ್ನು ಸೂಚಿಸುವುದರಿಂದ ಈ ಹೆಸರು ಪ್ರಸಿದ್ಧವಾಗಿರಬಹುದು.

ರಜಸಃ—ರಜಸ್‌ಶಬ್ದಕ್ಕೆ ಇಲ್ಲಿ ಉದಕವೆಂದರ್ಥಮಾಡಿದ್ದಾರೆ. ರಜಃ । ರಜೋ ರಜತೇರ್ಜ್ಯೋತೀ ರಜ ಉಚ್ಯತೇ ಉದಕಂ ರಜ ಉಚ್ಯತೇ । ಲೋಕಾ ರಜಾಂಸ್ಯುಚ್ಯಂತೇ । (ನಿ. ೪-೧೯) ಬೆಳಗು ಎಂಬರ್ಥವನ್ನು ಕೊಡುವ ರಂಜ್ ಧಾತುವಿನಿಂದ ನಿಷ್ಪನ್ನವಾಗಿ ರಜಸ್‌ಶಬ್ದಕ್ಕೆ ಜ್ಯೋತಿಯೆಂದೂ, ಉದಕವೆಂದೂ, ಲೋಕಗಳೆಂದೂ ಅರ್ಥವಾಗುತ್ತದೆ. ಅಲ್ಲದೇ ಅಸೃಗಹನೀ ರಜಸೀ ಉಚ್ಯೇತೇ ರಕ್ತ, ಅಹಸ್ಸು ಇವುಗಳಿಗೂ ಇದು ಪರ್ಯಾಯನಾಮವಾಗಿದೆಯೆಂದು ನಿರುಕ್ತವಚನವಿದೆ. ನಿರುಕ್ತಕಾರರು

ಅಬ್ಜಾಮುಕ್ಥೈರಹಿಂ ಗೃಣೀಷೇ ಬುಧ್ನೇ ನದೀನಾಂ ರಜಃಸು ಷೀದನ್ ।
(ಋ. ಸಂ. ೭-೩೪-೧೬)

ಎಂಬ ಋಕ್ಕನ್ನುದಹರಿಸಿ ಅಲ್ಲಿ ರಜಸ್ಸು ಉದಕೇಷು ಎಂದರ್ಥಮಾಡಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಉದಕವೆಂದರ್ಥಮಾಡಿದೆ. ರಜಶ್ಶಬ್ದಕ್ಕೆ ಉಳಿದ ಅರ್ಥಗಳನ್ನು ಆಯಾ ಸಂದರ್ಭಗಳಲ್ಲಿ ತಿಳಿಸಲಾಗುತ್ತದೆ.

ವ್ಯಾಕರಣಪ್ರಕ್ರಿಯಾ

ವಿಶ್ವಶಂಭುವಾ—ಭೂ ಸತ್ತಾಯಾಂ ಧಾತು. ಅಂತರ್ಭಾವಿತಣ್ಯರ್ಥಕವಾಗಿರುವಾಗ ಕ್ವಿಪ್ ಪ್ರತ್ಯಯ. ಬಹುವ್ರೀಹೌ ವಿಶ್ವಂ ಸಂಜ್ಞಾಯಾಮ್ (ಪಾ. ಸೂ. ೬-೨-೧೦೬) ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ

ಬರುತ್ತದೆ. ದ್ವಿವಚನ ಪರವಾದಾಗ ಸುಪಾಂ ಸುಲುಕ್ (ಪಾ. ಸೂ. ೭.೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ.

**ಋತಾವರೀ**—ಋತಂ ಅನಯೋಃ ಅಸ್ತಿ ಇತಿ ಶೇ. ಛಂಧಸೀವನಿಪೌ ಎಂಬುದರಿಂದ ಮತ್ವರ್ಥದಲ್ಲಿ ವನಿಪ್ ಪ್ರತ್ಯಯ. ಅನ್ಯೇಷಾಮಪಿ ದೃಶ್ಯತೇ (ಪಾ. ಸೂ- ೬-೩-೧೩೭) ಎಂಬುದರಿಂದ ಪೂರ್ವಪದಕ್ಕೆ ದೀರ್ಘ. ಸ್ತ್ರೀತ್ವ ವಿವಕ್ಷಾಮಾಡಿದಾಗ ವನೋರಚ (ಪಾ. ಸೂ. ೪-೧-೭) ಎಂಬುದರಿಂದ ಙೀಪ್. ತತ್ಸನ್ನಿಯೋಗದಿಂದ ನಕಾರಕ್ಕೆ ರೇಫ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ದ್ವಿವಚನ ಪರವಾದಾಗ ಸುಪಾಂ ಸುಲುಕ್ (ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ.

**ಧಾರಯತ್ ಕವೀ**—ಧಾರಯತ್ ಕವಿಃ ಯಯೋಸ್ತೇ. ಬಹುವ್ರೀಹಿಯಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಹಿಂದಿನಂತೆ ದ್ವಿವಚನ ಪರವಾದಾಗ ಪೂರ್ವಸವರ್ಣದೀರ್ಘ.

**ಸುಜನ್ಮನೀ**—ಶೋಭನಂ ಜನ್ಮ ಯಯೋಸ್ತೇ. ಆದ್ಯುದಾತ್ತಂದ್ವ್ಯಚ್ ಛಂದಸಿ (ಪಾ. ಸೂ. ೬-೨-೧೧೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಧಿಷಣೇ**—ಞಿಧೃಷಾ ಪ್ರಾಗಲ್ಭ್ಯೇ ಧಾತು. ಧೃಷೇರ್ಧಿಷ್ ಚ ಸಂಜ್ಞಾಯಾಮ್ (ಉ. ಸೂ.೨೪೦) ಎಂಬುದರಿಂದ ಕ್ಯು ಪ್ರತ್ಯಯ. ಧಾತುವಿಗೆ ಧಿಷ್ ಆದೇಶ. ಯುವೋರನಾಕೌ (ಪಾ. ಸೂ. ೭-೧-೩೯)ಎಂಬುದರಿಂದ ಅನಾದೇಶ. ಷಕಾರನಿಮಿತ್ತವಾಗಿ ನಕಾರಕ್ಕೆ ಣತ್ವ. ದ್ವಿವಚನಾಂತರೂಪ.

**ಈಯತೇ**—ಈಙ್ ಗತೌ ಧಾತು. ದಿವಾದಿ, ಶ್ಯನ್ ವಿಕರಣ. ಲಟ್ ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೧ ॥



ಸಂಹಿತಾಪಾಠಃ

ಉರುವ್ಯಚಸಾ ಮಹಿನೀ ಅಸಶ್ಚತಾ ಪಿತಾ ಮಾತಾ ಚ ಭುವನಾನಿ ರಕ್ಷತಃ ।
ಸುಧೃಷ್ಟಮೇ ವಪುಷ್ಯೇ೩ ನ ರೋದಸೀ ಪಿತಾ ಯತ್ಸೀಮಭಿ ರೂಪೈರವಾಸಯತ್ ॥ ೨ ॥

। ಪದಪಾಠಃ ।

ಉರುವ್ಯಚಸಾ । ಮಹಿನೀ ಇತಿ । ಅಸಶ್ಚತಾ । ಪಿತಾ । ಮಾತಾ । ಚ । ಭುವನಾನಿ । ರಕ್ಷತಃ ।
ಸುಧೃಷ್ಟಮೇ ಇತಿ ಸುಽಧೃಷ್ಟಮೇ । ವಪುಷ್ಯೇ೩ ಇತಿ । ನ । ರೋದಸೀ ಇತಿ । ಪಿತಾ । ಯತ್ । ಸೀಂ ।
ಅಭಿ । ರೂಪೈಃ । ಅವಾಸಯತ್ ॥ ೨ ॥

### ಸಾಯಣಭಾಷ್ಯಂ

ಉರುವ್ಯಚಸಾ ಪ್ರಭೂತವ್ಯಚನವತ್ಯಾವತಿವಿಸ್ತೀರ್ಣೇ ಮಹಿನೀ ಅತ ಏವ ಮಹತ್ತ್ಯೌ ಅಸಶ್ಚತಾಸಜ್ಯಮಾನೇ। ಪರಸ್ಪರವಿಯುಕ್ತೇ ಇತ್ಯರ್ಥಃ। ಪಿತಾ ಪಾಲಯಿತ್ರೀ ದ್ಯೌಃ ಮಾತಾ ನಿರ್ಮಾತ್ರೀ ಪೃಥಿವೀ ಚೇತ್ಯುಭೇ ಭುವನಾನಿ ಭೂತಜಾತಾನಿ ರಕ್ಷತಃ। ಪಾಲಯತಃ। ದ್ಯೌಷ್ಪಿತಃ ಪೃಥಿವೀ ಮಾತಃ। ಋ. ೬-೫೧-೫। ಇತ್ಯಾದಿಶ್ರುತೇರ್ಮಾತಾಪಿತೃರೂಪತ್ವಂ। ಕಿಂಚ ಸುಧೃಷ್ಟಮೇ ಅತಿಶಯೇನ ಧೃಷ್ಟೇ॥ ಛಾಂದಸಸ್ತಕಾರಲೋಪಃ॥ ಪ್ರಗಲ್ಭೇ ರೋದಸೀ ದ್ಯಾವಾಪೃಥಿವ್ಯೌ ವಪುಷ್ಯೇ ನ ವಪುಷೋ ಹಿತೇ ಇವ। ಪ್ರಾಣಿನಾಂ ಪಿತರಾವಿವ ಶರೀರರಕ್ಷಕೇ ಇತ್ಯರ್ಥಃ। ತದೇವೋಪಪಾದಯತಿ। ಯದ್ಯಸ್ಮಾತ್ಸೀಂ ಸರ್ವತಃ ಪಿತಾ ಪಿತೃಸ್ಥಾನೀಯಾ ದ್ಯೌ ರೂಪೈರ್ನಿರೂಪಣಸಾಧನೈಃ ಪ್ರಶಸ್ತೈಃ ಪ್ರಕಾಶೈರ್ನಿರೂಪ್ಯಮಾಣೈರ್ವೃಕ್ಷಾದಿಭಿರ್ವಾಭ್ಯವಾಸಯೆತ್ ಅಭಿವಾಸಯತಿ ಆಧಿತಿಷ್ಠತಿ ತಿಸ್ಮಾತ್ಪಿತಾ ಮಾತಾ ಚ ಭುವನಾನಿ ರಕ್ಷತಃ॥

### ಪ್ರತಿಪದಾರ್ಥ

ಉರುವ್ಯಚಸಾ—ಅತ್ಯಂತ ವಿಸ್ತಾರವಾಗಿ ಹರಡಿರುವುವೂ। ಮಹಿನೀ—ಆದ್ದರಿಂದಲೇ ಮಹತ್ತಾದವೂ। ಅಸಶ್ಚತಾ—ಒಂದಕ್ಕೊಂದಕ್ಕೆ ಅಂಟಿಕೊಳ್ಳದಿರುವುವೂ। ಪಿತಾ—ಪಾಲಕನಾದ ದ್ಯುಲೋಕಾಧಿದೇವತೆಯೂ। ಮಾತಾ ಚ—ನಿರ್ಮಾತ್ರಿಯಾದ ಭೂದೇವಿಯೂ ಕೂಡ। ಭುವನಾನಿ—ಸಕಲ ಲೋಕಗಳನ್ನೂ। ರಕ್ಷತಃ—ಸುರಕ್ಷಿತವಾಗಿ ಕಾಪಾಡುತ್ತಾರೆ.। ಸುಧೃಷ್ಟಮೇ—ದೃಢವಾದ ಸಂಕಲ್ಪವುಳ್ಳ। ರೋದಸೀ—ದ್ಯಾವಾಪೃಥಿವಿಗಳು। ವಪುಷ್ಯೇ ನ—ದೇಹಗಳುಳ್ಳ ಸಕಲ ಪ್ರಾಣಿಗಳ ಕ್ಷೇಮಕ್ಕಾಗಿಯೇ ಇರುವಂತಿದ್ದಾರೆ. (ಅವರಿಬ್ಬರಲ್ಲಿ)। ಪಿತಾ—ಪಿತೃಸ್ಥಾನದಲ್ಲಿರುವ ಅಂತರಿಕ್ಷವು। ಸೀಂ—ಸುತ್ತಲೂ। ರೂಪೈಃ—(ತನ್ನ ಪ್ರಶಸ್ತವಾದ) ಪ್ರಕಾಶನಗಳಿಂದ। ಅಭ್ಯವಾಸಯೆತ್—ಹೊದ್ದಿಸಿದೆ (ಸುತ್ತಲೂ ವ್ಯಾಪಿಸಿದೆ)।

### ಭಾವಾರ್ಥ

ಅತ್ಯಂತ ವಿಸ್ತಾರವಾಗಿ ಹರಡಿರುವುವೂ ಆದ್ದರಿಂದಲೇ ಮಹತ್ತಾದವೂ ಒಂದಕ್ಕೊಂದಕ್ಕೆ ಅಂಟಿಕೊಳ್ಳದಿರುವುವೂ ಆದ ಪಾಲಕನಾದ ದ್ಯುಲೋಕಾಧಿ ದೇವತೆಯೂ ನಿರ್ಮಾತ್ರಿಯಾದ ಭೂದೇವಿಯೂ ಸಹ ಸಕಲ ಲೋಕಗಳನ್ನೂ ಸುರಕ್ಷಿತವಾಗಿ ಕಾಪಾಡುತ್ತಾರೆ. ದೃಢವಾದ ಸಂಕಲ್ಪವುಳ್ಳ ದ್ಯಾವಾಪೃಥಿವಿಗಳು ದೇಹಗಳುಳ್ಳ ಸಕಲ ಪ್ರಾಣಿಗಳ ಕ್ಷೇಮಕ್ಕಾಗಿಯೇ ಇರುವಂತಿದ್ದಾರೆ. ಅವರಿಬ್ಬರಲ್ಲಿ ಪಿತೃಸ್ಥಾನದಲ್ಲಿರುವ ಅಂತರಿಕ್ಷವು ತನ್ನ ಪ್ರಶಸ್ತವಾದ ಪ್ರಕಾಶನಗಳಿಂದ ಸುತ್ತಲೂ ಹೊದ್ದಿಸಿದೆ, ಎಂದರೆ ವ್ಯಾಪಿಸಿದೆ.

### English Translation

Wide-spreading, vast, unconnected, the father and mother (of all beings), they two preserve the worlds. Resolute, as if (for the good) of embodied (beings), are Heaven and Earth, and the father has invested every thing with (visible) forms.

। ವಿಶೇಷವಿಷಯಗಳು ।

ಉರುವ್ಯಚಸಾ—ಉರು ವಿಸ್ತೀರ್ಣಂ ವ್ಯಚಃ ವ್ಯಾಪನಂ ಯಯೋಃ ಅತ್ಯಂತ ವಿಸ್ತಾರವಾದ ವ್ಯಾಪನವುಳ್ಳವರು ಅಥವಾ ಎಲ್ಲವನ್ನೂ ವ್ಯಾಪಿಸುವಷ್ಟು ವಿಸ್ತೃತಿಯುಳ್ಳವರು. ಈ ಪದವು ಅಧಿಕವಾಗಿ ದ್ಯಾವಾಪೃಥಿವಿಗಳಿಗೂ ಅದಿತಿಗೂ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿರುತ್ತದೆ. ಅದಿತಿಗೂ ಪೃಥಿವಿಗೂ ಅನೇಕ ಕಡೆಗಳಲ್ಲಿ ತಾದಾತ್ಮ್ಯವನ್ನು ಹೇಳಿರುವುದರಿಂದ,

ಭಗೋ ವಿಭಕ್ತಾ ಶವಸಾವಸಾ ಗಮದುರುವ್ಯಚಾ ಅದಿತಿಃ ಶ್ರೋತು ಮೇ ಹವಂ ।

(ಋ. ಸಂ ೫-೪೬-೬)

ಇತ್ಯಾದಿ ಋಕ್ಕುಗಳಲ್ಲಿ ಅದಿತಿಯ ಮಹತ್ತ್ವಪೂರಿತವಾದ ವೈಶಾಲ್ಯವೂ ಪೃಥಿವಿಯ ವರ್ಣನೆಯೇ ಆಗಿದೆ. ಉರುವ್ಯಚಸಾ ಎನ್ನುವಂತೆ ವರೀಮತಾ ಎಂಬ ವಿಶೇಷಣವೂ ಸಹ ದ್ಯಾವಾಪೃಥಿವಿಗಳ ವಿಸ್ತೃತಿಯನ್ನು ಸೂಚಿಸುತ್ತದೆ. ದ್ಯಾವಾ ಪೃಥಿವಿಗಳಿಗಿಂತ ಮೀರಿ ಹರಡಿರುವುದು ವಿಶ್ವದಲ್ಲಿ ಯಾವುದೂ ಇಲ್ಲ ಎಂಬ ಶತಪಥ ಬ್ರಾಹ್ಮಣದಲ್ಲಿನ ವಾಕ್ಯವು ಈ ಸತ್ಯವನ್ನು ವಿಶದಪಡಿಸುವುದು. ಕಾಣ್ವಶಾಖೆಯ ಮೂಲವು ಸದ್ಯಃ ಉಪಲಬ್ಧವಾಗದಿರುವುದರಿಂದ ಅದರ ಆಂಗ್ಲಾನುವಾದವನ್ನು ಇಲ್ಲಿ ಉದಹರಿಸಿದೆ.

"The great Heaven and Earth" for additional superfluous (ಅತಿರಿಕ್ತ) is that (ಗರ್ಭ), beyond these two, Heaven and Earth, nothing whatever remains (or nothing surpasses them, ಅತಿರಿಚ್ಯತೇ).

(S. B. E. Vol. XXVI. P. 336, f. n.)

ಪೃಥಿವ್ಯಂತರಿಕ್ಷಗಳನ್ನು ಮೀರಿದ ವಿಸ್ತೃತಿಯುಳ್ಳ ವಸ್ತುವು ಲೋಕದಲ್ಲಿ ಯಾವುದೂ ಇಲ್ಲವೆಂದು ಹೇಳಿದೆ.

ಇದರಂತೆಯೇ ಸಮಸ್ತ ವಿಶ್ವವೂ ಸಹ ಭರಣಕ್ಕೂ ಧಾರಣೆಗೂ ಸಹ ಪೃಥಿವ್ಯಂತರಿಕ್ಷಗಳನ್ನೇ ನಂಬಿವೆಯೆಂದು ಪಿತಾ ಮಾತಾ ಚ ಭುವನಾನಿ ರಕ್ಷತಃ ಎಂಬ ವಾಕ್ಯವು ತಿಳಿಸುತ್ತದೆ.

ಸ್ವಾಹೋರೋರಂತರಿಕ್ಷಾದಾರಭತೇ ಸ್ವಾಹಾ ದ್ಯಾವಾಪೃಥಿವೀಭ್ಯಾಮಿತಿ ತದಾಭ್ಯಾಂ ದ್ಯಾವಾಪೃಥಿವೀಭ್ಯಾಮಾರಭತೇ ಯಯೋರಿದಂ ಸರ್ವಮಧಿ ॥

(ಶ. ಬ್ರಾ. ೩-೧-೩-೨೬)

ನಮೋ ದ್ಯಾವಾಪೃಥಿವೀಭ್ಯಾಮಿತಿ ತದಾಭ್ಯಾಂ ದ್ಯಾವಾಪೃಥಿವೀಭ್ಯಾಂ ನಿಹ್ನುವತೇ ಯಯೋರಿದಂ ಸರ್ವಮಧಿ ।

(ಶ. ಬ್ರಾ. ೩-೪-೩-೨೧)

ದ್ಯಾವಾಪೃಥಿವೀಭ್ಯಾಂ ತ್ವಾ ಪರಿದದಾಮೀತಿ ತದೇನಮಾಭ್ಯಾಂ ದ್ಯಾವಾಪೃಥಿವೀಭ್ಯಾಂ ಪರಿದದಾತಿ ಯಯೋರಿದಂ ಸರ್ವಮಧಿ ।

(ಶ. ಬ್ರಾ. ೧೧-೫-೪-೪)

ಇತ್ಯಾದ್ಯನೇಕಕಡೆಗಳಲ್ಲಿ ಸಕಲಲೋಕಗಳ ಸ್ಥಿತಿಯೂ, ಭರಣವೂ ಮತ್ತು ಸಕಲ ರಕ್ಷಣಾವ್ಯಾಪಾರಗಳೂ ದ್ಯಾವಾಪೃಥಿವಿಯನ್ನೇ ಆಶ್ರಯಿಸಿವೆ ಎಂದು ಪುನಃ ಪುನಃ ಹೇಳಿರುವ ಅಂಶವನ್ನು ಇಲ್ಲಿ ವಿಶದಪಡಿಸಿದೆ.

**ಪಿತಾ ಮಾತಾ ಚ**—ದ್ಯೌಃ ಪಿತಃ ಪೃಥಿವೀ ಮಾತಃ ಎಂದು ಹೇಳಿರುವ ದ್ಯಾವಾಪೃಥಿವಿಗಳಿಗೂ ಇತರ ಸಕಲ ಭೂತಗಳಿಗೂ ಇರುವ ಮಾತಾಪಿತೃಸಂಬಂಧವನ್ನು ಹಿಂದೆ ವಿಶದವಾಗಿ ತಿಳಿಸಿದೆ.

**ಸುಧೃಷ್ಟಮೇ**—ಅತಿಶಯೇನ ಧೃಷ್ಟೇ। ಪ್ರಗಲ್ಭೇ। ಸ್ಥೈರ್ಯವುಳ್ಳವರು ಮತ್ತು ದೃಢವಾದ ಸಂಕಲ್ಪವುಳ್ಳವರೆಂದರ್ಥ.

**ರೂಪೈರವಾಸಯತ್**—ಆದಿತ್ಯಾದಿ ಗ್ರಹಗಳು ಅಂತರಿಕ್ಷಜನ್ಯವಾದುದರಿಂದ ಅವುಗಳ ಮೂಲಕ ತನ್ನ ಪ್ರಕಾಶವನ್ನು ಬೀರಿದೆ ಎಂದಾಗಲಿ ಅಥವಾ ವೃಷ್ಟ್ಯಾದಿಭಿರ್ವಾ ಆಚ್ಛಾದಯತ್ ವೃಷ್ಟ್ಯಾದಿಗಳಿಂದ ತುಂಬಿದೆ ಎಂದಾಗಲಿ ಅರ್ಥವಾಗುತ್ತದೆ.

ವ್ಯಾಕರಣಪ್ರಕ್ರಿಯಾ

**ಉರುವ್ಯಚಸಾ**—ವ್ಯಚ ವ್ಯಾಜೀಕರಣೇ. ಧಾತು. ಇದಕ್ಕೆ ಔಣಾದಿಕ ಅಸಿ ಪ್ರತ್ಯಯ. ವ್ಯಚೇಃ ಕುಟಾದಿತ್ವಮನಸಿ (ಕಾ. ೧-೨-೧-೧) ಎಂಬುದರಿಂದ ಙಿತ್ತ್ವವಿಲ್ಲದಿರುವುದರಿಂದ ಸಂಪ್ರಸಾರಣ ಬರುವುದಿಲ್ಲ. **ಪರಾದಿಶ್ಛಂದಸಿ ಬಹುಲಂ** (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ. **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ದ್ವಿವಚನಕ್ಕೆ ಆಕಾರಾದೇಶ.

**ಮಹಿನೀ**—ಮಹ ಪೂಜಾಯಾಂ ಧಾತು. ಔಣಾದಿಕ. ಇನನ್ ಪ್ರತ್ಯಯ. ನಾಂತವಾದುದರಿಂದ ಸ್ತ್ರೀತ್ವದಲ್ಲಿ ಙೀಪ್. ಇದು ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ದ್ವಿವಚನ ಪರವಾದಾಗ ಪೂರ್ವಸವರ್ಣದೀರ್ಘ.

**ಅಸಶ್ಚತಾ**—ಷಸ್ಜ ಗತೌ ಧಾತು. ಲಟಿಗೆ ಶತ್ರಾದೇಶ. ಜಕಾರಕ್ಕೆ ವ್ಯತ್ಯಯದಿಂದ ಚಕಾರಾದೇಶ. ನ ವಿದ್ಯಂತೇ ಸಶ್ಚಂತೋ ಗಚ್ಛಂತಃ ಯಯೋಸ್ತೇ. **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ರಕ್ಷತಃ**—ರಕ್ಷ ಪಾಲನೇ ಧಾತು. ಲಟ್ ಪ್ರಥಮಪುರುಷದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಸುಧೃಷ್ಟಮೇ**—ಸುಧೃಷ್ಟತಮೇ ಎಂದು ರೂಪವಾದಾಗ ಛಾಂದಸವಾಗಿ ಮತುಪಿನ ತಕಾರಕ್ಕೆ ಲೋಪ ಬರುತ್ತದೆ. ತಮಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ವಪುಷ್ಯೇ**—ವಪುಷಃ ಹಿತೇ. ಹಿತಾರ್ಥದಲ್ಲಿ ಯತ್ ಪ್ರತ್ಯಯ. ತಿತ್ಸ್ವರಿತಂ ಎಂಬುದರಿಂದ ಇದು ಸ್ವರಿತವಾಗುತ್ತದೆ.

**ಅವಾಸಯತ್**—ವಸ ನಿವಾಸೇ ಧಾತು. **ಹೇತುಮತಿ ಚ** ಎಂಬುದರಿಂದ ಣಿಚ್. **ಅತ ಉಪಧಾಯಾಃ** ಎಂಬುದರಿಂದ ಆದಿವೃದ್ಧಿ. ಣಿಜಂತದ ಮೇಲೆ ಛಾಂದಸವಾಗಿ ಲಙ್. ಪ್ರಥಮಪುರುಷಏಕವಚನಾಂತರೂಪ.

ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ. ॥ ೨ ॥



। ಸಂಹಿತಾಪಾಠಃ ॥

ಸ ವಹ್ನಿಃ ಪುತ್ರಃ ಪಿತ್ರೋಃ ಪವಿತ್ರವಾನ್ಪುನಾತಿ ಧೀರೋ ಭುವನಾನಿ ಮಾಯಯಾ ।

ಧೇನುಂ ಚ ಪೃಶ್ನಿಂ ವೃಷಭಂ ಸುರೇತಸಂ ವಿಶ್ವಾಹಾ ಶುಕ್ರಂ ಪಯೋ ಅಸ್ಯ ದುಕ್ಷತ ॥ ೩ ॥

। ಪದಪಾಠಃ ।

ಸಃ । ವಹ್ನಿಃ । ಪುತ್ರಃ । ಪಿತ್ರೋಃ । ಪವಿತ್ರವಾನ್ । ಪುನಾತಿ । ಧೀರಃ । ಭುವನಾನಿ । ಮಾಯಯಾ ।

ಧೇನುಂ । ಚ । ಪೃಶ್ನಿಂ । ವೃಷಭಂ । ಸುರೇತಸಂ । ವಿಶ್ವಾಹಾ । ಶುಕ್ರಂ । ಪಯಃ । ಅಸ್ಯ । ಧುಕ್ಷತ ॥೩॥

ಸಾಯಣಭಾಷ್ಯಂ

ಪಿತ್ರೋರ್ಮಾತಾಪಿತ್ರೋರ್ದ್ಯಾವಾಪೃಥಿವ್ಯೋಃ ॥ ಪಿತಾ ಮಾತ್ರೇತಿ ಪಿತಾ ಶಿಷ್ಯತೇ । ಉದಾತ್ತಯಣ ಇತಿ ಪಿತುರ್ವಿಭಕ್ತಿರುದಾತ್ತಾ ॥ ಪುತ್ರಃ ಪುರುತ್ರಾತಾ ಪುತ್ರಸ್ಥಾನೀಯ ಆದಿತ್ಯಃ ಪವಿತ್ರವಾನ್ ಪಾವನರಶ್ಮಿಯುಕ್ತೋ ಧೀರೋ ಧೀಮಾನ್ ಸ ವಹ್ನಿಃ ಫಲಸ್ಯ ವೋಢಾ ಧಾರಕಃ ಸನ್ಮಾಯಯಾ ಪ್ರಜ್ಞಯಾ ಸ್ವಕೀಯಯಾ ಭುವನಾನಿ ಭೂತಜಾತಾನಿ ಪುನಾತಿ । ಪಾವಯತಿ । ಪ್ರಕಾಶಯತೀತ್ಯರ್ಥಃ । ಕಿಂಚ ಸ ಏವ ಪುತ್ರಃ ಪೃಶ್ನಿಂ ಶುಕ್ಲವರ್ಣಾಂ ಧೇನುಂ ಪ್ರೀಣಯಿತ್ರೀಂ ಭೂಮಿಂ ಸುರೇತಸಂ ಶೋಭನಸಾಮರ್ಥ್ಯಂ ಶೋಭನೋದಕಂ ವಾ ವೃಷಭಂ ಸೇಕ್ತಾರಂ ದ್ಯುಲೋಕಂ ಚ ಮಾಯಯಾ ಪುನಾತಿ । ಪ್ರಕಾಶಯತೀತ್ಯರ್ಥಃ । ಕದಾ । ವಿಶ್ವಾಹಾ ಸರ್ವಾಣ್ಯಪ್ಯಹಾನಿ । ಸರ್ವಕಾಲಮಿತ್ಯರ್ಥಃ ॥ ಕಿಂಚಾಸ್ಯ ದ್ಯುಲೋಕಸ್ಯ । ಯದ್ವಾ ॥ ಕರ್ಮಣಿ ಷಷ್ಠೀ ॥ ಇಮಂ ದ್ಯುಲೋಕಂ । ಶುಕ್ರಂ ಪಯೋ ದೀಪ್ತಂ ಪಯಃಸದೃಶಮುದಕಂ ಧುಕ್ಷತ । ದೋಗ್ಧಿ ॥ ದುಹೇರ್ಲ್ಯಾಂದಸೇ ] ಲುಙಃ ಶಲ ಇಗುಪಧಾದನಿಟಃ ಕ್ಸ ಇತಿ ಚ್ಲೇಃ ಕ್ಸಾದೇಶಃ ॥ ಈದೃಶೋ ಮಹಾನುಭಾವ ಆದಿತ್ಯಸ್ತಯೋಃ ಪುತ್ರ ಇತಿ ದ್ಯಾವಾಪೃಥಿವ್ಯೋಃ ಸ್ತುತಿಃ ॥

### ಪ್ರತಿಪದಾರ್ಥ

ಪಿತ್ರೋಃ—(ಸಕಲ ಲೋಕಕ್ಕೂ) ಮಾತಾಪಿತೃಗಳಾದ ದ್ಯಾವಾಪೃಥಿವಿಗಳ । ಪುತ್ರಃ—ಪುತ್ರಸ್ಥಾನೀಯನೂ । ವಹ್ನಿಃ—ಫಲದ ಧಾರಕನೂ । ಪವಿತ್ರವಾನ್—ಪವಿತ್ರಾತ್ಮಕಗಳಾದ ರಶ್ಮಿಗಳನ್ನು ಹೊಂದಿರುವವನೂ । ಧೀರಃ ಸಃ—ಪ್ರಜ್ಞಾವಂತನೂ ಆದ ಆದಿತ್ಯನು । ಮಾಯಯಾ—ತನ್ನ ಪ್ರಜ್ಞೆಯಿಂದ । ಭುವನಾನಿ—ಲೋಕಗಳನ್ನೆಲ್ಲಾ । ಪುನಾತಿ—ಪ್ರಕಾಶಪಡಿಸಿ ಪವಿತ್ರವಾಗುವಂತೆ ಮಾಡುತ್ತಾನೆ । (ಸ ಏವ—ಅವನೇನೆ) । ಪ್ರಶ್ನಿಂ—ಶುಕ್ಲವರ್ಣಾಳಾದವಳೂ । ಧೇನುಂ—ಹರ್ಷದಾಯಕಳೂ ಆದ ಪೃಥ್ವಿಯನ್ನೂ । ಸುರೇತಸಂ—ಶ್ರೇಷ್ಠವಾದ ಸಾಮರ್ಥ್ಯವುಳ್ಳದ್ದೂ ! ವೃಷಭಂ—ವೃಷ್ಟ್ಯಾದಿಗಳನ್ನು ಸುರಿಸತಕ್ಕದ್ದೂ ಆದ ದ್ಯುಲೋಕವನ್ನೂ (ಪವಿತ್ರವಾಗುವಂತೆ ಮಾಡುತ್ತಾನೆ) । ವಿಶ್ವಾಹಾ—ಪ್ರತಿನಿತ್ಯವೂ । ಅಸ್ಯ—ಈ ದ್ಯುಲೋಕವನ್ನು (ದ್ಯುಲೋಕದಿಂದ)। ಶುಕ್ರಂ—ಪ್ರಕಾಶಮಾನವಾದುದೂ । ಪಯಃ—ಪಯಃ ಸದೃಶವಾದುದೂ ಆದ ಉದಕವನ್ನು । ಧುಕ್ಷತೇಃ—ಕರೆಯುತ್ತಾನೆ.

### ಭಾವಾರ್ಥ

ಸಕಲಲೋಕಕ್ಕೂ ಮಾತಾಪಿತೃಗಳಾದ ದ್ಯಾವಾಪೃಥಿವಿಗಳ ಪುತ್ರಸ್ಥಾನೀಯನೂ ಫಲದಧಾರಕನೂ, ಪವಿತ್ರಾತ್ಮಕಗಳಾದ ರಶ್ಮಿಗಳನ್ನು ಹೊಂದಿರುವವನೂ ಪ್ರಜ್ಞಾವಂತನೂ, ಆದ ಆದಿತ್ಯನು ತನ್ನ ಪ್ರಜ್ಞೆಯಿಂದ ಲೋಕಗಳನ್ನೆಲ್ಲಾ ಪ್ರಕಾಶಪಡಿಸಿ ಪವಿತ್ರವಾಗುವಂತೆ ಮಾಡುತ್ತಾನೆ. ಅವನೇನೆ ಶುಕ್ಲವರ್ಣಾಳಾದವಳೂ ಹರ್ಷದಾಯಕಳೂ ಆದ ಪೃಥ್ವಿಯನ್ನೂ ಮತ್ತು ಶ್ರೇಷ್ಠವಾದ ಸಾಮರ್ಥ್ಯವುಳ್ಳದ್ದೂ, ವೃಷ್ಟ್ಯಾದಿಗಳನ್ನು ಸುರಿಸತಕ್ಕದ್ದೂ ಆದ ದ್ಯುಲೋಕವನ್ನೂ ಪವಿತ್ರವಾಗುವಂತೆ ಮಾಡುತ್ತಾನೆ. ಪ್ರತಿನಿತ್ಯವೂ ಈ ದ್ಯುಲೋಕದಿಂದ ಪ್ರಕಾಶಮಾನವಾದುದೂ ಪಯಃಸದೃಶವಾದುದೂ ಆದ ಉದಕವನ್ನು ಕರೆಯುತ್ತಾನೆ.

### English Tranlation

The pure and the resolute son of (these) parents, the bearer (of rewards sanctifies the worlds by his intelligence; as well as the milch-cow (the earth), and the vigorous bull (the heaven), and daily milks the pellucid milk (of the sky).

### ವಿಶೇಷವಿಷಯಗಳು

ಪಿತ್ರೋಃ ಪುತ್ರಃ—ಈ ಋಕ್ಕಿನಲ್ಲಿ ಆದಿತ್ಯನ ಮಹಾಗುಣಗಳನ್ನು ವರ್ಣಿಸಿ ಇಂತಹ ಆದಿತ್ಯನಿಗೆ ಪಿತೃಗಳಾದ ದ್ಯಾವಾಪೃಥಿವಿಗಳ ಮಹತ್ತ್ವವು ಇನ್ನೂ ಅಧಿಕವಾಗಿರಬೇಕೆಂದು ಸೂಚಿಸಿದೆ. ಪಿತಾ ಮಾತ್ರೇತಿ ಪಿತಾ ಶಿಷ್ಯತೇ ಪಿತೃ ಮತ್ತು ಮಾತೃ ಈ ಎರಡು ಪದಗಳನ್ನು ಸೇರಿಸಿದರೆ ಪಿತಾ ಎಂಬ ಒಂದೇ ಸಮಸ್ತಪದ ಉಳಿಯುತ್ತದೆಂದು ತಿಳಿಸಿದೆ. ದ್ಯಾವಾಪೃಥಿವಿಗಳು ಆದಿತ್ಯನ ಪಿತೃಗಳು ಎಂದೂ ಅಥವಾ ಆದಿತ್ಯನು ದಿವಸ್ಪುತ್ರನೆಂದೂ ಅನೇಕ ಕಡೆಗಳಲ್ಲಿ ಹೇಳಿದೆ. ದಿವಸ್ಪುತ್ರಾಯ ಸೂರ್ಯಾಯ ಶಂಸತ (ಋ. ಸಂ. ೧೦-೩೭-೧) ಎಂದು ಕೇವಲ ಸೂರ್ಯನಿಗೆ ಪಿತೃಗಳು ಎಂದೇ ಅಲ್ಲದೆ,

ಯ ಇಮೇ ದ್ಯಾವಾಪೃಥಿವೀ ಜನಿತ್ರೀ ರೂಪೈರಪಿಂಶದ್ಭುವನಾನಿ ವಿಶ್ವಾ ।

(ಋ. ಸಂ. ೧೦–೧೧೦–೯)

ಇತ್ಯಾದಿನಾನಾಋಕ್ಕುಗಳಲ್ಲಿ ದ್ಯಾವಾಪೃಥಿವಿಗಳನ್ನು ವಿಶ್ವಕ್ಕೆಲ್ಲಾ ಜನಿತ್ರಿಯರೆಂದು ಹೇಳಿರುವ ಅಂಶವನ್ನು ಇಲ್ಲಿ ಪಿತ್ರೋಃ ಎಂಬ ಪದದಿಂದ ಸೂಚಿಸಿದೆ. ಅವರ ಪುತ್ರನಾದ ಆದಿತ್ಯನು,

ಮಾಯಯಾ—ಭುವನಾನಿ ಪುನಾತಿ—ಮಾಯೆಯಿಂದ ಭುವನಗಳನ್ನು ಪವಿತ್ರವಾದುದನ್ನಾಗಿ ಮಾಡಿದನು ಎಂದಿದೆ. ಇಲ್ಲಿ ಮಾಯಾ ಶಬ್ದಕ್ಕೆ ಪ್ರಜ್ಞೆಯೆಂದರ್ಥಮಾಡಬೇಕು. ಮಾಯೇತಿ ಪ್ರಜ್ಞಾನಾಮ । ಮಾಯಾವಯುನಂ ಇತಿ ತನ್ನಾಮಸು ಪಾಠಾತ್ । (ನಿ ೩–೧೩) ನಿರುಕ್ತಕಾರರು ಮಾಯಾ ಮೂ ತು ಯಜ್ಞಿಯಾನಾಂ (ಋ. ಸಂ. ೧೦–೮೮–೬) ಎಂಬ ಋಕ್ಕನ್ನುದಹರಿಸಿ ಸ ಏವ ಪ್ರಜ್ಞಾಂ ತ್ವೇತಾಂ ಮನ್ಯಂತೇ ಎಂದು ವಿವರಿಸಿ ಮಾಯಾ ಎಂಬ ಶಬ್ದಕ್ಕೆ ಪ್ರಜ್ಞೆಯೆಂಬರ್ಥವನ್ನು ತಿಳಿಸಿದ್ದಾರೆ. (ನಿ. ೭–೨೭) ಅಲ್ಲದೆ ವಿಶ್ವಾ ಹಿ ಮಾಯಾ ಅವಸಿ ಸ್ವಧಾವಃ (ಋ. ಸಂ. ೬–೫೮–೧) ಎಂಬ ಋಕ್ಕನ್ನೂ ಉದಹರಿಸಿ ಅಲ್ಲಿಯೂ ಸಹ ಪ್ರಜ್ಞೆಯೆಂದೇ ಅರ್ಥ ಮಾಡಿದ್ದಾರೆ. (ನಿ. ೧೨-೧೭) ಆದರೆ ನಿ ಮಾಯಿನೋ ದಾನವಸ್ಯ (ಋ. ಸಂ. ೨–೧೧–೧೦) ಇತ್ಯಾದಿಋಕ್ಕುಗಳಲ್ಲಿ ಮಾಯಾವಿನಃ ದಾನವಸ್ಯ ವಂಚನಾನಿ ಎಂದು ವಂಚನೆ, ಮೋಸ ಇತ್ಯಾದ್ಯರ್ಥಗಳೂ ಇರುವುವು. ಪ್ರಕೃತವಾದ ಋಕ್ಕಿನಲ್ಲಿ ಆದಿತ್ಯನು ತನ್ನ ಪ್ರಜ್ಞೆಯಿಂದ ಲೋಕಗಳನ್ನು ಪವಿತ್ರವಾಗುವಂತೆ ಮಾಡಿದನೆಂದು ತಾತ್ಪರ್ಯ.

ಧೀರಃ—ಧೀಮಾನ್ । ಪ್ರಜ್ಞಾವಂತನಾದುದರಿಂದಲೇ ಈ ವಿಶೇಷಣವೂ ಇದೆ. ಸಾಧಾರಣವಾಗಿ ಧೀರಶಬ್ದಕ್ಕೆ ಧೈರ್ಯಶಾಲಿಯೆಂದರ್ಥವು ರೂಢವಾಗಿದೆ. ಆದರೆ ವೇದಗಳಲ್ಲಿಯೂ ಉಪನಿಷತ್ತುಗಳಲ್ಲಿಯೂ ಸಹ ಧೀಮಾನ್ ಎಂಬರ್ಥವನ್ನು ಮಾಡಿದೆ. ಧೀರೋ ಧೀಮಾನ್ (ನಿ. ೩-೧೨) ಈ ಪದವು ಮೇಧಾವಿನಾಮಗಳಲ್ಲಿ ಪಠಿತವಾಗಿದೆ. (ನಿ. ೩–೯) ಧೀರಶಬ್ದಕ್ಕೆ ಧೈರ್ಯವೆಂದರ್ಥಮಾಡಿದರೂ ಸಹ ಧೀರನು ಪ್ರಾಜ್ಞನಾದುದರಿಂದಲೂ ಭಯವನ್ನು ಜಯಿಸಿ ನಿರ್ಭಯನಾಗಿರುವುದು, ಆಪತ್ಕಾಲದಲ್ಲೂ ಪ್ರಶಾಂತಚಿತ್ತನಾಗಿರುವುದು ಇತ್ಯಾದಿಗುಣಗಳಿರುವುದರಿಂದಲೂ ಧೈರ್ಯವುಳ್ಳವನೆಂದೇ ತಾತ್ಪರ್ಯ.

ಯುವಾ ಸವಾಸಾಃ ಪರಿವೀತ ಆಗಾತ್ಸ ಉ ಶ್ರೇಯಾನ್ಭವತಿ ಜಾಯಮಾನಃ ।
ತಂ ಧೀರಾಸಃ ಕವಯ ಉನ್ನಯಂತಿ ಸ್ವಾಧ್ಯೋ ೩ ಮನಸಾ ದೇವಯಂತಃ ॥

(ಋ. ಸಂ. ೩-೮–೪)

ಇತ್ಯಾದಿಋಕ್ಕುಗಳಲ್ಲೂ,

ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತಸ್ತೌ ಸಂಪರೀತ್ಯ ವಿವಿನಕ್ತಿ ಧೀರಃ ।
ಶ್ರೇಯೋ ಹಿ ಧೀರೋಽಭಿಪ್ರೇಯಸೋ ವೃಣೀತೇ ಪ್ರೇಯೋ ಮಂದೋ ಯೋಗಕ್ಷೇಮಾ-
ದ್ವೃಣೀತೇ ॥

(ಕಠ. ೨-೨)

ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ।

(ಕಠ. ೫-೪)

ಇತ್ಯಾದ್ಯುಪನಿಷದ್ವಾಕ್ಯಗಳಲ್ಲಿಯೂ ಸಹ ಧೀರಃ ಧೀಮಾನ್, ಪ್ರಾಜ್ಞಃ ಎಂದರ್ಥವಾಗುವಂತೆ ಇಲ್ಲಿಯೂ ಸಹ ಪ್ರಾಜ್ಞನೆಂದರ್ಥವಾಗುತ್ತದೆ.

ಧೇನುಂ—ಧೇನುಶಬ್ದವು ಪೃಥ್ವಿಪರ್ಯಾಯ ಪದವಾಗಿದೆ. ಧೇನುರ್ಧಯತೇರ್ವಾ, ಧಿನೋತೇರ್ವಾ। ಧಯತೇsಸೌ ವತ್ಸೇನೇತಿ। ತರ್ಪಯತ್ಯಸೌ ಪಯಸಾ (ನಿ. ೧೧-೪೨) ಕರುವಿನಿಂದ ಹಾಲು ಹೀರಲ್ಪಡುತ್ತದೆ ಎಂಬುದರಿಂದಾಗಲಿ, ಅಥವಾ ಕ್ಷೀರವನ್ನು ಕೊಟ್ಟು ತೃಪ್ತಿಯನ್ನುಂಟುಮಾಡುತ್ತದೆ ಎಂಬುದರಿಂದಾಗಲಿ ಗೋವುಗಳಿಗೆ ಧೇನುಗಳೆಂದು ಹೆಸರು. ಪೃಥ್ವಿಯೂ ಸಹ ಸಸ್ಯಾದಿಸಂಪತ್ತುಗಳಿಂದ ಲೋಕಕ್ಕೆ ತೃಪ್ತಿಯನ್ನುಂಟುಮಾಡುವುದರಿಂದ ಈ ತಾದಾತ್ಮ್ಯವನ್ನು ಹೇಳಿದೆ.

ಪೃಶ್ನಿಂ—ಪೃಶ್ನಿಯೆಂದರೆ ಮರುತ್ತು ಮುಂತಾದ ದೇವತೆಗಳ ಮಾತೆಯೆಂದು ಪ್ರಸಿದ್ಧವಾದ ಅರ್ಥವಾಗಿದೆ. ಅಲ್ಲದೇ ವರ್ಣಸೂಚಕವಾದ ಪದವೂ ಆಗಿದೆ. ಕೆಲವು ಕಡೆಗಳಲ್ಲಿ ಸಮ್ಮಿಶ್ರಿತವಾದ ವರ್ಣಗಳ ಸಮುದಾಯವನ್ನು ಸೂಚಿಸುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಶುಕ್ಲ ವರ್ಣವೆಂದರ್ಥಮಾಡಿದೆ.

ಸುರೇತಸಂ ವೃಷಭಂ—ಎಂಬ ವಿಶೇಷಣಗಳು ದ್ಯುಲೋಕಾಧಿದೇವತೆಯ ಉತ್ಪಾದನಶಕ್ತಿಯನ್ನು ತೋರಿಸುತ್ತವೆ. ಈ ಎರಡು ಪದಗಳೂ ಪುಂಸ್ತ್ವಶಕ್ತಿಯನ್ನು ಸೂಚಿಸುವುವೆಂದು ಹಿಂದೆ ವಿವರಿಸಿದೆ. ದ್ಯೌಃ ಪಿತಾ ಎಂದಿರುವ ಪಿತೃವಿನ ಗುಣವು ವರ್ಣಿತವಾಗಿದೆ.

ಶುಕ್ರಂ—ಶುಕ್ರಂ ಶೋಚತೇರ್ಜ್ವಲತಿಕರ್ಮಣಃ। ಪ್ರಕಾಶಿಸುವ ಎಂಬರ್ಥವನ್ನು ಕೊಡುವ ಶುಚ್ ಧಾತುವಿನಿಂದ ನಿಷ್ಪನ್ನವಾಗಿದೆ. ಅತ್ಯಂತ ಪ್ರಕಾಶಮಾನವಾದದ್ದು ಎಂದರ್ಥ.

### ವ್ಯಾಕರಣಪ್ರಕ್ರಿಯಾ

ಪಿತ್ರೋಃ—ಮಾತಾ ಚ ಪಿತಾ ಚ ಪಿತರೌ ತಯೋಃ ಪಿತ್ರೋಃ ಪಿತಾಮಾತ್ರಾ (ಪಾ. ಸೂ. ೧-೨-೭೦) ಎಂಬುದರಿಂದ ಏಕಶೇಷಸಮಾಸವಾದಾಗ ಪಿತೃಶಬ್ದ ಉಳಿಯುತ್ತದೆ. ಷಷ್ಠೀದ್ವಿವಚನ ಪರವಾದಾಗ ಯಣಾದೇಶ ಉದಾತ್ತಸ್ಥಾನದಲ್ಲಿ ಯಣಾದೇಶ ಬಂದು ಅದರ ಪರದಲ್ಲಿ ಅನುದಾತ್ತವಿಭಕ್ತಿ ಬಂದುದರಿಂದ ಉದಾತ್ತಯಣೋ ಹಲ್ ಪೂರ್ವಾತ್ ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಪುನಾತಿ—ಪೂಞ್ ಪವನೇ ಧಾತು. ಕ್ರ್ಯಾದಿ. ಶ್ನಾ ವಿಕರಣ. ಲಟ್ ಪ್ರಥಮಪುರುಷಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರ ಉಳಿಯುತ್ತದೆ. ಪ್ವಾದೀನಾಂಹ್ರಸ್ವಃ ಎಂಬುದರಿಂದ ವಿಕರಣ ಪರವಾದಾಗ ಧಾತುವಿಗೆ ಹ್ರಸ್ವ.

ಧೀರಃ—ಡುಧಾಞ್ ಧಾರಣಪೋಷಣಯೋಃ ಧಾತು. ಸುಸೂಧಾಗೃಧಿಭ್ಯಃ ಕ್ರನ್ (ಉ. ಸೂ. ೨-೧೮೨) ಎಂಬುದರಿಂದ ಕ್ರನ್ ಪ್ರತ್ಯಯ. ಘುಮಾಸ್ಥಾಗಾ ಎಂಬುದರಿಂದ ಧಾತುವಿಗೆ ಈತ್ವ. ಞ್ನಿತ್ಯಾದಿರ್ನಿತ್ಯಮ್ (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಪೃಶ್ನಿಮ್—ಸ್ಪೃಶ ಸಂಸ್ಪರ್ಶನೇ ಧಾತು. ಘೃಣಿಪೃಶ್ನಿಪಾರ್ಷ್ಣಿ—(ಉ. ಸೂ. ೪೯೨) ಎಂಬುದರಿಂದ ನಿಪಾತಿತವಾಗಿದೆ.

ಸುರೇತಸಮ್—ಶೋಭನಂ ರೇತಃ ಯಸ್ಯ. ತಮ್. ಆದ್ಯುದಾತ್ತಂ ದ್ವ್ಯಚ್ ಛಂದಸಿ (ಪಾ. ಸೂ. ೬-೨-೧೧೯) ಎಂಬುದರಿಂದ ಉತ್ತರಪದಆದ್ಯುದಾತ್ತಸ್ವರ ಬರುತ್ತದೆ.

ವಿಶ್ವಾಹಾ—ಶೇಶ್ಛಂದಸಿ ಬಹುಲಂ (ಪಾ. ಸೂ ೬-೧-೭೦) ಎಂಬುದರಿಂದ ಶಿಗೆ ಲೋಪ.

ಧುಕ್ಷತ—ದುಹ ಪ್ರಪೂರಣೇ. ಧಾತು. ಛಂದಸಿಲುಜ್‌ಲ—(ಪಾ. ಸೂ. ೩-೪-೬) ಎಂಬುದರಿಂದ ಲಟರ್ಥದಲ್ಲಿ ಲುಜ್. ಪ್ರಥಮಪುರುಷಏಕವಚನದಲ್ಲಿ ತಾದೇಶ ಶಲ ಇಗುಪಧಾದನಿಟಃಕ್ಸಃ (ಪಾ. ಸೂ. ೩-೧-೪೫) ಎಂಬುದರಿಂದ ಚ್ಲಿಗೆ ಕ್ಸಾದೇಶ. ದಾದೇರ್ಧಾತೋರ್ಘಃ (ಪಾ. ಸೂ. ೮-೨-೩೨) ಎಂಬುದರಿಂದ ಹಕಾರಕ್ಕೆ ಘತ್ವ, ಏಕಾಚೋಬಶೋ—(ಪಾ. ಸೂ. ೮-೨-೩೭) ಎಂಬುದರಿಂದ ಆದಿಗೆ ಧತ್ವ. ಆದೇಶಪ್ರತ್ಯಯಯೋಃ (ಪಾ. ಸೂ. ೮-೩-೫೯) ಎಂಬುದರಿಂದ ಸಕಾರಕ್ಕೆ ಷತ್ವ. ಘಕಾರಕ್ಕೆ ಚರ್ತ್ವ ಬಂದಾಗ ಕ್ಷಕಾರಾದೇಶ ಬರುತ್ತದೆ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೩ ॥

———:o:———

ಸಂಹಿತಾಪಾಠಃ

ಅಯಂ ದೇವಾನಾಮಪಸಾಮಪಸ್ತಮೋ ಯೋ ಜಜಾನ ರೋದಸೀ ವಿಶ್ವ-
ಶಂಭುವಾ ।
ವಿ ಯೋ ಮಮೇ ರಜಸೀ ಸುಕ್ರತೂಯಯಾಜರೇಭಿಃ ಸ್ಕಂಭನೇಭಿಃ
ಸಮಾನೃಚೇ ॥ ೪ ॥

ಪದಪಾಠಃ

ಅಯಂ । ದೇವಾನಾಂ । ಅಪಸಾಂ । ಅಪಃsತಮಃ । ಯಃ । ಜಜಾನ । ರೋದಸೀ ಇತಿ । ವಿಶ್ವsಶಂಭುವಾ ।
ವಿ । ಯಃ । ಮಮೇ । ರಜಸೀ ಇತಿ । ಸುಕ್ರತುsಯಯಾ । ಅಜರೇಭಿಃ । ಸ್ಕಂಭನೇಭಿಃ । ಸಂ । ಆನೃಚೇ । ॥ ೪ ॥

ಸಾಯಣಭಾಷ್ಯಂ

ಪೂರ್ವಂ ಪುತ್ರಮಾಹಾತ್ಮ್ಯೇನೈತೇ ಪ್ರಶಸ್ಯೇದಾನೀಂ ಸ್ತೋತ್ರೋತ್ಪಾದಕಸ್ತುತ್ಯಾ ಪ್ರಶಂಸತಿ । ಅಯಂ ದೇವಾನಾಂ ಮಧ್ಯೇ ದೇವತನೋsಪಸಾಮಪಸ್ತಮಃ । ಅಪ ಇತಿ ಕರ್ಮನಾಮ । ತೇನ ತದ್ವಾನ್ ಲಕ್ಷ್ಯತೇ । ಕರ್ಮವತಾಂ ಮಧ್ಯೇ ಪ್ರಕೃಷ್ಟಕರ್ಮಾ । ಅಯಮಿತ್ಯುಕ್ತಂ ಕ ಇತ್ಯಾಹ । ಯೋ ದೇವೋ ವಿಶ್ವಶಂಭುವಾ ಸರ್ವಪ್ರಕಾರೇಣ ಭೂತಾನಾಂ ಸುಖಸ್ಯ ಭಾವಯಿತ್ರ್ಯೌ ರೋದಸೀ ದ್ಯಾವಾಪೃಥಿವ್ಯೌ ಮಹಾನುಭಾವೇ ಜಜಾನ ಉತ್ಪಾದಿತವಾನ್ । ನ ಕೇವಲಮುತ್ಪಾದನಮಾತ್ರಂ ಅಪಿ ತು ಯೋ ದೇವೋ ರಜಸೀ ರಂಜನಾತ್ಮಿಕೇ ದ್ಯಾವಾಪೃಥಿವ್ಯೌ । ರಜಸೀ ಇತಿ ದ್ಯಾವಾಪೃಥಿವ್ಯೋರ್ನಾಮ ರಜಸೀ ಸದಸೀ ಇತಿ

ತನ್ನಾಮಸು ಪಾಠಾತ್ । ಉಕ್ತರೂಪೇ ವಿ ಮಮೇ ವಿಶೇಷೇಣ ಪರಿಚ್ಛಿನತ್ತಿ । ಕಿಂ ಸ್ವೋಪಭೋಗಾಯ ನೇತ್ಯಾಹ । ಸುಕ್ರತೂಯಯಾ ಶೋಭನಕರ್ಮೇಚ್ಛಯಾ । ಯೇನ ಕರ್ಮಣಾ ಪ್ರಾಣಿನಾಂ ಸುಖಂ ಸಂಭವತಿ ತಾದೃಕ್ಕರ್ಮೇಚ್ಛಯಾ । ಅಥವೈತದುತ್ತರತ್ರ ಸಂಬಂಧ್ಯತೇ । ಸುಕ್ರತೂಯಯೋಕ್ತೇನ ನಿಮಿತ್ತೇನೇಮೇ ದ್ಯಾವಾಪೃಥಿವ್ಯಾವಜರೇಭಿರಜೀರ್ಣೈರ್ದೃಢತರೈಃ ಸ್ಕಂಭನೇಭಿರ್ಗತಿಪ್ರತಿಬಂಧಸಾಧನೈಃ ಶಂಕುಭಿಃ ಸಮಾನೃಚೇ । ಸಮ್ಯಕ್ ಸರ್ವತಃ ಪೂಜಿತವಾನ್ । ಸ್ಥಾಪಿತವಾನಿತ್ಯರ್ಥಃ ॥ ಋಚ ಸ್ತುತೌ । ಲಿಟಿ ರೇಫಸಾಮಾನ್ಯಾದ್ದ್ವಿಹಲ್ತ್ವಮಸ್ತೀತಿ ತಸ್ಮಾನ್ನುಡ್ದ್ವಿಹಲ ಇತ್ಯಭ್ಯಾಸಸ್ಯ ನುಟ್ ॥ ಯಸ್ಮಾದೇವಂ ತಸ್ಮಾದಯಮೇವ ದೇವೋಽಯಮೇವಾಪಸ್ತಮ ಇತ್ಯೇವಂ ಮಹಾನುಭಾವೇನ ಪರಮೇಶ್ವರೇಣೋತ್ಪನ್ನೇ ಇತಿ ಸ್ತುತಿಃ ॥

॥ ಪ್ರತಿಪದಾರ್ಥ ॥

ಯಃ—ಯಾವ ಆದಿತ್ಯನು । ವಿಶ್ವಶಂಭುವಾ—ಲೋಕಕ್ಕೆಲ್ಲಾ ಸೌಖ್ಯವನ್ನು ಕೊಡತಕ್ಕ । ರೋದಸೀ—ದ್ಯಾವಾಪೃಥಿವಿಗಳನ್ನು । ಜಜಾನ — ಉತ್ಪನ್ನವಾಗುವಂತೆ ಮಾಡಿದನೋ । ಮತ್ತು ಯಃ— ಯಾವನು । ರಜಸೀ—ದ್ಯಾವಾಪೃಥಿವಿಗಳೆರಡನ್ನೂ । ವಿ ಮಮೇ—ಅಳೆದನೋ (ಅಲ್ಲದೇ) । ಸುಕ್ರತೂಯಯಾ–ಶ್ರೇಷ್ಠವಾದ ಕರ್ಮಾಚರಣೆಗೆ ಸಹಾಯವನ್ನು ಮಾಡಬೇಕೆಂಬ ಇಚ್ಛೆಯಿಂದ । ಅಜರೇಭಿಃ—ಕ್ಷಯಿಸದಿರುವ । ಸ್ಕಂಭನೇಭಿಃ—ಆಧಾರ ಸ್ತಂಭಗಳಿಂದ । ಸಮಾನೃಚೇ—ಊರೆಯನ್ನು ಕೊಟ್ಟು ಸ್ಥಾಪಿಸಿದನೋ ಅಂತಹ । ಅಯಂ—ಆ ಆದಿತ್ಯನು । ದೇವಾನಾಂ—ದೇವತೆಗಳ ನಡುವೆ (ದೇವತೋತ್ತಮನು) । ಅಪಸಾಂ—ಕರ್ಮಯುಕ್ತರ ನಡುವೆ ಅಪಸ್ತಮಃ—ಅತ್ಯಂತ ಶ್ರೇಷ್ಠವಾದ ಕರ್ಮಗಳನ್ನು ಮಾಡುವವನು (ಆಗಿದ್ದಾನೆ.)

ಭಾವಾರ್ಥ

ಯಾವ ಆದಿತ್ಯನು ಲೋಕಕ್ಕೆಲ್ಲಾ ಸೌಖ್ಯವನ್ನು ಕೊಡತಕ್ಕ ದ್ಯಾವಾಪೃಥಿವಿಗಳನ್ನು ಸೃಷ್ಟಿಸಿದನೋ, ಯಾವನು ದ್ಯಾವಾಪೃಥಿವಿಗಳನ್ನು ಅಳೆದನೋ ಮತ್ತು ಶ್ರೇಷ್ಠವಾದ ಕರ್ಮಾಚರಣೆಗೆ ಸಹಾಯವನ್ನು ಮಾಡಬೇಕೆಂಬ ಇಚ್ಛೆಯಿಂದ ಕ್ಷಯಿಸದಿರುವ ಆಧಾರಸ್ತಂಭಗಳಿಂದ ಊರೆಯನ್ನು ಕೊಟ್ಟು ದ್ಯಾವಾಪೃಥಿವಿಗಳನ್ನು ಸ್ಥಾಪಿಸಿದನೋ ಅಂತಹ ಆದಿತ್ಯನು ದೇವತೆಗಳ ನಡುವೆ ದೇವತೋತ್ತಮನು ಮತ್ತು ಕರ್ಮಯುಕ್ತರ ನಡುವೆ ಶ್ರೇಷ್ಠವಾದ ಕರ್ಮಗಳನ್ನು ಮಾಡುವವನಾಗಿದ್ದಾನೆ.

## English Translation

He it is, amongst gods (the most divine), amongst (pious) works the most pious, who gave birth to the all-delighting heaven and earth: who measurd them both, and, for the sake of holy rites, propped them up with undecaying pillars.

ವಿಶೇಷವಿಷಯಗಳು

ರೋದಸೀ ಜಜಾನ—ದ್ಯಾವಾಪೃಥಿವಿಗಳನ್ನು ಸೃಷ್ಟಿಸಿದನು, ಎಂಬ ವಾಕ್ಯದಲ್ಲಿ ಸ್ಥೂಲವಾಗಿ ನೋಡಿದರೆ ಒಂದು ವಿರೋಧವು ಕಾಣುತ್ತಿದೆ.

ನಮೋ ಮಿತ್ರಸ್ಯ ವರುಣಸ್ಯ ಚಕ್ಷಸೇ ಮಹೋ ದೇವಾಯ ತದೃತಂ ಸಪರ್ಯತ ।
ದೂರೇದೃಶೇ ದೇವಜಾತಾಯ ಕೇತವೇ ದಿವಸ್ಪುತ್ರಾಯ ಸೂರ್ಯಾಯ ಶಂಸತ ॥

(ಋ. ಸಂ. ೧೦-೩೭-೧)

ಇತ್ಯಾದಿ ವಾಕ್ಯಗಳಲ್ಲಿ ಆದಿತ್ಯನನ್ನು ದಿವಸ್ಪುತ್ರನೆಂದು ಕರೆದಿದೆ. ಇನ್ನೂ ಇತರಕಡೆಗಳಲ್ಲಿ ದ್ಯಾವಾಪೃಥಿವಿಯ ಪುತ್ರನೆಂದೂ ಹೇಳಿದೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಹೇಳಿರುವ ಅಭಿಪ್ರಾಯವನ್ನೂ ಸಮರ್ಥಿಸುವಂತೆ

ಯತ್ರಾ ಸಮುದ್ರಃ ಸ್ಕಭಿತೋ ವ್ಯೌನದಪಾಂ ನಪಾತ್ಸವಿತಾ ತಸ್ಯ ವೇದ ।
ಅತೋ ಭೂರತ ಆ ಉತ್ಥಿತಂ ರಜೋಽತೋ ದ್ಯಾವಾಪೃಥಿವೀ ಅಪ್ರಥೇತಾಂ ॥

(ಋ. ಸಂ. ೧೦-೧೪೯-೨)

ಇತ್ಯಾದಿಋಕ್ಕುಗಳಲ್ಲಿ ಅಸ್ಮಾದೇವ ಸವಿತುಃ ಭೂಮಿರಾಸೀತ್। ರಜಃ ಅಂತರಿಕ್ಷಂ ಚ ಅಜಾಯತ। ಈ ಸವಿತೃವಿನಿಂದಲೇ ಭೂಮ್ಯಂತರಿಕ್ಷಗಳು ಜನಿಸಿದವು ಎಂದೂ ಸಹ ಹೇಳಿದೆ. ಇದರಲ್ಲಿ ಪರಸ್ಪರವಾದ ಜನ್ಯಜನಕ ಭಾವವನ್ನು ಹೇಳಿರುವುದರಲ್ಲಿ ಯಾವ ವಿರೋಧವೂ ಇರುವುದಿಲ್ಲ. ಏತಕ್ಕೆಂದರೆ ಸವಿತೃವಿಗೆ ಅಂತರಿಕ್ಷದಲ್ಲೇ ಉದಯವಿದ್ದು ಅಂತರಿಕ್ಷವೇ ಆಧಾರವೂ ಆಶ್ರಯವೂ ಆಗಿರುವುದರಿಂದ ದಿವಸ್ಪುತ್ರನೆಂದು ಹೇಳಿದೆ. ಮತ್ತು

ದಿವೋ ಧರ್ತಾ ಭುವನಸ್ಯ ಪ್ರಜಾಪತಿಃ ಪಿಶಂಗಂ ದ್ರಾಪಿಂ ಪ್ರತಿ ಮುಂಚತೇ ಕವಿಃ ।

(ಋ. ಸಂ. ೪-೫೩-೨)

ಆಪ್ರಾ ರಜಾಂಸಿ ದಿವ್ಯಾನಿ ಪಾರ್ಥಿವಾ ಶ್ಲೋಕಂ ದೇವಃ ಕೃಣುತೇ ಧರ್ಮಣೇ

(ಋ ಸಂ. ೪-೫೩-೩)

ವಿ ನಾಕಮಖ್ಯತ್ಸವಿತಾ ವರೇಣ್ಯೋಽನು ಪ್ರಯಾಣಮುಷಸೋ ವಿ ರಾಜತಿ ।

(ಋ. ಸಂ. ೫-೮೧-೨)

ಇತ್ಯಾದಿಋಕ್ಕುಗಳಲ್ಲೆಲ್ಲಾ ತಮಸ್ಸಿನಿಂದ ಮರೆಯಾಗಿದ್ದ ಪೃಥಿವ್ಯಂತರಿಕ್ಷಗಳನ್ನು ಪ್ರಕಾಶಗೊಳಿಸಿ ಎಲ್ಲರಿಗೂ ಗೋಚರವಾಗುವಂತೆ ಮಾಡಿದ್ದರಿಂದಲೂ, ಈ ಲೋಕಗಳ ಧಾರಕನೆಂದು ಪ್ರಸಿದ್ಧನಾಗಿರುವುದರಿಂದಲೂ, ಎರಡು ಲೋಕಗಳನ್ನು ನಿಯಮದಂತೆ ನಡೆಯಲು ಸಹಾಯಕನಾಗಿರುವುದರಿಂದಲೂ ಸಹ ದ್ಯಾವಾಪೃಥಿವಿಗಳಿಗೆ ಇವನು ಉತ್ಪಾದಕನೆಂದು ಹೇಳಿದೆ. ಈ ಎರಡು ಅಂಶಗಳಲ್ಲೂ ಸತ್ಯವಿರುವುದರಿಂದ ಒಂದಕ್ಕೊಂದಕ್ಕೆ ವಿರೋಧವಿರುವುದಿಲ್ಲ.

ವಿಶ್ವಶಂಭುವಾ ರೋದಸೀ—ಸರ್ವಪ್ರಕಾರೇಣ ಭೂತಾನಾಂ ಸುಖಸ್ಯ ಭಾವಯಿತ್ರ್ಯೌ । ಸರ್ವವಿಧದಲ್ಲಿಯೂ ಭೂತಗಳಿಗೆ ಸೌಖ್ಯದಾತರೆಂದರ್ಥ. ಸಕಲ ಲೋಕವನ್ನು ಜ್ಯೋತಿರ್ಮಯವನ್ನಾಗಿ ಮಾಡುವುದರಿಂದ ಮತ್ತು ವೃಷ್ಟ್ಯಾದಿಗಳಿಗೆ ಆಧಾರವಾಗಿರುವುದರಿಂದ ಅಂತರಿಕ್ಷವೂ, ಯಜ್ಞಯಾಗಾದಿಗಳಿಂದ ದೇವತೆಗಳಿಗೆ ತೃಪ್ತಿಯನ್ನುಂಟುಮಾಡುವುದಲ್ಲದೆ, ಪುನಃ ವೃಷ್ಟ್ಯಾದಿಗಳಿಗೂ ಕಾರಣವಾಗಿ ಸಕಲಭೂತಗಳಿಗೂ ಸಸ್ಯಾದಿ ಸಂಪತ್ತನ್ನೊದಗಿಸುವುದರಿಂದ ಪೃಥ್ವಿಯೂ ಸಹ ವಿಶ್ವಕ್ಕೆಲ್ಲಾ ಸೌಖ್ಯವನ್ನು ಕೊಡುವವರೆಂದು ಹೇಳಿದೆ. ಈ ವಿಷಯವನ್ನು ಉದಾಹರಣೆಗಳೊಂದಿಗೆ ಹಿಂದೆ ವಿವರಿಸಿದೆ.

ಸ್ಕಂಭನೇಭಿಃ ಸಮಾನೃಚೇ—ಆಧಾರಸ್ತಂಭಗಳಿಂದ ಊರೆಕೋಲನ್ನು ಕೊಟ್ಟು ಹಿಡಿದೆತ್ತಿ ನಿಲ್ಲಿಸಿದನು.
ನ ಪ್ರಮಿಯೇ ಸವಿತುರ್ದೈವ್ಯಸ್ಯ ತದ್ಯಥಾ ವಿಶ್ವಂ ಭುವನಂ ಧಾರಯಿಷ್ಯತಿ ।

(ಋ. ಸಂ. ೪-೫೪-೪)

ಸವಿತಾ ಯಂತ್ರೈಃ ಪೃಥಿವೀಮರಮ್ಣಾದಸ್ಕಂಭನೇ ಸವಿತಾ ದ್ಯಾಮದೃಂಹತ್ ।
ಅಶ್ವಮಿವಾಧುಕ್ಷದ್ಧುನಿಮಂತರಿಕ್ಷಮತೂರ್ತೇ ಬದ್ಧಂ ಸವಿತಾ ಸಮುದ್ರಂ ॥

(ಋ. ಸಂ. ೧೦-೧೪೯-೧)

ಸವಿತೃವು ನಿರಾಲಂಬನವಾದ ದ್ಯುಲೋಕಕ್ಕೆ ಆಲಂಬನವನ್ನೂ ಆಸರೆಯನ್ನು ಕೊಟ್ಟು ಸ್ಥಾಪಿಸಿದ್ದಾನೆ. ನಿಯಮನ ಸಾಧನಗಳಾದ ವೃಷ್ಟಿಪ್ರದಾನಾದಿಗಳಿಂದ ಪೃಥ್ವಿಯನ್ನು ಧಾರಣೆಮಾಡಿದ್ದಾನೆ. ವಾಯ್ವಾದಿರೂಪಗಳಾದ ಪಾಶಗಳಿಂದ ಅಂತರಿಕ್ಷವನ್ನು ಬದ್ಧವಾದುದನ್ನಾಗಿ ಮಾಡಿದ್ದಾನೆ, ಇತ್ಯಾದಿಯಾಗಿ ಆಲಂಬನ ರಹಿತವಾದವೂ ಆಶ್ರಯ ರಹಿತವಾದವೂ ಆದ ಕ್ಷಿತ್ಯಾದಿ ಲೋಕತ್ರಯವನ್ನೂ ಅದರದರ ಅವಶ್ಯಕತೆಗೆ ತಕ್ಕಂತೆ ಅಸರೆಯನ್ನು ಕೊಟ್ಟಿದ್ದರಿಂದ ಆ ಅಂಶವನ್ನು ಸ್ಕಂಭನೇಭಿಃ ಸಮಾನೃಚೇ ಎಂದು ವರ್ಣಿಸಿದೆ. ಪೃಥಿವ್ಯಾದಿಗಳಲ್ಲಿರುವ ಆಶ್ರಯಕ್ಕೂ ಆಧಾರಕ್ಕೂ ಒಂದು ಮಿತಿಯುಂಟು. ಕಾಲಿಕವಾದ ನಿಯಮವುಂಟು. ಆದರೆ ಆದಿತ್ಯನು ಪೃಥಿವ್ಯಂತರಿಕ್ಷಗಳಿಗೆ ಕೊಡತಕ್ಕ ಆಧಾರವೂ ಆಶ್ರಯವೂ ಶಾಶ್ವತಗಳು ಎಂದು ತೋರಿಸಲು ಅಜರೇಭಿಃ—ಕ್ಷೀಣವಾಗದಿರುವ ಎಂಬ ಸ್ಕಂಭನೇಭಿಃ ಎಂಬುದಕ್ಕೆ ವಿಶೇಷಣವಾಗಿ ಸ್ಕಂಭನದ ಸ್ವರೂಪವನ್ನೂ ಶಕ್ತಿಯನ್ನೂ ತೋರಿಸುತ್ತದೆ.

(ಅಯಂ ದೇವಾನಾಂ ಮಧ್ಯೇ ದೇವತಮಃ)—ಈ ಆದಿತ್ಯನು ದೇವತೆಗಳ ನಡುವೆ ಅತ್ಯಂತ ಶ್ರೇಷ್ಠನಾದ ದೇವನು. ಆದುದರಿಂದಲೇ ಇವನಿಗೆ ದೇವತೆಗಳ ನಡುವೆ ಬ್ರಹ್ಮ ಪದವಿಯು ಲಭಿಸಿತು. ಪಾರ್ಥಿವವಾದ ಯಜ್ಞಯಾಗಾದಿಗಳಲ್ಲಿ ಬ್ರಹ್ಮ ಸ್ಥಾನವನ್ನಾಕ್ರಮಿಸಿದವನು. ಯಾವ ಉತ್ತಮವಾದ ಯೋಗ್ಯತೆಯನ್ನು ಹೊಂದಿರಬೇಕೋ ಅದರಂತೆಯೇ ದೇವತೆಗಳಲ್ಲೆಲ್ಲಾ ಆದಿತ್ಯನಿಗೇ ಈ ಉತ್ತಮವಾದ ಯೋಗ್ಯತೆಯಿರುವುದರಿಂದ ಅವನು ಅವರಿಗೆಲ್ಲಾ ಬೃಹಸ್ಪತಿಯ ರೂಪದಲ್ಲಿದ್ದನು ಎಂದು ವಾ. ಸಂಹಿತೆಯಲ್ಲಿ ಉಕ್ತವಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ಅಯಂ ದೇವಾನಾಂ ಎಂದು ಮಾತ್ರ ಆದಿತ್ಯನ ಗುಣವನ್ನು ವರ್ಣಿಸಿದೆ. ದೇವಾನಾಂ ಮಧ್ಯೇ ದೇವತಮಃ ಎಂಬುದು ಸಾಯಣಭಾಷ್ಯದ ವಾಕ್ಯ. ಈ ಶ್ರೇಷ್ಠವಾದ ಗುಣವು ಸವಿತೃವಿನಲ್ಲಿ ನಾನಾರೂಪದಲ್ಲಿದೆ. ಉದಾಹರಣೆಗೆ ಸಕಲ ದೇವತೆಗಳಿಗೂ ಆದಿತ್ಯನು ಚೈತನ್ಯದಾಯಿಯಾದುದರಿಂದಲೇ,

ಸವಿತಾರಂ ಪ್ರಸವಾಯೋಪಾಧಾವತ್ಸವಿತಾ ವೈ ದೇವಾನಾಂ ಪ್ರಸವಿತಾ ।

(ಶ. ಬ್ರಾ. ೫-೧-೧-೧೫)

ಸವಿತಾ ಪ್ರಸವಾನಾಮಧಿಪತಿಃ ।

(ತೈ. ಸಂ. ೩-೩-೫)

ಇತ್ಯಾದಿ ವಾಕ್ಯಗಳಿಂದ ಸಕಲ ದೇವತೆಗಳಿಗೂ ಪ್ರಸವಿತೃವೆಂದು ಸ್ತುತಿಸಿದೆ. ಇಷ್ಟೇ ಅಲ್ಲದೆ—

ವನಾನಿ ವಿಭ್ಯೋ ನಕಿರಸ್ಯ ತಾನಿ ವ್ರತಾ ದೇವಸ್ಯ ಸವಿತುರ್ಮಿನಂತಿ ।

..........................................................................

ನ ಯಸ್ಯೇಂದ್ರೋ ವರುಣೋ ನ ಮಿತ್ರೋ ವ್ರತಮರ್ಯಮಾ ನ ಮಿನಂತಿ ರುದ್ರಃ ॥

ನಾರಾತಯಸ್ತಮಿದಂ ಸ್ವಸ್ತಿ ಹುವೇ ದೇವಂ ಸವಿತಾರಂ ನಮೋಭಿಃ ॥

(ಋ. ಸಂ. ೨-೩೮-೭ ರಿಂದ ೯)

ಇತ್ಯಾದಿ ಋಕ್ಕುಗಳಲ್ಲಿ ಸವಿತೃವಿನ ನಿಯಮವನ್ನು ಇಂದ್ರಾದಿದೇವತೆಗಳಾರೂ ಉಲ್ಲಂಘಿಸಲು ಸಾಧ್ಯವಿಲ್ಲವೆಂದೂ ಎಲ್ಲರೂ ಆ ನಿಯಮಕ್ಕೆ ಅನುಸಾರವಾಗಿಯೇ ಇರಬೇಕೆಂದೂ ವಿಶದವಾಗಿ ತಿಳಿಸಿದೆ. ಹೀಗೆ ಅನೇಕ ದೃಷ್ಟಿಗಳಿಂದ ಸವಿತೃರೂಪನಾದ ಆದಿತ್ಯನ ಮಹಿಮೆಯು ದೇವತೆಗಳಲ್ಲೆಲ್ಲಾ ಶ್ರೇಷ್ಠವಾಗಿರುವುದರಿಂದಲೂ, ನೇತೃವಿನ ಸ್ವರೂಪವನ್ನು ತೋರಿಸುವುದರಿಂದಲೂ ಸಹ ದೇವಾನಾಂ (ಮಧ್ಯೇ ದೇವತಮಃ) ಎಂದು ಆದಿತ್ಯನ ಮಹತ್ತ್ವವನ್ನು ವರ್ಣಿಸಿದೆ.

ರಜಸೀ—ರಜೋ ರಜತೇರ್ಜ್ಯೋತೀ ರಜ ಉಚ್ಯತೇ । ಉದಕಂ ರಜ ಉಚ್ಯತೇ । ಲೋಕಾ ರಜಾಂಸ್ಯುಚ್ಯಂತೇ- (ನಿ. ೪-೧೯). ಬೆಳಗು ಎಂಬರ್ಥವನ್ನು ಕೊಡುವ ರಂಜ್ ಧಾತುವಿನಿಂದ ನಿಷ್ಪನ್ನವಾಗಿ ರಜಸ್ ಶಬ್ದಕ್ಕೆ ಜ್ಯೋತಿಯೆಂದೂ, ಉದಕವೆಂದೂ, ಲೋಕಗಳೆಂದೂ ಅರ್ಥವಾಗುತ್ತದೆ.

ರಜಾಂಸಿ ಚಿತ್ರಾ ವಿ ಚರಂತಿ ತನ್ಯವೋ ದಿವಃ ಸಮ್ರಾಜಾ ಪಯಸಾ ನ ಉಕ್ಷತಂ ।

(ಋ. ಸಂ. ೫-೬೩-೫)

ಎಂಬ ಋಕ್ಕನ್ನುದಹರಿಸಿ ನಿರುಕ್ತಕಾರರು ರಜಾಂಸಿ ಎಂಬ ಪದಕ್ಕೆ ಲೋಕಗಳನ್ನು ಎಂದರ್ಥವಾಗುವುದೆಂದು ತೋರಿಸಿದ್ದಾರೆ. ನಿರುಕ್ತದ ೧೦ನೇ ಅಧ್ಯಾಯದ ೪೪ನೆಯ ಖಂಡದಲ್ಲಿ,

ಅಬ್ಜಾಮುಕ್ಥೈರಹಿಂ ಗೃಣೀಷೇ ಬುಧ್ನೇ ನದೀನಾಂ ರಜಸ್ಸು ಷೀದನ್ ।

(ಋ. ಸಂ ೭-೩೪-೧೬)

ಎಂಬ ಋಕ್ಕನ್ನು ವಿವರಿಸುವಾಗ ರಜಸ್ಸು ಎಂಬಪದಕ್ಕೆ ಉದಕೇಷು—ಉದಕಗಳಲ್ಲಿ ಎಂದರ್ಥವಾಗುತ್ತದೆಂದೂ ೧೨ನೆಯ ಅಧ್ಯಾಯದ ೭ನೆಯ ಖಂಡದಲ್ಲಿ,

ಏತಾ ಉ ತ್ಯಾ ಉಷಸಃ ಕೇತುಮಕ್ರತ ಪೂರ್ವೇ ಅರ್ಧೇ ರಜಸೋ ಭಾನುಮಂಜತೇ ।

(ಋ ಸಂ. ೧-೯೨-೧)

ಎಂಬ ಋಕ್ಕನ್ನು ವಿವರಿಸುವಾಗ ರಜಸಃ ಎನ್ನುವುದಕ್ಕೆ ಅಂತರಿಕ್ಷವೆಂದೂ ಅರ್ಥಮಾಡಿದ್ದಾರೆ.

ತ್ರೀಣಿ ಭಾಂತಿ ರಜಾಂಸ್ಯಸ್ಯ ಯತ್ಪದಾನಿ ತು ತೇಜಸಾ ।

ಎಂದು ಬೃಹದ್ದೇವತಾಕಾರರು ವಿಷ್ಣುವಿನ ಮೂರು ಲೋಕಗಳ ಆಕ್ರಮಣವನ್ನೂ ವರ್ಣಿಸುವಾಗ ಮೂರುಲೋಕಗಳ ಪರ್ಯಾಯವಾಗಿ ರಜಾಂಸಿ ಎಂಬ ಪದವನ್ನುಪಯೋಗಿಸಿದ್ದಾರೆ. ರಜಃ, ರಜಾಂಸಿ ಎಂದರೆ ಸಾಮಾನ್ಯವಾಗಿ ಲೋಕಪರ್ಯಾಯವಾದ ಪ್ರಯೋಗವಾಗುತ್ತದೆ. ಆದರೆ,

ಯೆನ್ಮಾ ಸೋಮಾಸೋ ಮಮದನ್ಯದುಕ್ಥೋಭೇ ಭಯೇತೇ ರಜಸೀ ಅಪಾರೇ ।

(ಋ. ಸಂ. ೪-೪೨-೬)

ಇತ್ಯಾದಿ ಋಕ್ಕುಗಳಲ್ಲಿ ಈ ಪದವು ದ್ವಿವಚನದಲ್ಲಿದ್ದು ದ್ಯಾವಾಪೃಥಿವಿಗಳೆಂದು ಪಾರಿಭಾಷಿಕವಾದ ಅರ್ಥವೇ ಆಗಿದೆ. ಕೆಲವೆಡೆಗಳಲ್ಲಿ ಮಾತ್ರ ಎಂದರೆ.—

ಅಹಶ್ಚ ಕೃಷ್ಣಮಹರರ್ಜುನಂ ಚ ವಿ ವರ್ತೇತೇ ರಜಸೀ ವೇದ್ಯಾಭಿಃ ॥

(ಋ. ಸಂ. ೬-೯-೧)

ಇತ್ಯಾದಿ ಒಂದೆರಡು ಋಕ್ಕುಗಳಲ್ಲಿ ರಜಸೀ ಜಗದ್ರಂಜಯಂತೌ ಎಂದು ಧಾತುವಿನ ಮೂಲಾರ್ಥವೇ ಮುಖ್ಯವಾಗಿರುತ್ತದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ರಂಜನಾತ್ಮಕೇ ದ್ಯಾವಾಪೃಥಿವ್ಯೌ ಎಂದು ವಿವರಿಸಿದೆ.

ಸ್ಕಂಭನೇಭಿಃ—ಗತಿಬಂಧನೈಃ ಶಂಕುಭಿಃ । ಗತಿಬಂಧವಾದ ಶಂಕುಗಳೆಂದರ್ಥಮಾಡಿದ್ದಾರೆ. ಎಂದರೆ ಲೋಕಗಳ ಗತಿಗಳನ್ನು ನಿಯಮಿಸುವ ಸಾಧನವೆಂದು ಅರ್ಥವಾಗುತ್ತದೆ. ಇದು ಅಳತೆಯ ಸಾಧನವೂ ಆಗಬಹುದು, ಆಧಾರಸ್ತಂಭವೂ ಆಗಬಹುದು. ಇದರ ಅರ್ಥದ ವಿಸ್ತೃತಿಯು ಬಹಳವಾಗಿದೆ. ಅಥರ್ವಣವೇದದಲ್ಲಿ (೧೦-೭) ಸ್ಕಂಭ (ವಿಶ್ವಾಧಾರರೂಪದ ದೇವತೆ) ನೆಂಬ ದೇವತೆಯು ಪ್ರಸಿದ್ಧವಾಗಿದೆ.

ಕ್ವ ಪ್ರೇಪ್ಸಂತೀ ಯುವತೀ ವಿರೂಪೇ ಅಹೋರಾತ್ರೇ ದ್ರವತಃ ಸಂವಿದಾನೇ । ಯತ್ರ ಪ್ರೇಪ್ಸಂತೀರಭಿಯಂತಿ ಆಪಃ ಸ್ಕಂಭಂ । ಯಸ್ಮಿನ್ ಸ್ತಬ್ಧ್ವಾ ಪ್ರಜಾಪತಿರ್ಲೋಕಾನ್ಸರ್ವಾನಧಾರಯತ್ ಸ್ಕಂಭಂ ॥

(ಅ. ವೇ. ೧೦-೭-೬ ರಿಂದ ೭)

ಯಾರಲ್ಲಿಗೆ ಅಹೋರಾತ್ರಗಳೆರಡೂ ಸಂಗಮಕ್ಕಾಗಿ ಹೋಗಿ ಸೇರಲಾತುರವಾಗಿವೆಯೋ, ಯಾರಲ್ಲಿಗೆ ನದೀಪ್ರವಾಹಗಳೆಲ್ಲವೂ ಪ್ರವಹಿಸುತ್ತವೆಯೋ, ಯಾರ ಆಧಾರದಮೇಲೆ ಪ್ರಜಾಪತಿಯು ಈ ಸಕಲಲೋಕಗಳನ್ನೂ ಸೃಷ್ಟಿಸಿ ನಿಯಮಿಸಿರುವುನೋ ಆ ಸ್ಕಂಭನ ಸ್ವರೂಪವೇನು ? ಎಂದು ಪ್ರಶ್ನಿಸಿದೆ. ಈ ಅಧ್ಯಾಯದಲ್ಲಿ ವರ್ಣಿತವಾಗಿರುವ ಸ್ಕಂಭನ ಸ್ವರೂಪವೆಲ್ಲವೂ ಋಕ್ಸಂಹಿತೆಯ ೧೦-೧೨೧ ನೇ ಸೂಕ್ತದಲ್ಲಿ ವರ್ಣಿತವಾಗಿರುವ ಹಿರಣ್ಯಗರ್ಭನ ಸ್ವರೂಪದ ವರ್ಣನೆಯಂತಿದೆ. ಸ ದಾಧಾರ ಪೃಥಿವೀಮುತ ದ್ಯಾಂ (೧೦-೧೨೧-೧) ಇತ್ಯಾದಿ ವಾಕ್ಯಗಳಲ್ಲಿ ಹೇಳಿರುವಂತೆಯೇ ಸಕಲವಿಶ್ವಗಳಿಗೂ ಆಧಾರನೆಂದು ಹೇಳಿದೆ. ಆದರೆ ಋಕ್ಸಂಹಿತೆಯಲ್ಲಿಯೂ ಸಹ ಸ್ಕಂಭಶಬ್ದಕ್ಕೆ ಆಧಾರವೆಂಬ ಅರ್ಥವು ಪ್ರಸಿದ್ಧವಾಗಿದೆ.

ಅಯಂ ವಿದಚ್ಚಿತ್ರದೃಶೀಕಮರ್ಣಃ ಶುಕ್ರಸದ್ಮನಾಮುಷಸಾಮನೀಕೇ ।
ಅಯಂ ಮಹಾನ್ಮಹತಾ ಸ್ಕಂಭನೇನೊದ್ದ್ಯಾಮಸ್ತಭ್ನಾದ್ವೃಷಭೋ ಮರುತ್ವಾನ್ ॥

(ಋ. ಸಂ. ೬-೪೭-೫)

ಎಂಬಲ್ಲಿ ಸ್ಕಂಭನ ಎಂಬುದಕ್ಕೆ ಸ್ಕಂಭಸಾಧನೇನ ಮಧ್ಯವರ್ತಿನಾಂತರಿಕ್ಷೇಣ ಸ್ತಂಭರೂಪವಾದ ಅಂತರಿಕ್ಷದಿಂದ ಎಂದರ್ಥಮಾಡಿದೆ. ಆದರೂ ಸಹ ಈ ಆ ಧಾರವು ವಿಶ್ವವ್ಯಾಪಿಯಾದುದಾಗಿಲ್ಲ. ಪ್ರಾದೇಶಿಕವಾದ ಆಧಾರವೆಂಬ

ಅಭಿಪ್ರಾಯವಿರುವುದು. ಪ್ರಕೃತವಾದ ಋಕ್ಕಿನಲ್ಲಿ ಮೇಲೆ ಉದಹರಿಸಿದ ಅಥರ್ವವೇದದ ವಾಕ್ಯದಲ್ಲಿ ವಿಸ್ತೃತವಾದ ಅರ್ಥವಿರುವಂತೆಯೇ ವಿಶ್ವವ್ಯಾಪನವನ್ನು ತೋರಿಸುವ ಅರ್ಥವಿದೆ. ಆದರೆ ಸಾಯಣರು ವಿವರಿಸಿರುವ ಪ್ರಕಾರ ಲೋಕಗಳ ಗತಿಯನ್ನು ನಿಯಮಿಸುವ ಸಾಧನವೆಂಬರ್ಥವು ಸೂಚಿತವಾದರೂ ಸಹ ಮುಂದೆ ಸಮಾನೃಚೇ ಎಂಬ ಪದಕ್ಕೆ ಸ್ಥಾಪಿತವಾನ್ ಎಂದರ್ಥಮಾಡಿರುವುದರಿಂದ ಇಲ್ಲಿಯೂ ಆಧಾರವೆಂಬ ಅರ್ಥವೇ ಇರಬೇಕು.

### ವ್ಯಾಕರಣಪ್ರಕ್ರಿಯಾ

ಅಪಸಾಮ್ — ಅಪಃ ಕರ್ಮಾಖ್ಯಾಯಾಮ್ — (ಉ. ಸೂ. ೪-೬೪೭) ಎಂಬುದರಿಂದ ಅಸುನ್ ಪ್ರತ್ಯಯ. ಇಲ್ಲಿ ಲಕ್ಷಣಾವೃತ್ತಿಯಿಂದ ಕರ್ಮವುಳ್ಳವರು ಎಂದರ್ಥ. ನಿರ್ಧಾರಣಾರ್ಥದಲ್ಲಿ ಷಷ್ಠೀ ಬಂದಿದೆ. ಅಪಸ್ತಮ ಎಂಬಲ್ಲಿ ಅತಿಶಯಾರ್ಥದಲ್ಲಿ ತಮಪ್ ಪ್ರತ್ಯಯ.

ಜಜಾನ—ಜನೀ ಪ್ರಾದುರ್ಭಾವೇ ಧಾತು. ಅಂತರ್ಭಾವಿತಣ್ಯರ್ಥಕವಾಗಿದೆ. ಲಿಟ್ ಪ್ರಥಮಪುರುಷ ಏಕವಚನಾಂತರೂಪ ಯಚ್ಛಬ್ದಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಲ್ ಪ್ರತ್ಯಯ ಲಿತ್ತಾದುದರಿಂದ ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

ವಿಶ್ವಶಂಭುವಾ—ಬಹುವ್ರೀಹೌ ವಿಶ್ವಂ ಸಂಜ್ಞಾಯಾಮ್ (ಪಾ. ಸೂ. ೬-೨-೧೦೬) ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ. ದ್ವಿತೀಯಾದ್ವಿವಚನಕ್ಕೆ ಸುಪಾಂ ಸುಲುಕ್ (ಪಾ. ಸೂ. ೭-೧-೩೯) ಎಂಬುದರಿಂದ ಅಕಾರಾದೇಶ.

ಮಮೇ—ಮಾಙ್ ಮಾನೇ ಧಾತು. ಲಿಟ್ ಪ್ರಥಮಪುರುಷಏಕವಚನಾಂತರೂಪ. ಯದ್ವೃತ್ತಾನ್ನಿತ್ಯಮ್ ಎಂಬುದರಿಂದ ನಿಘಾತಸ್ವರಪ್ರತಿಷೇಧ ಬರುವುದರಿಂದ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಸುಕ್ರತೂಯಯಾ—ಸುಕ್ರತುಂ ಆತ್ಮನಃ ಇಚ್ಛತಿ ಸುಕ್ರತೂಯತಿ. ಸುಪ ಆತ್ಮನಃಕ್ಯಚ್ (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. ಛಾಂದಸವಾಗಿ ಪೂರ್ವಕ್ಕೆ ದೀರ್ಘ ಬರುತ್ತದೆ. ಕ್ಯಜಂತದ ಮೇಲೆ ಅಪ್ರತ್ಯಯಾತ್ (ಪಾ. ಸೂ. ೩-೩-೧೦೨) ಎಂಬುದರಿಂದ ಅಪ್ ಪ್ರತ್ಯಯ. ಅತೋ ಲೋಪಃ (ಪಾ ಸೂ. ೬-೪-೪೮) ಎಂಬುದರಿಂದ ಕ್ಯಚಿನ ಅಕಾರಕ್ಕೆ ಲೋಪ. ಉದಾತ್ತನಿವೃತ್ತಿಸ್ವರದಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ. ತೃತೀಯಾಏಕವಚನಾಂತರೂಪ.

ಅಜರೇಭಿಃ—ನ ವಿದ್ಯತೇ ಜರಾ ಯೇಷಾಮ್. ತೈಃ ನಞೋಜರಮರ—(ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ. ಭಿಸಿಗೆ ಬಹುಲಂ ಛಂದಸಿ ಎಂಬುದರಿಂದ ಐಸ್‌ಭಾವ ವಿಕಲ್ಪಿತವಾದುದರಿಂದ ಬರುವುದಿಲ್ಲ. ಏತ್ವ.

ಆನೃಚೇ—ಋಚ ಸ್ತುತೌ ಧಾತು. ಲಿಟ್ ಪ್ರಥಮಪುರುಷಏಕವಚನದಲ್ಲಿ ತ ಪ್ರತ್ಯಯ. ಲಿಟಸ್ತಝಯೋರೇಶಿರೇಚ್ ಎಂಬುದರಿಂದ ಏಕಾದೇಶ. ಧಾತುವಿಗೆ ದ್ವಿತ್ವ. ಋಕಾರದಲ್ಲಿಯೂ ರೇಫದ್ವಯವಿರುವುದರಿಂದ ದ್ವಿಹಲ್‌ಧಾತುವಾಗಿದೆಯೆಂದು ತಸ್ಮಾನ್ನುಟ್‌ದ್ವಿಹಲಃ (ಪಾ. ಸೂ. ೭-೪-೭೧) ಎಂಬುದರಿಂದ ನುಟಾಗಮ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ‖ ೪ ‖



ಸಂಹಿತಾಪಾಠಃ

ತೇ ನೋ ಗೃಣಾನೇ ಮಹಿನೀ ಮಹಿ ಶ್ರವಃ ಕ್ಷತ್ರಂ ದ್ಯಾವಾಪೃಥಿವೀ ಧಾಸಥೋ ಬೃಹತ್ ।

ಯೇನಾಭಿ ಕೃಷ್ಟೀಸ್ತತನಾಮ ವಿಶ್ವಹಾ ಪನಾಯ್ಯಮೋಜೋ ಅಸ್ಮೇ ಸಮಿನ್ವತಂ ॥ ೫ ॥

ಪದಪಾಠಃ

ತೇ ಇತಿ । ನಃ । ಗೃಣಾನೇ ಇತಿ । ಮಹಿನೀ ಇತಿ । ಮಹಿ । ಶ್ರವಃ । ಕ್ಷತ್ರಂ । ದ್ಯಾವಾಪೃಥಿವೀ ಇತಿ । ಧಾಸಥಃ । ಬೃಹತ್ ।

ಯೇನ । ಅಭಿ । ಕೃಷ್ಟೀಃ । ತತನಾಮ । ವಿಶ್ವಹಾ । ಪನಾಯ್ಯಂ । ಓಜಃ । ಅಸ್ಮೇ ಇತಿ । ಸಂ । ಇನ್ವತಂ । ॥ ೫ ॥

ಸಾಯಣಭಾಷ್ಯಂ

ತೇ ಪ್ರಸಿದ್ಧೇ ಹೇ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ಗೃಣಾನೇ ಅಸ್ಮಾಭಿಃ ಸ್ತೂಯಮಾನೇ ಸತ್ಯೌ ॥ ಕರ್ಮಣಿ ಕರ್ತೃಪ್ರತ್ಯಯಃ ॥ ಮಹಿ ಮಹದತಿಪ್ರಭೂತಂ ಶ್ರವಃ ಸರ್ವತ್ರ ಪ್ರಸಿದ್ಧಮನ್ನಂ ಸರ್ವತ್ರ ಶ್ರೂಯಮಾಣಾಂ ಕೀರ್ತಿಂ ವಾ ನೋಽಸ್ಮಭ್ಯಂ ಧಾಸಥಃ । ಧತ್ತಂ ॥ ದಧಾತೇರ್ಲೇಟ್ಯಡಾಗಮಃ । ಸಿಬ್ಬಹುಲಮಿತಿ ಸಿಪ್ ॥ ತಥಾ ಬೃಹದತಿಪ್ರಭೂತಂ ಕ್ಷತ್ರಂ ಬಲಂ ಧಾಸಥಃ । ತದೇವ ವಿಶೇಷ್ಯತೇ । ಯೇನಾನ್ನಬಲೇನ ವಿಶ್ವಹಾ ಸರ್ವೇಷ್ವಹಸ್ಸು ಕೃಷ್ಟೀಃ ಪುತ್ರಾದಿರೂಪಾಃ ಪ್ರಜಾ ಅಭಿ ತತನಾಮ ಅಭಿತೋ ವಿಸ್ತಾರಯಾಮ ॥ ತನೋತೇರ್ಲೋಟಿ ಛಾಂದಸೋ ವಿಕರಣಸ್ಯ ಶ್ಲುಃ । ಆಡುತ್ತಮಸ್ಯೇತ್ಯಾಡಾಗಮಃ । ತಸ್ಯ ಛಂದಸ್ಯುಭಯಥೇತ್ಯಾರ್ಧಧಾತುಕತ್ವಾದಭ್ಯಸ್ತಾದ್ಯುದಾತ್ತತ್ವಾಭಾವೇ ಧಾತುಸ್ವರಃ ॥ ಕೃಷ್ಟಯ ಇತಿ ಮನುಷ್ಯನಾಮ ಕೃಷ್ಟಯಶ್ಚರ್ಷಣಯ ಇತಿ ತನ್ನಾಮಸು ಪಾಠಾತ್ । ಕಿಂಚ ಪನಾಯ್ಯಂ ಸ್ತುತ್ಯಮೋಜಃ ಶರೀರಬಲಮಸ್ಮೇ ಅಸ್ಮಾಸು ಸಮ್ಯಗಿನ್ವತಂ । ವ್ಯಾಪ್ನುತಂ । ಪ್ರವರ್ಧಯತಮಿತ್ಯರ್ಥಃ । ಇನ್ವತಿರ್ವ್ಯಾಪ್ತಿವಚನಃ ಇನ್ವತಿ ನಶಕ್ಷೇತಿ ತನ್ನಾಮಸು ಪಾಠಾತ್ ॥

ಪ್ರತಿಪದಾರ್ಥ

ತೇ—ಪ್ರಸಿದ್ಧರಾದವರೂ । ಮಹಿನೀ—ಮಹತ್ತಾದವರೂ ಆದ । ದ್ಯಾವಾಪೃಥಿವೀ—ಎಲೈ ದ್ಯಾವಾಪೃಥಿವಿಗಳೇ । ಗೃಣಾನೇ—(ನಮ್ಮಿಂದ) ಸ್ತುತಿಸಲ್ಪಟ್ಟವರಾಗಿ । ಯೇನ—ಯಾವುದರಿಂದ । ವಿಶ್ವಾಹಾ—ಪ್ರತಿನಿತ್ಯವೂ । ಕೃಷ್ಟೀಃ—ಪುತ್ರಾದಿರೂಪವಾದ ಪ್ರಜೆಗಳನ್ನು । ಅಭಿ ತತನಾಮ—ವಿಸ್ತರಿಸುವೆವೋ (ಅಂತಹ) । ಮಹಿ—ಮಹತ್ತಾದ । ಶ್ರವಃ—ಅನ್ನವನ್ನೂ (ಅಥವಾ ಕೀರ್ತಿಯನ್ನು) । ಬೃಹತ್—ಪ್ರಭೂತವಾದ । ಕ್ಷತ್ರಂ—ಬಲವನ್ನೂ ।

ನಃ – ನಮಗೆ । ಧಾಸಥಃ—ಕೊಡಿರಿ । (ಮತ್ತು) ಅಸ್ಮೇ—ನಮಗೆ । ಪನಾಯ್ಯಂ—ಸ್ತುತ್ಯರ್ಹವಾದ । ಓಜಃ—ವೀರ್ಯವನ್ನು । ಸಮಿನ್ವತಂ—ವೃದ್ಧಿ ಪಡಿಸಿ ॥

ಭಾವಾರ್ಥ

ಪ್ರಸಿದ್ಧರಾದವರೂ ಮತ್ತು ಮಹತ್ತಾದವರೂ ಆದ ಎಲೈ ದ್ಯಾವಾಪೃಥಿವಿಗಳೇ, ನಮ್ಮಿಂದ ಸ್ತುತರಾದ ನೀವು ನಮಗೆ ಪ್ರಭೂತವಾದ ಅನ್ನವನ್ನೂ, ಬಲವನ್ನು ಕೊಡಿರಿ. ಅದರಿಂದ ನಾವು ಪ್ರತಿದಿನವೂ ನಮ್ಮ ಸಂತತಿಯನ್ನು ಬೆಳೆಸುವಂತೆ ಅನುಗ್ರಹಿಸಿ. ನಮಗೆ ಸ್ತುತ್ಯರ್ಹವಾದ ವೀರ್ಯವನ್ನೂ ವೃದ್ಧಿ ಪಡಿಸಿರಿ.

English Translation

Glorified by us, grant to us, Heaven and Earth, abundant food and great strength; whereby we may daily multiply mankind; bestow upon us commendable vigour.

ವಿಶೇಷವಿಷಯಗಳು

ದ್ಯಾವಾಪೃಥಿವಿಗಳನ್ನು ಆರಾಧಿಸಿ ಈ ಋಕ್ಕಿನಲ್ಲಿ ಅವರಿಂದ ಪ್ರತಿಫಲವನ್ನಪೇಕ್ಷಿಸಿದೆ. ಶ್ರವ, ಕ್ಷತ್ರ, ಓಜಸ್ ಇವೇ ನಿರೀಕ್ಷಿತವಾದ ಪ್ರತಿಫಲಗಳು. ಇವುಗಳಲ್ಲಿ ಶ್ರವ ಮತ್ತು ಕ್ಷತ್ರಗಳು ಸಂತಾನಾಭಿವೃದ್ಧಿಯ ಸಾಧನಗಳು.

ಶ್ರವಃ—ಸರ್ವತ್ರ ಪ್ರಸಿದ್ಧಮನ್ನಂ, ಸರ್ವತ್ರ ಶ್ರೂಯಮಾಣಾಂ ಕೀರ್ತಿಂ ವಾ । ಪ್ರಸಿದ್ಧವಾದ ಅನ್ನವನ್ನಾಗಲಿ, ಪ್ರಸಿದ್ಧವಾದ ಕೀರ್ತಿಯನ್ನಾಗಲಿ ಎಂದರ್ಥಮಾಡಿದೆ. ಈ ಪದಕ್ಕೆ ಈ ಎರಡರ್ಥಗಳೂ ಸಾಧ್ಯವಾಗುತ್ತದೆ ನಿರುಕ್ತಕಾರರು ಅಭಿ ಶ್ರವ ಋಜ್ಯಂತಃ (ಋ. ಸಂ. ೬-೩೭-೩) ಎಂಬ ಋಕ್ಕನ್ನು ವಿವರಿಸುವಾಗ ಶ್ರವ ಶಬ್ದಕ್ಕೆ ಶ್ರವ ಇತ್ಯನ್ನನಾಮ, ಶ್ರೂಯತ ಇತಿ ಸತಃ । ಸರ್ವತ್ರ ಪ್ರಸಿದ್ಧವಾಗುತ್ತದೆಯಾದ್ದರಿಂದ (ಎಲ್ಲರಿಂದಲೂ ಕೇಳಲ್ಪಡುತ್ತದೆ) ಶ್ರು ಧಾತುವಿನಿಂದ ನಿಷ್ಪನ್ನವಾದ ಶ್ರವಶಬ್ದಕ್ಕೆ ಅನ್ನವೆಂದೂ (ನಿ. ೧೦-೩) ;

ಇಂದ್ರಸ್ಯ ಯಸ್ಯ ಸುಮಖಂ ಸಹೋ ಮಹಿ ಶ್ರವೋ ನೃಮ್ಣಂ ಚ ರೋದಸೀ ಸಪರ್ಯತಃ ॥

(ಋ. ಸಂ. ೧೦-೫೦-೧)

ಎಂಬಲ್ಲಿ ಶ್ರವಣೀಯಂ ಯಶಃ । ಎಲ್ಲರಿಂದಲೂ ಕೇಳಲ್ಪಡುವ ಎಂದರೆ ಸರ್ವತ್ರಪ್ರಸಿದ್ಧವಾದ ಯಶಸ್ಸನ್ನೂ, ಎಂದರ್ಥಮಾಡಿದ್ದಾರೆ. (ನಿ. ೧೧-೯) ಆದ್ದರಿಂದ ಪ್ರಕೃತವಾದ ಋಕ್ಕಿನಲ್ಲಿ ಅನ್ನ ಅಥವಾ ಯಶಸ್ಸು ಎಂಬ ಪರ್ಯಾಯರೂಪವಾದ ಅರ್ಥವನ್ನು ಹೇಳಿದೆ. ಅಥವಾ ಅನ್ನವು ಸಹ ಯಶೋಭಾಗಿಯಾಗುವುದರಿಂದ ಯಶಸ್ಸಿಗೆ ಸಾಧನವಾದ ಅನ್ನವೆಂದೂ ಅರ್ಥವಾಗುತ್ತದೆ.

ಬೃಹತ್ಯಾ ಶ್ರೀಕಾಮೋ ಯಶಸ್ಕಾಮಃ ಕುರ್ವೀತ । ಶ್ರೀರ್ವೈ ಯಶಶ್ಛಂದಸಾಂ ಬೃಹತೀ । ಶ್ರಿಯಮೇವ ಯಶ ಆತ್ಮನ್ಧತ್ತೇ ।

(ಐ. ಬ್ರಾ. ೧-೫)

ಎಂಬಲ್ಲಿ ಧನಧಾನ್ಯಾದಿ ಸಂಪತ್ತಿನ ರೂಪವಾದ ಶ್ರೀಗೂ ಅದರಿಂದ ಲಭಿಸತಕ್ಕ ಯಶಸ್ಸಿಗೂ ತಾದಾತ್ಮ್ಯವನ್ನು ಹೇಳಿದೆ. ಸಂಪತ್ತಿದ್ದರೆ ದಾನಾದಿರೂಪಗಳಿಂದ ಪುರುಷನು ಪ್ರಸಿದ್ಧನಾಗುತ್ತಾನೆ. ಆದ್ದರಿಂದ ಯಶಸ್ಸಿಗೆ ಅನ್ನಾದಿಸಂಪತ್ತೇ ಆಧಾರವು ಮತ್ತು ಅನ್ನಾದಿ ಸಂಪತ್ತುಗಳಿದ್ದರೆ ಯಶಸ್ಸು ತಾನಾಗಿಯೇ ಲಭಿಸುತ್ತದೆಯಾದ್ದರಿಂದ ಶ್ರವಶಬ್ದಕ್ಕೆ ಎರಡರ್ಥಗಳನ್ನು ಹೇಳಬಹುದು. ಇಂತಹ ಶ್ರವವನ್ನು ಕೊಡಿ ಎಂದು ಪ್ರಾರ್ಥಿಸಿದೆ.

ಕ್ಷತ್ರ—ಕ್ಷತ್ರಶಬ್ದಕ್ಕೆ ಬಲವೆಂದರ್ಥ. ಇದು ಸಾಧಾರಣವಾದ ಬಲವಲ್ಲ. ಅನ್ನವನ್ನೂ ಯಶಸ್ಸನ್ನೂ ಮತ್ತು ಪುರುಷನ ಸರ್ವಸ್ವವನ್ನೂ ರಕ್ಷಿಸತಕ್ಕ ಶಕ್ತಿಯಾಗಿದೆ. ಈ ಕ್ಷತ್ರ ವಿಲ್ಲದಿದ್ದರೆ ಪುರುಷನಿಗೆ ಯಾವ ವಿಧವಾದ ರಕ್ಷಣೆಯೂ ಇರಲಾರದು. ಇದರ ಆವಶ್ಯಕತೆಯು ಅಸ್ಥಿರುವುದರಿಂದಲೇ ಅನ್ನ, ಯಶಸ್ಸು ಇವುಗಳಿಂದ ತೃಪ್ತಿಯನು ಹೊಂದದೆ ಕ್ಷತ್ರವನ್ನೂ ಪ್ರಾರ್ಥಿಸಿದೆ. ಆದುದರಿಂದಲೇ ಇತರ ಕಡೆಗಳಲ್ಲೂ ಸಹ ಕ್ಷತ್ರದ ಮಹಿಮೆಯನ್ನು ಬಹಳ ವಾಗಿ ಸ್ತುತಿಸಿದೆ. ಅನ್ನಾದಿ ಸಂಪತ್ತುಗಳಿಗೆ ಸಾಧನವಾದುದು ಯಜ್ಞ, ಇಂತಹ ಯಜ್ಞಕ್ಕೆ ರಕ್ಷಕವಾದದ್ದು ಕ್ಷತ್ರ, ಕ್ಷತ್ರದ ಆಶ್ರಯವಿಲ್ಲದಿದ್ದರೆ ಯಜ್ಞರಕ್ಷಣೆಯಿಲ್ಲ. ಆದುದರಿಂದ ಅದರ ಮಹಿಮೆ ಮತ್ತು ಆವಶ್ಯಕತೆ.

> ಅಥಾತೋ ದೇವಯಜನಸ್ಯೈವ ಯಾಚ್ಞಸ್ತದಾಹುರ್ಯದ್ಬ್ರಾಹ್ಮಣೋ ರಾಜನ್ಯೋ ವೈಶ್ಯೋ ದೀಕ್ಷಿಷ್ಯಮಾಣಃ ಕ್ಷತ್ರಿಯಂ ದೇವಯಜನಂ ಯಾಚತಿ ಕಂ ಕ್ಷತ್ರಿಯೋ ಯಾಚೇದಿತಿ | ದೈವಂ ಕ್ಷತ್ರಂ ಯಾಚೇದಿತ್ಯಾಹುರಾದಿತ್ಯೋ ವೈ ದೈವಂ ಕ್ಷತ್ರಮಾದಿತ್ಯ ಏಷಾಂ ಭೂತಾನಾಮಧಿಪತಿಃ | .... .... .... .... .... .... .... .... .... .... .... .... .... .... ತಸ್ಯ ಹ ನ ಕಾಚನ ರಿಷ್ಟಿರ್ಭವತಿ ದೇವೇನ ಸವಿತ್ರಾ ಪ್ರಸೂತಸ್ಯೋತ್ತರೋತ್ತರಿಣೀಂ ಹ ಶ್ರಿಯಮಶ್ನುತೇಽಶ್ನುತೇ ಹ ಪ್ರಜಾನಾಮೈಶ್ವರ್ಯಮಾಧಿಪತ್ಯಂ ಯ ಏವಮುಪಸ್ಥಾಯ ಯಾಚಿತ್ವಾ ದೇವಯಜನಮಧ್ಯವಸಾಯ ದೀಕ್ಷತೇ ಕ್ಷತ್ರಿಯಃ ಸನ್ |
>
> (ಐ. ಬ್ರಾ. ೭-೨೦)

ಬ್ರಾಹ್ಮಣಾದಿ ವರ್ಣದವರು ಯಜ್ಞಮಾಡಬೇಕಾದರೆ ಕ್ಷತ್ರಿಯನ ಆಶ್ರಯವನ್ನು ಪಡೆಯಬೇಕು. ಕ್ಷತ್ರಿಯನೇ ಯಜ್ಞಮಾಡಬೇಕಾದರೆ ದೇವತಾತ್ಮವಾದ ಕ್ಷತ್ರದ ಆಶ್ರಯವನ್ನೇ ಪಡೆಯಬೇಕು. ಸರ್ವಲೋಕಕ್ಕೂ ಪ್ರಭುವಾದ ಆದಿತ್ಯನೇ ಈ ಕ್ಷತ್ರದ ಸತ್ತ್ವವು. ಪ್ರತಿಯೊಬ್ಬ ಯಜ್ಞಕರ್ತನೂ ಕ್ಷತ್ರರೂಪದ ಈ ಆದಿತ್ಯನ ರಕ್ಷಣೆಯಿಂದ ಯಜ್ಞವನ್ನು ಪೂರ್ಣವಾಗಿ ನೆರವೇರಿಸಿ ತಾನೂ ಪ್ರಭುತ್ವವನ್ನು ಪಡೆಯುತ್ತಾನೆ. ಸಕಲ ಸಂಪತ್ತನ್ನೂ ಪಡೆಯುತ್ತಾನೆ. ನಿರ್ವಿಘ್ನವಾದ ಜಯವನ್ನು ಪಡೆಯುತ್ತಾನೆ.

ಯಜ್ಞಕಾಲಗಳಲ್ಲಾಗಲಿ ದೇವತಾಸ್ತುತಿಯನ್ನು ಮಾಡುವ ಇತರ ಕಾಲಗಳಲ್ಲಾಗಲಿ, ಕಾರ್ಯವು ನಿರ್ವಿಘ್ನವಾಗಿ ನೆರವೇರಿ ಸಕಲಸಂಪತ್ತುಗಳನ್ನೂ ಪಡೆಯಬೇಕಾದರೆ ಕ್ಷತ್ರರೂಪದ ಆದಿತ್ಯಾದಿದೇವತೆಗಳ ರಕ್ಷಣೆಯನ್ನು ಪಡೆಯುವಂತೆಯೇ ಕ್ಷತ್ರರೂಪದ ತ್ರಿವೃತ್‌ಸ್ತೋಮಾದಿ ಮಂತ್ರಗಳ ರಕ್ಷಣೆಯನ್ನು ಪಡೆಯಬೇಕೆಂದು ಅವುಗಳ ಶಕ್ತಿಯನ್ನು ವರ್ಣಿಸಿದೆ.

> ಸೈತಸ್ಮಿನ್ನಧ್ಯೂಳ್ಹಾ ಸ ಯಜಮಾನಸ್ತದ್ದೈವಂ ಕ್ಷತ್ರಂ ಸಹೋ ಬಲಂ | ಅಶ್ನುತೇ ಹ ವೈ ದೈವಂ ಕ್ಷತ್ರಂ ಸಹೋ ಬಲಂ |
>
> (ಐತರೇಯ ಬ್ರಾಹ್ಮಣಂ. ೩-೪೧)

ತೇಜಸ್ಸಿಗೂ, ವೀರ್ಯಕ್ಕೂ, ಪ್ರತಿಷ್ಠೆಗೂ, ಜಯಕ್ಕೂ, ಮಹತ್ತ್ವಕ್ಕೂ ಸಾಧನವಾದ ತ್ರಿವೃತ್‌ಸ್ತೋಮವೇ ಈ ಕ್ಷತ್ರದ ಸತ್ತ್ವವು. ಈ ಶಕ್ತಿಯು ಯಾವ ವಿಧವಾದ ಪ್ರತಿಬಂಧಕವನ್ನೂ ತಡೆಯಬಲ್ಲದು. ಈ ಮಂತ್ರದ ರಹಸ್ಯವನ್ನು ತಿಳಿದವನು ಸಕಲವಿಧವಾದ ಪ್ರತಿಬಂಧಕಗಳನ್ನೂ ತಡೆಯಬಲ್ಲ ಶಕ್ತಿಯನ್ನು ಪಡೆಯುತ್ತಾನೆ ಎಂದು ತ್ರಿವೃತ್ ಸ್ತೋಮಾದಿ ಮಂತ್ರಗಳ ಶಕ್ತಿಯನ್ನು ವರ್ಣಿಸಿರುವುದಲ್ಲದೆ,

ತ್ರಿಷ್ಟುಪ್ಪ್ರೈಷ್ಟುಭೋ ವೈ ರಾಜನ್ಯ ಓಜೋ ವಾ ಇಂದ್ರಿಯಂ ವೀರ್ಯಂ ತ್ರಿಷ್ಟುಬೋಜಃ ಕ್ಷತ್ತ್ರಂ ವೀರ್ಯಂ ರಾಜನ್ಯಸ್ತದೇನಮೋಜಸಾ ಕ್ಷತ್ರೇಣ ವೀರ್ಯೇಣ ಸಮರ್ಧಯತಿ ||

(ಐ. ಬ್ರಾ. ೮-೨)

ಇತ್ಯಾದಿ ವಾಕ್ಯಗಳಲ್ಲಿ ಕ್ಷತ್ತ್ರರೂಪವಾದ ತ್ರಿಷ್ಟುಬಾದಿಛಂದಸ್ಸುಗಳನ್ನೂ ಅವುಗಳನ್ನು ಆರಾಧಿಸುವುದರಿಂದ ವೀರ್ಯ, ಓಜಸ್ಸು ಇವುಗಳಿಂದ ಕೂಡಿದ ಕ್ಷತ್ರರೂಪವಾದ ಬಲವನ್ನು ಪಡೆದು ಸಂತಾನಸಂಪತ್ತಿಗೆ ಸಾಧನವನ್ನಾಗಿ ಮಾಡಿದಂತಾಗುವುದೆಂದೂ ಸಹ ಕ್ಷತ್ರದ ಮಹತ್ತ್ವವನ್ನು ಸ್ತುತಿಸಿದೆ. ಇದು ಅಲೌಕಿಕವಾದ ಶಕ್ತಿಯೆಂದು ತಿಳಿಸಲು ದೈವಂ ಕ್ಷತ್ರಂ ಎಂದು ಎಲ್ಲಾ ಕಡೆಯೂ ಹೇಳಿದೆ.

ಕ್ಷತ್ರಂ ತದಪಿ ವಿಜ್ಞೇಯಂ ಬ್ರಹ್ಮ ಯತ್ಪಾತಿ ಶಾಶ್ವತಂ |

(ಬೃ. ದೇ. ೫-೧೨೩)

ಶಾಶ್ವತವಾದ ಬ್ರಹ್ಮವನ್ನು ರಕ್ಷಿಸುವ ಸಾಮರ್ಥ್ಯವು ಯಾವುದಕ್ಕಿದೆಯೋ ಅದೇ ಕ್ಷತ್ರವೆಂದರಿಯಬೇಕು. ಈ ಶಕ್ತಿಯಿಂದಲೇ ಇತರ ಸಕಲಶಕ್ತಿಗಳೂ ರಕ್ಷಿಸಲ್ಪಡುತ್ತವೆ.

ತಸ್ಮಾದು ಸರ್ವೇಷು ಲೋಕೇಷು ಕ್ಷತ್ರಸ್ಯೈವ ಪ್ರಶಾಸನಮಭೂತ್ |

(ಛಾ. ಉ. ೫-೩-೭)

ಆದುದರಿಂದಲೇ ಸರ್ವಲೋಕಗಳಲ್ಲಿಯೂ ಪ್ರಭುತ್ವವು ಕ್ಷತ್ರಿಯನಿಗೇ ಸೇರಿದೆ.

ತಸ್ಮಾತ್ ಕ್ಷತ್ರಾತ್ಪರಂ ನಾಸ್ತಿ ತಸ್ಮಾದ್ಬ್ರಾಹ್ಮಣಃ ಕ್ಷತ್ರಿಯಮಧಸ್ತಾದುಪಾಸ್ತೇ |

(ಬೃ. ಉ. ೧-೪-೧೧)

ಆದುದರಿಂದಲೇ ರಾಜಸೂಯಾದಿಗಳಲ್ಲಿ ಬ್ರಾಹ್ಮಣನೂ ಸಹ ಕ್ಷತ್ರಿಯನಿಗಿಂತ ಕೆಳಗಿನ ಸ್ಥಾನದಲ್ಲಿಯೇ ಕುಳಿತುಕೊಳ್ಳುತ್ತಾನೆ. ಆದರೆ ಈ ಕ್ಷತ್ರವು ಕೇವಲ ಭೌತಿಕವಾದ ಶಕ್ತಿಯೇ ಅಲ್ಲ.

ತಚ್ಛ್ರೇಯೋರೂಪಮತ್ಯಸೃಜತ ಧರ್ಮಂ ತದೇತತ್‌ಕ್ಷತ್ರಸ್ಯ ಕ್ಷತ್ರಂ ಯದ್ಧರ್ಮಸ್ತಸ್ಮಾದ್ಧರ್ಮಾತ್ಪರಂ |

(ಬೃ. ಉ. ೧-೪-೧೪)

ಈ ಶಕ್ತಿಯು ಸಕಲ ಧರ್ಮಗಳಿಗಿಂತಲೂ ಶ್ರೇಷ್ಠವಾದ ಧರ್ಮವು. ಇದನ್ನು ಬಿಟ್ಟು ಬೇರೆ ಧರ್ಮವಿಲ್ಲ.

ಈ ರೀತಿಯಾದ ಅಲೌಕಿಕವಾದ ಶಕ್ತಿಯಿರುವುದರಿಂದಲೇ ಪ್ರಕೃತವಾದ ಋಕ್ಕಿನಲ್ಲಿ ಅನ್ನರೂಪವಾದುದೂ, ಯಶೋರೂಪವಾದುದೂ ಆದ ಸಂಪತ್ತನ್ನು ಪಡೆಯಲು ಅದರ ಜೊತೆಯಲ್ಲಿ ಅದರ ರಕ್ಷಕವಾದ ಕ್ಷತ್ರರೂಪದ ಶಕ್ತಿ

ಯನ್ನೂ ಪ್ರಾರ್ಥಿಸಿದೆ. ಯೇನ ಕೃಷ್ಟೀಃ ಅಭಿ ತತನಾಮ ಪುತ್ರರೂಪವಾದ ಸಂಪತ್ತೂ ಸಹ ಈ ಶಕ್ತಿಯನ್ನು ಆಶ್ರಯಿಸುವುದರಿಂದಲೇ ವೃದ್ಧಿಯಾಗುತ್ತದೆಂದೂ ಸ್ಪಷ್ಟವಾಗಿ ಹೇಳಿದೆ.

ಕೃಷ್ಟೀಃ—ಕೃಷ್ಟಿಶಬ್ದಕ್ಕೆ ಮನುಷ್ಯಜಾತರೆಂದು ಸಾಧಾರಣವಾದ ಅರ್ಥವಿದೆ ನಿರುಕ್ತಕಾರರು,

ಆ ದಧಿಕ್ರಾಃ ಶವಸಾ ಪಂಚ ಕೃಷ್ಟೀಃ ಸೂರ್ಯ ಇವ ಜ್ಯೋತಿಷಾಪಸ್ತತಾನ ।

(ಋ. ಸಂ ೪-೩೮-೧೦)

ಎಂಬ ಋಕ್ಕಿನಲ್ಲಿರುವ ಪಂಚ ಕೃಷ್ಟೀಃ ಎಂಬ ಪದಕ್ಕೆ ಪಂಚ ಜನಾನ್ (ನಿ. ೧೦-೩೧) ಎಂದು ಸಕಲ ಮನುಷ್ಯಜಾತರನ್ನೂ ಸೇರಿಸಿ ಅರ್ಥಮಾಡಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಪುತ್ರಾದಿರೂಪಾಃ ಪ್ರಜಾಃ ಪುತ್ರಾದಿರೂಪರಾದ ಪ್ರಜೆಗಳೆಂದರ್ಥಮಾಡಿದೆ. ಸಂತಾನಸಂಪತ್ತೆಂದು ತಾತ್ಪರ್ಯ.

ಪನಾಯ್ಯಂ—ಸ್ತುತ್ಯಂ । ಸ್ತುತ್ಯರ್ಹವಾದ ಎಂದರ್ಥ. ಓಜಃ ಎಂಬ ಪದಕ್ಕೆ ವಿಶೇಷಣವಾಗಿದೆ. ನಿರುಕ್ತಕಾರರು ಪನಸ್ಯತಿ, ಪನಾಯತೇ ಎಂಬ ಪದಗಳನ್ನು ಅರ್ಚತಿಕರ್ಮನಾಮಗಳಲ್ಲಿ ಸೇರಿಸಿ (ನಿ. ೩-೧೪)

ರಥೇ ತಿಷ್ಠನ್ನಯತಿ ವಾಜಿನಃ ಪುರೋ ಯತ್ರಯತ್ರ ಕಾಮಯತೇ ಸುಷಾರಥಿಃ ।
ಅಭೀಶೂನಾಂ ಮಹಿಮಾನಂ ಪನಾಯತ ಮನಃ ಪಶ್ಚಾದನು ಯಚ್ಛಂತಿ ರಶ್ಮಯಃ ॥

(ಋ ಸಂ ೬-೭೫-೬)

ಎಂಬ ಋಕ್ಕಿನಲ್ಲಿರುವ ಪನಾಯತ ಎಂಬ ಪದಕ್ಕೆ ಪೂಜಯತ ಎಂದರ್ಥಮಾಡಿದ್ದಾರೆ. ಅದರಂತೆ ಇಲ್ಲಿಯೂ ಸಹ ಪೂಜ್ಯಾರ್ಥವಿದ್ದು ಸ್ತುತಿಗೆ ಅರ್ಹರಾದ ಎಂದು ತಾತ್ಪರ್ಯವಾಗಿದೆ. ಇದು ಓಜಸ್ಸಿಗೆ ವಿಶೇಷಣವಾಗಿರುವುದರಿಂದ ಆ ಓಜಸ್ಸಿನ ಸ್ವರೂಪವೇನು ಎಂದು ತಿಳಿಯಬೇಕು.

ಓಜಃ—ನಿರುಕ್ತಕಾರರು ಈ ಪದವನ್ನು ಬಲನಾಮಗಳಲ್ಲಿ ಸೇರಿಸಿ (ನಿ. ೩-೯) ಅನಂತರ ಓಜತೇರ್ವೋಬ್ಜತೇರ್ವಾ (ನಿ ೬-೮) ಶಕ್ತ್ಯರ್ಥವಾದ ಓಜ ಧಾತುವಿನಿಂದಾಗಲಿ ಅಥವಾ ನಿಗ್ರಹಿಸು ಎಂಬರ್ಥವನ್ನು ಕೊಡುವ ಉಬ್ಜ್ ಧಾತುವಿನಿಂದಾಗಲಿ ನಿಷ್ಪನ್ನವಾಗಿದೆಯೆಂದು ತೋರಿಸಿದ್ದಾರೆ. ಸ್ವಯಂ ಶಕ್ತಿಯನ್ನು ಸಂಪಾದಿಸಿ ಇತರ ಪ್ರತಿಬಂಧಕಗಳನ್ನೂ ನಿಗ್ರಹಿಸುವ ಸಾಮರ್ಥ್ಯವು ಈ ಪದದಿಂದ ಸೂಚಿತವಾಗಿದೆ.

ಮಂದ್ರ ಓಜಿಷ್ಠ ಇತ್ಯೋಜಸ್ವತ್ತತ್ ಕ್ಷತ್ರಸ್ಯ ರೂಪಂ ।

(ಐ. ಬ್ರಾ. ೮-೨)

ಇತ್ಯಾದಿ ವಾಕ್ಯಗಳಲ್ಲಿ ಕ್ಷತ್ರರೂಪವಾದ ಶಕ್ತಿಗೂ ಓಜೋರೂಪವಾದ ಶಕ್ತಿಗೂ ತಾದಾತ್ಮ್ಯವನ್ನು ಹೇಳಿದೆ. ಇದು ಕೇವಲಬಾಹ್ಯಶಕ್ತಿಯೇ ಅಲ್ಲದೆ ಅರಿಷಡ್ವರ್ಗಗಳನ್ನೂ ಜಯಿಸತಕ್ಕ ಅಂತಶ್ಶಕ್ತಿಯೆಂದೂ ವರ್ಣಿತವಾಗಿದೆ.

ಇನ್ವತಂ—ಇನ್ವತಿ, ನಕ್ಷತಿ ಇತ್ಯಾದಿ ವ್ಯಾಪ್ತಿಕರ್ಮನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೦) ಇಲ್ಲಿ ವೃದ್ಧಿಯೆಂದರ್ಥವಾಗುತ್ತದೆ, ನಮ್ಮ ಶಕ್ತಿಯನ್ನು ವೃದ್ಧಿಪಡಿಸಿ ಎಂದು ಪ್ರಾರ್ಥಿಸಿದೆ.

ವ್ಯಾಕರಣಪ್ರಕ್ರಿಯಾ

ಗೃಣಾನೇ—ಗೃ ಶಬ್ದೇ ಧಾತು. ಇಲ್ಲಿ ಸ್ತುತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಲಟಿಗೆ ವ್ಯತ್ಯಯದಿಂದ ಕರ್ಮಣಿಯಲ್ಲಿ ಕರ್ತೃ ಪ್ರತ್ಯಯ. ಶಾನಚ್ ಬರುತ್ತದೆ. ಶ್ನಾ ವಿಕರಣ. ಪ್ವಾದೀನಾಂ ಹ್ರಸ್ವಃ (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ. ಚಿತಃ (ಪಾ. ಸೂ. ೬-೧-೧೯೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿವಚನಾಂತರೂಪ.

ಧಾಸಥಃ—ಡುಧಾಞ್ ಧಾರಣಪೋಷಣಯೋಃ ಧಾತು. ಲೇಟ್ ಮಧ್ಯಮಪುರುಷ ದ್ವಿವಚನದಲ್ಲಿ ಥಸ್ ಪ್ರತ್ಯಯ. ಲೇಟೋಽಡಾಟೌ (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. ಸಿಬ್ಬಹುಲಂಲೇಟಿ (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಕೃಷ್ಟೀಃ—ಕೃಷ ವಿಲೇಖನೇ ಧಾತು. ಕ್ತಿಚ್‌ಕ್ತೌಚ ಸಂಜ್ಞಾಯಾಮ್ (ಪಾ. ಸೂ. ೩-೩-೧೭೪) ಎಂಬುದರಿಂದ ಕ್ತಿಚ್ ಪ್ರತ್ಯಯ. ಚಿತಃ (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾಬಹುವಚನಾಂತರೂಪ.

ತತನಾಮ—ತನು ವಿಸ್ತಾರೇ ಧಾತು. ಲೋಟ್ ಉತ್ತಮಪುರುಷಬಹುವಚನದಲ್ಲಿ ಮಸ್ ಪ್ರತ್ಯಯ. ಲಙ್ವದ್ಭಾವವಿರುವುದರಿಂದ ನಿತ್ಯಂ ಙಿತಃ (ಪಾ. ಸೂ. ೩-೪-೯೯) ಎಂಬುದರಿಂದ ಸಕಾರಕ್ಕೆ ಲೋಪ. ಆಡುತ್ತಮಸ್ಯಪಿಚ್ಚ (ಪಾ. ಸೂ. ೩-೪-೯೨) ಸೂತ್ರದಿಂದ ಅದಕ್ಕೆ ಆಡಾಗಮ. ಬಹುಲಂ ಛಂದಸಿ ಎಂಬುದರಿಂದ ಶ್ಲುವಿಕರಣ. ಶ್ಲೌ ಎಂಬುದರಿಂದ ಧಾತುವಿಗೆ ದ್ವಿತ್ವ. ಯದ್ವೃತ್ತಾನ್ನಿತ್ಯಮ್ (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. ಛಂದಸ್ಯುಭಯಥಾ (ಪಾ. ಸೂ. ೩-೪-೧೧೭) ಎಂಬುದರಿಂದ ಪ್ರತ್ಯಯಕ್ಕೆ ಆರ್ಧಧಾತುಕಸಂಜ್ಞೆ ಇರುವುದರಿಂದ ಅಭ್ಯಸ್ತಾನಾಮಾದಿಃ ಎಂಬುದರಿಂದ ಆದ್ಯುದಾತ್ತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

ವಿಶ್ವಹಾ—ಸುಪಾಂ ಸುಲುಕ್ (ಪಾ. ಸೂ. ೭-೧-೩೯) ಎಂಬುದರಿಂದ ಸಪ್ತಮಿಗೆ ಡಾದೇಶ.

ಇನ್ವತಮ್—ಇವಿ ವ್ಯಾಪ್ತೌ ಧಾತು. ಲೋಟ್ ಮಧ್ಯಮಪುರುಷದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೫ ॥

ಇಲ್ಲಿಗೆ ೧೭ಂನೇ ಸೂಕ್ತವು ಮುಗಿದುದು.

———:o:———

# ನೂರ ಅರವತ್ತೊಂದನೆಯ ಸೂಕ್ತವು

---

ಕಿಮು ಶ್ರೇಷ್ಠ ಇತಿ ಚತುರ್ದಶರ್ಚಂ ಪಂಚಮಂ ಸೂಕ್ತಂ ದೈರ್ಘತಮಸಮಾರ್ಭವಂ । ಅಂತ್ಯಾ ತ್ರಿಷ್ಟುಪ್ ಶಿಷ್ಟಾಸ್ತ್ರಿಷ್ಟುಬಂತ ಪರಿಭಾಷಯಾ ಜಗತ್ಯಃ । ಅನುಕ್ರಾಂತಂ ಚ । ಕಿಮು ಶ್ರೇಷ್ಠಃ ಷಳೂನಾ- ರ್ಭವಂ ತ್ರಿಷ್ಟುಬಂತಮಿತಿ ॥ ವ್ಯೂಳ್ಹೇ ದಶರಾತ್ರೇ ಷಷ್ಠೇಽಹನಿ ವೈಶ್ವದೇವಶಸ್ತ್ರ ಆರ್ಭವಂ ನಿವಿದ್ಧಾನಂ ದ್ವಿಪ್ರತೀಕಂ । ತತ್ರ ಕಿಮು ಶ್ರೇಷ್ಠ ಇತ್ಯೇತದಂತ್ಯವರ್ಜಂ ಪ್ರತೀಕಂ । ವ್ಯೂಳ್ಹಶ್ಚೇದಿತಿ ಖಂಡೇ ಸೂತ್ರಿತಂ। ಕಿಮು ಶ್ರೇಷ್ಠ ಉಪ ನೋ ವಾಜಾ ಇತಿ ತ್ರಯೋದಶಾರ್ಭವಂ ಚತಸ್ರಶ್ಚ । ಆ. ೮-೮ । ಇತಿ ॥

ಅನುವಾದವು—ಕಿಮು ಶ್ರೇಷ್ಠ ಎಂಬ ಈ ಸೂಕ್ತವು ಇಪ್ಪತ್ತೆರಡನೆಯ ಅನುವಾಕದಲ್ಲಿ ಐದನೆಯಸೂಕ್ತವು. ಇದರಲ್ಲಿ ಹದಿನಾಲ್ಕು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಉಚಥ್ಯಪುತ್ರನಾದ ದೀರ್ಘತಮಸ್ಸೆಂಬುವನು ಋಷಿಯು. ಋಭಗಳೇ ದೇವತೆಯು. ಈ ಸೂಕ್ತದ ಕೊನೆಯ ಋಕ್ಕು ಮಾತ್ರ ತ್ರಿಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳು ಜಗತೀಛಂದಸ್ಸಿನವು. ಅನುಕ್ರಮಣಿಕೆಯಲ್ಲಿ ಕಿಮು ಶ್ರೇಷ್ಠ ಷಳೂನಾರ್ಭವಂ ತ್ರಿಷ್ಟುಬಂತಮಿತಿ ಎಂದು ಹೇಳಿರುವುದು. ವ್ಯೂಳ್ಹವೆಂಬ ಹತ್ತುದಿವಸ ಮಾಡುವ ಯಜ್ಞದ (ಅಥವಾ ದಶರಾತ್ರವೆಂಬ ಯಜ್ಞದ) ಆರನೆಯ ದಿವಸ ವೈಶ್ವದೇವಶಸ್ತ್ರಮಂತ್ರಪಠನಮಾಡುವಾಗ ಋಭುದೇವತಾಸಂಬಂಧವಾದ ನಿವಿದ್ಧಾನಮಂತ್ರಗಳಿಗಾಗಿ ಇರುವ ಎರಡು ಪ್ರತೀಕಗಳಲ್ಲಿ (ಭಾಗ) ಕೊನೆಯ ಋಕ್ಕನ್ನು ಬಿಟ್ಟು ಉಳಿದ ಋಕ್ಕುಗಳು ಒಂದು ಪ್ರತೀಕದ ಮಂತ್ರ ಗಳಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ವ್ಯೂಳ್ಹಶ್ಚೇತ್ ಎಂಬ ಖಂಡದ ಕಿಮುಶ್ರೇಷ್ಠ ಉಪನೋ ವಾಜಾ ಇತಿ ತ್ರಯೋದಶಾರ್ಭವಂ ಚತಸ್ರಶ್ಚ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೮)

---

॥ ಓಂ ॥

## ಸೂಕ್ತ—೧೬೧

---

॥ ಮಂಡಲ—೧ ॥ ಅನುವಾಕ—೨೨ ॥ ಸೂಕ್ತ—೧೬೧ ॥

॥ ಅಷ್ಟಕ—೨ ॥ ಅಧ್ಯಾಯ—೩ ॥ ವರ್ಗ—೪, ೫, ೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೪ ॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—ಋಭವಃ ॥

॥ ಛಂದಃ—೧-೧೩, ಜಗತೀ । ೧೪, ತ್ರಿಷ್ಟುಪ್ ॥

---

ಸಂಹಿತಾಪಾಠಃ

ಕಿಮು ಶ್ರೇಷ್ಠಃ ಕಿಂ ಯವಿಷ್ಠೋ ನ ಆಜಗನ್ಕಿಮೀಯತೇ ದೂತ್ಯಂ೧

ಕದ್ಯದೂಚಿಮ ।

ನ ನಿಂದಿಮ ಚಮಸಂ ಯೋ ಮಹಾಕುಲೋಽಗ್ನೇ ಭ್ರಾತರ್ದ್ರುಣ

ಇದ್ಭೂತಿಮೂದಿಮ ॥ ೧ ॥

ಪದಪಾಠಃ

ಕಿಂ । ಊಂ ಇತಿ । ಶ್ರೇಷ್ಠಃ । ಕಿಂ । ಯವಿಷ್ಠಃ । ನಃ । ಆ । ಅಜಗನ್ । ಕಿಂ । ಈಯತೇ । ದೂತ್ಯಂ ।
ಕತ್ । ಯತ್ । ಊಚಿಮ ।

ನ । ನಿಂದಿಮ । ಚಮಸಂ । ಯಃ । ಮಹಾಽಕುಲಃ । ಅಗ್ನೇ । ಭ್ರಾತಃ । ದ್ರುಣಃ । ಇತ್ । ಭೂತಿಂ ।
ಊದಿಮ ॥ ೧ ॥

ಸಾಯಣಭಾಷ್ಯಂ

ಋಭವೋ ನಾಮ ಸುಧನ್ವನಸ್ತ್ರಯಃ ಪುತ್ರಾ ಋಭುರ್ವಿಭ್ವಾ ವಾಜ ಇತಿ । ತೇ ಚ ಮನುಷ್ಯಾಃ ಸಂತಃ ಸುಕರ್ಮಣಾ ದೇವತ್ವಂ ಪ್ರಾಪ್ಯ ಕದಾಚಿತ್ಕರ್ಮಕಾಲೇ ಸೋಮಪಾನಾಯ ಪ್ರವೃತ್ತಾಃ । ತಾನ್ಪ್ರತಿ ದೇವೈಃ ಪ್ರೇರಿತೋಽಗ್ನಿಃ ಪರಸ್ಪರಸಮಾನರೂಪಾನ್ದೃಷ್ಟ್ವಾ ಸ್ವಯಮಪಿ ತದಾಕಾರಂ ಧೃತ್ವಾ ತೇಷು ಮಧ್ಯೇ ಸ್ವಯಂ ಚತುರ್ಥಃ ಸನ್ ಪಾತುಂ ಪ್ರವೃತ್ತಃ । ತೇ ಚ ಋಭವ ಆಗತಂ ತಂ ಸಮಾನರೂಪಮವಲೋಕ್ಯ ವಿವೇಕ್ತುಮಸಮರ್ಥಾಃ ಪರಸ್ಪರಮೇವಂ ಸಂದಿಹತೇ । ಅಯಂ ಕಿಮು ಶ್ರೇಷ್ಠಃ ಕಿಂ ನು ಖಲ್ವಸ್ಮತ್ತೋಽಯಂ ಪ್ರಶಸ್ಯತಮೋ ವಯಸಾ ಶ್ರೇಷ್ಠಃ ಸೋಽಸ್ಮಾನಾಜಗನ್ । ಆಗಮತ್ । ಪ್ರಾಪ್ತಃ ॥ ಗಮೇರ್ಲಙಿ ಛಾಂದಸಃ ಶಪಃ ಶ್ಲುಃ । ಹಲ್ಙ್ಯಾದಿಲೋಪೇ ಮೋ ನೋ ಧಾತೋರಿತಿ ನತ್ವಂ । ಅಜಗನ್ನಿತಿ ಗತಿಕರ್ಮಾ ಅಗನ್ನಜಗನ್ನಿತಿ ತನ್ನಾಮಸು ಪಾಠಾತ್ ॥ ಕಿಂ ಯವಿಷ್ಠಃ ಕಿಂ ವಾಸ್ಮಾಕಂ ಯುವತಮೋಽಸ್ಮತ್ತಃ ಕನೀಯಾನಾಜಗನ್ । ಪ್ರಾಪ್ತಃ । ಕಿಂ ವಾ ದೂತ್ಯಂ ದೂತಕರ್ಮ ದೇವಸಂಬಂಧೀಯತೇ । ಗಚ್ಛತಿ । ದೇವೈಃ ಪ್ರೇರಿತೋ ದೂತೋಽಸ್ಮಾನಾಗತೋ ವಾ ॥ ದೂತಸ್ಯ ಭಾಗಕರ್ಮಣೀ ಇತಿ ಯತ್ ॥ ಯದೂಚಿಮ ಯದೇತದ್ಬ್ರೂಮಃ ತತ್ಕತ್ । ಕಥಂ ನಿಶ್ಚೇತವ್ಯಮಿತ್ಯರ್ಥಃ । ವಯಂ ತಾವತ್ತ್ರಯ ಏವೇದಾನೀಂ ಚತ್ವಾರಃ ಸಮಾನರೂಪಾ ವರ್ತಾಮಹೇ ತಸ್ಮಾದಯಮಧಿಕಃ ಕಿಮು ಶ್ರೇಷ್ಠ ಇತಿ ವಿಚಿಕಿತ್ಸಾ । ಏವಂ ಸಂದಿಹ್ಯ ಕಥಂಚಿತ್ಸ್ವತೋಽನ್ಯಂ ನಿಶ್ಚಿತ್ಯ ತಂ ಪ್ರತ್ಯಾ ಪರೋಕ್ಷ್ಯೇಣ ಬ್ರುವತೇ । ಹೇ ಅಗ್ನೇ ಭ್ರಾತರ್ಭ್ರಾತೃವದ್ಭಾಗಾರ್ಹ । ಭ್ರಾತಾ ಯಥಾ ಬಲಾತ್ಸ್ವಕೀಯಭಾಗಂ ಸ್ವೀಕರೋತಿ ತದ್ವತ್ ಸಮಾನ-

ರೂಪಮಾಶ್ರಿತ್ಯ ಬಲಾಚ್ಚಮಸಪಾನಾಯ ಪ್ರವೃತ್ತ ಇತಿ ಭ್ರಾತರಿತ್ಯುಕ್ತಂ। ಹೇ ತಾಪೃಶಾಗ್ನೇ ಚಮಸಂ ನ ನಿಂದಿಮ। ಅಧಿಕಃ ಸಮಾಗತ ಇತಿ ಪಾನಮಕೃತ್ವಾ ಚಮಸಂ ನ ದೂಷಯಾಮಃ॥ ಣುದಿ ಕುತ್ಸಾಯಾಂ। ಛಂದಸಿ ವೇತಿ ವಕ್ತವ್ಯಮಿತಿ ದ್ವಿರ್ವಚನಾಭಾವಃ॥ ಅದೂಷ್ಯತ್ವೇ ಕಾರಣಮಾಹ। ಯಶ್ಚಮಸೋ ಮಹಾಕುಲಃ ಮಹಾಕುಲೋತ್ಪನ್ನಃ ತ್ವಷ್ಟ್ರಾ ನಿರ್ಮಿತತ್ವಾತ್। ವಕ್ಷ್ಯತಿ ಚ ತ್ವಷ್ಟಾ ಗ್ನಾಸ್ತಂತನ್ಯಾನಜ ಇತಿ। ಅತಃ ಕಾರಣಾತ್ ದ್ರುಣಃ। ವಿಕಾರೇ ಪ್ರಕೃತಿಶಬ್ದಃ। ತತಶ್ಚ ತತ್ಸ್ಥೇ ತಚ್ಛಬ್ದಃ। ಇಚ್ಛಬ್ದೋಽವಧಾರಣೇ। ದಾರುವಿಕಾರಚಮಸಸ್ಯ ಭೂತಿಂ ಪ್ರಾಪ್ತಿಮೂದಿಮ। ಬ್ರೂಮಃ॥ ವಿದೇಶ್ಛಾಂದಸೇ ಲಿಟಿ ವಚಿಸ್ವಪೀತಿ ಸಂಪ್ರಸಾರಣಂ। ಕ್ರಾದಿನಿಯಮಾದಿಟ್॥

ಶ್ರುತಿಪದಾರ್ಥ

ನಃ—ನಮ್ಮಲ್ಲಿಗೆ। ಅಜಗನ್—ಬಂದಿರತಕ್ಕ ಈತನು। ಕಿಮು ಶ್ರೇಷ್ಠಃ—(ವಯಸ್ಸಿನಲ್ಲಿಯಾಗಲಿ ಅಥವಾ ಯೋಗ್ಯತೆಯಲ್ಲಾಗಲಿ) ನಮಗಿಂತಲೂ ದೊಡ್ಡವನೇ। ಕಿಂ ಯವಿಷ್ಠಃ—ಅಥವಾ ಕಿರಿಯವನೇ (ಅಥವಾ) ದೂತ್ಯಂ—(ದೇವತೆಗಳ) ದೂತಕರ್ಮವನ್ನು ವಹಿಸಿದವನಾಗಿ। ಕಿಂ ಈಯತೇ—ಬಂದಿದ್ದಾನೆಯೇ। ಯತ್ ಊಚಿಮ—ನಾವು ಹೇಳಬೇಕಾದದ್ದು ಏನಾದರೂ ಇದ್ದರೆ। ಕತ್—ಅದು ಯಾವುದು। ಭ್ರಾತಃ ಅಗ್ನೇ—ಎಲೈ ಸಹೋದರನಾದ ಅಗ್ನಿಯೇ। ಯಃ ಮಹಾಕುಲಃ—ಯಾವ (ಈ ಚಮಸಪಾತ್ರೆಯು) ಸತ್ಕುಲಪ್ರಸೂತವಾಗಿದೆಯೋ। (ತಂ) ಚಮಸಂ—ಆ ಚಮಸಪಾತ್ರೆಯನ್ನು। ನ ನಿಂದಿಮ—(ಪಾನಮಾಡಲು ಹೊಸಬನು ಬಂದನೆಂದು ಕೋಪದಿಂದ ನಾವೂ ಪಾನಮಾಡದೆ) ಅವಹೇಳನ ಮಾಡುವುದಿಲ್ಲ। ದ್ರುಣ ಇತ್—ದಾರುವಿನಿಂದ ನಿರ್ಮಿತವಾದ ಚಮಸಪಾತ್ರೆಯ। ಭೂತಿಮಿತ್—ಮಹಾತ್ಮ್ಯವನ್ನು। ಊದಿಮ—ಪ್ರಕಾಶಪಡಿಸಿ ಹೇಳುತ್ತೇವೆ.

॥ ಭಾವಾರ್ಥ ॥

ನಮ್ಮಲ್ಲಿಗೆ ಹೊಸದಾಗಿ ಬಂದಿರತಕ್ಕ ಈತನು ಯಾರು? ವಯಸ್ಸಿನಲ್ಲಾಗಲಿ ಅಥವಾ ಯೋಗ್ಯತೆಯಲ್ಲಾಗಲಿ ಈತನು ನಮಗಿಂತಲೂ ಹಿರಿಯವನೇ ಅಥವಾ ಕಿರಿಯವನೇ? ಅಥವಾ ದೇವತೆಗಳ ದೂತಕರ್ಮವನ್ನು ವಹಿಸಿದವನಾಗಿ ಬಂದಿದ್ದಾನೆಯೇ? ಈತನಿಗೆ ನಾವು ಹೇಳಬೇಕಾದದ್ದು ಏನಾದರೂ ಇದ್ದರೆ ಅದಾವದು? ಎಲೈ ಸಹೋದರನಾದ ಅಗ್ನಿಯೇ, ನಮ್ಮೊಡನೆ ಪಾನಮಾಡಲು ಹೊಸಬನೊಬ್ಬನು ಬಂದನೆಂದು ಕೋಪದಿಂದ ನಾವೂ ಪಾನಮಾಡದೇ ಸತ್ಕುಲಪ್ರಸೂತವಾದ ಈ ಚಮಸಪಾತ್ರೆಯನ್ನು ನಾವು ಅವಹೇಳನಮಾಡುವುದಿಲ್ಲ. ದಾರುವಿನಿಂದ ನಿರ್ಮಿತವಾದ ಈ ಪಾತ್ರೆಯ ಮಾಹಾತ್ಮ್ಯವನ್ನು ನಿನಗೂ ತಿಳಿಯುವಂತೆ ಹೇಳುತ್ತೇವೆ.

## English Translation

Is this our senior or our junior who has come (to us); has he come upon a message (from the gods); what is it we should say? Agni, brother, we revile not the ladle which is of exalted race; verily we assert the dignity of the wooden (Implement).

**ವಿಶೇಷವಿಷಯಗಳು**

ಸಾಯಣರು ಈ ಋಕ್ಕಿನ ಭಾಷ್ಯದ ಪೀಠಿಕೆಯಲ್ಲಿ ಇದಕ್ಕೆ ಸಂಬಂಧಪಟ್ಟ ಪೂರ್ವಕಥೆಯನ್ನು ತಿಳಿಸಿದ್ದಾರೆ. ಸುಧನ್ವಪುತ್ರರಾದ ಋಭು, ವಿಭ್ವ, ವಾಜ ಎಂಬ ಮೂರು ಪುತ್ರರೂ ಸಹ ಮಾನವರಾದಾಗ್ಯೂ ತಮ್ಮ ಸತ್ಕರ್ಮಗಳಿಂದ ದೇವತ್ವವನ್ನು ಪಡೆದವರಾಗಿ ಒಂದುಸಲ ಯಜ್ಞಕಾಲದಲ್ಲಿ ದೇವತೆಗಳೊಂದಿಗೆ ಸೋಮಪಾನಕ್ಕಾಗಿ ಪ್ರವರ್ತಿಸಿದರು. ದೇವತೆಗಳಿಂದ ಪ್ರೇರಿಸಲ್ಪಟ್ಟ ಅಗ್ನಿಯು ಸಮಾನರೂಪರಾದ ಅವರನ್ನು ನೋಡಿ ತಾನೂ ಸಹ ಅದೇ ರೂಪವನ್ನು ಹೊಂದಿಕೊಂಡು ಅವರೊಡನೆ ತಾನೂ ಪಾನಮಾಡಲುಪಕ್ರಮಿಸಿದನು. ತಮ್ಮೊಂದಿಗೆ ತಮ್ಮ ಆಕಾರವನ್ನೇ ಹೊಂದಿಕೊಂಡು ಬಂದ ನಾಲ್ಕನೆಯವನು ಯಾರೆಂದು ತಿಳಿಯದೆ ತಮ್ಮ ತಮ್ಮಲ್ಲಿಯೇ ಸಂದೇಹಪಡುತ್ತಾರೆ. ಈ ಋಕ್ಕಿನ ಪೂರ್ವಾರ್ಧದಲ್ಲಿ ಆ ಜಿಜ್ಞಾಸೆಯೂ, ಕೊಂಚಕಾಲಾನಂತರ ಅವನು ಯಾರೆಂದು ನಿಷ್ಕರ್ಷಿಸಿ ಅವನೊಂದಿಗೆ ಸಂಭಾಷಣೆಯನ್ನು ಮಾಡುತ್ತಾ ಅವನಿಗೆ ಚಮಸದ ಮಾಹಾತ್ಮ್ಯವನ್ನು ಹೇಳುವುದಾಗಿ ತಿಳಿಸಿದುದು ಉತ್ತರಾರ್ಧದಲ್ಲೂ ಉಕ್ತವಾಗಿದೆ.

ಈ ಸಹೋದರರ ಸತ್ಕುಲಪ್ರಸೂತಿಯನ್ನೂ ಇವರ ಸತ್ಕರ್ಮದ ಮಾಹಾತ್ಮ್ಯವನ್ನೂ, ದೇವತೆಗಳ ಜೊತೆಯಲ್ಲಿ ಸೇರಿಕೊಳ್ಳುವಾಗ ದೇವತೆಗಳು ಅಸೂಯೆಯಿಂದ ಇವರಿಗೆ ತೊಂದರೆಯನ್ನು ಕೊಟ್ಟುದನ್ನೂ ಆಗ ಪ್ರಜಾಪತಿಯೂ ಸವಿತೃವೂ ಇವರಿಗೆ ಸಹಾಯಮಾಡಿದುದನ್ನೂ ಸಹ ಕೆಲವೆಡೆಗಳಲ್ಲಿ ತಿಳಿಸಿದೆ. ಉದಾಹರಣೆಗೆ;—

> ಋಭವೋ ವೈ ದೇವೇಷು ತಪಸಾ ಸೋಮಪೀಥಮಭ್ಯಜಯಂಸ್ತೇಭ್ಯಃ ಪ್ರಾತಸ್ಸವನೇ ವಾಚಿ ಕಲ್ಪಯಿಷಂಸ್ತಾನಗ್ನಿರ್ವಸುಭಿಃ ಪ್ರಾತಃಸವನಾದನುದತ ತೇಭ್ಯೋ ಮಾಧ್ಯಂದಿನೇ ಸವನೇ ವಾಚಿ ಕಲ್ಪಯಿಷಂಸ್ತಾನಿಂದ್ರೋ ರುದ್ರೈರ್ಮಾಧ್ಯಂದಿನಾತ್ಸವನಾದನುದತ ತೇಭ್ಯಸ್ತೃತೀಯೆ ಸವನೇ ವಾಚಿ ಕಲ್ಪಯಿಷಂಸ್ತಾನ್ವಿಶ್ವೇ ದೇವಾ ಅನೋನುದ್ಯಂತ ನೇಹ ಪಾಸ್ಯಂತಿ ನೇಹೇತಿ ಸ ಪ್ರಜಾಪತಿರಬ್ರವೀತ್ಸವಿತಾರಂ ತವ ವಾ ಇಮೇಽಂತೇವಾಸಾಸ್ತ್ವಮೇವೈಭಿಃ ಸಂಪಿಬಸ್ವೇತಿ ಸ ತಥೇತ್ಯಬ್ರವೀತ್ಸವಿತಾ ತಾನ್ವೈ ತ್ವಮುಭಯತಃ ಪರಿಪಿಬೇತಿ ತಾನ್ಪ್ರಜಾಪತಿರುಭಯತಃ ಪರ್ಯಪಿಬತ್ ||
>
> (ಐ. ಬ್ರಾ. ೩-೩-೩೦)

ಋಭುಗಳು ತಮ್ಮ ತಪಸ್ಸಾಧನೆಯಿಂದಲೂ ಉತ್ಕಟವಾದ ಇಚ್ಛೆಯಿಂದಲೂ ದೇವತೆಗಳ ನಡುವೆ ಸೋಮಪಾನವನ್ನು ಸಂಪಾದಿಸಿದರು. ಮೊದಲು ಪ್ರಾತಸ್ಸವನದಲ್ಲಿ ಅದನ್ನು ಹೊಂದಲು ಇಚ್ಛಿಸಿದಾಗ ಅಗ್ನಿಯು ವಸುಗಳೊಂದಿಗೆ ಸೇರಿಕೊಂಡು ಅವರನ್ನು ತಿರಸ್ಕರಿಸಿ ಅಟ್ಟಬಿಟ್ಟನು. ಆಗ ಮಾಧ್ಯಂದಿನಸವನದಲ್ಲಿ ಅದನ್ನು ಪಡೆಯಲಿಚ್ಛಿಸಿದಾಗ ಇಂದ್ರನು ರುದ್ರರೊಂದಿಗೆ ಸೇರಿಕೊಂಡು ಅವರನ್ನು ಅಟ್ಟಬಿಟ್ಟನು ಪುನಃ ತೃತೀಯಸವನದಲ್ಲಿ ಅದನ್ನು ಪಡೆಯಲಿಚ್ಛಿಸಿದಾಗ ವಿಶ್ವೇದೇವರು ನೀವು ಇಲ್ಲಿ ಖಂಡಿತ ಸೋಮಪಾನಮಾಡಲರ್ಹರಲ್ಲ. ನೀವು ಮಾಡಕೂಡದು ಎಂದು ಕಠಿಣವಾದ ಮಾತಿನಿಂದ ಅಲ್ಲಿಯೂ ತಿರಸ್ಕರಿಸಿದರು. ಆಗ ಪ್ರಜಾಪತಿಯು ಸವಿತೃವನ್ನು ಕುರಿತು ಈ ಋಭುಗಳು ನಿನ್ನ ಶಿಷ್ಯರು. ನೀನು ಇವರೊಂದಿಗೆ ಸೋಮಪಾನವನ್ನು ಮಾಡು ಎಂದನು. ಸವಿತೃವು ಅದಕ್ಕೆ ಒಪ್ಪಿಕೊಂಡನು. ಪ್ರಜಾಪತಿಯೂ ಸಹ ಅವರ ಅಕ್ಕಪಕ್ಕದಲ್ಲೇ ಇದ್ದು ಸೋಮರಸವನ್ನು ಪಾನಮಾಡಿದನು ಎಂಬುದಾಗಿ ಐತರೇಯ ಬ್ರಾಹ್ಮಣದಲ್ಲಿ ಈ ಕಥೆಯನ್ನು ಹೇಳಿದೆ.

ಸೋಮಪಾನವನ್ನು ಮಾಡುವ ಇಂತಹ ಯೋಗ್ಯತೆಯನ್ನು ಪಡೆದು ಚಮಸಪಾತ್ರೆಯಿಂದ ಪಾನಮಾಡು ತ್ತಿರುವಾಗ ದೇವತೆಗಳಿಂದ ಪ್ರೇರಿತನಾದ ಅಗ್ನಿಯು ಮಧ್ಯೆ ಪ್ರವೇಶಿಸಿದಾಗ ಅವನ ವಿಚಾರವು ಪ್ರಾರಂಭದಲ್ಲಿ ತಿಳಿಯದೆ ಸಂದೇಹ ಬಂದು ಅನಂತರ ಅವನ ಪರಿಚಯವನ್ನು ಕಂಡುಹಿಡಿದಮೇಲೆ ಋಕ್ಕಿನಲ್ಲಿ ಉಕ್ತವಾಗಿರುವಂತೆ ಹೇಳುತ್ತಾರೆ.

ಕಿಮು ಶ್ರೇಷ್ಠಃ ಕಿಂ ಯವಿಷ್ಠಃ—ತೇ ಚ ಋಭವಃ ಆಗತಂ ತಂ ಸಮಾನರೂಪಮವಲೋಕ್ಯ ವಿವೇಕ್ತುಮಸಮರ್ಥಾಃ ಪರಸ್ಪರಮೇವಂ ಸಂದಿಹತೇ । ಅಗ್ನಿಯು ಅವರ ಆಕಾರವನ್ನೇ ಹೊಂದಿ ಅವರ ನಡುವೆ ಬಂದು ಕುಳಿತಾಗ ಅವರಿಗೂ ಅಗ್ನಿಗೂ ವ್ಯತ್ಯಾಸವೇ ತಿಳಿಯಲಿಲ್ಲ—ಆಗ ಅವರು ಸಂಶಯಪಟ್ಟವರಾಗಿ ಆಗಂತುಕನು ತಮ್ಮಲ್ಲಿ ಹಿರಿಯವನೇ ಅಥವಾ ಕಿರಿಯವನೇ ? ಅವನು ಬಂದಿರುವ ಉದ್ದಿಶ್ಯವಾದರೂ ಏನು ಇತ್ಯಾದಿ ಯಾಗಿ ಸಂಶಯವನ್ನು ವ್ಯಕ್ತಪಡಿಸುತ್ತಾರೆ.

ಮಹಾಕುಲಃ—ಮಹಾಕುಲೋತ್ಪನ್ನಸ್ತ್ವಷ್ಟ್ರಾ ನಿರ್ಮಿತತ್ವಾತ್ । ತ್ವಷ್ಟೃವಿನಿಂದ ನಿರ್ಮಿತವಾದ್ದ ರಿಂದ ಮಹಾಕುಲೋತ್ಪನ್ನವೆಂದು ಹೇಳಿದೆ.

ಉತ ತ್ಯಂ ಚಮಸಂ ನವಂ ತ್ವಷ್ಟುರ್ದೇವಸ್ಯ ನಿಷ್ಕೃತಂ । ಅಕರ್ತ ಚತುರಃ ಪುನಃ ॥
(ಋ. ಸಂ. ೧-೨೦-೬)

ಇತ್ಯಾದಿಕಡೆಗಳಲ್ಲಿ ತ್ವಷ್ಟೃವು ಚಮಸಪಾತ್ರೆಯನ್ನು ಪ್ರಥಮತಃ ನಿರ್ಮಿಸಿದನು ಎಂದು ಈ ಪಾತ್ರೆಯ ಶ್ರೇಷ್ಠವಾದ ಉತ್ಪತ್ತಿಯ ಸ್ವರೂಪವನ್ನು ವರ್ಣಿಸಿದೆ. ಅದನ್ನು ಇಲ್ಲಿ ಮಹಾಕುಲಃ ಎಂಬ ವಿಶೇಷಣದಿಂದ ತಿಳಿಸಿದೆ-

ದ್ರುಣಃ—ದಾರುವಿಕಾರಚಮಸಃ । ದಾರುವಿನಿಂದ ನಿರ್ಮಿತವಾದ ಚಮಸ ಪಾತ್ರೆಯು.

ಭ್ರಾತಃ—ಭ್ರಾತೃವದ್ಭಾಗಾರ್ಹ । ಭ್ರಾತೃವು ಯಾವ ರೀತಿ ನಿರ್ಬಂಧವಾಗಿ ತನ್ನ ಭಾಗವನ್ನು ನಿರೀಕ್ಷಿಸು ತ್ತಾನೋ ಅದರಂತೆಯೇ ತಮ್ಮ ಮೂವರೊಂದಿಗೆ ಭಾಗವನ್ನು ವಹಿಸಲು ನಾಲ್ಕನೆಯವನಾಗಿ ಬಂದ ಅಗ್ನಿಯನ್ನು ಭ್ರಾತೃವೆಂದು ಸಂಬೋಧಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

ಶ್ರೇಷ್ಠಃ—ಅತಿಶಯೇನ ಪ್ರಶಸ್ಯಃ ಶ್ರೇಷ್ಠಃ ಅತಿಶಾಯನೇ ತಮಬಿಷ್ಠನೌ (ಪಾ. ಸೂ. ೫-೩-೫೫) ಎಂಬುದರಿಂದ ಇಷ್ಠನ್ ಪ್ರತ್ಯಯ. ಇದು ಪರವಾದಾಗ ಪ್ರಶಸ್ಯಸ್ಯಶ್ರಃ (ಪಾ. ಸೂ ೫-೩-೬೦) ಎಂಬುದರಿಂದ ಪ್ರಕೃತಿಗೆ ಶ್ರಾದೇಶ. ಪ್ರಕೃತ್ಯೈಕಾಚ್ (ಪಾ. ಸೂ. ೬-೪-೧೬೩) ಎಂಬುದರಿಂದ ಪ್ರಕೃತಿಭಾವ ಬರುವುದರಿಂದ ಟಿಲೋಪ ಬರುವುದಿಲ್ಲ. ಗುಣ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಯವಿಷ್ಠಃ—ಅತಿಶಯೇನ ಯುವಾ ಯವಿಷ್ಠಃ ಹಿಂದಿನಂತೆ ಇಷ್ಠನ್ ಪ್ರತ್ಯಯ ಪರವಾದಾಗ ಸ್ಥೂಲ- ದೂರಯುವ (ಪಾ. ಸೂ. ೬-೪-೧೫೬) ಎಂಬುದರಿಂದ ಯಣಾದಿ ಸಮುದಾಯಕ್ಕೆ (ವನ್) ಲೋಪ ಉಕಾರಕ್ಕೆ ಗುಣ. ಅವಾದೇಶ ಆದ್ಯುದಾತ್ತಸ್ವರ ಬರುತ್ತದೆ.

**ಅಜಗನ್**—ಗಮಲ್ಲ ಗತೌ ಧಾತು. ಲಙ್ ಪ್ರಥಮಪುರುಷಏಕವಚನದಲ್ಲಿ ತಿ ಪ್ರತ್ಯಯ. ಆದರ ಅಂತ್ಯ ಇಕಾರಕ್ಕೆ ಲೋಪ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಹಲ್‌ಙ್ಯಾಭ್ಯೋ** ಸೂತ್ರದಿಂದ ತಿಪಿಗೆ ಲೋಪ. **ಕುಹೋಶ್ಚುಃ** (ಪಾ. ಸೂ. ೭-೪-೬೨) ಎಂಬುದರಿಂದ) ಜಕಾರಾದೇಶ. **ಮೋನೋಧಾತೋಃ** (ಪಾ. ಸೂ. ೮-೨-೬೪) ಸೂತ್ರದಿಂದ ಮಕಾರಕ್ಕೆ ನಕಾರಾದೇಶ. ಲಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಈಯತೇ**—ಈಙ್ ಗತೌ ಧಾತು. ಲಟ್ ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ದೂತ್ಯಮ್**—ದೂತಸ್ಯ ಕರ್ಮ. ದೂತ್ಯಮ್. **ದೂತಸ್ಯಭಾಗಕರ್ಮಣೀ** (ಪಾ. ಸೂ. ೪-೪-೧೨೦) ಎಂಬುದರಿಂದ ಯತ್ ಪ್ರತ್ಯಯ. **ಯಸ್ಯೇ ತಿಚ** (ಪಾ. ಸೂ. ೬-೪-೧೪೮) ಎಂಬುದರಿಂದ ಅಕಾರಕ್ಕೆ ಲೋಪ. **ತಿತ್‌ಸ್ವರಿತಮ್** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ಊಚಿಮ**—ವಚ ಪರಿಭಾಷಣೇ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಿಟ್. ಉತ್ತಮಪುರುಷ ಬಹುವಚನಕ್ಕೆ ಮಾದೇಶ. **ವಚಿಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಸಂಪ್ರಸಾರಣ ಪೂರ್ವರೂಪ. ದ್ವಿತ್ವಾದಿ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ನಿಂದಿಮ**—ಣಿದಿ ಕುತ್ಸಾಯಾಂ ಧಾತು. **ಣೋನಃ** (ಪಾ. ಸೂ. ೬-೧-೬೫) ಎಂಬುದರಿಂದ ಆದಿಗೆ ನತ್ವ. ಛಾಂದಸವಾಗಿ ಲಿಟ್. ಉತ್ತಮಪುರುಷಬಹುವಚನ ಪರವಾದಾಗ **ಛಂದಸಿವೇತಿ ವಕ್ತವ್ಯಮ್** ಎಂಬ ವಚನದಿಂದ ಧಾತುವಿಗೆ ದ್ವಿತ್ವಾದಿಗಳು ಬರುವುದಿಲ್ಲ. **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂಬುದರಿಂದ ಪ್ರತ್ಯಯಕ್ಕೆ ಇಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ಚಮಸಮ್**—ಚಮಂತಿ ಅಸ್ಮಿನ್ ಚಮಸಃ ಸೋಮಪಾನಪಾತ್ರಂ. ಚಮು ಅದನೇ ಧಾತು. **ಅತ್ಯವಿಚಮಿತ**—(ಉ. ಸೂ. ೩೯೭) ಎಂಬುದರಿಂದ ಅಸಚ್ ಪ್ರತ್ಯಯ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಊದಿಮ**—ವದ ವ್ಯಕ್ತಾಯಾಂ ವಾಚಿ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಿಟ್. **ಪರಸ್ಮೈಪದಾನಾಂ** (ಪಾ ಸೂ. ೩-೪-೮೨) ಎಂಬುದರಿಂದ ಮಸಿಗೆ ಮಾದೇಶ. ಆದಕ್ಕೆ ಕ್ರಾದಿನಿಯಮದಿಂದ ಇಡಾಗಮ. **ವಚಿಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಸಂಪ್ರಸಾರಣ ಪೂರ್ವರೂಪ. ತಿಙಂತ ನಿಘಾತಸ್ವರ ಬರುತ್ತದೆ. ॥ ೧ ॥

———:o:———

ಸಂಹಿತಾಪಾಠಃ

ಏಕಂ ಚಮಸಂ ಚತುರಃ ಕೃಣೋತನ ತದ್ವೋ ದೇವಾ ಅಬ್ರುವನ್ತದ್ವ
ಆಗಮಂ ।
ಸೌಧನ್ವನಾ ಯದ್ಯೇವಾ ಕರಿಷ್ಯಥ ಸಾಕಂ ದೇವೈರ್ಯಜ್ಞಿಯಾಸೋ
ಭವಿಷ್ಯಥ ॥ ೨ ॥

ಪದಪಾಠಃ

ಏಕಂ । ಚಮಸಂ । ಚತುರಃ । ಕೃಣೋತನ । ತತ್ । ವಃ । ದೇವಾಃ । ಅಬ್ರುವನ್ । ತತ್ । ವಃ । ಆ ।
ಅಗಮಂ ।
ಸೌಧನ್ವನಾಃ । ಯದಿ । ಏವ । ಕರಿಷ್ಯಥ । ಸಾಕಂ । ದೇವೈಃ । ಯಜ್ಞಿಯಾಸಃ । ಭವಿಷ್ಯಥ ॥ ೨ ॥

ಸಾಯಣಭಾಷ್ಯಂ

ಏವಂ ಪೃಷ್ಟೋಽಗ್ನಿಸ್ತಾನ್ಪ್ರತ್ಯುವಾಚ । ಹೇ ಸೌಧನ್ವನಾಃ ಸುಧನ್ವನಃ ಪುತ್ರಾಃ ಯೂಯಮೇಕಂ ಚಮಸಂ ತ್ವಷ್ಟ್ರಾ ಸಂಪಾದಿತಂ ಪೂರ್ವಮೇಕಮೇವ ಸಂತಂ ಚಮಸಂ ಚತುರಃ ಕೃಣೋತನ । ಚತುಃ ಸಂಖ್ಯಾಕಾನ್ಕುರುತ ॥ ಚತುರಃ ಶಸೀತ್ಯಂತೋದಾತ್ತತ್ವಂ । ಪೂರ್ವವತ್ತನಪ್ ॥ ಯಥೋಪರಿತನೇ ಜ್ಯೇಷ್ಠ ಆಹ ಚಮಸಾ ದ್ವಾ ಕರೇತೀತ್ಯುಪಕ್ರಮ್ಯ ಕನಿಷ್ಠ ಆಹ ಚತುರಸ್ಕರೇತೀತಿ ಚತುಷ್ಟಂ ನಿರ್ಧಾರಿತಂ । ಋ. ೪-೩೩-೫ । ನ ಕೇವಲಮಹಮೇವ ಬ್ರವೀಮಿ ಕಿಂತು ವೋ ಯುಷ್ಮಾನ್ಪ್ರತಿ ತದುಕ್ತಂ ಚತುರ್ಧಾಕರಣರೂಪಂ ಕರ್ಮೋತ್ತರತ್ರ ವಕ್ಷ್ಯಮಾಣಮಶ್ವರಥಾದಿಕರಣರೂಪಂ ಚ ಕರ್ಮ ದೇವಾ ಇಂದ್ರಾದಯೋಽಬ್ರುವನ್ । ದೇವತ್ವಪ್ರಾಪ್ತ್ಯುಪಾಯತ್ವೇನ ತತ್ತಾದೃಶಂ ಕರ್ಮ ವೋ ಯುಷ್ಮಾಕಂ ವಕ್ತುಮಹಮಾಗಮಂ । ಪ್ರಾಪ್ತೋಽಸ್ಮಿ । ಯಸ್ಮಾದೇವಂ ತಸ್ಮಾದ್ಯೂಯಂ ಯದ್ಯೇವಾ ಕರಿಷ್ಯಥ ಯದ್ಯೇವಂ ಮದುಕ್ತಪ್ರಕಾರೇಣ ಕರ್ತುಂ ಶಕ್ನುಥ ತಥಾ ಚೇದ್ದೇವೈಃ ಸಾಕಂ ಸಹ ಯಜ್ಞಿಯಾಸೋ ಭವಿಷ್ಯಥ । ಇತಿ ತ್ರೈರುಕ್ತಮಿತ್ಯರ್ಥಃ ॥

ಪ್ರತಿಪದಾರ್ಥ

ಸೌಧನ್ವನಾಃ—ಎಲೈ ಸುಧನ್ವಪುತ್ರರೇ । ಏಕಂ ಚಮಸಂ—(ತ್ವಷ್ಟೃವಿನಿಂದ ಮೊದಲು) ಒಂದೇ ಪಾತ್ರೆಯನ್ನಾಗಿ ನಿರ್ಮಿತವಾದ ಈ ಚಮಸವನ್ನು । ಚತುರಸ್ಕೃಣೋತನ—ನಾಲ್ಕು ಪಾತ್ರೆಗಳಾಗುವಂತೆ ಮಾಡಿರಿ ಎಂದು । ತತ್—ನಿಮ್ಮಿಂದ ಮಾಡಲ್ಪಡಬೇಕಾದ ಆ ಕಾರ್ಯವನ್ನು । ವಃ—ನಿಮಗೆ । ದೇವಾಃ—ದೇವತೆಗಳು । ಅಬ್ರುವನ್—ಹೇಳಿದರು । ತತ್ ಆದ್ದರಿಂದಲೇ । ವಃ—ನಿಮ್ಮಲ್ಲಿಗೆ । ಆಗಮಂ—ನಾನು ಬಂದಿದ್ದೇನೆ ।

ಯದಿ—ಒಂದು ವೇಳೆ । ಏವ—ಈ ಪ್ರಕಾರವಾಗಿ । ಕರಿಷ್ಯಥ—ನೀವು ಮಾಡಿದ್ದೇ ಆದರೆ । ದೇವೈಃ ಸಾಕಂ—ದೇವತೆಗಳೊಡನೆ । ಯಜ್ಞಿಯಾಸಃ—ಯಜ್ಞಭಾಗಾರ್ಹರಾಗಿ । ಭವಿಷ್ಯಥ—ಆಗುತ್ತೀರಿ.

ಭಾವಾರ್ಥ

ಎಲೈ ಸುಧನ್ವಪುತ್ರರೇ, ತ್ವಷ್ಟೃವಿನಿಂದ ಮೊದಲು ಒಂದೇ ಆಗಿ ನಿರ್ಮಿತವಾದ ಈ ಚಮಸವನ್ನು ನೀವು ನಾಲ್ಕು ಪಾತ್ರೆಗಳಾಗುವಂತೆ ಮಾಡಿರಿ ಎಂದು ಇದು ನಿಮಗೆ ದೇವತೆಗಳ ಸಂದೇಶವಿದೆ. ಆ ಸಂದೇಶವನ್ನು ನಿಮಗೆ ತಿಳಿಸಲು ನಾನು ಇಲ್ಲಿಗೆ ಬಂದಿದ್ದೇನೆ. ನೀವು ಇದನ್ನು ನಡೆಸಿದರೆ ಆಗ ನಿಮಗೂ ಸಹ ದೇವತೆಗಳ ಜೊತೆಯಲ್ಲಿ ಯಜ್ಞಭಾಗವನ್ನು ಸ್ವೀಕರಿಸಲು ಅರ್ಹತೆಯುಂಟಾಗುತ್ತದೆ.

English Translation

Make fourfold the single ladle ; so the gods comand you ; and for that purpose am I come, sons of Sudhanwan : if you accomplish this, you will be you will be entitled to sacrifiices along with the gods,

ವಿಶೇಷವಿಷಯಗಳು

ಏವಂ ಚಮಸಂ ಚತುರಃ ಕೃಣೋತನ—ಮೊದಲು ಒಂದಾಗಿ ನಿರ್ಮಿತವಾದ ಚಮಸ್ಸನ್ನು ನಾಲ್ಕನ್ನಾಗಿ ಮಾಡಿ ಎಂದು ಅಗ್ನಿಯು ದೇವತೆಗಳ ಸಂದೇಶವನ್ನು ತಿಳಿಸುತ್ತಾನೆ. ಈ ಸಂದೇಶಕ್ಕೆ ಗೌರವವನ್ನು ಕೊಟ್ಟು ಋಭುಗಳು ಒಂದೇ ಆದ ಪಾತ್ರೆಯನ್ನು ತಮ್ಮ ಕಲಾಕೌಶಲ್ಯದಿಂದ ನಾಲ್ಕನ್ನಾಗಿ ಮಾಡಿದ ವಿಷಯವು ಪ್ರಸಿದ್ಧವಾಗಿದೆ. ಈ ಕಾರ್ಯದಲ್ಲೂ ಸಹ ತ್ವಷ್ಟೃವಿನ ಶಿಕ್ಷಣದಿಂದ ಇವರಿಗೆ ಈ ಶಕ್ತಿಯು ಬಂದಿತೆಂದೂ, ಇವರು ತ್ವಷ್ಟೃವಿನ ಪ್ರಿಯಶಿಷ್ಯರಾಗಿದ್ದರೆಂಬುದೂ ಸಹ ಪ್ರಸಿದ್ಧವಾದ ವಿಷಯವಾಗಿದೆ. ಇದರಂತೆಯೇ ಇನ್ನೂ ಕೆಲವು ವಿಧದಲ್ಲಿ ತಮ್ಮ ಅಸಾಧಾರಣವಾದ ಶಕ್ತಿಯನ್ನುತೋರಿಸಿ ದೇವತೆಗಳೊಂದಿಗೆ ಸೋಮಪಾನಕ್ಕೆ ಅರ್ಹತೆಯನ್ನು ಪಡೆದರೆಂದೂ ಹೇಳಿದೆ.

ಸುಧನ್ವನ ಆಂಗಿರಸಸ್ಯಾಸನ್ಪುತ್ರಾಸ್ತ್ರಯಃ ಪುರಾ ।
ಋಭುರ್ವಿಭ್ವಾ ಚ ವಾಜಶ್ಚ ಶಿಷ್ಯಾಸ್ತ್ವಷ್ಟುಶ್ಚ ತೇऽಭವನ್ ॥
ಶಿಕ್ಷಯಾಮಾಸ ತಾಂಸ್ತ್ವಷ್ಟಾ ತ್ವಾಷ್ಟ್ರಂ ಯತ್ಕರ್ಮ ಕಿಂಚನ ।
ಪರಿನಿಷ್ಠಿತಕರ್ಮಾಣೋ ವಿಶ್ವೇದೇವಾ ಉಪಾಹ್ವಯನ್ ॥
ವಿಶ್ವೇಷಾಂ ತೇ ತತಶ್ಚಕ್ರುರ್ವಾಹನಾನ್ಯಾಯುಧಾನಿ ತು ।
ಧೇನುಂ ಸಬರ್ದುಘಾಂ ಚಕ್ರುರಮೃತಂ ಸಬರುಚ್ಯತೇ ॥
ಬೃಹಸ್ಪತೇರಥಾಶ್ವಿಭ್ಯಾಂ ರಥಂ ದಿವ್ಯಂ ತ್ರಿವಂಧುರಂ ।
ಇಂದ್ರಾಯ ಚ ಹರೀ ದೇವಪ್ರಹಿತೇನಾಗ್ನಿನಾಪಿ ಯತ್ ॥
ಏಕಂ ಚಮಸಮಿತ್ಯುಕ್ತೇ ಜ್ಯೇಷ್ಠ ಆಹೇತ್ಯಥೋ ದಿವಿ ।
ಉಕ್ತ್ವಾ ತತಶ್ಚಕ್ರುಶ್ಚಮಸಾನ್ ಯಥೋಕ್ತಂ ತೇನ ಹರ್ಷಿತಾಃ ॥

ತ್ವಷ್ಟಾ ಚ ಸವಿತಾ ಚೈವ ದೇವದೇವಃ ಪ್ರಜಾಪತಿಃ ।
ಸರ್ವಾನ್ದೇವಾನ್ ಸಮಾಮಂತ್ರ್ಯ ಅಮೃತತ್ವಂ ದದುಶ್ಚ ತೇ ॥
ತೇಷಾಮಾದ್ಯಾಂತ್ಯಯೋರ್ನಾಮ್ನಾ ದೃಶ್ಯತೇ ಬಹುವತ್ ಸ್ತವಃ ।
ತೃತೀಯೆಸವನೇ ತೇಷಾಂ ತೈಸ್ತು ಭಾಗಃ ಪ್ರಕಲ್ಪಿತಃ ॥
ಅಪಿಬತ್ಸೋಮಮಿಂದ್ರಶ್ಚ ತೈಸ್ತತ್ರ ಸವನೇ ಸಹ ।

(ಬೃ. ದೇ. ೩-೮೩ ರಿಂದ ೮೯)

ಪೂರ್ವದಲ್ಲಿ ಸುಧನ್ವಪುತ್ರರಾದ ಋಭು. ವಿಭ್ವ, ವಾಜ ಎಂಬ ಮೂವರೂ ಸಹ ತ್ವಷ್ಟೃವಿನ ಶಿಷ್ಯರಾದರು. ಸಕಲಕಲಾಕುಶಲನಾದ ತ್ವಷ್ಟೃವು ಅವರಿಗೂ ಸಹ ಎಲ್ಲಾ ಕಲೆಗಳನ್ನೂ ಕಲಿಸಿದನು. ಆಗ ಕಲೆಗಳಲ್ಲಿ ಕುಶಲರಾದ ವಿಶ್ವೇದೇವರು ಅವರನ್ನು ಪ್ರತಿಭಟನಾದೃಷ್ಟಿಯಿಂದ ಎದುರಿಸಿದರು. ಆಗ ಇವರು ಸಕಲದೇವತೆಗಳಿಗೂ ಸಹ ಆಯುಧಗಳನ್ನೂ ವಾಹನಗಳನ್ನೂ ನಿರ್ಮಿಸಿದರು. ಅನಂತರ ಅಮೃತದಾಯಿಯಾದ ಧೇನುವನ್ನು ಸೃಷ್ಟಿಸಿದರು. ಬೃಹಸ್ಪತಿ ಮತ್ತು ಅಶ್ವಿನೀದೇವತೆಗಳಿಗೆ ಆಸನತ್ರಯಗಳುಳ್ಳ ರಥಗಳನ್ನೂ ಇಂದ್ರನಿಗೆ ಅಶ್ವಗಳನ್ನೂ ಮತ್ತು ದೇವತೆಗಳಿಂದ ದೂತನಾಗಿ ಕಳುಹಲ್ಪಟ್ಟ ಅಗ್ನಿಗೆ ಯಥೋಕ್ತವಾದುದನ್ನೂ ಎಂದರೆ ಅವನು ಇಷ್ಟಪಟ್ಟಂತೆ ಒಂದಾದ ಚಮಸಪಾತ್ರೆಯನ್ನು ನಾಲ್ಕನ್ನಾಗಿಯೂ ಸಹ ಮಾಡಿಕೊಟ್ಟರು ಎಂದು ವಿವರಿಸಿದೆ.

ಚಮಸಂ—ಚಮಸಃ ಕಸ್ಮಾತ್ ? ಚಮಂತ್ಯಸ್ಮಿನ್ನಿತಿ । ಚಮಸಃ ಎಂಬ ಪದವು ಯಾವ ಧಾತುವಿನಿಂದ ನಿಷ್ಪನ್ನವಾಗಿದೆ ಎಂದು ಪ್ರಶ್ನೆಯನ್ನು ಹಾಕಿ ಅನಂತರ ಭಕ್ಷಣಾರ್ಥಕವಾದ ಚಮು ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ನಿರುಕ್ತಕಾರರು ನಿರ್ವಚನವನ್ನು ತೋರಿಸಿದ್ದಾರೆ. (ನಿ. ೧೮-೧೨).

### ವ್ಯಾಕರಣಪ್ರಕ್ರಿಯಾ

ಚತುರಃ—ಚತುರ್ ಶಬ್ದ ದ್ವಿತೀಯಾಬಹುವಚನಾಂತರೂಪ. ಚತುರಃ ಶಸಿ (ಪಾ. ಸೂ. ೬-೧-೧೬೭) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ಕೃಣೋತನ—ಕೃವಿ ಹಿಂಸಾಕರಣಯೋಶ್ಚ ಧಾತು. ಲೋಟ್ ಮಧ್ಯಮಪುರುಷಬಹುವಚನದಲ್ಲಿ ತಪ್ತನಪ್ತನಥನಾಶ್ಚ (ಪಾ. ಸೂ. ೭-೧-೪೫) ಎಂಬುದರಿಂದ ತನಬಾದೇಶ ಧಿನ್ವಿಕೃಣ್ವ್ಯೋರಚ (ಪಾ. ಸೂ. ೩-೧-೮೦) ಎಂಬುದರಿಂದ ಉ ವಿಕರಣ. ಧಾತುವಿಗೆ ಅಕಾರಾಂತಾದೇಶ. ಅತೋ ಲೋಪಃ ಎಂಬುದರಿಂದ ಅದಕ್ಕೆ ಲೋಪ. ಇದಿತೋ ನುಮ್ ಧಾತೋಃ ಎಂಬುದರಿಂದ ನುಮಾಗಮ ಪ್ರತ್ಯಯ ಪಿತ್ತಾದುದರಿಂದ ಸಾರ್ವಧಾತುಕಾರ್ಧ-(೭-೩-೮೪) ಎಂಬುದರಿಂದ ಉಕಾರಕ್ಕೆ ಗುಣ. ತಿಙಂತನಿಘಾತಸ್ವರ ಬರುತ್ತದೆ.

ಅಬ್ರುವನ್—ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು. ಲಙ್ ಪ್ರಥಮಪುರುಷಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಅಗಮಮ್—ಗಮ್ಲೃಗತೌ ಧಾತು. ಲುಙ್ ಉತ್ತಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಸೌಧನ್ವನಾಃ—ಸುಧನ್ವನಃ ಅಪತ್ಯಾನಿ ಪುಮಾಂಸಃ ಸೌಧನ್ವನಾಃ ತಸ್ಯಾಪತ್ಯಮ್ ಎಂಬುದರಿಂದ ಅಣ್ ಪ್ರತ್ಯಯ. ತದ್ಧಿತೇಷ್ವಚಾ—ಎಂಬುದರಿಂದ ಆದಿವೃದ್ಧಿ. ಸಂಬೋಧನಾಬಹುವಚನಾಂತರೂಪ. ಪಾದಾದಿಯಲ್ಲಿರುವುದರಿಂದ ಆಮಂತ್ರಿತನಿಘಾತಸ್ವರ ಬರುವುದಿಲ್ಲ. ಆಮಂತ್ರಿತಸ್ಯ (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಕರಿಷ್ಯಥ—ಡುಕೃಞ್ ಕರಣೇ ಧಾತು. ಲೃಟ್ ಮಧ್ಯಮಪುರುಷಬಹುವಚನದಲ್ಲಿ ಥ ಪ್ರತ್ಯಯ. ಸ್ಯತಾಸೀ ಲೃಲುಟೋಃ (ಪಾ. ಸೂ. ೩-೧-೩೩) ಎಂಬುದರಿಂದ ಸ್ಯವಿಕರಣ. ಅದಕ್ಕೆ ಇಡಾಗಮ. ಧಾತುವಿಗೆ ಗುಣ. ರಪರವಾಗಿ ಬರುತ್ತದೆ. ನಿಪಾತೈರ್ಯದ್ಯದಿ (ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಸ್ವರಪ್ರತಿಷೇಧ ಬರುತ್ತದೆ. ತಾಸ್ಯನುದಾತ್ತೇತ್ (ಪಾ. ಸೂ. ೬-೧-೧೮೬) ಎಂಬುದರಿಂದ ಥ ಎಂಬುದು ಅನುದಾತ್ತವಾಗುವುದರಿಂದ ವಿಕರಣಸ್ವರ ಬರುತ್ತದೆ.

ಯಜ್ಞಿಯಾಸಃ—ಯಜ್ಞಮರ್ಹಂತಿ ಇತಿ ಯಜ್ಞಿಯಾಸಃ ಯಜ್ಞರ್ತ್ವಿಗ್ಭ್ಯಾಂಘಖಞೌ (ಪಾ. ಸೂ. ೫-೧-೭೧) ಎಂಬುದರಿಂದ ಘ ಪ್ರತ್ಯಯ. ಆಯನೇಯೀನೀಯಿಯಃ—(ಪಾ. ಸೂ. ೭-೧) ಎಂಬುದರಿಂದ ಅದಕ್ಕೆ ಇಯಾದೇಶ. ಯಸ್ಯೇತಿಚ (ಪಾ. ಸೂ. ೬-೪-೧೪೮) ಎಂಬುದರಿಂದ ಅಕಾರಲೋಪ. ಜಸ್ ಪರವಾದಾಗ ಆಜ್ಜಸೇರಸುಕ್ (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ಭವಿಷ್ಯಥ—ಭೂ ಸತ್ತಾಯಾಂ ಧಾತು. ಲೃಟ್ ಮಧ್ಯಮಪುರುಷಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೨ ॥

———:o:———

ಸಂಹಿತಾಪಾಠಃ

ಅಗ್ನಿಂ ದೂತಂ ಪ್ರತಿ ಯದಬ್ರವೀತನಾಶ್ವಃ ಕರ್ತ್ವೋ ರಥ ಉತೇಹ
ಕರ್ತ್ವಃ ।
ಧೇನುಃ ಕರ್ತ್ವಾ ಯುವಶಾ ಕರ್ತ್ವಾ ದ್ವಾ ತಾನಿ ಭ್ರಾತರನು ವಃ ಕೃತ್ವ್ಯೇ-
ಮಸಿ ॥ ೩ ॥

ಪದಪಾಠಃ

ಅಗ್ನಿಂ । ದೂತಂ । ಪ್ರತಿ । ಯತ್ । ಅಬ್ರವೀತನ । ಅಶ್ವಃ । ಕರ್ತ್ವಃ । ರಥಃ । ಉತ । ಇಹ । ಕರ್ತ್ವಃ ।
ಧೇನುಃ । ಕರ್ತ್ವಾ । ಯುವಶಾ । ಕರ್ತ್ವಾ । ದ್ವಾ । ತಾನಿ । ಭ್ರಾತಃ । ಅನು । ವಃ । ಕೃತ್ವೀ । ಆ । ಇಮಸಿ ।
॥ ೩ ॥

ಸಾಯಣಭಾಷ್ಯಂ

ಹೇ ಆಗತ ದೇವ ಅಗ್ನಿಮಂಗನಾದಿಗುಣವಿಶಿಷ್ಟಂ ದೂತಂ ದೂತಕರ್ಮ ಪ್ರಾಪ್ತವಂತಂ ತ್ವಾಂ ಪ್ರತಿ ಯತ್ ಯತ್ಕಾರ್ಯಮಬ್ರವೀತನ । ಅಬ್ರುವನ್ ॥ ವ್ಯತ್ಯಯೇನ ಮಧ್ಯಮಃ । ಪೂರ್ವವತ್ತನಪ್ ॥ ಕಿಮಿತಿ ಅಶ್ವಃ ಕರ್ತ್ವಃ । ಏಕಸ್ಮಾದಶ್ವಾದಶ್ವಾಂತರಂ ಕರ್ತವ್ಯಮಿತ್ಯರ್ಥಃ । ಅಶ್ವಾದಶ್ವಮತಕ್ಷತೇತಿ ವಕ್ಷ್ಯಮಾಣತ್ವಾತ್ ॥ ಕೃತ್ಯಾರ್ಥೇ ತವೈಕೇನಿತಿ ತ್ವನ್ಪ್ರತ್ಯಯಃ ॥ ಉತಾಪಿ ಚ ರಥಃ ಕರ್ತ್ವಃ ಕರ್ತವ್ಯಃ। ಧೇನುಃ ಕರ್ತ್ವಾ । ಚರ್ಮರಹಿತಾ ಮೃತಾ ಗೌರ್ನಿತ್ಯದೋಗ್ಧ್ರೀ ಪುನರ್ನೂತನಾ ಕಾರ್ಯಾ । ತದುತ್ತರತ್ರ ನಿಶ್ಚರ್ಮಣೋ ಗಾಮರಿಣೀತ ಧೀತಿಭಿರಿತಿ ವಕ್ಷ್ಯಮಾಣತ್ವಾತ್ । ತಥಾ ದ್ವಾ ದ್ವೌ ಪಿತರೌ ಜೀರ್ಣೌ ಸಂತೌ ಪುನರ್ಯುವಶಾ ಯುವಾನೌ ಶಯಾನೌ ಪ್ರಕೃಷ್ಟಯೌವನೋಪೇತೌ ಕರ್ತ್ವಾ ಕರ್ತವ್ಯೌ । ಹೇ ಭ್ರಾತರಗ್ನೇ ಯುಷ್ಮಾಕಂ ದೇವಾನಾಂ ತೈರುಕ್ತಾನಿ ಕರ್ಮಾಣಿ ಕೃತ್ವಾನು ಪಶ್ಚಾತ್ಕೃತ್ವೀ ಕೃತ್ವಾಯ ಕರ್ಮಣೈಮಸಿ । ಏಮಃ । ಅಭಿಮುಖ್ಯೇನ ಪ್ರಾಪ್ನುಮಃ ॥ ಇಣ್ ಗತೌ । ಇದಂತೋ ಮಸಿಃ ॥ ಯದ್ವಾ । ಋಷೇರಿದಂ ವಾಕ್ಯಂ । ಹೇ ಋಭವಃ ಯೂಯಮಾಗತಮಗ್ನಿಂ ದೂತಂ ಪ್ರತಿ ಯದಬ್ರವೀತನ ಯತ್ಕಾರ್ಯಂ ವಕ್ಷ್ಯಮಾಣರೂಪಂ ಕರ್ತವ್ಯತ್ವೇನ ವದಥ ಅಂಗೀಕುರುಥ ತಾನಿ ಸರ್ವಾಣಿ ಸಂಪಾದ್ಯ ಹೇ ಭ್ರಾತರಗ್ನೇ ಕೃತ್ವಾಯ ಕರ್ಮಣೈಮಸೀತಿ ಬ್ರೂಥೇತ್ಯೃಷಿರಾಹ ॥

ಪ್ರತಿಪದಾರ್ಥ

ಭ್ರಾತಃ—ಸಹೋದರರೂಪನಾದ ಎಲೈ ಅಗ್ನಿಯೇ । ದೂತಂ—ದೂತನ ಕರ್ಮವನ್ನು ವಹಿಸಿರುವವನೂ । ಅಗ್ನಿಂ—ಅಂಗನಾದಿಗುಣವಿಶಿಷ್ಟನೂ ಆದ ನಿನ್ನನ್ನು ಕುರಿತು । ಯತ್—ಯಾವ ಕಾರ್ಯದ ವಿಷಯದಲ್ಲಿ । ಅಬ್ರವೀತನ—ಹೇಳಿದರು (ಕೆಳಗೆ ಹೇಳತಕ್ಕವುಗಳಲ್ಲಿ ಯಾವುದನ್ನು ಮಾಡಬೇಕೆಂದು ಹೇಳಿದ್ದಾರೆ?) | ಅಶ್ವಃ-ಕುದುರೆಯು। ಕರ್ತ್ವಃ-–ಮಾಡಲ್ಪಡಬೇಕೇ ? ಉತ—ಅಥವಾ । ಇಹ—ಪ್ರಕೃತದಲ್ಲಿ । ರಥಃ—ರಥವು । ಕರ್ತ್ವಃ—ಮಾಡಲ್ಪಡಬೇಕೇ ? ಧೇನುಃ—ಧೇನುವು । ಕರ್ತ್ವಾ—ಮಾಡಲ್ಪಡಬೇಕೇ ? ದ್ವಾ—ಮಾತಾಪಿತೃಗಳಿಬ್ಬರೂ ಸಹ । ಯುವಶಾ—ಯುವಕರಾಗಿ । ಕರ್ತ್ವಾ—ಮಾಡಲ್ಪಡಬೇಕೇ ? ತಾನಿ—ಈ ಎಲ್ಲಾ ಕಾರ್ಯಗಳನ್ನೂ ಮಾಡಿ । ಅನು-ಅನಂತರ । ವಃ—ನಿನುಗೆ ದೇವತೆಗಳು ಹೇಳಿರುವಂತೆ । ಕೃತ್ವೀ—(ನಿಮ್ಮ) ಕಾರ್ಯದಲ್ಲಿ । ಏಮಸಿ—ಉದ್ಯುಕ್ತರಾಗುವೆವು.

ಭಾವಾರ್ಥ

ಸಹೋದರ ರೂಪನಾದವನೂ, ದೂತನ ಕರ್ಮವನ್ನು ವಹಿಸಿರುವವನೂ, ಅಂಗನಾದಿಗುಣವಿಶಿಷ್ಟನೂ ಆದ ಎಲೈ ಅಗ್ನಿಯೇ, ಕೆಳಗೆ ಹೇಳಿರುವ ಕೆಲಸಗಳಲ್ಲಿ ಯಾವುದನ್ನು ಮಾಡಬೇಕೆಂದು ದೇವತೆಗಳು ನಿನ್ನಲ್ಲಿ ಹೇಳಿಕಳುಹಿದ್ದಾರೆ ? ಕುದುರೆಯು ಮಾಡಲ್ಪಡಬೇಕೆ ? ಅಥವಾ ಪ್ರಕೃತದಲ್ಲಿ ರಥವನ್ನು ನಿರ್ಮಿಸಬೇಕೇ ? ಮೃತವಾದ ಹಸುವಿಗೆ ಜೀವವನ್ನು ತುಂಬಿ ಅದನ್ನು ಶಾಶ್ವತವಾಗಿ ಕರೆಯುವ ಹಸುವನ್ನಾಗಿ ಮಾಡಬೇಕೇ ? ಅಥವಾ ವೃದ್ಧರಾದ ಮಾತಾಪಿತೃಗಳನ್ನು ಯುವಕರನ್ನಾಗಿ ಮಾಡಬೇಕೇ ? ಈ ಎಲ್ಲಾ ಕಾರ್ಯಗಳನ್ನೂ ಮಾಡಿದನಂತರ ನೀವು ಹೇಳಿದಂತೆ ಚಮಸಪಾತ್ರೆಯು ವೃದ್ಧಿಯಾಗುವಂತೆ ಎಂದರೆ ಒಂದಾಗಿರತಕ್ಕದ್ದನ್ನು ನಾಲ್ಕಾಗುವಂತೆ ಮಾಡುವೆವು.

## English Translation

Then said they, in answer to Agni, the messenger (of the gods)—Whatever is to be done, whether a horse is to be made, or a car is to be made, or a cow is to be made, or the two (old parents) are to be made young,—having done all these (acts), Brother Agni, we are then ready to do (what you desire) to be done.

### ವಿಶೇಷವಿಷಯಗಳು

ಈ ಋಕ್ಕಿಗೆ ನಿಷ್ಕೃಷ್ಟವಾಗಿ ಅರ್ಥವನ್ನು ಹೇಳಲು ಸಾಯಣರಿಂದಲೇ ಆಗಿಲ್ಲ. ಅವರೂ ಸಹ ಎರಡು ವಿಧವಾಗಿ ಅರ್ಥಮಾಡಿದ್ದಾರೆ. ಮೊದಲನೆಯದಾಗಿ ಋಭುಗಳು ಅಗ್ನಿಯನ್ನು ಕುರಿತು ಹೇಳಿದಂತೆಯೂ, ಎರಡನೆಯದಾಗಿ ಸೂಕ್ತದ್ರಷ್ಟೃವಾದ ಋಷಿಯು ಋಭುಗಳನ್ನೇ ಕುರಿತು ಹೇಳಿದಂತೆಯೂ ಅನ್ವಯವನ್ನು ಮಾಡಿ ಅರ್ಥವನ್ನು ವಿವರಿಸಿದೆ. ಮೊದಲನೆಯ ಅನ್ವಯದ ಪ್ರಕಾರ ಅರ್ಥವನ್ನು ಪ್ರತಿಪದಾರ್ಥದಲ್ಲಿ ಹೇಳಿದೆ. ಎರಡನೆಯ ಅನ್ವಯದ ಪ್ರಕಾರ, ಹೇ ಋಭವಃ ಯೂಯಮಾಗತಮಗ್ನಿಂ ದೂತಂ ಪ್ರತಿ ಯದಬ್ರವೀತನ ಯತ್ಕಾರ್ಯಂ ವಕ್ಷ್ಯಮಾಣ-ರೂಪಂ ಕರ್ತವ್ಯತ್ವೇನ ವದಥ ತಾನಿ ಸರ್ವಾಣಿ ಸಂಪಾದ್ಯ ಹೇ ಭ್ರಾತರಗ್ನೇ ಕೃತ್ವಾ ಕರ್ಮಣ್ಯೈಮಸೀತಿ ಬ್ರೂಥೇತ್ಯೃಷಿರಾಹ । ಎಲೈ ಋಭುಗಳೇ, ನಿಮ್ಮಲ್ಲಿಗೆ ದೇವದೂತನಾಗಿ ಬಂದಿರುವ ಅಗ್ನಿಯನ್ನು ನೀವು ಹೇಳುವ ಯಾವ ಕಾರ್ಯವನ್ನು ಮಾಡಬೇಕೆಂದು ಕೇಳಿರಿ. ಅವುಗಳನ್ನೂ ಮಾಡಿ ಅನಂತರ ಎಲೈ ಭ್ರಾತೃರೂಪನಾದ ಅಗ್ನಿಯೇ, ನೀನು ಹೇಳಿರುವ ಕರ್ತವ್ಯದಲ್ಲಿ ಸಿದ್ಧರಾಗಿದ್ದೇವೆಂದು ತಿಳಿಸಿರಿ ಎಂದು ಋಷಿಯು ಋಭುಗಳನ್ನು ಕುರಿತು ಹೇಳಿದ ವಾಕ್ಯವಿದೆಂದು ವಿವರಿಸಿದೆ.

ಇಲ್ಲಿ ಋಭುಗಳ ಕಲಾಕೌಶಲ್ಯವನ್ನೂ ಅವರ ಪಿತೃಭಕ್ತಿಯನ್ನೂ ವರ್ಣಿಸಿದೆ. ಈ ಗುಣಗಳಿಂದ ಋಭುಗಳು ಅತ್ಯಂತ ಪ್ರಸಿದ್ಧರಾದುದರಿಂದ ವಿಶ್ವಾಮಿತ್ರ, ವಾಮದೇವ ಇತ್ಯಾದಿ ಋಷಿಗಳಿಂದ ದೃಷ್ಟವಾದ ಸೂಕ್ತಗಳಲ್ಲೆಲ್ಲಾ ಈ ವಿಧವಾದ ವರ್ಣನೆಯಿರುವುದು.

ಯೇ ಅಶ್ವಿನಾ ಯೇ ಪಿತರಾ ಯ ಊತೀ ಧೇನುಂ ತತಕ್ಷುರ್ಋಭವೋ ಯೇ ಅಶ್ವಾ ।
ಯೇ ಅಂಸತ್ರಾ ಯ ಋಧಗ್ರೋದಸೀ ಯೇ ವಿಭ್ವೋ ನರಃ ಸ್ವಪತ್ಯಾನಿ ಚಕ್ರುಃ ॥
(ಋ. ಸಂ. ೪-೩೪-೯)

ಅಶ್ವಿನೀದೇವತೆಗಳು ನಿಮ್ಮ ರಥನಿರ್ಮಾಣ ಕ್ರಿಯೆಯಿಂದ ಸಂತುಷ್ಟರಾದರು. ನಿಮ್ಮ ಪಿತೃಗಳು ಅವರ ವಾರ್ಧಕ್ಯವನ್ನು ನಾಶಮಾಡಿ ಅವರನ್ನು ಯುವಕರನ್ನಾಗಿ ಮಾಡಿದುದರಿಂದ ಸಂತುಷ್ಟರಾದರು. ಮೃತಿಯನ್ನು ಹೊಂದಿದವನ್ನು ಗೋವನ್ನು ಕ್ಷೀರದಾಯಿಯಾಗಿ ಮಾಡಿದಿರಿ—ಇತ್ಯಾದಿಯಾಗಿ ಋಭುಗಳ ಶಕ್ತಿಯನ್ನು ಸ್ತುತಿಸಿದೆ. ಅಲ್ಲದೆ,

ಅನವಸ್ತೇ ರಥಮಶ್ವಾಯ ತಕ್ಷನ್ ತ್ವಷ್ಟಾ ವಜ್ರಂ ಪುರುಹೂತ ದ್ಯುಮಂತಂ ॥
(ಋ. ಸಂ. ೫-೩೧-೪)

ಎಲೈ ಇಂದ್ರನೇ, ನಿನ್ನ ಶ್ರೇಷ್ಠವಾದ ರಥವನ್ನು ಋಭುಗಳು ನಿರ್ಮಿಸಿದರು ಇತ್ಯಾದಿಯಾಗಿ ಅವರ ರಥನಿರ್ಮಾಣ ಕೌಶಲ್ಯವನ್ನು ಸ್ತುತಿಸಿದೆ.

ಅಶ್ವಃ ಕರ್ತ್ವಃ—ಎನ್ನುವಾಗ ಒಂದು ವಿಶೇಷವಿದೆ. ಮುಂದೆ ಆಶ್ವಾದಶ್ವಮತಕ್ಷತ ಒಂದು ಕುದುರೆಯಿಂದ ಇನ್ನೂ ಬೇರೆ ಅಶ್ವವನ್ನು ಸೃಷ್ಟಿಸಿದರು ಎಂದು ವಿವರಿಸಿದೆ ಇದು ಅಲೌಕಿಕವಾದ ಶಕ್ತಿ.

ಧೇನುಃ ಕರ್ತ್ವಾ—ಚರ್ಮರಹಿತವಾದುದೂ ಮೃತಿಯನ್ನು ಹೊಂದಿದುದೂ ಆದ ಗೋವನ್ನು ಕ್ಷೀರದಾಯಿಯಾದ ಧೇನುವಾಗುವಂತೆ ಮಾಡಿದಿರಿ ಎಂದು ನಿಶ್ಚರ್ಮಣೋ ಗಾಮರಿಣೀತ (೧-೧೬೧-೭) ಎಂಬ ಮುಂದಿನ ಮಂತ್ರದಲ್ಲಿ ವಿವರಿಸಿರುವುದನ್ನು ಇಲ್ಲಿ ಸೂಚಿಸಿದೆ.

ವ್ಯಾಕರಣಪ್ರಕ್ರಿಯಾ

ಅಗ್ನಿಮ್—ಅಗಿ ಗತೌ ಧಾತು. ಅಂಗೇರ್ನಲೋಪಶ್ಚ (ಪಾ. ಸೂ. ೪೯೦) ಎಂಬುದರಿಂದ ನಿ ಪ್ರತ್ಯಯ. ನುಮಿನ ನಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಅಬ್ರವೀತನ—ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು. ಲಙ್ ಪ್ರಥಮಪುರುಷಬಹುವಚನದಲ್ಲಿ ವ್ಯತ್ಯಯೋಬಹುಲಮ್ (ಪಾ. ಸೂ. ೩-೧-೮೫) ಎಂಬುದರಿಂದ ಮಧ್ಯಮಪುರುಷಬಹುವಚನಪ್ರತ್ಯಯ ಬರುತ್ತದೆ. ತಪ್ತನಪ್ತನ—(ಪಾ. ಸೂ. ೭-೧-೪೫) ಎಂಬುದರಿಂದ ಅದಕ್ಕೆ ತನಾದೇಶ. ಬ್ರುವಈಟ್ (ಪಾ. ಸೂ. ೭-೩-೯೩) ಎಂಬುದರಿಂದ ಅದಕ್ಕೆ ಈಡಾಗಮ. ಪ್ರತ್ಯಯ ಪಿತ್ತಾದುದರಿಂದ ಧಾತುವಿನ ಉಕಾರಕ್ಕೆ ಗುಣ. ಅವಾದೇಶ. ಅಂಗಕ್ಕೆ ಅಡಾಗಮ. ಯದ್ವೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

ಕರ್ತ್ವಃ—ಡುಕೃಞ್‌ಕರಣೇ ಧಾತು. ಕೃತ್ಯಾರ್ಥೇತವೈಕೇನ್—(ಪಾ. ಸೂ. ೩-೪-೧೪) ಎಂಬುದರಿಂದ ತ್ವನ್ ಪ್ರತ್ಯಯ. ಸಾರ್ವಧಾತುಕಾರ್ಧ—ಎಂಬುದರಿಂದ ಗುಣ. ಞ್ನಿತ್ಯಾದಿರ್ನಿತ್ಯಮ್ (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಕರ್ತ್ವಾ ಎಂಬಲ್ಲಿ ಸ್ತ್ರೀತ್ವಶೋರುವಾಗ ಅದಂತವಾದುದರಿಂದ ಟಾಪ್.

ಯುವಶಾ—ಶೀಙ್ ಸ್ವಪ್ನೇ ಧಾತು. ಡ ಪ್ರತ್ಯಯ. ಡಿತ್ತಾದುದರಿಂದ ಟಿಗೆ (ಇಕಾರ) ಲೋಪ. ಸಮಾಸಾಂತೋದಾತ್ತಸ್ವರ ಬರುತ್ತದೆ. ಸುಪಾಂ ಸುಲುಕ್ (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ (ಔ) ಆಕಾರಾದೇಶ. ದ್ವಾ ಎಂಬಲ್ಲಿಯೂ ಹೀಗೆ ಆಕಾರಾದೇಶ.

ಕೃತ್ವೀ—ಸುಪಾಂ ಸುಲುಕ್—ಎಂಬುದರಿಂದ ತೃತೀಯಾವಚನ ಪರವಾದಾಗ ಪೂರ್ವಸವರ್ಣದೀರ್ಘ.

ಇಮಸಿ—ಇಣ್ ಗತೌ ಧಾತು. ಲಟ್ ಉತ್ತಮಪುರುಷಬಹುವಚನದಲ್ಲಿ ಮಸ್ ಪ್ರತ್ಯಯ. ವಿಕರಣಕ್ಕೆ ಲುಕ್. ಇದಂತೋಮಸಿ (ಪಾ. ಸೂ. ೭-೧-೪೬) ಎಂಬುದರಿಂದ ಇಕಾಗಮ. ಪ್ರತ್ಯಯಕ್ಕೆ ಙಿತ್ವಾತಿದೇಶವಿರುವುದರಿಂದ ಧಾತುವಿಗೆ ಗುಣ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. || ೩ ||

———:೦:———

ಸಂಹಿತಾಪಾಠಃ

ಚಕೃವಾಂಸ ಋಭವಸ್ತದಪೃಚ್ಛತ ಕ್ವೇದಭೂದ್ಯಃ ಸ್ಯ ದೂತೋ ನ ಆಜಗನ್ ।
ಯದಾವಾಖ್ಯಚ್ಚಮಸಾಞ್ಚತುರಃ ಕೃತಾನಾದಿತ್ತ್ವಷ್ಟಾ ಗ್ನಾಸ್ವಂತರ್ನ್ಯಾನಜೇ ॥ ೪ ॥

ಪದಪಾಠಃ

ಚಕೃವಾಂಸಃ । ಋಭವಃ । ತತ್ । ಅಪೃಚ್ಛತ । ಕ್ವ । ಇತ್ । ಅಭೂತ್ । ಯಃ । ಸ್ಯಃ । ದೂತಃ । ನಃ । ಆ । ಅಜಗನ್ ।
ಯದಾ । ಅವಽಅಖ್ಯತ್ । ಚಮಸಾನ್ । ಚತುರಃ । ಕೃತಾನ್ । ಆತ್ । ಇತ್ । ತ್ವಷ್ಟಾ । ಗ್ನಾಸು । ಅಂತಃ । ನಿ । ಆನಜೇ ॥ ೪ ॥

ಸಾಯಣಭಾಷ್ಯಂ

ಹೇ ಋಭವಃ ತತ್ಕಾರ್ಯಂ ಯಥಾ ಚಕೃವಾಂಸಃ ಕೃತವಂತೋ ಯೂಯಮಪೃಚ್ಛತ । ಪ್ರಶ್ನಂ ಕುರುತ ॥ ಕರೋತೇರ್ಲಿಟಃ ಕ್ವಸುಃ ॥ ಅತ್ರ ಯದ್ಯಪ್ಯೃಭುರಿತಿ ತ್ರಯಾಣಾಂ ಮಧ್ಯ ಏಕಸ್ಯ ನಾಮ ತಥಾಪಿ ತಸ್ಯ ಪ್ರಾಥಮ್ಯಾಚ್ಛತ್ರಿಣೋ ಗಚ್ಛಂತೀತಿವತ್ಸರ್ವೇಽಪ್ಯೃಭವ ಉಚ್ಯಂತೇ । ಕಿಮಿತಿ । ಸ್ಯಃ ಸ ದೂತಃ ಕ್ವೇದಭೂತ್ । ಕುತ್ರ ಗತಃ । ಸ ಇತ್ಯುಕ್ತಂ ಕ ಇತ್ಯಾಹ । ಯಃ ಯೋ ದೂತೋ ನೋಽಸ್ಮಾನಾಜಗನ್ ಆಗಮತ್ ಪ್ರಾಪ್ತಃ । ಏವಂಭೂತೇ ಸತಿ ಯದಾಯಂ ತ್ವಷ್ಟಾ ಚತುರಃ ಕೃತಾಂಶ್ಚಮಸಾನವಾಖ್ಯತ್ ಅಭಿಪಶ್ಯತಿ ॥ ಖ್ಯಾತೇರ್ಲುಙ್ಯಸ್ಯತಿವಕ್ತಿಖ್ಯಾತೀತಿ ಚ್ಲೇರಙಾದೇಶಃ ॥ ಆದಿದನಂತರಮೇವ ತ್ವಷ್ಟಾ ತಸ್ಯ ಚಮಸಸ್ಯೋತ್ಪಾದಕ ಏತನ್ನಾಮಕೋ ದೇವೋ ಗ್ನಾಸು ಸ್ತ್ರೀಷು । ಮೇನಾ ಗ್ನಾ ಇತಿ ಸ್ತ್ರೀಣಾಮಿತಿ ನಿರುಕ್ತಂ । ೩-೨೧ । ಅಂತರ್ಮಧ್ಯೇ ನ್ಯಾನಜೇ । ನ್ಯಕ್ತೋಽಭೂತ್ । ಸ್ತ್ರಿಯಮಾತ್ಮನಮಮನ್ಯತೇತ್ಯರ್ಥಃ॥ ಅಂಜೇರ್ಲಿಟಿ ತಸ್ಮಾನ್ನುಡ್ದ್ವಿಹಲ ಇತಿ ನುಟ್ । ಛಾಂದಸೋಽನುನಾಸಿಕಲೋಪಃ ॥.

ಪ್ರತಿಪದಾರ್ಥ

ಋಭವಃ—ಎಲೈ ಋಭುಗಳೇ । ತತ್—ನಿರ್ದಿಷ್ಟವಾದ ಕಾರ್ಯವನ್ನು । ಚಕೃವಾಂಸಃ—ಮಾಡಿದವರಾಗಿ (ಮಾಡಿದನಂತರ) ಯಃ—ಯಾವ ದೂತನು। ನಃ—ನಮ್ಮಲ್ಲಿಗೆ । ಆ ಅಜಗನ್—ಬಂದಿದ್ದನೋ। ಸ್ಯಃ ದೂತಃ—ನಮ್ಮ ಮುಂದೆ ಪ್ರತ್ಯಕ್ಷನಾಗಿದ್ದ ಆ ದೂತನು । ಕ್ವೇದಭೂತ್—ಎಲ್ಲಿ ಹೋದನು ? (ಎಂಬುದಾಗಿ) । ಅಪೃಚ್ಛತ—ಕೇಳಿದಿರಿ । ಯದಾ—ಯಾವಾಗ । ಚತುರಃ ಕೃತಾನ್—ನಾಲ್ಕರಷ್ಟು ಮಾಡಲ್ಪಟ್ಟ । ಚಮಸಾನ್—ಚಮಸ

ಪಾತ್ರೆಗಳನ್ನು | ಅವಾಖ್ಯತ್—ನೋಡಿದನೋ | ಆದಿತ್—ಆ ಒಡನೆಯೇ | ತ್ವಷ್ಟಾ—(ನಿಮ್ಮ ಶಿಕ್ಷಕನಾದ) ತ್ವಷ್ಟೃವು | ಗ್ನಾಸು ಅಂತಃ—ಸ್ತ್ರೀಯರ ನಡುವೆ | ನ್ಯಾನಜೇ—ಅಂತರ್ಹಿತನಾದನು.

ಭಾವಾರ್ಥ

ಎಲೈ ಋಭುಗಳೇ, ನಿಮ್ಮ ನಿರ್ದಿಷ್ಟವಾದ ಕಾರ್ಯವನ್ನು ಮಾಡಿದನಂತರ ನಿಮ್ಮಲ್ಲಿಗೆ ದೂತನಾಗಿ ಬಂದಿದ್ದ ಅಗ್ನಿಯು ಎಲ್ಲಿ ಹೋದನು ಎಂದು ಪ್ರಶ್ನಿಸಿದಿರಿ. ನೀವು ಒಂದಾಗಿದ್ದ ಚಮಸಪಾತ್ರೆಯನ್ನು ನಾಲ್ಕನ್ನಾಗಿ ಮಾಡಿದೊಡನೆಯೇ ನಿಮ್ಮ ಶಿಕ್ಷಕನಾದ ತ್ವಷ್ಟೃವು ಸ್ತ್ರೀಯರ ನಡುವೆ ಅಂತರ್ಹಿತನಾದನು.

## English Translation

So doing, Ribhus, you inquired—Where, indeed, is he who came to us as a messenger ? when Twashtri observed the one ladle become four, he was immediately lost amongst the women.

ವಿಶೇಷವಿಷಯಗಳು

ಗ್ನಾಸ್ವಂತರ್ನ್ಯಾನಜೇ - ಗ್ನಾಸು ಅಂತಃ ನ್ಯಾನಜೇ | ಸ್ತ್ರೀಯರ ನಡುವೆ ಅಂತರ್ಹಿತನಾದನು ಎಂದರೆ ಸ್ತ್ರೀಯೆಮಾತ್ಮಾನಮನ್ವ್ಯತ ತನ್ನನ್ನೂ ಸಹ ಸ್ತ್ರೀಯರಲ್ಲಿ ಒಬ್ಬಳನ್ನಾಗಿ ತಿಳಿದನು ಎಂದು ಸಾಯಣರು ವಿವರಿಸಿದ್ದಾರೆ. ಆದರೆ ತ್ವಷ್ಟೃವು ಸ್ತ್ರೀರೂಪವನ್ನು ಹೊಂದಿದುದಾಗಲಿ ಅಥವಾ ಸ್ತ್ರೀಯ ಗುಣವನ್ನು ಹೊಂದಿದುದಾಗಲಿ ಎಲ್ಲಿಯೂ ವರ್ಣಿತವಾಗಿಲ್ಲ. ಸ್ತ್ರೀಯರ ಜೊತೆಯಲ್ಲಿ ವಿಹರಿಸುತ್ತಿದ್ದುದು ಮಾತ್ರ ವರ್ಣಿತವಾಗಿದೆ.

ಉತ ಸ್ಯ ದೇವೋ ಭುವನಸ್ಯ ಸಕ್ಷಣಿಸ್ತ್ವಷ್ಟಾ ಗ್ನಾಭಿಃ ಸಜೋಷಾ ಜೂಜುವದ್ರಥಂ |

(ಋ. ಸಂ. ೨-೩೧-೪)

ರುದ್ರೋ ರುದ್ರೇಭಿರ್ದೇವೋ ಮೃಳಯಾತಿ ನಸ್ತ್ವಷ್ಟಾ ನೋ ಗ್ನಾಭಿಃ ಸುವಿತಾಯ ಜಿನ್ವತು |

(ಋ. ಸಂ. ೧೦-೬೬-೩)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ತ್ವಷ್ಟೃವು ದೇವಪತ್ನಿಯರ ಸಾಹಚರ್ಯವನ್ನು ಯಾವಾಗಲೂ ಇಟ್ಟುಕೊಂಡಿದ್ದನೆಂದು ತಿಳಿಯುತ್ತದೆ. ಹೀಗೆಯೇ ಋ ಸಂ ೧-೨೨-೯, ೨-೩೬-೩, ೬-೫೦-೧೩. ೭-೩೫-೬, ೧೦-೬೪-೧೦ ಇತ್ಯಾದಿ ಋಕ್ಕುಗಳಲ್ಲೂ ಸಹ ಈ ಅಂಶವು ಸ್ಪಷ್ಟವಾಗಿದೆ. ಈ ವರ್ಣನೆಯಿಂದ ತ್ವಷ್ಟೃವಿನ ನಿರ್ಮಾಣಕಾರ್ಯವೆಲ್ಲಾ ಸ್ತ್ರೀಯರ ಗರ್ಭದ ಮೂಲಕವೇ ನೆರವೇರುತ್ತಿತ್ತೆಂದು Roth ಎಂಬ ಪಂಡಿತನು ಊಹಿಸುತ್ತಾನೆ.

"This, according to professor Roth, S.V., results from the fact that it is in the wombs of females that his creative action is principally manifested."

[O. S. T. Vol. V. P. 229].

ಈ ಊಹೆಗೂ ಸಹ ಕೆಲವು ವಾಕ್ಯಗಳಿಂದ ಸಮರ್ಥನೆಯು ಸಿಕ್ಕುತ್ತದೆ.

ವಿಷ್ಣುರ್ಯೋನಿಂ ಕಲ್ಪಯತು ತ್ವಷ್ಟಾ ರೂಪಾಣಿ ಪಿಂಶತು ।
ಆ ಸಿಂಚತು ಪ್ರಜಾಪತಿರ್ಧಾತಾ ಗರ್ಭಂ ದಧಾತು ತೇ ॥

(ಋ. ಸಂ. ೧೦-೧೮೪-೧)

ಇತ್ಯಾದಿ ಋಕ್ಸಂಹಿತಾವಾಕ್ಯಗಳಲ್ಲೂ,

ಅಥ ತ್ವಷ್ಟಾರಂ ಯಜತಿ । ತ್ವಷ್ಟಾ ವೈ ಸಿಕ್ತಂ ರೇತೋ ವಿಕರೋತಿ ।

(ಶ. ಬ್ರಾ. ೧-೯-೨-೧೦)

ಇತ್ಯಾದಿ ಬ್ರಾಹ್ಮಣವಾಕ್ಯಗಳಲ್ಲೂ ಸಹ ಯೋನಿಯಲ್ಲಿ ಸಿಕ್ತವಾದ ರೇತಸ್ಸಿನ ಮೂಲಕ ತ್ವಷ್ಟೃವು ತನ್ನ ಸಕಲವಿಧವಾದ ಸೃಷ್ಟಿಯನ್ನೂ ಮಾಡುತ್ತಾನೆಂದು ಇವನ ಕಾರ್ಯಕ್ಕೆ ಯಾವಾಗಲೂ ಸ್ತ್ರೀಸಹಾಯದ ಆವಶ್ಯಕತೆಯನ್ನು ತಿಳಿಸಿದೆ. ಅಲ್ಲದೆ ಇವನ ಸಕಲವಿಧವಾದ ಸೃಷ್ಟಿಯಲ್ಲಿಯೂ ಸಹ ಸ್ತ್ರೀಸೌಂದರ್ಯವು ವ್ಯಕ್ತವಾಗುವುದರಿಂದಲೂ ಸಹ ಗ್ನಾಸ್ವಂತರ್ನ್ಯಾನಜೇ ಎಂದು ಆ ಅಂಶವನ್ನು ವರ್ಣಿಸಿದೆ.

ಗ್ನಾಸು—ಈ ಪದವು ಮೇನಾ ಗ್ನಾ ಎಂದು ಸ್ತ್ರೀ ನಾಮಗಳಲ್ಲಿ ಪಠಿತವಾಗಿದೆ. ಗ್ನಾ ಗಚ್ಛಂತ್ಯೇನಾಃ । ಪುರುಷರು ಇವರಲ್ಲಿಗೆ ಹೋಗುತ್ತಾರೆ. ಆದುದರಿಂದ ಸ್ತ್ರೀಯರಿಗೆ ಗ್ನಾ ಎಂಬ ಹೆಸರು ಎಂದು ನಿರುಕ್ತಕಾರರು ಈ ಪದಕ್ಕೆ ನಿರ್ವಚನವನ್ನು ತೋರಿಸಿದ್ದಾರೆ. (ನಿ. ೩-೨೧).

ಶ್ಲೋಕಃ, ಧಾರಾ ಇತ್ಯಾದಿ ವಾಙ್ನಾಮಗಳಲ್ಲೂ ಸಹ ಈ ಪದವು ಪಠಿತವಾಗಿದೆ. (೨-೩). ಆದ.ದರಿಂದ ಗ್ನಾಸ್ವಂತರ್ನ್ಯಾನಜೇ ಎಂಬ ವಾಕ್ಯವನ್ನು ಇನ್ನೊಂದು ವಿಧದಲ್ಲೂ ಅರ್ಥಮಾಡಬಹುದು.

ತ್ವಷ್ಟಾರಂ ಯಜತಿ ವಾಗ್ವೈ ತ್ವಷ್ಟಾ ವಾಗ್ಘೀದಂ ಸರ್ವಂ ತಾಷ್ಟೀವ ವಾಚಮೇವ ತತ್ಪ್ರೀಣಾತಿ ವಾಚಂ ಯಜಮಾನೇ ದಧಾತಿ ॥

(ಐ. ಬ್ರಾ. ೨-೪)

ಇತ್ಯಾದಿ ವಾಕ್ಯಗಳಲ್ಲಿ ವಾಕ್ಕಿಗೂ ತ್ವಷ್ಟೃವಿಗೂ ತಾದಾತ್ಮ್ಯವನ್ನು ಹೇಳಿರುವುದರಿಂದಲೂ ಅಲ್ಪವಾದದ್ದನ್ನೂ ವಿಸ್ತೃತವಾಗಿರುವಂತೆಯೂ ವಿಸ್ತೃತವಾದುದನ್ನೂ ಅಲ್ಪವಾಗಿರುವಂತೆಯೂ (ಮಹಾಂತೋಽಪಿ ಪರ್ವತಾನಯಃ ಅಲ್ಪೇನೈವ ಶಬ್ದೇನ ಗೃಹ್ಯಂತೇ ತದೇತಜ್ಜಗತ್ತಷ್ಟಮಿವ ಭವತಿ, ಸಾ. ಭಾ.) ವರ್ಣಿಸಲು ಶಕ್ತವಾಗಿ ಇಷ್ಟಬಂದಂತೆ ಸೃಷ್ಟಿಮಾಡುವ ಸಾಮರ್ಥ್ಯವುಳ್ಳವನಾಗಿರುವುದರಿಂದಲೂ ಈ ಹೆಸರು ಪ್ರಸಿದ್ಧವಾಗಿದೆಯೆಂದು ತಿಳಿಸಿದೆ. ಆ ಅರ್ಥ ವನ್ನಿಟ್ಟುಕೊಂಡರೆ ಸೃಷ್ಟಿಸಾಮರ್ಥ್ಯವುಳ್ಳ ವಾಕ್ಕಿನೊಳಗೆ ಅಂತರ್ಹಿತನಾದನೆಂದು ಹೇಳಿದರೂ ಹೇಳಬಹುದು.

ತ್ವಷ್ಟಾ—ತಸ್ಯ ಚಮಸಸ್ಯೋತ್ಪಾದಕ ಏತನ್ನಾಮಕೋ ದೇವಃ । ಚಮಸಪಾತ್ರೆಯ ನಿರ್ಮಾತೃವಾದ ಈ ಹೆಸರಿನ ದೇವತೆ. ಈ ದೇವತೆಯ ಸ್ವರೂಪ, ಮಹಿಮೆ ಇವುಗಳನ್ನು ಮುಂದಿನ ಸೂಕ್ತದ ಎಂದರೆ ೧-೧೬೨-೩ ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ವಿವರಿಸಿದೆ.

ಋಭವಃ—ಅತ್ರ ಯದ್ಯಪ್ಯೃಭುರಿತಿ ತ್ರಯಾಣಾಂ ಮಧ್ಯೇ ಏಕಸ್ಯ ನಾಮ ತಥಾಪಿ ತಸ್ಯ ಪ್ರಾಥಮ್ಯಾತ್ಸರ್ವೇಽಪಿ ಋಭವ ಉಚ್ಯಂತೇ. । ಋಭು, ವಿಭ್ವ, ವಾಜ ಎಂಬ ಮೂವರಲ್ಲಿ ಋಭುವು ಒಬ್ಬನಾದರೂ ಸಹ ಈ ಪದದಿಂದಲೇ ಮೂವರ ಹೆಸರೂ ಸೂಚಿತವಾಗಿದೆಯೆಂದು ತಿಳಿಸಿದೆ.

ಋಭವಃ ಉರು ಭಾಂತೀತಿ ವಾ, ಋತೇನ ಭಾಂತೀತಿ ವಾ, ಋತೇನ ಭವಂತೀತಿ ವಾ

(ನಿ. ೧೧-೧೫)

ಅತಿ ವಿಸ್ತೃತವಾಗಿ ಪ್ರಕಾಶಿಸುತ್ತಾರೆ ಎಂಬುದರಿಂದಾಗಲಿ, ಶ್ರೇಷ್ಠವಾದ ಯಾಗಾದಿಕರ್ಮಗಳೊಡನೆ ಪ್ರಕಾಶಿಸುತ್ತಾರೆ ಎಂಬುದರಿಂದಾಗಲಿ, ಇಂತಹ ಶ್ರೇಷ್ಠವಾದ ಕರ್ಮಗಳೊಡನೆ ಇರುತ್ತಾರೆ ಎಂಬುದರಿಂದಾಗಲಿ ಈ ಹೆಸರು ಪ್ರಸಿದ್ಧ ವಾಗಿದೆಯೆಂದು ನಿರುಕ್ತಕಾರರು,

ವಿಷ್ಟ್ವೀ ಶಮೀ ತರಣಿತ್ವೇನ ವಾಘತೋ ಮರ್ತಾಸಃ ಸಂತೋ ಅಮೃತತ್ವಮಾನಶುಃ ।
ಸೌಧನ್ವನಾ ಋಭವಃ ಸೂರಚಕ್ಷಸಃ ಸಂವತ್ಸರೇ ಸಮಪೃಚ್ಯಂತ ಧೀತಿಭಿಃ ॥

(ಋ. ಸಂ, ೧-೧೧೦-೪)

ಎಂಬ ಋಕ್ಕನ್ನುದಹರಿಸಿ, ಋತ್ವಿಕ್ಕುಗಳೊಡಗೂಡಿಕೊಂಡು ಋಭುಗಳು ಯಾಗಾದಿ ಕರ್ಮಗಳನ್ನು ಅತಿ ಶೀಘ್ರವಾಗಿ ನೆರವೇರಿಸಿ ಮಾನವರಾಗಿದ್ದರೂ ಸಹ ಮರಣರಹಿತವಾದ ದೇವತ್ವವನ್ನು ತಮ್ಮ ಕರ್ಮಗಳಿಂದ ಪಡೆದರು. ಅನಂತರ ಸುಧನ್ವಪುತ್ರರೂ, ಸೂರ್ಯನಿಗೆ ಸಮಾನವಾದ ಪ್ರಕಾಶವುಳ್ಳವರೂ ಆದ ಋಭುಗಳು ಸಂವತ್ಸರದ ಅವಯವಗಳಾದ ವಸಂತಾದಿ ಋತುಕಾಲಗಳಲ್ಲಿ ಅನುಷ್ಠಿಸಬೇಕಾದ ಅಗ್ನಿಷ್ಟೋಮಾದಿ ಕರ್ಮಗಳೊಡನೆ ಒಂದಾಗಿ ಸೇರಿಕೊಂಡು ಹವಿಸ್ಸನ್ನು ಸ್ವೀಕಾರಮಾಡಲು ಅರ್ಹರಾದರು ಎಂದು ಅವರ ಮಹಿಮೆಯನ್ನು ವರ್ಣಿಸಿ ಋಭುರ್ವಿಭ್ವಾವಾಜ ಇತಿ ಸುಧನ್ವನ ಆಂಗಿರಸಸ್ಯ ತ್ರಯಃ ಪುತ್ರಾ ಬಭೂವುಃ । ಎಂಬು ಅವರ ಚರಿತ್ರೆಯನ್ನು ವಿವರಿಸಿದ್ದಾರೆ. ಈ ವಿವರಣೆಯನ್ನು ಹಿಂದೆ ಹೇಳಿದೆ.

॥ ವ್ಯಾಕರಣಪ್ರಕ್ರಿಯಾ ।

ಚಕೃವಾಂಸಃ—ಡುಕೃಞ್ ಕರಣೇ ಧಾತು. ಕ್ವಸುಶ್ಚ।(ಪಾ. ಸೂ. ೩-೨-೧೦೭) ಎಂಬುದರಿಂದ ಲಿಟಿಗೆ ಕ್ವಸುರಾದೇಶ. ಧಾತುವಿಗೆ ದ್ವಿತ್ವಾದಿ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾಬಹುವಚನಾಂತರೂಪ.

ಅಪೃಚ್ಛತ—ಪ್ರಚ್ಛ ಜ್ಞೀಪ್ಸಾಯಾಂ ವಾಚಿ ಧಾತು. ಲಙ್ ಮಧ್ಯಮಪುರುಷಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ,

ಸ್ಯಃ—ತ್ಯದ್ ಶಬ್ದ. ಸು ಪರವಾದಾಗ ತ್ಯದಾದೀನಾಮಃ ಎಂಬುದರಿಂದ ಅತ್ವ. ಅತೋಗುಣೇ ಎಂಬು ದರಿಂದ ಪರರೂಪ. ತದೋಃಸಃಸಾ—ಎಂಬುದರಿಂದ ತಕಾರಕ್ಕೆ ಸಕಾರಾದೇಶ ಪ್ರತ್ಯಯಕ್ಕೆ ರುತ್ವ ವಿಸರ್ಗ.

ಅಜಗನ್—ಗಮ್ಲೃ ಗತೌ ಧಾತು. ಲಙ್ ಪ್ರಥಮಪುರುಷಏಕವಚನಾಂತರೂಪ. ಯದ್ವೃತ್ತಾನ್ನಿತ್ಯಮ್ ಎಂಬುದರಿಂದ ನಿಘಾತಸ್ವರಪ್ರತಿಷೇಧ ಬರುವುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಅವಾಖ್ಯತ್—ಅವ ಉಪಸರ್ಗ ಖ್ಯಾ ಪ್ರಕಥನೇ ಧಾತು ಲುಙ್ ಪ್ರಥಮಪುರುಷಏಕವಚನ ದಲ್ಲಿ ತಿಪ್. ಇಕಾರ ಲೋಪ. ಅಸ್ಯತಿವಕ್ತಿಖ್ಯಾತಿಭ್ಯೋಽಙ್ (ಪಾ. ಸೂ. ೩-೧-೫೨) ಎಂಬುದರಿಂದ ಚ್ಲಿಗೆ

ಅಜಾದೇಶ. ಆತೋ ಲೋಪ ಇಟಿ ಚ (ಪಾ ಸೂ. ೬-೪-೬೪) ಎಂಬುದರಿಂದ ಆಕಾರ ಲೋಪ. ಅಂಗಕ್ಕೆ ಅಡಾಗಮ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ- ಆದ್ಯುದಾತ್ತವಾಗುತ್ತದೆ- ತಿಙಿಚೋದಾತ್ತವತಿ (ಪಾ.ಸೂ. ೮-೧-೭೧) ಎಂಬುದರಿಂದ ಗತಿಗೆ (ಅವ) ನಿಘಾತಸ್ವರ ಬರುತ್ತದೆ.

ತ್ವಷ್ಟಾ—ತ್ವಕ್ಷೂ ಛೇದನೇ ಧಾತು. ಕರ್ತರಿಯಲ್ಲಿ ತೃನ್ ಪ್ರತ್ಯಯ. ಸ್ಕೋಃಸಂಯೋಗಾದ್ಯೋರಂತೇಚ ಎಂಬುದರಿಂದ ಕಕಾರಲೋಪ. ಪ್ರತ್ಯಯಕ್ಕೆ ಷ್ಟುತ್ವ. ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಆನಜೇ—ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು ಧಾತು. ಲಿಟ್ ಪ್ರಥಮಪುರುಷಏಕವಚನಕ್ಕೆ ಏಶಾದೇಶ- ಛಾಂದಸವಾಗಿ ಅನುನಾಸಿಕಕ್ಕೆ ಲೋಪ. ಧಾತುವಿಗೆ ದ್ವಿತ್ವ ಬಂದಾಗ ಅತಆದೇಃ (ಪಾ. ಸೂ. ೭-೪-೭೦) ಎಂಬು ದರಿಂದ ಆದಿಗೆ ದೀರ್ಘ. ತಸ್ಮಾನ್ನುಟ್ದ್ವಿಹಲಃ (ಪಾ. ಸೂ. ೭-೪-೭೧) ಎಂಬುದರಿಂದ ನುಟಾಗಮ. ತಿಙಂತ ನಿಘಾತಸ್ವರ ಬರುತ್ತದೆ. ॥ ೪ ॥



। ಸಂಹಿತಾಪಾಠಃ ।

ಹನಾಮೈನಾँ ಇತಿ ತ್ವಷ್ಟಾ ಯದಬ್ರವೀಚ್ಚಮಸಂ ಯೇ ದೇವಪಾನ-
ಮನಿಂದಿಷುಃ ।
ಅನ್ಯಾ ನಾಮಾನಿ ಕೃಣ್ವತೇ ಸುತೇ ಸಚಾँ ಅನ್ಯೈರೇನಾನ್ಕನ್ಯಾ೩ ನಾಮಭಿಃ
ಸ್ಪರತ್ ॥ ೫ ॥

। ಪದಪಾಠಃ ।

ಹನಾಮ । ಏನಾನ್ । ಇತಿ । ತ್ವಷ್ಟಾ । ಯತ್ । ಅಬ್ರವೀತ್ । ಚಮಸಂ । ಯೇ । ದೇವಽಪಾನಂ ।
ಅನಿಂದಿಷುಃ ।
ಅನ್ಯಾ । ನಾಮಾನಿ । ಕೃಣ್ವತೇ । ಸುತೇ । ಸಚಾ । ಅನ್ಯೈಃ । ಏನಾನ್ । ಕನ್ಯಾ । ನಾಮಽಭಿಃ । ಸ್ಪರತ್ ।
॥ ೫ ॥

ಸಾಯಣಭಾಷ್ಯಂ

ಏನಾನ್ಸ್ಪಕ್ಷ್ಯಮಾಣಾನ್ ಹನಾಮೇತಿ ಯದ್ಯದಾಬ್ರವೀತ್ತ್ವಷ್ಟಾ । ಪೂಜಾರ್ಥಂ ಬಹುವಚನಂ । ಏತಚ್ಛಬ್ದಸ್ಯ ಪ್ರಕೃತಪರಾಮರ್ಶಕತ್ವಾದೃಭೂಣಾಂ ಪ್ರಕೃತತ್ವಾತ್ ತೇಷಾಂ ಹನನಪ್ರಸಕ್ತಿಂ ದರ್ಶಯತಿ ಯೇ ದೇವಪಾನಂ ದೇವೈಃ ಪಾತವ್ಯಂ ಚಮಸಂ ಯ ಋಭವೋಽನಿಂದಿಷುಃ ನಿಂದಾಮಕುರ್ವನ್ । ದೇವ- ಯೋಗ್ಯಂ ತ್ವಾಷ್ಟ್ರಚಮಸಂ ಮನುಷ್ಯಾ ಋಭವಃ ಸ್ವೀಕೃತ್ಯ ಚತುರ್ಧಾ ವ್ಯಭಜನ್ ತಾನ್ ಹನಾಮೇತಿ

ಯದಾಬ್ರವೀದಿತ್ಯರ್ಥಃ । ತದಾಪ್ರಭೃತಿ ಮನುಷ್ಯಾಃ ಸುತೇಽಭಿಷುತೇ ಸೋಮೇ ಪಾನಾಯ ಪ್ರಸ್ತುತೇ ಸತಿ ಸಚಾ ಸಹ ಪರಸ್ಪರಮನ್ಯಾ ನಾಮಾನ್ಯನ್ಯಾನಿ ಹೋತ್ರಧ್ವರ್ಯೋರ್ದ್ಗಾತ್ರಾದೀನಿ ಕೃಣ್ವತೇ । ಕುರ್ವಂತಿ । ಪೂರ್ವನಾಮ ಪ್ರಚ್ಛಾದ್ಯೋಪಹವಕಾಲೇಽಧ್ವರ್ಯ ಉಪಹೂಯಸ್ವ ಹೋತರುಪಹೂಯಸ್ವೇತ್ಯೇವಮನ್ಯೈರೇವ ನಾಮಭಿರಾತ್ಮಾನಂ ತ್ವಷ್ಟೃವಧಭೀತ್ಯಾ ಪ್ರಖ್ಯಾಪಯಂತೀತ್ಯರ್ಥಃ । ಪೂರ್ವಮನ್ಯಾನಿ ಕಥಂ ಪ್ರಸಕ್ತಾನೀತ್ಯತ ಆಹ । ಏನಾನ್ನರಾನ್ ಕನ್ಯಾ ಸ್ವೋತ್ಪಾದಯಿತ್ರೀ ಮಾತಾನ್ಯೈರೇವ ನಾಮಭಿಃ ಸ್ಪರತ್ । ಪ್ರೀಣಯತಿ ॥ ಸ್ಪೃ ಪ್ರೀತಿಬಲಯೋಃ । ಲೇಟ್ಯಡಾಗಮಃ ॥

। ಪ್ರತಿಪದಾರ್ಥ ।

ಯೇ—ಯಾರು । ದೇವಪಾನಂ—ದೇವತೆಗಳ ಪಾನಕ್ಕೆ ಯೋಗ್ಯವಾದ । ಚಮಸಂ—ಈ ಚಮಸ ಪಾತ್ರೆಯನ್ನು । ಅನಿಂದಿಷುಃ—(ಮಾನವರಾದರೂ ದೇವಪಾತ್ರೆಯನ್ನು ಮುಟ್ಟಿ ನಾಲ್ಕನ್ನಾಗಿ ಮಾಡಿ) ದೂಷ್ಯವಾದುದನ್ನಾಗಿ ಮಾಡಿದರೋ ಅಂತಹ। ಏನಾನ್—ಈ ಋಭುಗಳನ್ನು । ಹನಾಮ—ಕೊಲ್ಲೋಣ । ಇತಿ—ಹೀಗೆಂಬುದಾಗಿ । ತ್ವಷ್ಟಾ—ಚಮಸಪಾತ್ರೆಯನ್ನು ನಿರ್ಮಿಸಿದ ತ್ವಷ್ಟೃವು । ಅಬ್ರವೀತ್—ಹೇಳಿದನೋ, (ಆಗ ಈ ಋಭುಗಳು) । ಸಚಾ—ಪರಸ್ಪರವಾಗಿ । ಸುತೇ—ಸೋಮರಸವನ್ನು ಹಿಂಡುವ ಯಾಗಕಾಲದಲ್ಲಿ । ಅನ್ಯಾ ನಾಮಾನಿ—ಬೇರೆ ಬೇರೆ ಹೆಸರುಗಳನ್ನು (ಹೋತೃ, ಅಧ್ವರ್ಯು ಇತ್ಯಾದಿ ಹೆಸರುಗಳನ್ನು) । ಕೃಣ್ವತೇ—ಇಟ್ಟುಕೊಳ್ಳುತ್ತಾರೆ । ಕನ್ಯಾ—ಉತ್ಪಾದಕಳಾದ ಮಾತೆಯು । ಅನ್ಯೈಃ ನಾಮಭಿಃ—(ಹೋತ್ರಾದಿ) ಬೇರೆ ಹೆಸರುಗಳಿಂದ । ಏನಾನ್—ಈ ಋಭುಗಳನ್ನು । ಸ್ಪರತ್—ತೃಪ್ತಿಪಡಿಸುತ್ತಾಳೆ.

ಭಾವಾರ್ಥ

ಮಾನವರಾದ ಋಭುಗಳು ದೇವತೆಗಳ ಪಾನಕ್ಕೆ ಯೋಗ್ಯವಾದ ಚಮಸಪಾತ್ರೆಯನ್ನು ಮುಟ್ಟಿ ಅದನ್ನು ಕಲುಷಿತವಾದದ್ದನ್ನಾಗಿ ಮಾಡಿದಾಗ ಈ ಚಮಸಪಾತ್ರೆಯನ್ನು ನಿರ್ಮಿಸಿದ ತ್ವಷ್ಟೃವು ಅವರನ್ನು ಕೊಲ್ಲಬೇಕೆಂದು ಪ್ರಯತ್ನಿಸಿದನು. ಆಗ ಋಭುಗಳು ತಮ್ಮ ಹೆಸರನ್ನು ಬದಲಾಯಿಸಿಕೊಂಡು ಹೋತ್ರಾದಿನಾಮಗಳಿಂದ ಯಾಗಗಳಲ್ಲಿ ಭಾಗವನ್ನು ವಹಿಸಿದರು. ಆಗ ಮಾತೆಯು ಬೇರೆ ಹೆಸರುಗಳಿಂದ ಕಾಣಿಸಿಕೊಂಡ ಇವರನ್ನು ತೃಪ್ತಿಪಡಿಸಿದಳು.

## English Translation

When Twashtri said—Let us slay those who have profaned the ladle, (designed) for drinking of the gods; then they made use of other names for one another, as the libatation was poured out; and the maiden (mother) propitiated them by different appellations.

ವಿಶೇಷವಿಷಯಗಳು

ಹನಾಮೈನಾँ ಇತಿ ತ್ವಷ್ಟಾ ಯದಬ್ರವೀತ್—ಮಾನವರಾದರೂ ದೇವಪಾತ್ರೆಯನ್ನು ಮುಟ್ಟಿ ಒಂದಾಗಿದ್ದುದನ್ನು ನಾಲ್ಕನ್ನಾಗಿಮಾಡಿ ಕಲುಷಿತವನ್ನಾಗಿ ಮಾಡಿದುದಕ್ಕೆ ತ್ವಷ್ಟೃವು ಕ್ರುದ್ಧನಾಗಿ ಅವರನ್ನು ಕೊಲ್ಲಲಿಚ್ಛಿಸಿದನು ಎಂದಿದೆ. ಈ ವಾಕ್ಯಕ್ಕೆ ಎರಡು ಕಡೆಗಳಲ್ಲಿ ವಿರೋಧವಾಕ್ಯಗಳಿವೆ. ಮೊದಲನೆಯದಾಗಿ,

ನ ನಿಂದಿಮ ಚಮಸಂ ಯೋ ಮಹಾಕುಲೋಽಗ್ನೇ ಭ್ರಾತರ್ದ್ರುಣ ಇದ್ಭೂತಿಮೂದಿಮ ॥
(ಋ. ಸಂ. ೧-೧೬೧-೧)

ಎಂಬ ಇದೇ ಸೂಕ್ತದ ಮೊದಲನೇ ಋಕ್ಕಿನಲ್ಲಿಯೇ ಋಭುಗಳು ತಾವು ದೇವಪಾತ್ರೆಯನ್ನು ನಿಂದಿತವನ್ನಾಗಿ ಮಾಡುವುದಿಲ್ಲವೆಂದು ಪ್ರಕಟಿಸಿದ್ದಾರೆ. ಇದೂ ಅಲ್ಲದೇ,

ಜ್ಯೇಷ್ಠ ಆಹ ಚಮಸಾ ದ್ವಾ ಕರೇತಿ ಕನೀಯಾನ್ ತ್ರೀನ್ಕೃಣವಾಮೇತ್ಯಾಹ ।
ಕನಿಷ್ಠ ಆಹ ಚತುರಸ್ಕರೇತಿ ತ್ವಷ್ಟ ಋಭವಸ್ತತ್ಪನಯದ್ವಚೋ ವಃ ॥
(ಋ. ಸಂ. ೪-೩೩-೫)

ಎಂಬ ಋಕ್ಕಿನಲ್ಲಿ ಈ ಚಮಸಪಾತ್ರೆಯನ್ನು ನಾಲ್ಕು ಭಾಗಗಳನ್ನಾಗಿ ಮಾಡುವುದಾಗಿ ಅವರಲ್ಲಿ ಕನಿಷ್ಠನಾದ ವಾಜನು ಹೇಳಿದಾಗ ಅವರ ಗುರುವಾದ ತ್ವಷ್ಟವು ಅದಕ್ಕೊಪ್ಪಿದನು ಎಂದೂ ಮತ್ತು,

ಸತ್ಯಮೂಚುರ್ನರ ಏವಾ ಹಿ ಚಕ್ರುರನು ಸ್ವಧಾಮೃಭವೋ ಜಗ್ಮುರೇತಾಂ ।
ವಿಭ್ರಾಜಮಾನಾಂಶ್ಚಮಸಾँ ಅಹೇವಾವೇನತ್ತ್ವಷ್ಟಾ ಚತುರೋ ದದೃಶ್ವಾನ್ ॥
(ಋ. ಸಂ. ೪-೩೩-೬)

ಎಂಬಲ್ಲಿ ನಾಲ್ಕು ಭಾಗಗಳನ್ನಾಗಿ ಮಾಡಿದ ಚಮಸಪಾತ್ರೆಯ ಪ್ರಕಾಶವನ್ನು ನೋಡಿ ತ್ವಷ್ಟೃವು ಅತಿಯಾಗಿ ಹರ್ಷಿತನಾದನು ಮತ್ತು ಆ ಕ್ರಮವನ್ನು ಅಂಗೀಕರಿಸಿದನು ಎಂದೂ ಸ್ಪಷ್ಟವಾಗಿದೆ ಆದರೆ ಋಭುಗಳನ್ನು ಕೊಲ್ಲಲಿಚ್ಛಿಸಿದನೆಂದಿದೆ.

ನಾಮಾನ್ಯನ್ಯಾನಿ ಕೃಣ್ವತೇ—ಹೋತ್ರಧ್ವರ್ಯ್ವುದ್ಗಾತ್ರಾದೀನಿ ಕೃಣ್ವತೇ । ಮೂವರಲ್ಲಿ ಒಬ್ಬನು ಹೋತೃವಾಗಿಯೂ, ಇನ್ನೊಬ್ಬನು ಅಧ್ವರ್ಯುವಾಗಿಯೂ ಮತ್ತೊಬ್ಬನು ಉದ್ಗಾತೃವಾಗಿಯೂ ಹೆಸರುಗಳನ್ನಿಟ್ಟುಕೊಂಡು ತಮ್ಮ ಹಳೆಯ ಹೆಸರನ್ನು ಮರೆಸಿಕೊಂಡು ಯಾಗಕಾಲಗಳಲ್ಲಿ ಭಾಗವಹಿಸಿದರೆಂದಿದೆ.

ಕನ್ಯಾ—ಈ ಪದಕ್ಕೆ ಸ್ವೋತ್ಪಾದಯಿತ್ರೀ ಮಾತಾ । ಸ್ವಯಂ ಉತ್ಪಾದಕಳಾದ ಮಾತೆಯೆಂದು ವಿವರಿಸಿದೆ. ಇಲ್ಲಿ ಯಾರನ್ನು ನಿರ್ದೇಶಿಸಿದೆಯೆಂಬುದು ಸ್ಪಷ್ಟವಾಗಿಲ್ಲ.

### ವ್ಯಾಕರಣಪ್ರಕ್ರಿಯಾ

ಹನಾಮ—ಹನ ಹಿಂಸಾಗತ್ಯೋಃ ಧಾತು. ಲೋಟ್ ಉತ್ತಮಪುರುಷಬಹುವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆಡಾಗಮ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

ಅಬ್ರವೀತ್—ಬ್ರೂಞ್ ವ್ಯಕ್ತಾಯಾಂ ವಾಚಿ ಲಙಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

ದೇವಪಾನಮ್—ಪಾ ಪಾನೇ ಧಾತು. ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ. ಯುವೋರನಾಕೌ ಎಂಬುದರಿಂದ ಅನಾದೇಶ ಬರುತ್ತದೆ. ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಅನಿಂದಿಷುಃ**—ಣಿದಿ ಕುತ್ಸಾಯಾಂ ಧಾತು. ಲುಙ್ ಪ್ರಥಮಪುರುಷಬಹುವಚನದಲ್ಲಿ ಝಿ ಪ್ರತ್ಯಯ. ಚ್ಲಿಗೆ ಸಿಚಾದೇಶ. ಅದಕ್ಕೆ ಇಡಾಗಮ. **ಸಿಜಭ್ಯಸ್ತವಿದಿಭ್ಯಶ್ಚ** (ಪಾ. ಸೂ. ೩-೪-೧೦೯) ಎಂಬುದರಿಂದ ಝಿಗೆ ಜುಸಾದೇಶ. ಇದಿತ್ತಾದುದರಿಂದ ನುಮಾಗಮ. ಅಂಗಕ್ಕೆ ಅಡಾಗಮ. ಯಚ್ಛಬ್ದಸಂಬಂಧವಿರುವುದರಿಂದ ನಿಘಾತ ಸ್ವರ ಬರುವುನಿಲ್ಲ. ಆದ್ಯುದಾತ್ತಸ್ವರ ಬರುತ್ತದೆ.

**ಕೃಣ್ವತೇ**— ಕೃವಿ ಹಿಂಸಾಕರಣಯೋಶ್ಚ ಧಾತು. ಲಟ್ ಪ್ರಥಮಪುರುಷಬಹುವಚನಾಂತರೂಪ ಅತಿ ಙಂತವ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸ್ಪರತ್**—ಸ್ಪೃ ಪ್ರೀತಿಬಲಯೋಃ ಧಾತು. ಲೇಟ್ ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚಲೋಪಃ** (ಪಾ. ಸೂ. ೩-೪-೯೭) ಎಂಬುದರಿಂದ ಇಕಾರ ಲೋಪ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ತಿಙಂತನಿಘಾತಸ್ವರ ಬರುತ್ತದೆ. ॥ ೫ ॥



ಸಂಹಿತಾಪಾಠಃ

ಇಂದ್ರೋ ಹರೀ ಯುಯುಜೇ ಅಶ್ವಿನಾ ರಥಂ ಬೃಹಸ್ಪತಿರ್ವಿಶ್ವರೂಪಾ-

ಮುಪಾಜತ ।

ಋಭುರ್ವಿಭ್ವಾ ವಾಜೋ ದೇವಾँ ಅಗಚ್ಛತ ಸ್ವಪಸೋ ಯಜ್ಞಿಯಂ

ಭಾಗಮೈತನ ॥ ೬ ॥

ಪದಪಾಠಃ

ಇಂದ್ರಃ । ಹರೀ ಇತಿ । ಯುಯುಜೇ । ಅಶ್ವಿನಾ । ರಥಂ । ಬೃಹಸ್ಪತಿಃ । ವಿಶ್ವಽರೂಪಾಂ । ಉಪ । ಆಜತ ।

ಋಭುಃ । ವಿಽಭ್ವಾ । ವಾಜಃ । ದೇವಾನ್ । ಅಗಚ್ಛತ । ಸುಽಅಪಸಃ । ಯಜ್ಞಿಯಂ । ಭಾಗಂ । ಐತನ ॥ ೬ ॥

॥ ಸಾಯಣಭಾಷ್ಯಂ ॥

ಪೂರ್ವಂ ಸೃಷ್ಟಾನಾಂ ಕ್ರಮೇಣ ವಿನಿಯೋಗಮಾಹ । ಇಂದ್ರೋ ಹರೀ ಯುಯುಜೇ । ಏತನ್ನಾಮಾನಾವಶ್ವೌ ರಥೇ ಯೋಜಿತವಾನ್ । ತಥಾಶ್ವಿನಾಶ್ವಿನೌ ರಥಂ ಯೋಜಿತವಂತೌ । ತಥಾ ಬೃಹಸ್ಪತಿರ್ಬೃಹತೋ ಮಂತ್ರಸ್ಯ ಪಾಲಯಿತೈತನ್ನಾಮಕೋ ದೇವೋ ವಿಶ್ವರೂಪಾಂ ನಾನಾರೂಪೋಪೇತಾಂ

ಗಾಮುಪಾಜತೆ । ಉಪಾಗಮತ್ । ಸ್ವೀಕೃತವಾನಿತ್ಯರ್ಥಃ । ಯದ್ಯಪ್ಯತ್ರ ಗೌರಿತಿ ವಿಶೇಷೋ ನ ಶ್ರುತಃ ತಥಾಪಿ ಪೂರ್ವಂ ಧೇನುಃ ಕರ್ತ್ವೇತ್ಯುಕ್ತತ್ವಾತ್ ಪುರಸ್ತಾಚ್ಚ ಯೇ ಧೇನುಂ ವಿಶ್ವಜುವಂ ವಿಶ್ವರೂಪಾಂ। ಋ. ೪-೩೩-೮ । ಇತಿವಕ್ಷ್ಯಮಾಣತ್ವಾಚ್ಚ ವಿಶ್ವರೂಪಾ ಗೌರೀತ್ಯೇವಾಧ್ಯವಸೀಯತೇ । ಅತ ಏವ ವಿಶ್ವರೂಪಾಮಿತ್ಯಸ್ಯಾಶ್ಚ ಪಂಕ್ತಿರಿತಿ ಕೇಚನ ವ್ಯಾಚಕ್ಷತೇ ತದಸತ್ । ಯುಷ್ಮತ್ಸಂಪಾದಿತಾನಿ ರಥಾ-ದೀನೀಂದ್ರಾದಯಃ ಸ್ವಭಾಗತ್ವೇನಾಕಲ್ಪಯನ್ । ತಸ್ಮಾದೃಭುರ್ವಿಭ್ವಾ ವಾಜಶ್ಚ ಯೂಯಂ ದೇವಾ-ನಿಂದ್ರಾದೀನಗಚ್ಛತ । ಗತ್ವಾಚ ಹೇ ಸ್ವಪಸಃ ಶೋಭನಾಶ್ವರಥಾದಿಕರ್ಮವಂತೋ ಯೂಯಂ ಯಜ್ಞಿಯಂ ಯಜ್ಞಾರ್ಹಂ ಯಜ್ಞಸಂಬಂಧಿನಂ ಭಾಗಂ ಸೋಮರೂಪಂ ದೇವತ್ವಂ ಪ್ರಾಪ್ತ್ಯೈಃ ಸೇವನೀಯಮೈತನ । ಪ್ರಾಪ್ನುತ । ಕರ್ಮಸಾಮರ್ಥ್ಯೇನ ಹವಿರ್ಭುಜೋ ಭವತೇತ್ಯರ್ಥಃ । ಇತ್ಯೇವಮೃಷಿರಾಹ ॥

ಪ್ರತಿಪದಾರ್ಥ

(ಋಭುಗಳ ಕಲಾಕೌಶಲ್ಯದಿಂದ) ಇಂದ್ರಃ—ಇಂದ್ರನು । ಹರೀ—ಹರಿಯೆಂಬ ತನ್ನ ಕುದುರೆಗಳನ್ನು । ಯುಯುಜೇ—ರಥಕ್ಕೆ ಯೋಜಿಸಿದನು । ಅಶ್ವಿನಾ—ಅಶ್ವಿನೀದೇವತೆಗಳು । ರಥಂ—(ತಮ್ಮ) ರಥವನ್ನು (ಸಿದ್ಧ ಪಡಿಸಿದರು) । ಬೃಹಸ್ಪತಿಃ—ಬೃಹಸ್ಪತಿಯು । ವಿಶ್ವರೂಪಾಂ—ನಾನಾರೂಪಗಳಿಂದ ಕೂಡಿದ ಗೋವನ್ನು । ಉಪಾಜತ—ಸ್ವೀಕರಿಸಿದನು (ಆದ್ದರಿಂದ) । ಋಭುಃ ವಿಭ್ವಾ ವಾಜಶ್ಚ—ಈ ಮೂರು ಹೆಸರುಗಳಿಂದ ಪ್ರಸಿದ್ಧರಾದ ಎಲೈ ಋಭುದೇವತೆಗಳೇ । ದೇವಾನ್—ದೇವತೆಗಳಲ್ಲಿಗೆ । ಅಗಚ್ಛತ—ಹೋಗಿರಿ । ಸ್ವಪಸಃ—ಶ್ರೇಷ್ಠವಾದ (ಅಶ್ವ ಗಳನ್ನೂ ರಥಗಳನ್ನೂ ನಿರ್ಮಿಸುವ) ಕರ್ಮಗಳುಳ್ಳ ನೀವು । ಯಜ್ಞಿಯಂ- ಯಜ್ಞಸಂಬಂಧವಾದ । ಭಾಗಂ—ಸೋಮರಸದ ಭಾಗವನ್ನು । ಐತನ—ಹೊಂದಿರಿ

ಭಾವಾರ್ಥ

ಋಭುಗಳ ಕರ್ಮಕೌಶಲ್ಯದಿಂದ ಇಂದ್ರನು ಹರಿಗಳೆಂಬ ತನ್ನ ಕುದುರೆಗಳನ್ನು ತನ್ನ ರಥಕ್ಕೆ ಯೋಜಿಸಿದನು. ಅಶ್ವಿನೀದೇವತೆಗಳು ತಮ್ಮ ರಥವನ್ನು ಸಿದ್ಧಪಡಿಸಿದರು. ಬೃಹಸ್ಪತಿಯು ನಾನಾರೂಪಗಳಿಂದ ಕೂಡಿದ ಗೋವನ್ನು ಸ್ವೀಕರಿಸಿದನು. ಆದ್ದರಿಂದ ಈ ಮೂರುಹೆಸರುಗಳಿಂದ ಪ್ರಸಿದ್ಧರಾದ ಎಲೈ ಋಭುದೇವತೆಗಳೇ, ನೀವು ದೇವತೆ ಗಳಲ್ಲಿಗೆ ಹೋಗಿರಿ. ಶ್ರೇಷ್ಠವಾದ ಅಶ್ವಗಳನ್ನೂ ರಥಗಳನ್ನೂ ನಿರ್ಮಿಸುವ ಕಲಾಕೌಶಲ್ಯವುಳ್ಳ ನೀವು ಯಜ್ಞಸಂಬಂಧ ವಾದ ಸೋಮರಸದ ಭಾಗವನ್ನು ಹೊಂದಿರಿ.

## English Translation

Indra has caparisoned his horses: the Ashwins have harnessed their cars: Brihaspathi has accepted the omniform (cow): therefore, Ribhu, Vibhwa, and Vaja, go to the gods, doers of good deeds, enjoy your sacrificial portion.

। ವಿಶೇಷವಿಷಯಗಳು ।

ಋಭುಗಳು ದೇವತೆಗಳೊಂದಿಗೆ ಸಮಾನವಾದ ಸ್ಥಾನವನ್ನು ಹೊಂದಿ ಅವರೊಡನೆ ಯಜ್ಞಭಾಗವನ್ನು ವಹಿಸಲು ಸಾಧನವಾದ ಅವರ ಅಲೌಕಿಕವಾದ ಕಲಾಕೌಶಲ್ಯವೂ ಶ್ರೇಷ್ಠವಾದ ಕರ್ಮಗಳೂ ವರ್ಣಿತವಾಗಿವೆ. ಅವರ ಸಹಾಯದಿಂದ ಇಂದ್ರನು ಶ್ರೇಷ್ಠವಾದ ರಥವನ್ನೂ ಅದಕ್ಕೆ ತಕ್ಕ ಅಶ್ವಗಳನ್ನೂ ಪಡೆದುದನ್ನು ತಿಳಿಸಿದೆ.

ಇಂದ್ರೋ ಹರೀ—ಇಂದ್ರನು ತನ್ನ ರಥಕ್ಕೆ ಹರೀ ಎಂಬ ತನ್ನ ಅಶ್ವಗಳನ್ನು ಕಟ್ಟಿದನು. ಹರೀ ಇಂದ್ರಸ್ಯ (ನಿ. ೨-೨೮) ಎಂದು ಇಂದ್ರನ ಅಶ್ವಗಳ ಹೆಸರು ಪ್ರಸಿದ್ಧವಾಗಿದೆ.

ತಕ್ಷನ್ರಥಂ ಸುವೃತಂ ವಿದ್ಮನಾಪಸಸ್ತಕ್ಷನ್ಹರೀ ಇಂದ್ರವಾಹಾ ವೃಷಣ್ವಸೂ ।
(ಋ. ಸಂ. ೧-೧೧೧-೧)

ಅನವಸ್ತೇ ರಥಮಶ್ವಾಯ ತಕ್ಷನ್ ತ್ವಷ್ಟಾ ವಜ್ರಂ ಪುರುಹೂತ ದ್ಯುಮಂತಂ ।
(ಋ.ಸಂ. ೫-೩೧-೪)

ಇಂದ್ರಾಯ ಚ ಹರೀ । (ಬೃ. ದೇ. ೩-೮೫).

ಎಂದು ಋಭುಗಳು ತಮ್ಮ ಉತ್ಕೃಷ್ಟವಾದ ನೈಪುಣ್ಯದಿಂದ ದೇಹದಾರ್ಢ್ಯದಿಂದ ಕೂಡಿದವೂ ಇಂದ್ರನ ವಾಹನಗಳೂ ಆದ ಹರೀಯೆಂಬ ಅಶ್ವಗಳನ್ನು ನಿರ್ಮಿಸಿದರು ಎಂದು ಪ್ರಸಿದ್ಧವಾಗಿದೆ. ಇದರಂತೆಯೇ,

ಬೃಹಸ್ಪತೇರಥಾಶ್ವಿಭ್ಯಾಂ ರಥಂ ದಿವ್ಯಂ ತ್ರಿವಂಧುರಂ (ಬೃ. ದೇ. ೩-೮೫) ಎಂದು ಬೃಹಸ್ಪತಿಗೂ ಅಶ್ವಿನೀದೇವತೆಗಳಿಗೂ ರಥವನ್ನು ನಿರ್ಮಿಸಿಕೊಟ್ಟ ವಿಷಯವು ಹೇಳಿದೆ. ಇಲ್ಲಿ, ಬೃಹಸ್ಪತಿರ್ವಿಶ್ವರೂಪಾಂ ಉಪಾಜತ ಎಂದು ಹೇಳಿದೆ. ವಿಶ್ವರೂಪಾಂ ಎಂಬುದಕ್ಕೆ ನಾನಾರೂಪೋಪೇತಾಂ ಗಾಂ । ನಾನಾವರ್ಣಾತ್ಮಕವಾದ ಗೋವೆಂದು ಸಾಯಣರು ವಿವರಿಸಿದ್ದಾರೆ

ಯದ್ಯಪ್ಯತ್ರ ಗೌರಿತಿ ವಿಶೇಷೋ ನ ಶ್ರುತಃ ತಥಾಪಿ ಪೂರ್ವಂ ಧೇನುಃ ಕರ್ತ್ವಾ ಇತ್ಯುಕ್ತತ್ವಾತ್ ಪರಸ್ತಾಚ್ಚ ಯೇ ಧೇನುಂ ವಿಶ್ವಜುವಂ ವಿಶ್ವರೂಪಾಂ ಇತಿ ವಕ್ಷ್ಯಮಾಣತ್ವಾಚ್ಚ ವಿಶ್ವರೂಪಾ ಗೌಃ ಇತ್ಯೇವಾಧ್ಯವಸೀಯತೇ ॥ ಇಲ್ಲಿ ಗೌಃ ಎಂಬ ವಿಶೇಷ್ಯವಿಲ್ಲ, ಆದರೂ ಸಹ ಹಿಂದೆ ಧೇನು ನಿರ್ಮಾಣದ ವಿಷಯವನ್ನು ಹೇಳಿರುವುದರಿಂದಲೂ (೧-೧೬೧-೩) ಮುಂದೆಯೂ ವಿಶ್ವರೂಪಾಂ ಎಂದು ಗೋವಿನ ಸೃಷ್ಟಿಯನ್ನು ಹೇಳುವುದರಿಂದಲೂ ಇಲ್ಲಿಯೂ ಸಹ ಗೋವೆಂದೇ ಅರ್ಥಮಾಡಬೇಕೆಂದು ಸಾಯಣರು ಶಂಕಾಪರಿಹಾರವನ್ನು ಮಾಡಿದ್ದಾರೆ.

ವೃಷಭಂ ಚರ್ಷಣೀನಾಂ ವಿಶ್ವರೂಪಮದಾಭ್ಯಂ । ಬೃಹಸ್ಪತಿಂ ವರೇಣ್ಯಂ ।
(ಋ. ಸಂ. ೩-೬೨-೬)

ಇತ್ಯಾದಿ ಋಕ್ಕುಗಳಲ್ಲಿ ವಿಶ್ವರೂಪವೆಂಬ ಪದವು ಬೃಹಸ್ಪತಿಗೇ ವಿಶೇಷಣವಾಗಿದೆ. ವಿಶ್ವರೂಪಾ ಬೃಹಸ್ಪತೇಃ (ನಿ. ೨-೨೮) ಎಂಬ ನಿರುಕ್ತವಾಕ್ಯದ ಪ್ರಕಾರ ಬೃಹಸ್ಪತಿಯ ಅಶ್ವಕ್ಕೆ ವಿಶ್ವರೂಪವೆಂಬ ಹೆಸರೆಂದು ತಿಳಿಯುತ್ತದೆ.

ರಥಂ ಯೇ ಚಕ್ರುಃ ಸುವೃತಂ ನರೇಷ್ಠಾಂ ಯೇ ಧೇನುಂ ವಿಶ್ವಜುವಂ ವಿಶ್ವರೂಪಾಂ ।
ತ ಆ ತಕ್ಷನ್ತ್ವೃಭವೋ ರಯಿಂ ನಃ ಸ್ವವಸಃ ಸ್ವಪಸಃ ಸುಹಸ್ತಾಃ ॥
(ಋ. ಸಂ. ೪-೩೩-೮)

ಎಂಬಲ್ಲಿ ಋಭುಗಳು (ಬೃಹಸ್ಪತಿಗೆ) ವಿಶ್ವರೂಪಾ ಎಂಬ ಧೇನುವನ್ನೂ ಸೃಷ್ಟಿಸಿದ ವಿಷಯವು ಸ್ಪಷ್ಟವಾಗಿದೆ. ಆ ಅಂಶವನ್ನು ಇಲ್ಲಿಯೂ ತಿಳಿಸಿದೆ.

ಅಶ್ವಿನೀದೇವತೆಗಳ ರಥದ ವೈಶಿಷ್ಟ್ಯದ ವರ್ಣನೆಯಿಂದ ಅದನ್ನು ನಿರ್ಮಿಸಿದ ಋಭುಗಳ ನಿರ್ಮಾಣ ಕೌಶಲ್ಯವು ತಿಳಿಯುತ್ತದೆ. ತ್ರಿಚಕ್ರಃ, ಮಧುವಾಹನಃ, ತ್ರಿವಂಧುರಃ ಇತ್ಯಾದಿ ವಿಶೇಷಣಗಳು ಅವರ ರಥದ ವೈಶಿಷ್ಟ್ಯವನ್ನು ತಿಳಿಸುತ್ತವೆ. ಋಭುಗಳ ರಚನಾಚಾತುರ್ಯವನ್ನು ತೋರಿಸುವ ಅಶ್ವಿನೀದೇವತೆಗಳ ರಥದ ವರ್ಣನೆಯನ್ನು ಋಕ್ಸಂಹಿತೆಯಲ್ಲಿ ಬಹಳವಾಗಿ ವರ್ಣಿಸಲ್ಪಟ್ಟಿರುವುದು.

ನಿಮಿಷಶ್ಚಿಜ್ಜವೀಯಸಾ ರಥೇನಾ ಯಾತಮಶ್ವಿನಾ । ಅಂತಿ ಷದ್ಭೂತು ವಾಮವಃ ॥

(ಋ. ಸಂ. ೮-೭೩-೨)

ಎಂಬಲ್ಲಿ ಅಶ್ವಿನೀದೇವತೆಗಳ ರಥವು ಕಣ್ಣುಮಿಟುಕಿಸುವ ವೇಗಕ್ಕಿಂತಲೂ ವೇಗವಾಗಿ ಓಡಬಲ್ಲುದೆಂದೂ,

ಪ್ರ ವಾಂ ರಥೋ ಮನೋಜವಾ ಇಯರ್ತಿ ತಿರೋ ರಜಾಂಸ್ಯಶ್ವಿನಾ ಶತೋತಿಃ ।
ಅಸ್ಮಭ್ಯಂ ಸೂರ್ಯಾವಸೂ ಇಯಾನಃ ।

(ಋ. ಸಂ. ೭-೬೮-೩)

ಇತ್ಯಾದಿ ಕಡೆಗಳಲ್ಲಿ ಸಕಲಲೋಕಗಳಲ್ಲಿಯೂ ಸಂಚರಿಸಬಲ್ಲುದೆಂದೂ, ಸಕಲಲೋಕಕ್ಕೂ ರಕ್ಷಣಾತ್ಮಕವೆಂದೂ ಅದರ ಮಹಿಮೆಯು ಸ್ತುತಿಸಲ್ಪಟ್ಟು,

ಆ ತೇನ ಯಾತಂ ಮನಸೋ ಜವೀಯಸಾ ರಥಂ ಯಂ ವಾಮೃಭವಶ್ಚಕ್ರುರಶ್ವಿನಾ ।
ಯಸ್ಯ ಯೋಗೇ ದುಹಿತಾ ಜಾಯತೇ ದಿವ ಉಭೇ ಅಹನೀ ಸುದಿನೇ ವಿವಸ್ವತಃ ॥

(ಋ. ಸಂ. ೧೦-೩೯-೧೨)

ಎಂಬಲ್ಲಿ ಋಭುಗಳಿಂದ ನಿರ್ಮಿತವಾದ ಅಶ್ವಿನೀದೇವತೆಗಳ ರಥವು ಮನೋವೇಗಕ್ಕಿಂತಲೂ ಹೆಚ್ಚು ವೇಗವುಳ್ಳದ್ದು. ಅದನ್ನು ಅಶ್ವಗಳೊಡನೆ ಯೋಜಿಸಿದೊಡನೆಯೇ ದಿವೋದುಹಿತೆಯಾದ ಉಷಸ್ಸಿನ ಆವಿರ್ಭಾವವಾಗುತ್ತದೆ ಮತ್ತು ಲೋಕಕಲ್ಯಾಣವಾಗುತ್ತದೆಂದು ಕೇವಲ ರಥದ ಸೌಂದರ್ಯಕ್ಕೆ ಮಾತ್ರವಲ್ಲದೆ ಲೋಕಕಲ್ಯಾಣಕ್ಕೂ ಸಾಧನವಾಗಿದೆ ಯೆಂಬ ವಿಷಯವೂ ಸಹ ವರ್ಣಿತವಾಗಿದೆ.

ಇವೆಲ್ಲವೂ ಋಭುಗಳ ನಿರ್ಮಾಣಕೌಶಲ್ಯದ ಮಹಿಮೆ. ಇಂತಹ ದಿವ್ಯಶಕ್ತಿಯುಳ್ಳ ಮತ್ತು ದೇವತೆಗಳಿಗೂ ಆಶ್ಚರ್ಯವೆನಿಸುವ ರೀತಿಯಲ್ಲಿ ಪೃಥಿವ್ಯಂತರಿಕ್ಷಗಳಲ್ಲೆಲ್ಲಾ ತಮ್ಮ ಶ್ರೇಷ್ಠವಾದ ಕರ್ಮಗಳಿಂದ ತಮ್ಮ ಪ್ರಭಾವವನ್ನು ಬೀರುತ್ತಿರುವ ಋಭುಗಳನ್ನು ಯಜ್ಞದಲ್ಲಿ ಭಾಗವಹಿಸಲು ದೇವತೆಗಳೊಡನೆ ಸೇರಿಕೊಳ್ಳಿರಿ ಎಂದು ಪ್ರಾರ್ಥಿಸಿದೆ.

### ವ್ಯಾಕರಣಪ್ರಕ್ರಿಯಾ

ಯುಯುಜೇ—ಯುಜಿರ್ ಯೋಗೇ ಧಾತು. ಅಂತರ್ಭಾವಿತಣ್ಯರ್ಥಕವಾಗಿದೆ. ಲಿಟ್ ಉತ್ತಮಪುರುಷ ಏಕವಚನಾಂತರೂಪ. ಚಾದಿಲೋಪೇ ವಿಭಾಷಾ (ಪಾ. ಸೂ. ೮-೧-೬೩) ಎಂಬುದರಿಂದ ನಿಘಾತಸ್ವರಪ್ರತಿಷೇಧ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಅಶ್ವಿನಾ—ಸುಪಾಂ ಸುಲುಕ್ (ಪಾ. ಸೂ. ೭-೧-೩೯) ಎಂಬುದರಿಂದ ದ್ವಿವಚನಕ್ಕೆ (ಔ)ಆಕಾರಾದೇಶ.

ಬೃಹಸ್ಪತಿಃ—ತದ್ ಬೃಹತೋಃಕರಪತ್ಯೋಃ-ಎಂಬ ವಚನದಿಂದ ಸುಟಾಗಮ ಉಭೇ ವನಸ್ಪತ್ಯಾದಿಷು (ಪಾ. ಸೂ. ೬-೨-೧೪೦) ಎಂಬುದರಿಂದ ಉಭಯಪದಪ್ರಕೃತಿಸ್ವರ ಬರುತ್ತದೆ.

ವಿಶ್ವರೂಪಾಂ—ಬಹುವ್ರೀಹೌ ವಿಶ್ವಂ ಸಂಜ್ಞಾಯಾಮ್ (ಪಾ. ಸೂ. ೬-೨-೧೦೬) ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ.

ಅಜತ—ಅಜ ಗತಿಕ್ಷೇಪಣಯೋಃ ಧಾತು. ವ್ಯತ್ಯಯದಿಂದ ಆತ್ಮನೇಪದಿಯಾಗುತ್ತದೆ. ಲಙ್ ಉತ್ತಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಅಗಚ್ಛತ—ಗಮ್ಲೃ ಗತೌ ಧಾತು. ಲಙ್ ಮಧ್ಯಮಪುರುಷಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಸ್ವಪಸಃ—ಶೋಭನಂ ಅಪಃ ಯೇಷಾಂ ತೇ ಸ್ವಪಸಃ ಆದ್ಯುದಾತ್ತಂ ದ್ವ್ಯಚ್ ಛಂದಸಿ (ಪಾ. ಸೂ. ೬-೧-೧೯೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

ಐತನ—ಇಣ್ ಗತೌ ಧಾತು. ಲಙ್ ಮಧ್ಯಮಪುರುಷಬಹುವಚನಕ್ಕೆ ಥಾದೇಶ. ತಪ್ತನಪ್ತನಥನಾಶ್ಚ (ಪಾ. ಸೂ. ೭-೧-೪೫) ಎಂಬುದರಿಂದ ಅದಕ್ಕೆ ತನಪ್ಆದೇಶ. ಆಡಜಾದೀನಾಂ (ಪಾ ಸೂ. ೬-೪-೭೨) ಎಂಬುದರಿಂದ ಅಂಗಕ್ಕೆ ಆಡಾಗಮ. ಆಟಶ್ಚ ಸೂತ್ರದಿಂದ ವೃದ್ಧಿ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೬ ॥

ಸಂಹಿತಾಪಾಠಃ

ನಿಶ್ಚರ್ಮಣೋ ಗಾಮರಿಣೀತ ಧೀತಿಭಿರ್ಯಾ ಜರಂತಾ ಯುವಶಾ ತಾಕೃಣೋತನ ।
ಸೌಧನ್ವನಾ ಅಶ್ವಾದಶ್ವಮತಕ್ಷತ ಯುಕ್ತ್ವಾ ರಥಮುಪ ದೇವಾँ ಅಯಾತನ ॥ ೭ ॥

ಪದಪಾಠ

ನಿಃ । ಚರ್ಮಣಃ । ಗಾಂ । ಅರಿಣೀತ । ಧೀತಿಽಭಿಃ । ಯಾ । ಜರಂತಾ । ಯುವಶಾ । ತಾ । ಅಕೃಣೋತನ ।

ಸೌಧನ್ವನಾಃ । ಅಶ್ವಾತ್ । ಅಶ್ವಂ । ಅತಕ್ಷತ । ಯುಕ್ತ್ವಾ । ರಥಂ । ಉಪ । ದೇವಾನ್ । ಅಯಾತನ । ॥ ೭ ॥

ಸಾಯಣಭಾಷ್ಯಂ

ಹೇ ಸೌಧನ್ವನಾಃ ಯೂಯಂ ನಿಶ್ಚರ್ಮಣೋ ಮೃತಾಯಾ ಗೋಃ ಸಕಾಶಾದುತ್ಕೃತ್ತಾಚ್ಚ-ರ್ಮಣೋ ಗಾಂ ನೂತನಾಂ ನಿರರಿಣೀತ । ನಿರಗಮಯತ । ಉತ್ಪಾದಿತವಂತೆ ಇತ್ಯರ್ಥಃ । ತೇನೈವ ಚರ್ಮಣಾ ಸಂವೀತಾಂ ತತ್ಸದೃಶೀಮನ್ಯಾಂ ಧೇನುಂ ಕೃತವಂತ ಇತ್ಯರ್ಥಃ । ಯದ್ಯಪಿ ಪೂರ್ವಮೇವಾ-ಶ್ವಾದೀನಾಂ ವಿನಿಯೋಗ ಉಕ್ತಃ ತಥಾಪಿ ತೇಷಾಮತ್ಯಂತದುಃಖಸಂಪಾದತ್ವಜ್ಞಾಪನಾಯ ಪುನರಾಹ । ನ ಕೇವಲಂ ಗೋಕರಣಮೇವ ಅಪಿ ಚ ಯಾ ಜರಂತಾ ಯೌ ಜೀರ್ಣೌ ಪಿತರೌ ತಾ ತೌ ಯುವಶಾ ಯುವಾನಾವಕೃಣೋತನ । ಅಕುರುತ । ಕಿಂಚಾಶ್ವಾದಶ್ವಮೇಕೇನ ವಿದ್ಯಮಾನೇನಾಶ್ವೇನಾಶ್ವಾಂತರ-ಮತಕ್ಷತ । ಪ್ರಯತ್ನೇನ ಸಂಪಾದಿತವಂತಃ । ಯಸ್ಮಾದೇವಂ ಕೃತವಂತಸ್ತಸ್ಮಾದ್ರಥಂ ಯುಷ್ಮದೀಯಂ ಯುಕ್ತ್ವಾಶ್ವೈರ್ಯೋಜಯಿತ್ವಾ ದೇವಾನಿಂದ್ರಾದೀನುಪಾಯಾತನ । ದೇವಸಮೀಪಂ ಪ್ರಾಪ್ನುತ ॥

ಪ್ರತಿಪದಾರ್ಥ

ಸೌಧನ್ವನಾಃ—ಎಲೈ ಸುಧನ್ವಪುತ್ರರೇ । ನಿಶ್ಚರ್ಮಣಃ—ಮೃತವಾದ ಗೋವಿನ ಚರ್ಮದಿಂದ । ಗಾಂ—(ನೂತನವಾದ) ಗೋವನ್ನು । ಅರಿಣೀತ—ನಿರ್ಮಿಸಿದಿರಿ । ಧೀತಿಭಿಃ—ನಿಮ್ಮ ಪ್ರಭಾವಪೂರಿತವಾದ ಕರ್ಮಗಳಿಂದ ಯಾ—ಯಾವ ಮಾತಾಪಿತೃಗಳು । ಜರಂತಾ—ಜೀರ್ಣರಾಗಿದ್ದರೋ । ತಾ—ಅವರನ್ನು । ಯುವಶಾ—ಯುವ ಕರನ್ನಾಗಿ । ಅಕೃಣೋತನ — ಮಾಡಿದಿರಿ । ಅಶ್ವಾತ್—(ಪೂರ್ವದಲ್ಲಿದ್ದ) ಒಂದೇ ಅಶ್ವದಿಂದ । ಅಶ್ವಂ—ಬೇರೊಂದು ಅಶ್ವವನ್ನು । ಅತಕ್ಷತ—ನಿರ್ಮಿಸಿದಿರಿ । ರಥಂ—ನಿಮ್ಮ ರಥವನ್ನು । ಯುಕ್ತ್ವಾ— ಅಶ್ವಗಳೊಂದಿಗೆ ಸಿದ್ಧಪಡಿಸಿಕೊಂಡು । ದೇವಾನ್—ಇಂದ್ರಾದಿ ದೇವತೆಗಳ ಸಮೀಪಕ್ಕೆ । ಆಯಾತನ—ಹೋಗಿ ಸೇರಿ.

ಭಾವಾರ್ಥ

ಎಲೈ ಸುಧನ್ವಪುತ್ರರಾದ ಋಭುಗಳೇ, ಮೃತವಾದ ಗೋವಿನ ಚರ್ಮದಿಂದ ನೀವು ನೂತನವಾದ ಗೋವನ್ನು ಸೃಷ್ಟಿಸಿದಿರಿ. ನಿಮ್ಮ ಪ್ರಭಾವಪೂರಿತವಾದ ಕರ್ಮಗಳಿಂದ ಜೀರ್ಣರಾಗಿದ್ದ ನಿಮ್ಮ ಮಾತಾಪಿತೃಗಳನ್ನು ಯುವಕರನ್ನಾಗಿ ಮಾಡಿದಿರಿ. ಪೂರ್ವದಲ್ಲಿದ್ದ ಒಂದೇ ಒಂದು ಅಶ್ವದಿಂದ ಬೇರೊಂದು ಅಶ್ವವನ್ನು ನಿರ್ಮಿಸಿದಿರಿ. ನಿಮ್ಮ ರಥವನ್ನು ಅಶ್ವಗಳೊಂದಿಗೆ ಸಿದ್ಧಪಡಿಸಿಕೊಂಡು ಇಂದ್ರಾದಿದೇವತೆಗಳ ಸಮೀಪಕ್ಕೆ ಹೋಗಿ ಸೇರಿ.

English Translation

Sons of Sudhanwan, from a hideless (cow) you have formed a living one: by your marvellous acts you have made your aged parents young: from one horse you have fabricated another: harness now your chariot, and repair unto the gods.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ವರ್ಣಿತವಾಗಿರುವ ವಿಷಯಗಳನ್ನು ಹಿಂದೆ ಆಗಲೇ ಹೇಳಿರುವುದರಿಂದ ಇಲ್ಲಿಯೂ ವಿವರಿಸುವುದು ಪುನರುಕ್ತವಾಪಂತಾಗುತ್ತದೆ ಎಂಬ ಆಶಂಕೆಯನ್ನು ಊಹಿಸಿ ಯದ್ಯಪಿ ಪೂರ್ವಮೇವಾಶ್ವಾದೀನಾಂ

ವಿನಿಯೋಗ ಉಕ್ತಸ್ತಥಾಪಿ ತೇಷಾಮತ್ಯಂತದುಃಖಸಂಪಾದಿತ್ವಜ್ಞಾಪನಾಯ ಪುನರಾಹ । ಹಿಂದೆಯೇ ಇವನ್ನು ಸೂಚಿಸಿದ್ದರೂ ಸಹ ಇಂತಹ ಕಾರ್ಯಗಳು ಸಾಧಾರಣವಾದ ಶಕ್ತಿಯಿಂದ ಸಾಧಿಸುವುದು ಸಾಧ್ಯವಿಲ್ಲವೆಂದೂ ಇಂತಹ ಕ್ಲೇಶಕರವಾದ ಸಾಧನೆಯನ್ನು ಮಾಡಲು ಅಸಾಧಾರಣವಾದ ಶಕ್ತಿಯು ಬೇಕೆಂದೂ ಸೂಚಿಸಲು ಇಲ್ಲಿ ಪುನಃ ವಿವರಿಸಿದೆಯೆಂದು ಸಮಾಧಾನವನ್ನು ಹೇಳಿದ್ದಾರೆ.

ಇಲ್ಲಿ ಇನ್ನೊಂದಂಶವನ್ನು-ಗಮನಿಸಬೇಕು. ಋಭುಗಳ ಗುರುವಾದ ತ್ವಷ್ಟೃವಿನ ನಿರ್ಮಾಣಕಾರ್ಯವನ್ನು ಸೂಚಿಸುವುದಕ್ಕೆ ಯಾವ ತಕ್ಷ್ ಧಾತುವನ್ನು ಸಾಧಾರಣವಾಗಿ ಉಪಯೋಗಿಸಿರುವುದೋ ಇಲ್ಲಿಯೂ ಸಹ ಅಶ್ವಾದಶ್ವಮತಕ್ಷತ ಎಂದು ತಕ್ಷ್ ಧಾತುವನ್ನೇ ಉಪಯೋಗಿಸಿದೆ. ಇದಲ್ಲದೇ ಇದೇ ರೀತಿಯಲ್ಲಿ—ತಕ್ಷನ್ರಥಂ ಸುವೃತಂ (೧-೧೧೧-೧), ತ ಆ ತಕ್ಷನ್ತ್ವೃಭವೋ ರಯಿಂ (೪-೩೩-೮), ಇತ್ಯಾದಿ ಋಕ್ಕುಗಳಲ್ಲಿಯೂ ಸಹ ಋಭುಗಳ ಸೃಷ್ಟಿಕಾರ್ಯವನ್ನು ಈ ಧಾತುವಿನಿಂದಲೇ ಹೇಳಿರುವುದು ಇನ್ನೊಂದು ವಿಶೇಷವಾಗಿದೆ.

ಧೀತಿಭಿಃ—ಧೀತಿಶಬ್ದವು ಕರ್ಮನಾಮಗಳಲ್ಲಿಯೂ ಪ್ರಜ್ಞಾನಾಮಗಳಲ್ಲಿಯೂ ಸೇರಿರುವುದರಿಂದಲೂ, ಋಭುಗಳ ವೈಶಿಷ್ಟ್ಯವು ಈ ಎರಡು ಗುಣಗಳಿಂದಲೂ ಪ್ರಕಾಶಿತವಾಗಿರುವುದರಿಂದಲೂ ಇಲ್ಲಿ ಯಾವ ಅರ್ಥವನ್ನಾದರೂ ಹೇಳಬಹುದು.

### ವ್ಯಾಕರಣಪ್ರಕ್ರಿಯಾ

ಚರ್ಮಣಃ—ಚರ ಗತೌ ಧಾತು. ಸರ್ವಧಾತುಭ್ಯೋಮನಿನ್ (ಉ. ಸೂ. ೫೮೪) ಎಂಬುದರಿಂದ ಮನಿನ್ ಪ್ರತ್ಯಯ. ಞ್ನಿತ್ಯಾದಿರ್ನಿತ್ಯಮ್ (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಅರಿಣೀತ—ರೀ ಗತಿರೇಷಣಯೋಃ ಧಾತು. ಕ್ರ್ಯಾದಿ. ಲಙ್ ಮಧ್ಯಮಪುರುಷಬಹುವಚನದಲ್ಲಿ ತಾದೇಶ. ಕ್ರ್ಯಾದಿಭ್ಯಃಶ್ನಾ ಎಂಬುದರಿಂದ ಶ್ನಾ ವಿಕರಣ. ಪ್ವಾದೀನಾಂ ಹ್ರಸ್ವಃ (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ. ಈಹಲ್ಯಘೋಃ (ಪಾ. ಸೂ. ೬-೪-೧೧೩) ಎಂಬುದರಿಂದ ವಿಕರಣಾಕಾರಕ್ಕೆ ಈತ್ವ. ಅಟ್‌ಕುಪ್ವಾಙ್—ಎಂಬುದರಿಂದ ಣತ್ವ ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

ಜರಂತಾ—ಜೄಷ್ ವಯೋಹಾನೌ ಧಾತು. ಲಟಿಗೆ ಶತ್ರಾದೇಶ. ವ್ಯತ್ಯಯದಿಂದ ಶಪ್ ವಿಕರಣ. ಧಾತುವಿಗೆ ಗುಣ ರ ಪರವಾಗಿ ಬರುತ್ತದೆ ದ್ವಿವಚನ ಪರವಾದಾಗ ಸುಪಾಂ ಸುಲುಕ್—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. ಯಾ, ತಾ ಎಂಬಲ್ಲಿಯೂ ಹೀಗೆಯೇ ದ್ವಿವಚನಕ್ಕೆ ಆಕಾರಾದೇಶ.

ಅಕೃಣೋತನ—ಕೃವಿ ಹಿಂಸಾಕರಣಯೋಶ್ಚ ಧಾತು ಲಙ್ ಮಧ್ಯಮಪುರುಷಬಹುವಚನಕ್ಕೆ ತನಬಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಅತಕ್ಷತ—ತಕ್ಷೂ ತನೂಕರಣೇ ಧಾತು. ಲಙ್ ಮಧ್ಯಮಪುರುಷ ಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಯುಕ್ತ್ವಾ— ಯುಜಿರ್ ಯೋಗೇ ಧಾತು. ಅಂತರ್ಭಾವಿತಣ್ಯರ್ಥಕವಾಗಿದೆ. ಸಮಾನಕರ್ತೃಕ—(ಪಾ. ಸೂ ೩-೪-೨೧) ಎಂಬುದರಿಂದ ಕ್ತ್ವಾ ಪ್ರತ್ಯಯ. ಚೋಃಕುಃ ಎಂಬುದರಿಂದ ಕುತ್ವ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಅಯಾತನ—ಯಾ ಪ್ರಾಪಣೇ ಧಾತು. ಲಙ್ ಮಧ್ಯಮಪುರುಷಬಹುವಚನಕ್ಕೆ ಹಿಂದಿನಂತೆ ತನಬಾದೇಶ. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ. ॥ ೭ ॥

———:o:———

ಸಂಹಿತಾಪಾಠಃ

ಇದಮುದಕಂ ಪಿಬತೇತ್ಯಬ್ರವೀತನೇದಂ ವಾ ಘಾ ಪಿಬತಾ ಮುಂಜನೇಜನಂ ।

ಸೌಧನ್ವನಾ ಯದಿ ತನ್ನೇವ ಹರ್ಯಥ ತೃತೀಯೇ ಘಾ ಸವನೇ ಮಾದಯಾಧ್ವೈ ॥ ೮ ॥

ಪದಪಾಠಃ

ಇದಂ । ಉದಕಂ । ಪಿಬತ । ಇತಿ । ಅಬ್ರವೀತನ । ಇದಂ । ವಾ । ಘ । ಪಿಬತ । ಮುಂಜsನೇಜನಂ ।

ಸೌಧನ್ವನಾಃ । ಯದಿ । ತತ್ । ನsಇವ । ಹರ್ಯಥ । ತೃತೀಯೇ । ಘ । ಸವನೇ । ಮಾದಯಾಧ್ವೈ । ॥ ೮ ॥

ಸಾಯಣಭಾಷ್ಯಂ

ಇದಾನೀಮೃಷಿರ್ದೇವೈರುಕ್ತಮರ್ಥಂ ತಾನ್ಸಂಬೋಧ್ಯ ಯೂಯಮೃಭೂನೇವಮುಕ್ತವಂತಃ ಸ್ಥೇತ್ಯನುವಾಚಯತಿ । ಹೇ ಸೌಧನ್ವನಾಃ ಸುಧನ್ವನಃ ಪುತ್ರಾಃ ಯೂಯಮಿದಮುದಕಂ ಸೋಮಲಕ್ಷಣಂ ಪಿಬತೇತ್ಯಬ್ರವೀತನ । ಇತ್ಯುಕ್ತವಂತಃ ॥ ಬ್ರವೀತೇರ್ಲಙಿ ಮಧ್ಯಮಬಹುವಚನಸ್ಯ ತಸ್ಯ ತನಬಾದೇಶೇ ಪಿತ್ತ್ವಾದ್ಭ್ರುವ ಈಟ್ । ಪಾ. ೭-೩-೯೩ ॥ ಏತತ್ಪ್ರಾತಃಸವನಿಕಾಭಿಪ್ರಾಯಂ । ವಾಥವಾ । ಘೇತ್ಯನರ್ಥಕಃ ಪ್ರಸಿದ್ಧ್ಯರ್ಥೋ ವಾ । ಇದಂ ಮುಂಜನೇಜನಂ । ಮುಂಜವಾನ್ನಾಮ ಪರ್ವತಃ ಸೋಮೋತ್ಪತ್ತಿಸ್ಥಾನಂ । ತತ ಆಹೃತತ್ವಾತ್ತತ್ರೇನ ಮುಂಜತೃಣೇನ ಶೋಧಿತಂ । ಅಪಗತತೃಣಮಿತ್ಯರ್ಥಃ । ಇದಂ ಸೋಮರಸರೂಪ ಮುದಕಂ ಪಿಬತೇತ್ಯಬ್ರವೀತನ । ಏತನ್ಮಾಧ್ಯಂದಿನಸವನಾಭಿಪ್ರಾಯಂ । ಹೇ ಋಭವಃ ಯೂಯಂ ತದುಭಯಸವನಸಂಬಂಧಿ ಸೋಮಪಾನಕಾರ್ಯಂ ನೇವ ಹರ್ಯಥ । ನೈವ ಕಾಮಯಥ । ಹರ್ಯತಿಃ ಕಾಂತಿಕರ್ಮಾ । ಹರ್ಯತ್ಯುಶಿಗಿತಿ ತತ್ಕರ್ಮಸು ಪಾಠಾತ್ । ತೃತೀಯೇ ಸವನೇ ತು ಮಾದಯಾಧ್ವೈ । ಅತ್ಯರ್ಥಂ ತೃಪ್ತಾ ಭವಥ । ಋಭವೋ ದೇವಾಃ ಸೋಮಸ್ಯ ಮತ್ಸನ್ನಿತಿ ತೃತೀಯಸವನೇ ತೇಷಾಂ ಸೋಮಪಾನಸದ್ಭಾವಾತ್ । ಏವಂ ಯೂಯಮೃಭೂನುಕ್ತವಂತಃ । ಅಥವಾ ಋಭೂನ್ಪ್ರತಿ ತಸ್ಯೈ-

ವೇದಂ ವಾಕ್ಯಂ । ಹೇ ಸೌಧನ್ವನಾಃ ಯೂಯಂ ದೇವತ್ವಂ ಪ್ರಾಪ್ಯ ದೇವಯಜನಂ ಪ್ರತಿ ಸೋಮಪಾನಾಯ ರಥೇನಾಗತ್ಯ ಶ್ರಾಂತಾನಶ್ವಾನ್ ಪ್ರಾತ್ಸವನ ಇದಮುದಕಂ ಸೋಮಲಕ್ಷಣಂ ಪಿಬತೇತ್ಯಬ್ರವೀತನ । ತತ್ರ ಯದಿ ನೇಚ್ಛಥ ಇದಂ ವಾ ಮುಂಜನೇಜನಂ ಮುಂಜೇನ ದೂಷಿತಂ ವಾಜಿನಂ ಪಿಬತೇತ್ಯಬ್ರವೀತನ ಪಶ್ಚಾತ್ತ್ರದ್ವಯಂ ಯದಿ ನೇವ ಹರ್ಯಥ ಹೇ ಅಶ್ವಾಃ ಯೂಯಂ ತೃತೀಯೇ ಸವನೇ ಮಾಧಯಾಧ್ವೈ । ತತ್ರಾಪಿ ವಾಜಿನಪ್ರಚಾರಾತ್ ॥

ಪ್ರತಿಪದಾರ್ಥ

ಸೌಧನ್ವನಾಃ—ಎಲೈ ಸುಧನ್ವಪುತ್ರರಾದ ಋಭುಗಳೇ । ಇದಂ ಉದಕಂ—ಸೋಮರೂಪವಾದ (ಪ್ರಾತಃ ಸವನದ) ಈ ಉದಕವನ್ನು । ಪಿಬತ—ಕುಡಿಯಿರಿ । ಇತಿ—ಹೀಗೆಂಬುದಾಗಿ । ಅಬ್ರವೀತನ—ಹೇಳಿದರು । ವಾ (ಘ)—ಅಥವಾ । ಮುಂಜನೇಜನಂ—ಮುಂಜಪರ್ವತದಲ್ಲಿ ಸೋಮದೊಂದಿಗೆ ಬೆಳೆದ ತೃಣದಿಂದ ಬೇರೆಯಾಗಿ ಶುದ್ಧವಾದ । ಇದಂ (ಘ)—ಈ ರಸರೂಪವಾದ ಉದಕವನ್ನಾದರೂ । ಪಿಬತ—ಕುಡಿಯಿರಿ । ಯದಿ—ಒಂದು ವೇಳೆ । ತತ್—ಅದನ್ನೂ । ನೇವ ಹರ್ಯಥ—ಇಚ್ಛಿಸದಿದ್ದರೆ । ತೃತೀಯೇ ಘ ಸವನೇ—ತೃತೀಯಸವನದಲ್ಲಾದರೂ । ಮಾದಯಾಧ್ವೈ—ಪಾನವನ್ನುಮಾಡಿ ತೃಪ್ತಿಪಡಿರಿ.

ಭಾವಾರ್ಥ

ಎಲೈ ಸುಧನ್ವಪುತ್ರರಾದ ಋಭುಗಳೇ, ಪ್ರಾತ್ಸವನದಲ್ಲಿ ಸೋಮರೂಪವಾದ ಈ ಉದಕವನ್ನು ಕುಡಿಯಿರಿ. ಅಥವಾ ಮುಂಜತೃಣದಿಂದ ಬೇರೆಯಾದುದೂ ಶುದ್ಧವಾದುದೂ ಆದ ಮಾಧ್ಯಂದಿನಸವನದ ರಸವನ್ನು ಪಾನಮಾಡಿ ಅಥವಾ ಒಂದುವೇಳೆ ನಿಮಗೆ ಅದೂ ಹಿಡಿಸದಿದ್ದರೆ ತೃತೀಯಸವನದಲ್ಲಾದರೂ ಪಾನಮಾಡಿ ತೃಪ್ತಿಯನ್ನು ಹೊಂದಿರಿ.

English Translation

They, (the gods), have said, Sons of Sudhanwan, drink of this water, (the Soma juice); or drink that which has been filtered through the Munja grass; or if you be pleased with neither of these, be exhilarated (by that which is drunk) at the third (daily) sacrifice.

ವಿಶೇಷವಿಷಯಗಳು

ಈ ಋಕ್ಕಿಗೆ ಎರಡು ವಿಧವಾದ ಅನ್ವಯವನ್ನು ಮಾಡಿದೆ. ಮೊದಲನೆಯದಾಗಿ, ಸೂಕ್ತದ್ರಷ್ಟೃವಾದ ಋಷಿಯು ದೇವತೆಗಳನ್ನುದ್ದೇಶಿಸಿ ಅವರು ಋಭುಗಳಿಗೆ ಸೋಮಪಾನಕ್ಕಾಗಿ ಆಹ್ವಾನವಿತ್ತುದನ್ನು ಅವರಿಗೆ "ನೀವು ಋಭುಗಳಿಗೆ ಹೀಗೆ ಹೇಳಿದಿರಿ' ಎಂಬುದಾಗಿಯೂ, ಎರಡನೆಯದಾಗಿ, ಋಭುಗಳನ್ನೇ ಉದ್ದೇಶಿಸಿ, ಸೋಮಪಾನಕ್ಕಾಗಿ ದೇವಯಜ್ಞಕ್ಕಾಗಿ ತಮ್ಮ ರಥದಲ್ಲಿ ಬಂದ ನಂತರ ತಮ್ಮ ಅಶ್ವಗಳಿಗೆ ಅವರು ಪಾನಕ್ಕಾಗಿ ಪ್ರೇರಿಸಿದುದನ್ನು 'ನೀವು ನಿಮ್ಮ ಅಶ್ವಗಳಿಗೆ ಹೀಗೆ ಹೇಳಿದಿರಿ' ಎಂಬುದಾಗಿಯೂ ವಿವರಿಸಿದೆ.

ಇದಮುದಕಂ ಪಿಬತ; ಇದಂ ವಾ ಪಿಬತ; ತೃತೀಯೇ ಸವನೇ ಮಾದಯಧ್ವೈ । ಎಂದು ಮೂರು ಸಲ ಹೇಳಿರುವುದನ್ನು ಏತತ್ಪ್ರಾತಸ್ಸವನಿಕಾಭಿಪ್ರಾಯಂ ; ಏತನ್ಮಾಧ್ಯಂದಿನ ಸವನಾಭಿಪ್ರಾಯಂ ಎಂದು

ಮೊದಲನೆಯ ಎರಡು ವಾಕ್ಯಕ್ಕೆ ಸಂದರ್ಭವನ್ನು ತೋರಿಸಿದೆ. ತೃತೀಯಸವನದಲ್ಲಿ ಅವರಿಗೆ ಸ್ಥಾನವು ದೊರೆತದ್ದ ರಿಂದ ಮಾದಯೆಧ್ವೈ ಎಂಬ ಪದವನ್ನುಪಯೋಗಿಸಿದೆಯೆಂದು ತಿಳಿಸಿದೆ. ಮೊದಲು ಎರಡು ಸಲ ಅವರಿಗೆ ಅವ ಕಾಶವು ದೊರೆಯದೇ ಇದ್ದ ಸನ್ನಿವೇಶವು ಈ ರೀತಿ ವರ್ಣಿತವಾಗಿದೆ

ಋಭವೋ ವೈ ದೇವೇಷು ತಪಸಾ ಸೋಮಪೀಥಮಭ್ಯಜಯಂಸ್ತೇಭ್ಯಃ ಪ್ರಾತಸ್ಸವನೇ ವಾಚಿ ಕಲ್ಪಯಿಷಂಸ್ತಾನಗ್ನಿರ್ವಸುಭಿಃಪ್ರಾತಸ್ಸವನಾದನುದತ ।

(ಐ. ಬ್ರಾ ೩-೩೦)

ಋಭುಗಳು ತಮ್ಮ ಅಲೌಕಿಕವಾದ ಕರ್ಮಶಕ್ತಿಯಿಂದ ದೇವತೆಗಳ ಸ್ಥಾನವನ್ನು ಹೊಂದಿದರು. ಆಗ ದೇವತೆಗಳು ಅವರನ್ನೂ ತಮ್ಮೊಡನೆ ಸೋಮಪಾನಕ್ಕೆ ಸೇರಿಸಿಕೊಳ್ಳಬೇಕೆಂದು ಸಿದ್ಧಪಡಿಸಿದಾಗ ಅಗ್ನಿಯು ವಸುಗಳೊಂದಿಗೆ ಸೇರಿಕೊಂಡು ಅವರನ್ನು ಸೇರಿಸದೆ ಅಟ್ಟಬಿಟ್ಟನು.

ತೇಭ್ಯೋ ಮಾಧ್ಯಂದಿನೇ ಸವನೇ ವಾಚಿ ಕಲ್ಪಯಿಷಂಸ್ತಾನಿಂದ್ರೋ ರುದ್ರೈರ್ಮಾಧ್ಯಂದಿನಾ-ತ್ಸವನಾದನುದತ ।

(ಐ. ಬ್ರಾ. ೩-೩೦)

ಅನಂತರ ಮಾಧ್ಯಂದಿನಸವನದಲ್ಲಿ ಅವಕಾಶವನ್ನು ಕಲ್ಪಿಸಬೇಕೆಂಬು ದೇವತೆಗಳು ಸಿದ್ಧಪಡಿಸಿದಾಗ ರುದ್ರರೊಂದಿಗೆ ಸೇರಿಕೊಂಡು ಇಂದ್ರನು ಅವರನ್ನು ಅಟ್ಟಬಿಟ್ಟನು.

ತೇಭ್ಯಸ್ತೃತೀಯಸವನೇ ವಾಚಿ ಕಲ್ಪಯಿಷಂಸ್ತಾನ್ವಿಶ್ವೇದೇವಾಃ ಅನೋನುದ್ಯಂತ ನೇಹ ಪಾಸ್ಯಂತಿ ನೇಹೇತಿ ಸ ಪ್ರಜಾಪತಿರಬ್ರವೀತ್ಸವಿತಾರಂ ತವ ವಾ ಇಮೇಽನ್ತೇವಾಸಾಸ್ತ್ವಮೇವೈಭಿಃ ಸಂಪಿಬಸ್ವೇತಿ ಸ ತಥೇತ್ಯಬ್ರವೀತ್ಸವಿತಾ ತಾನ್ವೈ ತ್ವಮುಭಯತಃ ಪರಿಪಿಬೇತಿ ತಾನ್ಪ್ರಜಾಪತಿ-ರುಭಯತಃ ಪರ್ಯಪಿಬತ್ ।

(ಐ. ಬ್ರಾ. ೩-೩೦)

ಆಗಲೂ ಸಹ ವಿಶ್ವೇದೇವತೆಗಳು ಇವರನ್ನು ಸೇರಿಸದಿರಲು ಪ್ರಜಾಪತಿಯು ಸವಿತೃವನ್ನು ಕುರಿತು “ ಇವರು ನಿನ್ನ ಶಿಷ್ಯರು, ಇವರೊಡನೆ ನೀನು ಪಾನಮಾಡು ಎಂದಾಗ ಸವಿತೃವೂ ಅವನೊಂದಿಗೆ ಪ್ರಜಾಪತಿಯೂ ಋಭುಗಳ ಜೊತೆಯಲ್ಲಿ ಪಾನಮಾಡಿದರು. ಆ ವಿಷಯವನ್ನು ಇಲ್ಲಿ ತಿಳಿಸಿದೆ.

ಘ—ಘೇತ್ಯನರ್ಥಕಃ, ಪ್ರಸಿದ್ಧ್ಯರ್ಥೋ ವಾ । ಘ ಎನ್ನುವ ಪದವು ಅರ್ಥವಿಲ್ಲದೆ ಪಾದಪೂರಣಕ್ಕಾಗಿ ಸಾಧಾರಣವಾಗಿ ಉಪಯೋಗದಲ್ಲಿದೆ. ಕೆಲವೆಡೆಗಳಲ್ಲಿ ಪ್ರಸಿದ್ಧಾರ್ಥವನ್ನು ತಿಳಿಸುತ್ತದೆ.

ಪ್ರ ಘಾ ನ್ವಸ್ಯ ಮಹತೋ ಮಹಾನಿ ಸತ್ಯಾ ಸತ್ಯಸ್ಯ ಕರಣಾನಿ ವೋಚಂ ।

(ಋ. ಸಂ. ೨-೧೫-೧)

ಎಂಬಲ್ಲಿ ಘ ಇತಿ ಪ್ರಸಿದ್ಧಾ ಎಂದು ಇಂದ್ರನ ಪ್ರಸಿದ್ಧವಾದ ಮಹತ್ಕಾರ್ಯಗಳೆಂದು ಅರ್ಥಮಾಡಿದೆ.

ಆ ಘಾ ಗಮದ್ಯದಿ ಶ್ರವತ್ಸಹಸ್ರಿಣೀಭಿರೂತಿಭಿಃ । ವಾಜೇಭಿರುಪ ನೋ ಹವಂ ॥

(ಋ. ಸಂ. ೧-೩೦-೮)

ಎಂಬಲ್ಲಿ ಇಂದ್ರನು ನಮ್ಮ ಪ್ರಾರ್ಥನೆಯನ್ನು ಕೇಳಿದರೆ ಖಂಡಿತವಾಗಿಯೂ ಬಂದೇ ಬರುವನು ಎಂದು ಘೇಶಬ್ದಕ್ಕೆ ನಿಶ್ಚಯಾರ್ಥವನ್ನು ಹೇಳಿದೆ. ಪ್ರಕೃತವಾದ ಋಕ್ಕಿನಲ್ಲಿ ಕನಿಷ್ಠ ಪಕ್ಷ ಇದನ್ನಾದರೂ ಪಾನಮಾಡಿ ಎಂಬ ಮಿತಿಯನ್ನು ಸೂಚಿಸುವುದಾಗಿ ಅರ್ಥಮಾಡಬಹುದು

ಮುಂಜನೇಜನಂ— ಮುಂಜನ್ನಾಮ ಪರ್ವತಃ । ಸೋಮೋತ್ಪತ್ತಿಸ್ಥಾನಂ । ತತ ಆಹೃತಸ್ಯಾತ್ರೇನ ಮುಂಜತೃಣೇನ ಶೋಧಿತಂ । ಅಪಗತತೃಣಮಿತ್ಯರ್ಥಃ । ಮುಂಜವಾನ್ ಎಂಬ ಪರ್ವತದಿಂದ ತರಲ್ಪಟ್ಟು ಅಲ್ಲಿ ತೃಣಾದಿಗಳಿಂದ ಮಿಶ್ರವಾಗಿರುವುದರಿಂದ ಅಲ್ಲಿಂದ ತಂದನಂತರ ಆ ಕಲ್ಮಷಗಳನ್ನು ತೆಗೆದುಹಾಕಿ ಶುದ್ಧಿಮಾಡಿದುದು ಎಂದರ್ಥ. ನಿರುಕ್ತಕಾರರು,

ಪ್ರಾವೇಪಾ ಮಾ ಬೃಹತೋ ಮಾದಯಂತಿ ಪ್ರವಾತೇಜಾ ಇರಿಣೇ ವರ್ವೃತಾನಾಃ ।
ಸೋಮಸ್ಯೇವ ಮೌಜವತಸ್ಯ ಭಕ್ಷೋ ವಿಭೀದಕೋ ಜಾಗೃವಿರ್ಮಹ್ಯಮಚ್ಛಾನ್ ॥
(ಋ. ಸಂ. ೧೦-೩೪-೧)

ಎಂಬ ಋಕ್ಕನ್ನುದಹರಿಸಿ (ನಿ. ೯-೮) ಅಲ್ಲಿ ವಿಭೀದಕವೃಕ್ಷದ ಫಲದ ರುಚಿಯನ್ನು ಮೌಜಪರ್ವತದಲ್ಲಿ ಉತ್ಪನ್ನವಾದ ಸೋಮಲತೆಯರಸದ ಸ್ವಾದುತೆಗೆ ಹೋಲಿಸುವಾಗ ಈ ಪರ್ವತವನ್ನೂ ಈ ಪರ್ವತದಲ್ಲಿ ಉತ್ಪನ್ನವಾದ ಸೋಮದ ಸ್ವರೂಪವನ್ನೂ ವಿವರಿಸಿದ್ದಾರೆ.

ಮೌಜವತೋ ಮೂಜವತಿ ಜಾತಃ । ಮೂಜವಾನ್ ಪರ್ವತೋ ಮುಂಜವಾನ್ । ಮುಂಜೋ ವಿಮುಚ್ಯತೆ ಇಷೀಕಯಾ (ನಿ. ೯-೮) । ಮೌಜವತಃ (ಸೋಮಸ್ಯ) ಎಂದರೆ ಮುಂಜವತ್ಪರ್ವತದಲ್ಲಿ ಉತ್ಪನ್ನ-ವಾದುದೆಂದರ್ಥ. ಮುಂಜವೆಂಬ ತೃಣದಿಂದ ಪೂರಿತವಾದುದರಿಂದ ಆ ಪರ್ವತಕ್ಕೆ ಮೂಜವತ್ತೆಂಬ ಹೆಸರು ಪ್ರಸಿದ್ಧವಾಗಿದೆ. ಆ ಪರ್ವತದಲ್ಲಿ ಸೋಮಲತೆಯು ಉತ್ಪನ್ನವಾಗಿ ಅತ್ಯಂತ ಸ್ವಾದುವಾದ ರಸವನ್ನು ಹೊಂದಿರುತ್ತದೆಂದು ವಿವರಿಸಿದ್ದಾರೆ. ಆ ತೃಣದಿಂದ ಶೋಧಿಸಲ್ಪಟ್ಟು ಶುದ್ಧವಾದುದೆಂದು ಪ್ರಕೃತವಾದ ಋಕ್ಕಿನಲ್ಲಿ ಹೇಳಿದೆ.

ಮಾದಯಾಧ್ವೈ—ಪ್ರಾತಸ್ಸವನ ಮತ್ತು ಮಾಧ್ಯಂದಿನಸವನ ಈ ಎರಡು ಕಾಲಗಳ ಪಾನಕ್ಕೂ ಪಿಬತ ಎಂಬ ಪ್ರಯೋಗವಿದ್ದು ತೃತೀಯ ಸವನದ ಪಾನದಿಂದ ಮಾದಯಾಧ್ವೈ ಎಂದಿರುವುದು ತೃತೀಯಸವನದ ವೈಶಿಷ್ಟ್ಯವನ್ನು ತೋರಿಸುತ್ತದೆ. ಈ ಮಾದಕರೂಪವಾದ ತೃಪ್ತಿಯು ತೃತೀಯಸವನದ ಪಾನದಿಂದಲೇ ಸಾಧ್ಯ. ಹಿಂದೆ ಒಂದು ಸಲ ಮಾಧ್ಯಂದಿನಸವನದ ಪಾನಕ್ಕೂ ಸಹ ಈ ಪದವನ್ನು ಪ್ರಯೋಗಿಸಿದುದರಿಂದ ಒಂದು ಆಕ್ಷೇಪಣೆಗೂ ಕಾರಣವಾಗಿ ಅದಕ್ಕೆ ಸಮಾಧಾನವನ್ನು ಹೇಳಿದೆ.

ಅಸಾವಿ ದೇವಂ ಗೋಋಜೀಕಮಂಧ ಇತಿ ಮಧ್ಯಂದಿನ ಉನ್ನೀಯಮಾನೇಭ್ಯೋಽನ್ವಾಹ ವೃಷ-ಣ್ವತೀಃ ಪೀತವತೀಃ ಸುತವತೀರ್ಮದ್ವತೀ ರೂಪಸಮೃದ್ಧಾಃ । ಐಂದ್ರೀರನ್ವಾಹೈಂದ್ರೋ ವೈ ಯಜ್ಞಸ್ತ್ರಿಷ್ಟುಭೋಽನ್ವಾಹ ತ್ರೈಷ್ಟುಭಂ ವೈ ಮಾಧ್ಯಂದಿನಂ ಸವನಂ । ತದಾಹುರ್ಯತ್ತೃತೀಯ ಸವನಸ್ಯೈವ ರೂಪಂ ಮದ್ವದಥ ಕಸ್ಮಾನ್ಮಾಧ್ಯಂದಿನೇ ಮದ್ವತೀರನು ಚಾಹ ಯಜಂತಿ ಚಾಭಿರಿತಿ । ಮಾದ್ಯಂತೀವ ವೈ ಮಧ್ಯಂದಿನೇ ದೇವತಾಃ ಸಮೇವ ತೃತೀಯೆಸವನೇ ಮಾದ-ಯಂತೇ ತಸ್ಮಾನ್ಮಧ್ಯಂದಿನೇ ಮದ್ವತೀರನು ಚಾಹ ಯಜಂತಿ ಚಾಭಿಃ ॥
(ಐ. ಬ್ರಾ. ೬-೧೧)

ಮಾಧ್ಯಂದಿನಸವನದಲ್ಲಿ ಅಧ್ವರ್ಯುವು,

ಅಸಾವಿ ದೇವಂ ಗೋಋಜೀಕಮಂಧೋ ನ್ಯಸ್ಮಿನ್ನಿಂದ್ರೋ ಜನುಷೇಮುವೋಚ ।
ಬೋಧಾಮಸಿ ತ್ವಾ ಹರ್ಯಶ್ವ ಯಜ್ಞೈರ್ಬೋಧಾ ನಃ ಸ್ತೋಮಮಂಧಸೋ ಮದೇಷು ॥
(ಋ. ಸಂ ೭-೨೧-೧)

ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವನ್ನು ಪಠಿಸಬೇಕು. ಈ ಮೊದಲನೇ ಮಂತ್ರದಲ್ಲಿ ಅಂಧಸಃ ಮದೇಷು ಎಂದು ಮಾದಕದ ಸ್ವರೂಪವು ಹೇಳಲ್ಪಟ್ಟಿದೆ. ಆದರೆ ಸಕಲದೇವತೆಗಳಿಗೂ ತೃತೀಯಸವನದ ಸೋಮ ಪಾನದ ಕಾಲದಲ್ಲಿಯೇ ಹರ್ಷಪ್ರಾಪ್ತಿಯಾಗುವುದರಿಂದ ಮಾಧ್ಯಂದಿನದ ಅವಸರದಲ್ಲಿ ಈ ಪದಪ್ರಯೋಗವಿರುವ ಋಕ್ಕನ್ನು ಪಠಿಸುವ ಕಾರಣವೇನು ಎಂಬ ಪ್ರಶ್ನೆಯು ಸಂಭವಿಸುತ್ತದೆ. ಆದರೆ ಮಾಧ್ಯಂದಿನ ಸವನದಲ್ಲಿಯೂ ದೇವತೆ ಗಳಿಗೆ ಸೋಮಪಾನವಿರುವುದರಿಂದ ಅವರಿಗೆ ಮದವು ಪ್ರಾಪ್ತವಾಗಿಯೇ ಆಗುತ್ತದೆ. ಆದರೆ ತೃತೀಯಸವನದಲ್ಲಿ ಸೋಮಪಾನಸಂಪತ್ತ್ಯಾ ಸಂಮಾದಯಂತೇ ಸೋಮಪಾನದಿಂದ ಅತ್ಯಂತ ಅತಿಶಯವಾಗಿ ಹರ್ಷಿತರಾಗುತ್ತಾರೆ. ಅಷ್ಟೇ ವ್ಯತ್ಯಾಸ. ಆದುದರಿಂದ ಬಾಧಕವಿಲ್ಲ ಎಂದು ಐತರೇಯಬ್ರಾಹ್ಮಣದಲ್ಲಿ ವಿವರಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ತೃತೀಯಸವನದ ಹರ್ಷಾಧಿಕ್ಯವನ್ನು ಸೂಚಿಸಲು ಮಾದಯಾಧ್ವೈ ಎಂಬ ಪದದ ಪ್ರಯೋಗವಿದೆ. ಈ ಹರ್ಷದ ಸ್ವರೂಪವೇನು ಎಂದರೆ,—

ಅಪಾದಿಂದ್ರೋ ಅಪಾದಗ್ನಿರ್ವಿಶ್ವೇ ದೇವಾ ಅಮತ್ಸತ ।
ವರುಣ ಇದಿಹ ಕ್ಷಯತ್ತಮಾಪೋ ಅಭ್ಯನೂಷತ ವತ್ಸಂ ಸಂಶಿಶ್ವರೀರಿವ ॥
(ಋ. ಸಂ. ೮-೬೯-೧೧)

ಎಂಬಲ್ಲಿ ಇಂದ್ರನ, ಅಗ್ನಿಯ ಮತ್ತು ವರುಣಾದಿದೇವತೆಗಳ ಸೋಮಪಾನದಿಂದ ಉತ್ಪನ್ನವಾದ ಉನ್ಮತ್ತತೆಯಿಂದ ಕೂಡಿದುದೂ ಶಬ್ದಾತ್ಮಕವಾದುದೂ ಆದ ಸಂತೋಷಾಭಿವ್ಯಕ್ತಿಯನ್ನು ವತ್ಸವನ್ನು ನೋಡಿ ಅದರ ಹತ್ತಿರಕ್ಕೆ ಶಬ್ದ ಮಾಡಿಕೊಂಡು ಓಡಿಹೋಗುತ್ತಿರುವ ಹಸುವಿನ ಸಂತೋಷಾಭಿವ್ಯಕ್ತಿಗೆ ಹೋಲಿಸಿದೆ. ಅಂತಹ ಉನ್ಮಾದಕವಾದ ಹರ್ಷಕ್ಕೆ ಭಾಗಿಗಳಾಗಬೇಕೆಂದು ಋಭುಗಳು ಪ್ರಾರ್ಥಿತರಾಗಿದ್ದಾರೆ.

(ನೇವ) ಹರ್ಯಥ—ಹರ್ಯತಿಃ ಕಾಂತಿಕರ್ಮಾ (ನಿ. ೩-೬) ಹರ್ಯತಿಃ ಪ್ರೇಪ್ಸಾಕರ್ಮಾ ವಿಹರ್ಯತೀತಿ (ನಿ ೭-೧೭). ಅತ್ಯಾಕರ್ಷಕವಾದುದರಿಂದ ಆ ವಸ್ತುವನ್ನಪೇಕ್ಷಿಸು ಎಂಬರ್ಥವನ್ನು ಕೊಡುತ್ತದೆ. ಹಿರಣ್ಯ ಶಬ್ದದ ನಿರ್ವಚನವನ್ನು ತೋರಿಸುವಾಗ ನಿರುಕ್ತಕಾರರು ಹರ್ಯತೇರ್ವಾ ಸ್ಯಾತ್‌ಪ್ರೇಪ್ಸಾಕರ್ಮಣಃ (ನಿ ೨-೧೦) ಎಂದು ಮೇಲಿನ ಅರ್ಥವಿರುವುದರಿಂದಲೇ ಹಿರಣ್ಯವೆಂಬ ಹೆಸರು ಪ್ರಸಿದ್ಧವಾಗಿದೆಯೆಂದೂ ತಿಳಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಅದರ ನಿಷೇಧಾರ್ಥಕವಾದ ಪ್ರಯೋಗವಿದೆ. ನೀವು ಪ್ರಾತಸ್ಸವನದ ಮತ್ತು ಮಾಧ್ಯಂದಿನಸವನದ ಸೋಮಪಾನವನ್ನು ಅಪೇಕ್ಷಿಸದೇ ಇದ್ದ ಪಕ್ಷದಲ್ಲಿ ಅವಕ್ಕಿಂತಲೂ ಅಧಿಕವಾಗಿ ಹರ್ಷಕಾರಕವಾದ ತೃತೀಯಸವನದ ಪಾನವನ್ನು ಹೊಂದಿ ಅದರಲ್ಲಿ ತೃಪ್ತಿಯನ್ನು ಪಡೆಯಿರಿ ಎಂದು ಪ್ರಾರ್ಥಿಸಿದೆ.

### ವ್ಯಾಕರಣಪ್ರಕ್ರಿಯಾ

ಪಿಬತ—ಪಾ ಪಾನೇ ಧಾತು. ಲೋಟ್ ಮಧ್ಯಮಪುರುಷಬಹುವಚನದಲ್ಲಿ ಲಬ್ದ್ವದ್ಭಾವವಿರುವುದರಿಂದ

ತಾದೇಶ. ಪಾಘ್ರಾಧ್ಮಾ—(ಪಾ. ಸೂ. ೭-೩-೭೮) ಎಂಬುದರಿಂದ ಧಾತುವಿಗೆ ಪಿಬಾದೇಶ. ತಿಙಂತನಿಘಾತಸ್ವರ ಬರುತ್ತದೆ.

ಅಬ್ರವೀತನ—ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು. ಲಙ್ ಮಧ್ಯಮಪುರುಷಬಹುವಚನದಲ್ಲಿ ತಪ್ತ-ನಪ್ತ—ಎಂಬುದರಿಂದ ತನಬಾದೇಶ. ಬ್ರುವಈಟ್ (ಪಾ. ಸೂ. ೭-೩-೯೩) ಸೂತ್ರದಿಂದ ಈಟಾಗಮ. ಪ್ರತ್ಯಯ ಪಿತ್ತಾದುದರಿಂದ ಗುಣ ಅವಾದೇಶ. ತಿಙಂತನಿಘಾತಸ್ವರ ಬರುತ್ತದೆ.

ಘಾ—ಋಚಿತನುಘ—(ಪಾ. ಸೂ. ೬-೩-೧೩೩) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

ಹರ್ಯಥ—ಲಟ್ ಮಧ್ಯಮಪುರುಷಬಹುವಚನಾಂತರೂಪ. ಹರ್ಯ ಗತಿಕಾಂತ್ಯೋಃ ಧಾತು. ಕಾಂತ್ಯರ್ಥದಲ್ಲಿ ಇಲ್ಲಿ ಪ್ರಯುಕ್ತವಾಗಿದೆ. ಹರ್ಯತಿ ಉಶಿಕ್ (ನಿರು. ೨-೬-೧೦) ಎಂಬ ಯಾಸ್ಕರು ಹೇಳಿರುತ್ತಾರೆ.

ಮಾದಯಾಧ್ವೈ—ಮದ ತೃಪ್ತಿಯೋಗೇ ಧಾತು. ಚುರಾದಿ. ಆಕುಸ್ಮಾದಾತ್ಮನೇಪದಿನಃ ಎಂಬುದರಿಂದ ನಿತ್ಯವಾಗಿ ಆತ್ಮನೇಪದಿಯಾಗುತ್ತದೆ. ಲೇಟ್ ಮಧ್ಯಮಪುರುಷಬಹುವಚನದಲ್ಲಿ ಧ್ವಮ್ ಪ್ರತ್ಯಯ. ಟಿತಆತ್ಮನೇಪದಾ—(ಪಾ. ಸೂ. ೩-೪-೭೯) ಎಂಬುದರಿಂದ ಟಿಗೆ ಏತ್ವ. ಲೇಟೋಽಡಾಟೌ (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಆಡಾಗಮ. ವೈತೋಽನ್ಯತ್ರ (ಪಾ. ಸೂ. ೩-೪-೯೬) ಎಂಬುದರಿಂದ ಏಕಾರಕ್ಕೆ ಐಕಾರಾದೇಶ. ಸತ್ಯಾಪಪಾಶ—(ಪಾ. ಸೂ. ೩-೧-೨೫) ಸೂತ್ರದಿಂದ ಸ್ವಾರ್ಥದಲ್ಲಿ ಬಂದ ಣಿಚ್ ನಿಮಿತ್ತವಾಗಿ ಧಾತುವಿನ ಉಪಧೆಗೆ ವೃದ್ಧಿ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೮ ॥

———:o:———

ಸಂಹಿತಾಪಾಠಃ

ಆಪೋ ಭೂಯಿಷ್ಠಾ ಇತ್ಯೇಕೋ ಅಬ್ರವೀದಗ್ನಿರ್ಭೂಯಿಷ್ಠ ಇತ್ಯನ್ಯೋ ಅಬ್ರವೀತ್ ।

ವಧರ್ಯಂತೀಂ ಬಹುಭ್ಯಃ ಪ್ರೈಕೋ ಅಬ್ರವೀದೃತಾ ವದಂತಶ್ಚಮಸಾँ ಅಪಿಂಶತ ॥ ೯ ॥

ಪದಪಾಠಃ

ಆಪಃ । ಭೂಯಿಷ್ಠಾಃ । ಇತಿ । ಏಕಃ । ಅಬ್ರವೀತ್ । ಅಗ್ನಿಃ । ಭೂಯಿಷ್ಠಃ । ಇತಿ । ಅನ್ಯಃ । ಅಬ್ರವೀತ್ ।

ವಧಃಽಯಂತೀಂ । ಬಹುಽಭ್ಯಃ । ಪ್ರ । ಏಕಃ । ಅಬ್ರವೀತ್ । ಋತಾ । ವದಂತಃ । ಚಮಸಾನ್ । ಅಪಿಂಶತ ॥ ೯ ॥

ಸಾಯಣಭಾಷ್ಯಂ

ಚಮಸಚತುರ್ಧಾಕರಣಕಾಲೇ ಕಿಮಿತಿ ಸತ್ಯಂ ವದಂತೋ ವ್ಯಭಜನ್ನಿತಿ ತದಾಹ । ಏಕಸ್ತ್ರಯಾಣಾಮನ್ಯತಮ ಆಪೋ ಭೂಯಿಷ್ಠಾ ಇತ್ಯಬ್ರವೀತ್ । ನ ಹ್ಯುದಕಾತ್ಪ್ರಶಸ್ತಂ ಲೋಕೋಪಕಾರಕಂ ತತ್ತ್ವಾಂತರಮಸ್ತಿ । ಆಪೋ ಭೂಯಿಷ್ಠಾ ಇತ್ಯೃತಮವಾದೀತ್ । ಅಪಾಮೇವ ಶ್ರೇಷ್ಠತ್ವಮಪ ಏವ ಸಸರ್ಜಾದೌ । ಮನು. ೧-೮ । ಇತ್ಯಾದಿಶಾಸ್ತ್ರಾತ್ । ತಥಾನ್ಯೋಽಗ್ನಿರ್ಭೂಯಿಷ್ಠ ಇತ್ಯಬ್ರವೀತ್ । ಆಂತರಂ ಬಾಹ್ಯಂ ಚ ದಾಹಪಾಕಭುಕ್ತಜರಣಾದಿವ್ಯಾಪಾರೇಣಾಗ್ನೇರೇವ ಜಗನ್ನಿರ್ವಾಹಕತ್ವಾದಗ್ನೇರೇವ ಭೂಯಿಷ್ಠತ್ವಮಿತ್ಯೇವ ಮನ್ಯತೇ । ತಥಾ ವರ್ಧಯಂತೀಂ । ವಧರಿತಿ ರೇಫಾಂತೋಽಪಿ ವಜ್ರನಾಮ ವಧೋಽರ್ಕ ಇತಿ ತನ್ನಾಮಸು ಪಾಠಾತ್ । ತದಿಚ್ಛತಿ ವೃಷ್ಟ್ಯುದಕಾಯೇತಿ ವರ್ಧಯಂತೀ ಮೇಘಪಂಕ್ತಿರುಚ್ಯತೇ । ಯದ್ಯಪೀಯಂ ಸ್ವವಧಾರ್ಥಂ ವಜ್ರಂ ಸ್ವಯಮೇವ ನಾಪೇಕ್ಷತೇ ತಥಾಪಿ ವೃಷ್ಟ್ಯರ್ಥಮಿಂದ್ರವಜ್ರೇಣ ಹನ್ಯಮಾನತ್ವಾತ್ ತದಿಚ್ಛಂತೀತ್ಯುಪಚರ್ಯತೇ । ಯದ್ವಾ । ಬಹುಭ್ಯಸ್ತ್ರೇಷಾಮರ್ಥಾಯ ವರ್ಧಯಂತೀ ವಧಮಾತ್ಮನ ಇಚ್ಛಂತೀಂ ಭೂಮಿಂ ॥ ಛಾಂದಸೋ ರೇಫೋಪಜನಃ ॥ ತಾಮೇವೈಕೋ ಬಹುಭ್ಯಃ ಸಂವಾದಿಭ್ಯಃ ಶ್ರೇಷ್ಠತಮಾಮಬ್ರವೀತ್ । ಉದಕಸ್ಯಾಪಿ ಮೇಘಕಾರಣತ್ವಾತ್ । ಏವಮೃತಾ ಋತಾನ್ಯುಕ್ತರೂಪಾಣಿ ಯಥಾರ್ಥಾನಿ ವಾಕ್ಯಾನಿ ವದಂತಃ ಪರಸ್ಪರಂ ಬ್ರುವಂತಶ್ಚಮಸಾನಪಿಂಶತ । ಅವಯವಿನೋಽಕುರುತ । ಚತುರ್ಧಾ ವ್ಯಭಜತೇತ್ಯರ್ಥಃ ॥ ಪಿಶ ಅವಯವೇ । ಶೇ ಮುಚಾದೀನಾಮಿತಿ ನುಮ್ ॥ ಇದಮೇವರ್ತವಚನಮಪೇಕ್ಷ್ಯರ್ಭುಶಬ್ದಂ ವ್ಯಾಚಕ್ಷಾಣೋ ಯಾಸ್ಕಃ । ಋಭವ ಉರು ಭಾಂತೀತಿ ವರ್ತೇನ ಭಾಂತೀತಿ ವರ್ತೇನ ಭವಂತೀತಿ ವಾ । ನಿ. ೧೧-೧೫ । ಇತ್ಯುಕ್ತತ್ವಾತ್ ॥

ಪ್ರತಿಪದಾರ್ಥ

ಆಪಃ—ಉದಕವು । ಭೂಯಿಷ್ಠಾ—ಅತ್ಯಂತಪ್ರಶಸ್ಯವಾದುದು (ಎಲ್ಲಕ್ಕಿಂತಲೂ ಹೆಚ್ಚು ಶ್ರೇಷ್ಠವಾದುದು) । ಇತಿ—ಹೀಗೆಂಬುದಾಗಿ । ಏಕಃ—ಋಭುಗಳಲ್ಲಿ ಒಬ್ಬನು । ಅಬ್ರವೀತ್—ಹೇಳಿದನು । ಅಗ್ನಿಃ—ಅಗ್ನಿಯು । ಭೂಯಿಷ್ಠಃ—ಅತ್ಯಂತ ಶ್ರೇಷ್ಠವಾದುದು । ಇತಿ—ಎಂಬುದಾಗಿ । ಅನ್ಯಃ—ಇನ್ನೊಬ್ಬನು । ಅಬ್ರವೀತ್—ಹೇಳಿದನು । ಏಕಃ—ಮೂರನೆಯವನು । ವರ್ಧಯಂತೀಂ—ಮೇಘವನ್ನು ಅಥವಾ ಪೃಥ್ವಿಯನ್ನು । ಪ್ರ—ಉತ್ಕೃಷ್ಟತರವೆಂದು । ಬಹುಭ್ಯಃ—ಸಂವಾದವನ್ನು ಮಾಡುತ್ತಿದ್ದವರಿಗೆಲ್ಲಾ । ಅಬ್ರವೀತ್—ಹೇಳಿದನು । (ಏವಂ—ಈ ರೀತಿಯಲ್ಲಿ) । ಋತಾ—ಸತ್ಯಾತ್ಮಕಗಳಾದ ವಿಷಯಗಳನ್ನು । ವದಂತಃ—ಪ್ರಕಾಶಪಡಿಸಿ ವಿವರಿಸುತ್ತಾ । ಚಮಸಾನ್—(ಒಂದೇ ಆದ ಚಮಸಪಾತ್ರೆಯನ್ನು) । ಅಪಿಶಂತ—ನಾಲ್ಕು ಅವಯವಗಳಾಗುವಂತೆ (ನಾಲ್ಕಾಗುವಂತೆ) ವಿಭಾಗಿಸಿದರು.

ಭಾವಾರ್ಥ

ಉದಕವು ಅತ್ಯಂತ ಶ್ರೇಷ್ಠವಾದ ತತ್ತ್ವವೆಂದು ಋಭುಗಳಲ್ಲಿ ಒಬ್ಬನು ಹೇಳಿದನು. ಅಗ್ನಿಯು ಸರ್ವಶ್ರೇಷ್ಠವೆಂದು ಇನ್ನೊಬ್ಬನು ಹೇಳಿದನು. ಪೃಥ್ವಿಯೇ ಸರ್ವೋತ್ಕೃಷ್ಟಳೆಂದು ಮೂರನೆಯವನು ಅಲ್ಲಿ ಸಂವಾದವನ್ನು ಮಾಡುತ್ತಿದ್ದ ಇತರರಿಗೆಲ್ಲಾ ಹೇಳಿದನು. ಹೀಗೆ ಅವರೆಲ್ಲರೂ ಪರಸ್ಪರವಾಗಿ ಸತ್ಯಾತ್ಮಕಗಳಾದ ವಿಷಯಗಳನ್ನು ವಿವರಿಸುತ್ತಾ ಒಂದೇ ಆದ ಚಮಸಪಾತ್ರೆಯನ್ನು ನಾಲ್ಕು ಅವಯವಗಳಾಗುವಂತೆ ವಿಭಾಗಿಸಿದರು.

## English Translation

Waters are the most excellent, said one (of them): Agni is the most excellent, said another: the third declared to many the Earth (to be the most excellent), and thus speaking true things the Ribhus divided the ladle.

### ವಿಶೇಷವಿಷಯಗಳು

ಶ್ರೇಷ್ಠವಾದ ಕರ್ಮಗಳಿಂದ ಪ್ರಸಿದ್ಧರಾದ ಋಭುಗಳು (ಸ್ವಪಸಃ) ಈ ಋಕ್ಕಿನಲ್ಲಿ ತಮ್ಮ ಉತ್ತಮವಾದ ತತ್ತ್ವಜ್ಞಾನವನ್ನೂ ಪ್ರಕಾಶಪಡಿಸಿದ್ದಾರೆ. ನೀರೇ ಶ್ರೇಷ್ಠವಾದ ತತ್ತ್ವವೆಂದು ಒಬ್ಬನೂ. ಅಗ್ನಿಯೆಂದಿನ್ನೊಬ್ಬನೂ, ಪೃಥ್ವಿಯೆಂದು ಮೂರನೆಯವನೂ ತಮ್ಮ ತಮ್ಮ ಮತವನ್ನು ತಿಳಿಸಿದ್ದಾರೆ. ವಿಶ್ವಕ್ಕೆಲ್ಲಾ ಮೂಲತತ್ತ್ವವಾವುದು ಎಂಬುದಕ್ಕಿಂತ ವಿಶ್ವದಲ್ಲೆಲ್ಲಾ ಶ್ರೇಷ್ಠವಾದ ತತ್ತ್ವವಾವುದೆಂಬುದೇ ಈ ಸಂವಾದದ ವಿಷಯವಾಗಿದೆ. ಆದರೆ ಸಾಯಣರು ಆಪಾಮೇವ ಶ್ರೇಷ್ಠತ್ವಮುಪ ಏವ ಸಸರ್ಜಾದಾವಿತ್ಯಾದಿಶಾಸ್ತ್ರಾತ್ । ಎಂದು ಅಪ್ಪೇ ಸೃಷ್ಟಿಯಲ್ಲೆಲ್ಲಾ ಪ್ರಥಮವಾದುದರಿಂದ ಅದೇ ಶ್ರೇಷ್ಠವೆಂದೂ ತಿಳಿಸಿದ್ದಾರೆ. ಶ್ರೇಷ್ಠತ್ವಕ್ಕೆ ಇದೊಂದುಕಾರಣ. ಅಥವಾ ನಹ್ಯುದಕಾತ್ಪ್ರಶಸ್ಯಂ ಲೋಕೋಪಕಾರಕಂ ತತ್ತ್ವಾಂತರಮಸ್ತಿ—ಉದಕಕ್ಕಿಂತಲೂ ಲೋಕೋಪಕಾರಕವಾದ ಬೇರೆ ತತ್ತ್ವವಿನ್ನೊಂದಿಲ್ಲ ಎಂದು ಶ್ರೇಷ್ಠತ್ವಕ್ಕೆ ಎರಡನೆಯ ಕಾರಣವನ್ನೂ ತೋರಿಸಿದ್ದಾರೆ. ಪ್ರಕೃತದಲ್ಲಿ (ಅಪ್) ಅಪ್ಪು, ಅಗ್ನಿ, ಪೃಥಿವೀ ಈ ಮೂರರಲ್ಲಿ ಎಲ್ಲವೂ ಶ್ರೇಷ್ಠವಾದ ತತ್ತ್ವಗಳೆಂದೇ ಪ್ರಸಿದ್ಧವಾಗಿದೆ. ಸೃಷ್ಟಿಗಳಲ್ಲೆಲ್ಲಾ ಆದಿಯೆಂಬ ಅಂಶವನ್ನು ತೆಗೆದುಕೊಂಡರೂ ಅಥವಾ ಲೋಕೋಪಕಾರಕವೆಂಬ ಅಂಶವನ್ನು ತೆಗೆದುಕೊಂಡರೂ ಎಲ್ಲವೂ ತಮ್ಮ ವೈಶಿಷ್ಟ್ಯದಿಂದ ಪ್ರಶಸ್ಯವಾದ ಸ್ಥಾನವನ್ನು ಪಡೆಯುತ್ತವೆ. ಆದುದರಿಂದ ಈ ಮೂರು ಮತಗಳೂ ಸತ್ಯವನ್ನೇ ಪ್ರತಿಬಿಂಬಿಸುತ್ತವೆ. ಒಂದಕ್ಕೊಂದು ವಿರೋಧಿಯೆಂದು ಇದರಿಂದ ತಿಳಿಯಬಾರದು. ಕೆಲವುವೇಳೆ ಅಪ್ಪಿನಿಂದಲೇ ಅಗ್ನಿಸೃಷ್ಟಿಯೆಂದೂ, ಕೆಲವುವೇಳೆ ತೇಜೋರೂಪವಾದ ಅಗ್ನಿಯಿಂದಲೇ ಅಪ್ಪಿನ ಸೃಷ್ಟಿಯೆಂದೂ, ಅಗ್ನಿಯೇ ಅಪ್ಪಿಗೆ ಅನ್ನವೆಂದೂ ವಿಶ್ವದ ಮೂಲತತ್ತ್ವವನ್ನು ವಿಮರ್ಶಿಸುವಾಗ ಹೇಳಿರುವುದರಿಂದ ಈ ಮೂವರ ಮತದಲ್ಲೂ ಸತ್ಯವಿದೆ.

ಆಪೋ ಭೂಯಿಷ್ಠಾಃ—ಎಲ್ಲಕ್ಕೂ ಉದಕವೇ ಮೂಲವು. ಉದಕದಿಂದಲೇ ಅನ್ನ, ಉದಕದಿಂದಲೇ ಶುದ್ಧಿ, ಉದಕದಿಂದಲೇ ಇತರ ತತ್ತ್ವಗಳ ಉತ್ಪತ್ತಿ. ಆದುದರಿಂದ ಉದಕವು ಶ್ರೇಷ್ಠ ಎಂಬ ಮತಕ್ಕೆ ಸಮರ್ಥನೆಯನ್ನು ಕೊಡುತ್ತಾ ಅನೇಕ ವಾಕ್ಯಗಳಲ್ಲಿ ಉದಕದ ಪ್ರಶಂಸೆಯಿದೆ.

ಓಮಾನಮಾಪೋ ಮಾನುಷೀರಮೃಕ್ತಂ ಧಾತ ತೋಕಾಯ ತನಯಾಯ ಶಂಯೋಃ ।
ಯೂಯಂ ಹಿ ಷ್ಠಾ ಭಿಷಜೋ ಮಾತೃತಮಾ ವಿಶ್ವಸ್ಯ ಸ್ಥಾತುರ್ಜಗತೋ ಜನಿತ್ರೀಃ ॥

(ಋ. ಸಂ. ೬-೫೦-೭)

ಅಪ್ಪುಗಳೇ ಸಕಲ ಸ್ಥಾವರಜಂಗಮಾತ್ಮಕವಾದ ಜಗತ್ತಿಗೂ ಉತ್ಪಾದಕಗಳು. ಅವುಗಳೇ ಸಕಲ ರಕ್ಷಣೆಯನ್ನೂ ಕೊಡತಕ್ಕವು. ಸಕಲವಿಶ್ವಕ್ಕೂ ಜನನಿಯಂತೆ ಪೋಷಕಗಳು. ಅಲ್ಲದೇ,

ಆಪೋ ಹ ಯದ್ಬೃಹತೀರ್ವಿಶ್ವಮಾಯನ್ ಗರ್ಭಂ ದಧಾನಾ ಜನಯಂತೀರಗ್ನಿಂ ।
ತತೋ ದೇವಾನಾಂ ಸಮವರ್ತತಾಸುರೇಕಃ ಕಸ್ಮೈ ದೇವಾಯ ಹವಿಷಾ ವಿಧೇಮ ।

(ಋ. ಸಂ. ೧೦-೧೨೧-೭)

ವಿಶ್ವಕ್ಕೆಲ್ಲಾ ಮೂಲವಾದ ಅಪ್ಪು ಅಗ್ನ್ಯುಪಲಕ್ಷಿತವಾದ ಸಕಲಭೂತಜಾತಗಳ ಸೃಷ್ಟಿಗಾಗಿ ಹಿರಣ್ಯಗರ್ಭನನ್ನು ತಮ್ಮಲ್ಲೇ ಧರಿಸಿಕೊಂಡು ಸಕಲಜಗತ್ತನ್ನೂ ವ್ಯಾಪಿಸಿಕೊಂಡವು. ಸೃಷ್ಟಿಕರ್ತನಾದ ಪ್ರಜಾಪತಿಯೂ ಸಹ ಅಲ್ಲಿಂದ ಉತ್ಪನ್ನನಾದನು.

ಆಪೋ ಹ ವಾ ಇದಮಗ್ರೇ ಸಲಿಲಮೇವಾಸ । ತಾ ಅಕಾಮಯಂತ ಕಥಂ ನು ಪ್ರಜಾಯೇ-
ಮಹೀತಿ ತಾ ಅಶ್ರಾಮ್ಯಂಸ್ತಾಸ್ತಪೋಽತಪ್ಯಂತ ತಾಸು ತಪಸ್ತಪ್ಯಮಾನಾಸು ಹಿರಣ್ಮಯ
ಮಾಂಡಗ್ಂ ಸಂಬಭೂವ ।

(ಶ. ಬ್ರಾ. ೧೧-೧-೬-೧)

ಸೃಷ್ಟಿಗಿಂತ ಪೂರ್ವಭಾವಿಯಾಗಿ ಲೋಕವನ್ನೆಲ್ಲಾ ಅಪ್ಪೇ ಆವರಿಸಿತ್ತು. ಸಂತತಿಯರೂಪದಿಂದ ವೃದ್ಧಿಯನ್ನು ಹೊಂದ ಲಿಚ್ಛಿಸಿ ಅವು ತಪಸ್ಸನ್ನಾಚರಿಸಲು ಅವುಗಳಿಂದ ಹಿರಣ್ಮಯವಾದ ಅಂಡವು ಉದ್ಭವಿಸಿತು, ಎಂದೂ ಶತಪಥಬ್ರಾಹ್ಮಣ ದಲ್ಲಿ ಋಕ್ಸಂಹಿತೆಯ ೧೦-೧೨೧-೭ನೇ ಋಕ್ಕಿನ ಭಾವವನ್ನು ಹೇಳಿದೆ. ಇದೇ ತತ್ತ್ವವನ್ನು-

ಆಪೋ ಅಗ್ರೇ ವಿಶ್ವಮಾವನ್ ಗರ್ಭಂ ದಧಾನಾ ಅಮೃತಾ ಋತಜ್ಞಾಃ ।
ಯಾಸು ದೇವೀಷ್ವಧಿ ದೇವ ಆಸೀತ್ .... .... .... .... .... ।

(ಅ. ವೇ. ೪-೨-೬)

ಆಪೋ ವತ್ಸಂ ಜನಯಂತೀರ್ಗರ್ಭಮಗ್ರೇ ಸಮೈರಯನ್ ।
ತಸ್ಯೋತ ಜಾಯಮಾನಸ್ಯ ಉಲ್ಬ ಆಸೀದ್ಧಿರಣ್ಯಯಃ ।

(ಅ. ವೇ. ೪-೨-೮)

ಇತ್ಯಾದಿಯಾಗಿ ಅಥರ್ವವೇದದಲ್ಲೂ ಪ್ರತಿಪಾದಿಸಿದೆ. ಇದರಂತೆಯೇ,

ಇಮಾ ಆಪಃ ಸರ್ವೇಷಾಂ ಭೂತಾನಾಂ ಮಧ್ವಾಸಾಮಪಾಂ ಸರ್ವಾಣಿ ಭೂತಾನಿ ಮಧು ಯಶ್ಚಾ-
ಯಮಾಸ್ವಪ್ಸು ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯ-
ಮಾತ್ಮೇದಮಮೃತಮಿದಂ ಬ್ರಹ್ಮೇದಂ ಸರ್ವಂ

(ಬೃ. ಉ. ೨-೫-೨)

ಎಂದು ಬೃಹದಾರಣ್ಯಕೋಪನಿಷತ್ತಿನ ಮಧುವಿದ್ಯಾಕಾಂಡದಲ್ಲಿ ಅಪ್ಪುಗಳಿಗೂ ಬ್ರಹ್ಮನಿಗೂ ತಾದಾತ್ಮ್ಯವನ್ನು ಹೇಳಿ ಅಪ್ಪಿನ ಮಹತ್ತ್ವವನ್ನು ಸ್ತುತಿಸಿದೆ. ಛಾಂದೋಗ್ಯೋಪನಿಷತ್ತಿನಲ್ಲಿ,

ಆಪೋ ವಾವಾನ್ನಾದ್ಭೂಯಸ್ತಸ್ಮಾದ್ಯದಾ ಸುವೃಷ್ಟಿರ್ನ ಭವತಿ ವ್ಯಾಧೀಯಂತೇ ಪ್ರಾಣಾ ಅನ್ನಂ
ಕನೀಯೋ ಭವಿಷ್ಯತೀತ್ಯಥ ಯದಾ ಸುವೃಷ್ಟಿರ್ಭವತ್ಯಾನಂದಿನಃ ಪ್ರಾಣಾ ಭವತ್ಯನ್ನಂ ಬಹು
ಭವಿಷ್ಯತೀತ್ಯಾಪ ಏವೇಮಾ ಮೂರ್ತಾಯೇಯಂ ಪೃಥಿವೀ ಯದಂತರಿಕ್ಷಂ ಯದ್ದ್ಯೌರ್ಯ-
ತ್ಪರ್ವತಾ ಯದ್ದೇವಮನುಷ್ಯಾ ಯತ್ಪಶವಶ್ಚ ವಯಾಂಸಿ ಚ ತೃಣವನಸ್ಪತಯಃ ಶ್ವಾಪದಾ-
ನ್ಯಾಕೀಟಪತಂಗಪಿಪೀಲಕಮಾಪ ಏವೇಮಾ ಮೂರ್ತಾ ಅಪ ಉಪಾಸ್ಸ್ವೇತಿ ॥

(ಛಾ. ಉ. ೭-೧೦-೧)

ಉದಕವು ಅನ್ನಕ್ಕಿಂತಲೂ ಅಧಿಕವಾದುದು. ಸುವೃಷ್ಟಿಯಿಲ್ಲದಿದ್ದರೆ ಅನ್ನಕ್ಕೆ ಅಭಾವವಾಗುವುದೆಂದು ಪ್ರಾಣಿ ಗಳೆಲ್ಲವೂ ಚಿಂತಿಸುವುವು. ಸುವೃಷ್ಟಿಯಾದರೆ ಪುಷ್ಟವೂ ಪುಷ್ಕಲವೂ ಆದ ಅನ್ನವು ಲಭಿಸುವುದೆಂದು ಪ್ರಾಣಿಗಳ

ಲ್ಲವೂ ಸಂತೋಷದಿಂದಿರುವುವು. ಘನೀಭೂತವಾದ ಉದಕವೇ ಪೃಥ್ವಿಯ ರೂಪದಲ್ಲೂ, ಅಂತರಿಕ್ಷರೂಪದಲ್ಲಿಯೂ ಆಕಾಶರೂಪದಲ್ಲಿಯೂ, ದೇವಮಾನವಾದಿರೂಪದಲ್ಲಿಯೂ, ಮೃಗ, ಪಕ್ಷಿ, ತೃಣ, ವೃಕ್ಷ, ಮತ್ತು ಕೃಮಿಕೀಟಪಿಪೀಲಿಕಾದಿ ರೂಪಗಳಲ್ಲಿಯೂ ವ್ಯಾಪಿಸಿದೆ. ಸಮಸ್ತವೂ ಉದಕಮಯವೇ ಆಗಿದೆ. ಆದುದರಿಂದ ಉದಕವನ್ನು ಆರಾಧಿಸು.

ಸ ಯೋಽಪೋ ಬ್ರಹ್ಮೇತ್ಯುಪಾಸ್ತ ಆಪ್ನೋತಿ ಸರ್ವಾನ್‌ಕಾಮಾಂಸ್ತೃಪ್ತಿಮಾನ್ ಭವತಿ ಯಾವದಪಾಂ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯೋಽಪೋ ಬ್ರಹ್ಮೇತ್ಯುಪಾಸ್ತೇ ||

(ಛಾ. ಉ. ೭-೧೦-೨)

ಅಪ್ಪನ್ನೇ ಬ್ರಹ್ಮವೆಂದು ಆರಾಧಿಸುವವನು ತನ್ನ ಇಷ್ಟಾರ್ಥಗಳನ್ನೆಲ್ಲಾ ಪಡೆದು ತೃಪ್ತಿಯನ್ನು ಹೊಂದುತ್ತಾನೆ. ನಿರವಧಿಯಾದ ಸ್ವಾತಂತ್ರ್ಯವನ್ನೂ ಪಡೆಯುತ್ತಾನೆ ಇತ್ಯಾದಿಯಾಗಿ ಅಪ್ಪಿನ ಮಹತ್ತ್ವವನ್ನು ಹೇಳಿರುವುದರಿಂದ ಋಭುಗಳಲ್ಲಿ ಒಬ್ಬನು ಆಪೋ ಭೂಯಿಷ್ಠಾಃ ಎಂದು ಹೇಳಿರುವುದು ನಿಜವಾದ ತತ್ತ್ವಪ್ರತಿಪಾದನೆಯಾಗಿದೆ.

ಅಗ್ನಿರ್ಭೂಯಿಷ್ಠಃ—ಅಂತರಂ ಬಾಹ್ಯಂ ಚ ದಾಹಪಾಕಭುಕ್ತಜರಣಾದಿವ್ಯಾಪಾರೇಣಾಗ್ನೇರೇವ ಜಗನ್ನಿರ್ವಾಹಕತ್ವಾದಗ್ನೇರೇವ ಭೂಯಿಷ್ಠತ್ವಮಿತ್ಯೇವ ಮನ್ಯತೇ | ಒಳಗೂ ಹೊರಗೂ ದಾಹಪಾಕಾದಿ ಜಗತ್ತಿನ ಸಕಲವ್ಯವಹಾರಗಳಿಗೂ ಅಗ್ನಿಯೇ ಕಾರಣವಾದುದರಿಂದ ಅಗ್ನಿಗಿಂತ ಮಹತ್ತುಳ್ಳವರು ಯಾರೂ ಇಲ್ಲ ಎಂದು ವಿವರಿಸಿದೆ.

ಛಾಂದೋಗ್ಯೋಪನಿಷತ್ತಿನಲ್ಲಿ ಅಪ್ಪಿಗೂ ಬ್ರಹ್ಮಕ್ಕೂ ತಾದಾತ್ಮ್ಯವನ್ನು ಹೇಳಿ ಅಬ್ರೂಪದಲ್ಲಿರುವ ಬ್ರಹ್ಮನನ್ನು ಆರಾಧಿಸಬೇಕೆಂದು ಹೇಳಿದಾಗ,

ಅಸ್ತಿ ಭಗವೋಽದ್ಭ್ಯೋ ಭೂಯ ಇತ್ಯದ್ಭ್ಯೋ ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ಬ್ರವೀತ್ವಿತಿ ||

(ಛಾ. ಉ. ೭-೧೦-೨)

ಅಪ್ಪಿಗಿಂತಲೂ ಭೂಯಿಷ್ಠವಾದುದು ಯಾವುದಿದೆ ಎಂದು ನಾರದನು ಸನತ್ಕುಮಾರನನ್ನು ಪ್ರಶ್ನಿಸಿದಾಗ,

ತೇಜೋ ವಾವಾದ್ಭ್ಯೋ ಭೂಯಸ್ತದ್ವಾ ಏತದ್ವಾಯುಮಾಗೃಹ್ಯಾಕಾಶಮಭಿತಪತಿ ತದಾಹುರ್ನಿಶೋಚತಿ ನಿತಪತಿ ವರ್ಷಿಷ್ಯತಿ ವಾ ಇತಿ ತೇಜ ಏವ ತತ್ಪೂರ್ವಂ ದರ್ಶಯಿತ್ವಾಥಾಪಃ ಸೃಜತೇ ತದೇತದೂರ್ಧ್ವಾಭಿಶ್ಚ ತಿರಶ್ಚೀಭಿಶ್ಚ ವಿದ್ಯುದ್ಭಿರಾಹ್ರಾದಾಶ್ಚರಂತಿ ತಸ್ಮಾದಾಹುರ್ವಿದ್ಯೋತತೇ ಸ್ತನಯತಿ ವರ್ಷಿಷ್ಯತಿ ವಾ ಇತಿ ತೇಜ ಏವ ತತ್ಪೂರ್ವಂ ದರ್ಶಯಿತ್ವಾಥಾಪಃ ಸೃಜತೇ ತೇಜ ಉಪಾಸ್ಸ್ವೇತಿ| ಸ ಯಸ್ತೇಜೋ ಬ್ರಹ್ಮೇತ್ಯುಪಾಸ್ತೇ....ಯಥಾ ಕಾಮಚಾರೋ ಭವತಿ ||

(ಛಾ. ಉ ೭-೧೧-೧)

ವಿದ್ಯುದ್ರೂಪದಲ್ಲಿರುವ ತೇಜಸ್ಸೇ (ಅಗ್ನಿ) ಅಪ್ಪಿಗಿಂತಲೂ ಅಧಿಕವಾದುದು. ಅದು ವಾಯುವನ್ನು ತಡೆದು ಆಕಾಶವನ್ನು ತಪ್ತವಾಗುವಂತೆ ಮಾಡುತ್ತದೆ. ಆಗ ಪ್ರಾಣಿಗಳು "ಈಗ ದಹಿಸುತ್ತಿರುವ ತಾಪವಿದೆ. ಮಳೆಯಾಗುತ್ತದೆ" ಎಂದು ತಿಳಿಯುತ್ತಾರೆ. ತೇಜಸ್ಸು ಮೊದಲು ಈ ದಾಹವನ್ನುಂಟುಮಾಡಿ ಅನಂತರ ಮಳೆಯನ್ನು

ಸುರಿಸುತ್ತದೆ. ವಿದ್ಯುತ್ತೂ ಸಿಡಿಲೂ ಉತ್ಪನ್ನವಾದಾಗ ವೃಷ್ಟಿಯಾಗುವುದೆಂದಾಶಿಸುತ್ತಾರೆ. ಈ ತೇಜಸ್ಸೇ ಬ್ರಹ್ಮ ಎಂದು ವಿದ್ಯುದ್ರೂಪದ ಅಗ್ನಿಯನ್ನು ಸ್ತುತಿಸಿದೆ. ಈ ಅಗ್ನಿಯ ಆವಿರ್ಭಾವವೂ, ಶಕ್ತಿಯೂ ನಾನಾವಿಧವಾಗಿರುವುದ ರಿಂದ ಅನೇಕ ಕಡೆಗಳಲ್ಲಿ ಅನೇಕ ವಿಧವಾಗಿ ಈ ಅಗ್ನಿಯ ಸ್ತುತಿಯಿದೆ. ಬೃಹದಾರಣ್ಯಕದ ಮಧುವಿದ್ಯಾಕಾಂಡದಲ್ಲಿ, ಅಗ್ನಿಗೂ, ಬ್ರಹ್ಮನಿಗೂ ತಾದಾತ್ಮ್ಯವನ್ನು ಹೇಳಿ ಒಡನೆಯೇ,

ಅಯಮಗ್ನಿಃ ಸರ್ವೇಷಾಂ ಭೂತಾನಾಂ ಮಧ್ವಸ್ಯಾಗ್ನೇಃ ಸರ್ವಾಣಿ ಭೂತಾನಿ ಮಧು ಯಶ್ಚಾಯ-
ಮಸ್ಮಿನ್ನಗ್ನೌ ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯ-
ಮಾತ್ಮೇದಮಮೃತಮಿದಂ ಬ್ರಹ್ಮೇದಂ ಸರ್ವಂ ।

(ಬೃ. ಉ. ೨-೫ ೩)

ಸಕಲಭೂತಗಳಿಗೂ ಈ ಅಗ್ನಿಯೇ ಮಧುರೂಪದಲ್ಲಿದೆ. ಈ ಅಗ್ನಿಯಲ್ಲಿ ಅಂತರ್ಗತನಾಗಿರತಕ್ಕ ಈ ಪ್ರಕಾಶ ಮಾನನೂ, ಅಮೃತನೂ ಆದ ಪುರುಷನೇ ಆತ್ಮನೂ ಬ್ರಹ್ಮನೂ ಸಕಲವೂ ಆಗಿದ್ದಾನೆ, ಎಂದು ಅಗ್ನಿಗೂ ವಿಶ್ವಾತ್ಮ ನಿಗೂ ತಾದಾತ್ಮ್ಯವನ್ನು ಹೇಳಿದೆ. ಮತ್ತು, ಪ್ರವಾಹಣ ಜೈವಲಿಗೂ ಗೌತಮನಿಗೂ ನಡೆದ ಸಂಭಾಷಣೆಯಲ್ಲಿ ಅಗ್ನಿಯ ಮಾಹಾತ್ಮ್ಯವನ್ನು ವಿಶದವಾಗಿ ವಿವರಿಸಿದೆ.

ಅಸೌ ವೈ ಲೋಕೋಽಗ್ನಿರ್ಗೌತಮ ತಸ್ಯಾದಿತ್ಯ ಏವ ಸಮಿದ್ರಶ್ಮಯೋ ಧೂಮೋಽಹರರ್ಚಿರ್ದಿ-
ಶೋಽಙ್ಗಾರಾ ಅವಾಂತರದಿಶೋ ವಿಸ್ಫುಲಿಂಗಾಸ್ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ
ಜುಹ್ವತಿ ತಸ್ಯಾ ಆಹುತ್ಯೈ ಸೋಮೋ ರಾಜಾ ಸಂಭವತಿ ।

(ಬೃ. ಉ. ೬-೨-೯)

ಈ ದ್ಯುಲೋಕಸ್ಥನಾದ ಅಗ್ನಿಗೆ ಸೂರ್ಯನೇ ಸಮಿತ್ತು ; ಮೇಘಗಳೇ ಧೂಮಗಳು, ದಿಗಂತಗಳೇ ಅಂಗಾರಗಳು, ಉಪದಿಕ್ಕುಗಳೇ ಕಿಡಿಗಳು. ವಿಶ್ವಾತ್ಮನಾದ ಈ ಅಗ್ನಿಯಲ್ಲಿ ದೇವತೆಗಳು ಶ್ರದ್ಧೆಯನ್ನರ್ಪಿಸುತ್ತಾರೆ. ಈ ಶ್ರದ್ಧಾ ಹುತಿಯಿಂದ ಸೋಮರಾಜನುದ್ಭವಿಸುತ್ತಾನೆ.

ಪರ್ಜನ್ಯೋ ವಾ ಅಗ್ನಿರ್ಗೌತಮ ತಸ್ಯ ಸಂವತ್ಸರ ಏವ ಸಮಿತ್ ಅಭ್ರಾಣಿ ಧೂಮೋ .... .... ..
ಅಸ್ಮಿನ್ನಗ್ನೌ ದೇವಾಃ ಸೋಮಂ ರಾಜಾನಂ ಜುಹ್ವತಿ ತಸ್ಯಾ ಆಹುತ್ಯೈ ವೃಷ್ಟಿಃ ಸಂಭವತಿ ।

(೬-೨-೧೦)

ವೃಷ್ಟ್ಯುತ್ಪಾದಕವಾದ ಮೇಘವೇ ಈ ಯಜ್ಞಾಗ್ನಿಯು. ಈ ಅಗ್ನಿಯಲ್ಲಿ ಸೋಮವನ್ನರ್ಪಿಸುವುದರಿಂದ ವೃಷ್ಟಿಯು ಉತ್ಪನ್ನವಾಗುತ್ತದೆ.

ಅಯಂ ವೈ ಲೋಕೋಽಗ್ನಿರ್ಗೌತಮ ತಸ್ಯ ಪೃಥಿವ್ಯೇವ ಸಮಿದಗ್ನಿರ್ಧೂಮೋ ರಾತ್ರಿರರ್ಚಿ-
ಶ್ಚಂದ್ರಮಾ ಅಂಗಾರಾ ನಕ್ಷತ್ರಾಣಿ ವಿಸ್ಫುಲಿಂಗಾಸ್ತಸ್ಮಿನ್ನೇತಸ್ಮಿನ್ನಗ್ನೌ ದೇವಾ ವೃಷ್ಟಿಂ
ಜುಹ್ವತಿ ತಸ್ಯಾ ಆಹುತ್ಯಾ ಅನ್ನಂ ಸಂಭವತಿ ।

(೬-೨-೧೧)

ಈ ಜಗತ್ತೆಲ್ಲವೂ ಯಜ್ಞಾಗ್ನಿಯು. ಪೃಥ್ವಿಯೇ ಸಮಿತ್ತು. ಅಗ್ನಿಯೇ ಧೂಮವು ರಾತ್ರಿಯೇ ಜ್ವಾಲೆಯು, ಇಂದುವೇ ಅಂಗಾರವು. ನಕ್ಷತ್ರಗಳೇ ಕಿಡಿಗಳು, ಈ ವಿಶ್ವಾಗ್ನಿಯಲ್ಲಿ ದೇವತೆಗಳು ವೃಷ್ಟಿಯನ್ನು ಸುರಿಸುತ್ತಾರೆ. ಇದರಿಂದ ಅನ್ನವು ಉತ್ಪನ್ನವಾಗುತ್ತದೆ.

ಪುರುಷೋ ವಾ ಅಗ್ನಿರ್ಗೌತಮ .... .... .... .... ಯೋಷಾ ವಾ ಅಗ್ನಿಃ ;

(೬-೨-೧೨-೧೩)

ಪುರುಷನೂ, ಸ್ತ್ರೀಯೂ ಸಕಲವೂ ಈ ಅಗ್ನಿಯ ರೂಪಾಂತರಗಳು.

ತೇ ಯ ಏವಮೇತದ್ವಿದುರ್ಯೇ ಚಾಮೀ ಅರಣ್ಯೇ ಶ್ರದ್ಧಾಂ ಸತ್ಯಮುಪಾಸತೇ ತೇಽರ್ಚಿರಭಿಸಂಭವಂತಿ .... .... .... ........ .... .... .... .... .... ತೇ ತೇಷು ಬ್ರಹ್ಮಲೋಕೇಷು ಪರಾಃ ಪರಾವತೋ ವಸಂತಿ ತೇಷಾಂ ನ ಪುನರಾವೃತ್ತಿಃ ।

(೬-೨-೧೫)

ವಿಶ್ವಾಗ್ನಿಯ ವಿಶ್ವರೂಪವನ್ನೂ, ವಿಶ್ವಶಕ್ತಿಯನ್ನೂ ವಿಶ್ವಾತ್ಮವನ್ನೂ ತಿಳಿದ ಜ್ಞಾನಿಗಳು ಬ್ರಹ್ಮಲೋಕವನ್ನು ಸೇರಿ ಮುಕ್ತಿಯನ್ನು ಹೊಂದುತ್ತಾರೆಂದೂ ಅವರಿಗೆ ಪುನಃ ಸಂಸಾರದ ಪ್ರವೇಶವಿಲ್ಲವೆಂದೂ ಗೌತಮನಿಗೆ ವಿವರಿಸಿದೆ. ಈ ಉಪದೇಶದಲ್ಲಿ ಅಗ್ನಿಯು ವಿಶ್ವಕ್ಕೆಲ್ಲಾ ಆಧಾರವೂ, ಸಂಪತ್ಪ್ರದವೂ, ಪೋಷಕವೂ, ರಕ್ಷಕವೂ, ಮುಕ್ತಿದಾಯಕವೂ ಆಗಿ ಪಾರ್ಥಿವ, ಅಂತರಿಕ್ಷ ಮತ್ತು ದ್ಯುಲೋಕಗಳ ಸಕಲ ವಿಧವಾದ ವ್ಯವಹಾರಗಳಿಗೂ ಹೇತುವೂ ಮತ್ತು ಧ್ಯೇಯವೂ ಆಗಿದೆಯೆಂದು ವರ್ಣಿಸಿದೆ. ಋಕ್ಸಂಹಿತೆಯಲ್ಲಿಯೂ ಸಹ

ವಿ ಯೋ ರಜಾಂಸ್ಯಮಿಮೀತ ಸುಕ್ರತುರ್ವೈಶ್ವಾನರೋ ವಿ ದಿವೋ ರೋಚನಾ ಕವಿಃ ।
ಪರಿ ಯೋ ವಿಶ್ವಾ ಭುವನಾನಿ ಪಪ್ರಥೇಽದಬ್ಧೋ ಗೋಪಾ ಅಮೃತಸ್ಯ ರಕ್ಷಿತಾ ॥

(ಋ. ಸಂ. ೬-೭-೭)

ಈ ಅಗ್ನಿಯು ಸಕಲ ಲೋಕಗಳನ್ನೂ ನಿರ್ಮಿಸಿದನು ಮತ್ತು ಸಕಲ ತೇಜೋಮಂಡಲಗಳನ್ನೂ ಸೃಷ್ಟಿಸಿದನು.

ತ್ರೀಣಿ ಶತಾ ತ್ರೀ ಸಹಸ್ರಾಣ್ಯಗ್ನಿಂ ತ್ರಿಂಶಚ್ಚ ದೇವಾ ನವ ಚಾಸಪರ್ಯನ್ ।

(ಋ. ಸಂ. ೩-೯-೯)

ಇದೇ ಮಹಾತ್ಮನಾದ ಅಗ್ನಿಯನ್ನು ಮೂರುಸಾವಿರದ ಮುನ್ನೂರ ಮುವತ್ತೊಂಭತ್ತು ದೇವತೆಗಳೂ ಸಹ ಪೂಜಿಸಿದರು. ಇತ್ಯಾದಿಯಾಗಿ ಅಗ್ನಿಯ ಮಾಹಾತ್ಮ್ಯವನ್ನು ಸ್ತುತಿಸಿದೆ. ವಿಶ್ವಾಧಾರನಾದವನೂ, ವಿಶ್ವಕ್ಕೆಲ್ಲಾ ಚೈತನ್ಯದಾಯಕನೂ ಆದ ಈ ಅಗ್ನಿಯನ್ನು

ಅಗ್ನಿರ್ವೈ ಭುವೋಽಗ್ನೇರ್ಹೀದಗ್ಂ ಸರ್ವಂ ಭವತಿ ।

(ಶ. ಬ್ರಾ. ೮-೧-೧-೪)

ಇತ್ಯಾದಿವಾಕ್ಯಗಳಲ್ಲಿ ಅಗ್ನಿಯೇ ಸರ್ವಸ್ವವೆಂದು ಶತಪಥಾದಿಗಳಲ್ಲಿ ಅಗ್ನಿಯನ್ನು ಸ್ತುತಿಸಿದೆ. ಈ ಆಧಾರಗಳಮೇಲೆ ಅಗ್ನಿರ್ಭೂಯಿಷ್ಠಃ ಎಂದು ಋಭುಗಳಲ್ಲಿ ಎರಡನೆಯವನು ಹೇಳಿದುಪರಲ್ಲಿಯೂ ಸತ್ಯಾಂಶವಿದೆ. ಮೂರನೆಯವನು,

ವಧರ್ಯಂತೀಂ—ಪ್ರೈಕೋಽಬ್ರವೀತ್—ಪೃಥ್ವಿಯೇ ಎಲ್ಲಕ್ಕಿಂತಲೂ ಮಹತ್ತಾದುದು ಎಂದು ವರ್ಣಿಸುತ್ತಾನೆ. ವಧರ್ಯಂತೀ ಎಂಬ ಪದಕ್ಕೆ ಸಾಯಣರು ಎರಡು ವಿಧವಾಗಿ ಅರ್ಥಮಾಡಿದ್ದಾರೆ. ಮೊದಲನೆಯದಾಗಿ, ವಧರಿತಿ ರೇಫಾಂತೋಽಪಿ ವಜ್ರನಾಮ । ವಧೋಽರ್ಕ ಇತಿ ತನ್ನಾಮಸು ಪಾಠಾತ್ । ತದಿಚ್ಛತಿ ವೃಷ್ಟ್ಯುದಕಾಯ ಇತಿ ವಧರ್ಯಂತೀ ಮೇಘಪಂಕ್ತಿರುಚ್ಯತೇ । ವಧಃ, ವಜ್ರಃ, ಅರ್ಕಃ ಎಂದು ವಜ್ರನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ ೩-೧೧) ವಧ ಶಬ್ದಕ್ಕೆ ವಜ್ರಾಯುಧವೆಂದು ಹೆಸರು. ವೃಷ್ಟಿಯನ್ನು ಸುರಿಸುವುದಕ್ಕಾಗಿ ಮೇಘವು ವಜ್ರಾಯುಧದಿಂದ ಹತಿಯನ್ನಪೇಕ್ಷಿಸುವುದರಿಂದ ವಧರ್ಯಂತಿಯೆಂದರೆ ವೃಷ್ಟ್ಯುತ್ಪಾದಕವಾದ ಮೇಘವೆಂದರ್ಥ. ಹೀಗೆ ಅರ್ಥಮಾಡಿದರೆ ಉದಕಕ್ಕೂ ಸಹ ಮೇಘವೇ ಕಾರಣವಾಗುವುದರಿಂದ ಮೇಘವೇ ಶ್ರೇಷ್ಠವಾದುದು ಎಂದು ಸಾಯಣರು ವಿವರಿಸಿದ್ದಾರೆ.

ಅಭ್ರಂ ಭೂತ್ವಾ ಮೇಘೋ ಭವತಿ ಮೇಘೋ ಭೂತ್ವಾ ಪ್ರವರ್ಷತಿ ।
(ಛಾ. ಉ. ೫-೧೦-೬.)

ಎಂದು ಮೇಘವು ಉದಕಕ್ಕೂ ಹೇತುವಾಗಿ ಅನ್ನಸಂಪತ್ತಿಗೆಲ್ಲಾ ಅದೇ ಆಧಾರವಾಗಿರುತ್ತದೆ. ಮತ್ತು,

ತಾಭಿಃ ಪರ್ಜನ್ಯೋ ವರ್ಷತಿ ಪರ್ಜನ್ಯೇನೌಷಧಿವನಸ್ಪತಯಃ ಪ್ರಜಾಯಂತೇ ॥
(ತೈ. ಉ. ೪-೨೩-೧)

ಈ ವರ್ಣನದಿಂದಲೇ ಭೂತಗಳಿಗೆ ಅನ್ನವನ್ನೊದಗಿಸುವ ಓಷಧಿವನಸ್ಪತಿಗಳು ಉತ್ಪನ್ನವಾಗುವುದರಿಂದ ಈ ವೃಷ್ಟಿಗೆ ಕಾರಣವಾದ ಮೇಘಕ್ಕಿಂತಲೂ ಉಪಯುಕ್ತವಾದುದು ಯಾವುದೂ ಇಲ್ಲ ಎಂಬ ತಾತ್ಪರ್ಯವಾಗುತ್ತದೆ.

ಎರಡನೆಯದಾಗಿ, ಬಹುಭ್ಯಃ ವಧರ್ಯಂತೀಂ ಎಂಬ ಅನ್ವಯವನ್ನು ಮಾಡಿ ಬಹೂನಾಮರ್ಥಾಯ ಆತ್ಮನಃ ವಧಂ ಇಚ್ಛಂತೀಂ ಭೂಮಿಂ । ಅನೇಕ ಪ್ರಾಣಿಗಳ ಜೀವನಕ್ಕಾಗಿ ಉಳುವುದೇ ಮೊದಲಾದ ಕರ್ಮಗಳಿಂದ ತನ್ನ ವಧವನ್ನು ಇಚ್ಛಿಸುವ ಪೃಥ್ವಿಯೆಂದರ್ಥವಾಗಬಹುದು. ಈ ಅರ್ಥವನ್ನು ಮಾಡಿದರೆ ಆಗ ಪೃಥ್ವೀ ಶಬ್ದಕ್ಕೆ ಕೇವಲ ರೂಢವಾಗಿರುವ ಭೂಮಿಯೆಂದಾಗದೆ ಆಗಲೂ ಸಕಲ ಜಗತ್ತು ಎಂದರ್ಥವಾಗುತ್ತದೆ. ಪೃಥ್ವೀ ನಾಮಗಳಲ್ಲಿಯೂ (ನಿ. ೨-೫) ಅಂತರಿಕ್ಷ ನಾಮಗಳಲ್ಲಿಯೂ (ನಿ. ೨-೧೦) ಈ ಪದವು ಸೇರಿರುವುದರಿಂದ ವಿಶಾಲವಾದ ಜಗತ್ತೆಂದರ್ಥವಾಗಬಹುದು. ಮೇಘಪರ್ಯಾಯವಾಗಿ ಅರ್ಥಮಾಡುವುದೇ ಸಹ ಸಾಧುವಾಗಿ ಕಾಣುವುದು. ಆ ಅರ್ಥವು ಸರಿಯಾದ ಪಕ್ಷದಲ್ಲಿಯೂ ಮೊದಲನೆಯ ಇಬ್ಬರು ಹೇಳಿದ ತತ್ತ್ವಪ್ರತಿಪಾದನೆಯಷ್ಟು ಗಭೀರತೆಯು ಈ ಮೂರನೆಯ ಮತದಲ್ಲಿ ಕಾಣುವುದಿಲ್ಲ.

ಋತಾ ವದಂತಃ—ಋತ ಶಬ್ದಕ್ಕೆ ಇಲ್ಲಿ ಸತ್ಯವಾಕ್ಯೆಂದರ್ಥಮಾಡಿದೆ. ಋಭುಗಳು ತತ್ತ್ವಾರ್ಥವನ್ನು ಪ್ರತಿಪಾದಿಸುವಾಗ ಅದು ಸತ್ಯಾತ್ಮಕವಾಗಿದೆಯೆಂದು ತಿಳಿಸುತ್ತಾ ಈ ವಿಧವಾಗಿ ಸತ್ಯವಾಕ್ಕುಳ್ಳವರಾದ್ದರಿಂದಲೇ ಅವರಿಗೆ ಋಭುಗಳೆಂದು ಹೆಸರು ಪ್ರಸಿದ್ಧವಾಗಿದೆಯೆಂದು ತೋರಿಸಲು,

ಉರು ಭಾಂತೀತಿ ವಾ ಋತೇನ ಭಾಂತೀತಿ ವಾ, ಋತೇನ ಭವಂತೀತಿ ವಾ (ನಿ. ೧೧-೧೫) ಎಂಬ ನಿರುಕ್ತದ ನಿರ್ವಚನವನ್ನುದಹರಿಸಿ ಸಾಯಣರು ವಿವರಿಸಿದ್ದಾರೆ. ಸತ್ಯದಿಂದ ಪ್ರಕಾಶಿಸುವವರು ಅಥವಾ ಸತ್ಯಾತ್ಮಕರಾಗಿಯೇ ಇರುವವರು ಆದುದರಿಂದ ಋಭುಗಳು ಎಂಬ ಹೆಸರಿನಿಂದ ಪ್ರಸಿದ್ಧರಾಗಿರುವವರೆಂದು ನಿರುಕ್ತಕಾರರ ಮತ.

ವ್ಯಾಕರಣಪ್ರಕ್ರಿಯಾ

ಭೂಯಿಷ್ಠಾಃ—ಬಹುಶಬ್ದಕ್ಕೆ ಅತಿಶಯಾರ್ಥ ತೋರುವಾಗ ಅತಿಶಾಯನೇ ತಮಬಿಷ್ಠನೌ (ಪಾ. ಸೂ. ೫-೩-೫೫) ಎಂಬುದರಿಂದ ಇಷ್ಠನ್ ಪ್ರತ್ಯಯ. ಇಷ್ಠಸ್ಯ ಯಿಟ್ ಚ (ಪಾ. ಸೂ ೬-೪-೧೫೯) ಎಂಬುದರಿಂದ ಬಹುವಿನ ಪರದಲ್ಲಿರುವ ಇಷ್ಠನಿನ ಆದಿ ಇಕಾರಕ್ಕೆ ಲೋಪ. ಬಹು ಎಂಬುದಕ್ಕೆ ಭೂ ಆದೇಶ ಯಿಡಾಗಮ. ಟಿತ್ತಾದುದರಿಂದ ಆದ್ಯವಯವವಾಗಿ ಬರುತ್ತದೆ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಅಬ್ರವೀತ್—ಬ್ರೂಞ್ ವ್ಯಕ್ತಾಯಾಂ ವಾಚಿ. ಧಾತು. ಲಙ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ವಧರ್ಯಂತೀಮ್—ವಧಃ ಆತ್ಮನಃ ಇಚ್ಛತಿ ವಧರ್ಯತಿ. ವಧರ್ ಎಂಬುದ ರೇಫಾಂತಶಬ್ದ. ಅಥವಾ ವಧ ಶಬ್ದ. ಸುಪಆತ್ಮನಃ ಕ್ಯಚ್ (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಬಂದಾಗ ಛಾಂದಸವಾಗಿ ರೇಫ ಹೆಚ್ಚಾಗಿ ಬರುತ್ತದೆ. ಕ್ಯಜಂತದ ಮೇಲೆ ಶತೃಪ್ರತ್ಯಯ. ಸ್ತ್ರೀತ್ವದಲ್ಲಿ ಉಗಿತಶ್ಚ ಎಂಬುದರಿಂದ ಙೀಪ್. ಕ್ಯಚ್ ಸ್ವರ ಉಳಿಯುತ್ತದೆ.

ಋತಾ—ಶೇಶ್ಛಂದಸಿ ಬಹುಲಮ್ (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

ವದಂತೇಃ—ವದ ವ್ಯಕ್ತಾಯಾಂ ವಾಚಿ. ಧಾತು. ಲಟಿಗೆ ಶತ್ರಾದೇಶ. ತಾಸ್ಯನುದಾತ್ತೇಲ್ಸತ್—(ಪಾ. ಸೂ. ೬-೧-೧೮೬) ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

ಅಪಿಂಶತ—ಪಿಶ ಅವಯವೇ. ಧಾತು. ತುದಾದಿ ಲಙ್ ಪ್ರಥಮಪುರುಷ ಬಹುವಚನದಲ್ಲಿ ತ ಪ್ರತ್ಯಯ. ತುದಾದಿಭ್ಯಃ ಶಃ ಎಂಬುದರಿಂದ ಶವಿಕರಣ. ಶೇಮುಚಾದೀನಾಮ್ (ಪಾ. ಸೂ ೭.೧-೫೯) ಎಂಬುದರಿಂದ ಧಾತುವಿಗೆ ನುಮಾಗಮ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೯ ॥

———:O:———

ಸಂಹಿತಾಪಾಠಃ

ಶ್ರೋಣಾಮೇಕ ಉದಕಂ ಗಾಮವಾಜತಿ ಮಾಂಸಮೇಕಃ ಪಿಂಶತಿ ಸೂನ-
ಯಾಭೃತಂ ।
ಆ ನಿಮ್ರುಚಃ ಶಕೃದೇಕೋ ಅಪಾಭರತ್ಕಿಂ ಸ್ವಿತ್ಪುತ್ರೇಭ್ಯಃ ಪಿತರಾ ಉಪಾ-
ವತುಃ ॥ ೧೦ ॥

ಪದಪಾಠಃ

ಶ್ರೋಣಾಂ । ಏಕಃ । ಉದಕಂ । ಗಾಂ । ಅವ । ಅಜತಿ । ಮಾಂಸಂ । ಏಕಃ । ಪಿಂಶತಿ । ಸೂನಯಾ । ಆಽಭೃತಂ ।

ಆ । ನಿಽಮ್ರುಚಃ । ಶಕೃತ್ । ಏಕಃ । ಅಪ । ಅಭರತ್ । ಕಿಂ । ಸ್ವಿತ್ । ಪುತ್ರೇಭ್ಯಃ । ಪಿತರಾ । ಉಪ । ಆವತುಃ ॥ ೧೦ ॥

ಸಾಯಣಭಾಷ್ಯಂ

ಅತ್ರರ್ಭವ ಏವರ್ತ್ವಿಗ್ರೂಪೇಣ ಸ್ಥಿತ್ವಾ ಸರ್ವತ್ರ ಯಜ್ಞಂ ನಿರ್ವಹಂತೀತ್ಯಾಹ । ಶ್ರೋಣಾಂ ಶೋಣಂ ॥ ವಾ ಛಂದಸೀತಿ ಪರರೂಪಾಭಾವಃ ॥ ಶೋಣವರ್ಣಮುದಕಂ ರುಧಿರಮೇಕ ಋಭುಷು ಮಧ್ಯ ಋತ್ವಿಗ್ಗಾಮವಾಜತಿ । ವಾಹ್ಯಭೂಮಿಂ ಪ್ರತಿ ಗಮಯತಿ । ರಕ್ಷೋಭಾಗತ್ವೇನ ಸ್ಥಾಪಯತಿ । ತಥೈಕೋ ಮಾಂಸಂ ಸೂನಯಾ ಛೇದನಸಾಧನೇನ ಸ್ವಧಿತಿನಾಭೃತಂ ಸಂಪಾದಿತಂ ಪಿಂಶತಿ । ಹೃದಯ-ಜಿಹ್ವಾವಕ್ಷಆದ್ಯಾಕಾರೇಣಾಹೃತಂ ಸಂಪಾದಿತಂ ಮಾಂಸಂ ಪಿಂಶತಿ । ಅವಯವೀಕರೋತಿ । ಸ್ವಧಿತಿನಾ ತತ್ತದವಯವಾನ್ವಿಭಜತೀತ್ಯರ್ಥಃ । ಅಥೈಕೋ ನಿಮ್ರುಚೋ ನಿಃಶೇಷೇಣ ಛಿನ್ನಾನ್ಮಾಂಸಾತ್ ಶಕೃತ್ ಕುಕ್ಷಿಸ್ಥಂ ಜರತ್ತೃಣಮೂವಧ್ಯನಾಮಕಮಪಾಭರತ್ । ಅಪಾಹರನ್ನಿರಸನಾಯ । ಏವಮೃತ್ವಿಗ್ರೂಪೇಣ ಸ್ಥಿತೇಭ್ಯಃ ಪುತ್ರೇಭ್ಯಃ ಪುರುತ್ರಾತೃಭ್ಯಃ ಪುತ್ರಸ್ಥಾನೀಯೇಭ್ಯ ಋಭುಭ್ಯಃ ಸರ್ವೇಷ್ವನುಷ್ಠಿತೇಷು ಪಿತರಾ ಯಜ್ಞಸ್ಯ ಪಾಲಯಿತಾರೌ ಜಾಯಾಪತೀ ಕಿಂ ಸ್ವಿದುಪಾವತುಃ । ಕಿಂ ನು ಖಲು ಪ್ರಾಪ್ನುತಃ ॥ ಅವತೇಃ ಪ್ರಾಪ್ತ್ಯರ್ಥಾಚ್ಛಾಂದಸೋ ಲಿಟ್ ॥ ಸರ್ವಂ ತೈರೇವಾನುಷ್ಠಿತಮಿತಿ ತಯೋರ್ನ ಕಿಂಚಿತ್ಕೃತ್ಯಮಸ್ತೀ-ತ್ಯರ್ಥಃ । ಅಥವಾಯಮರ್ಥಃ । ಏಕಸ್ತೇಷಾಮನ್ಯತಮಃ ಶ್ರೋಣಾಂ ಪಂಗುಕಾಂ ಗಾಮುದಕಂ ಪ್ರತ್ಯವ-ಗಮಯತಿ । ಅಪರಃ ಸೂನಯಾ ಮಾಂಸವಿಕ್ರಯಿಣ್ಯಾಭೃತಂ ಸಂಪಾದಿತಂ ಮಾಂಸಂ ಪಿಂಶತಿ । ಅಪರ ಆ ನಿಮ್ರುಚೋಽಸ್ತಮಯಾದರ್ವಾಗೇವ ಶಕೃದ್ಗೋಪುರೀಷಂ ಹರತಿ । ಏವಮೃಭುಭಿರನುಷ್ಠಿತೇ ಸತಿ ಕಿಂ ಸ್ವಿದೇತಸ್ಮಾತ್ಪರಿಚರಣಾದನ್ಯತ್ಪುತ್ರೇಭ್ಯಃ ಸಕಾಶಾದುಪಾವತುಃ । ಉಪಗಚ್ಛೇತಾಮಿತಿ ॥

ಪ್ರತಿಪದಾರ್ಥ

ಏಕಃ—ಋಭುಗಳಲ್ಲಿ ಒಬ್ಬನು । ಶ್ರೋಣಾಂ ಉದಕಂ—ರಕ್ತವರ್ಣದ ಉದಕವನ್ನು ಎಂದರೆ ರಕ್ತವನ್ನು । ಗಾಂ—ಯಜ್ಞಭೂಮಿಗೆ । ಅವಾಜತಿ—ತರುತ್ತಾನೆ । ಏಕಃ—ಇನ್ನೊಬ್ಬನು । ಸೂನಯಾ—ಮಚ್ಚುಕತ್ತಿಯಿಂದ । ಆಭೃತಂ—ಕತ್ತರಿಸಲ್ಪಟ್ಟ । ಮಾಂಸಂ—ಮಾಂಸವನ್ನು । ಪಿಂಶತಿ—ಬಿಡಿಸುತ್ತಾನೆ । ನಿಮ್ರುಚಃ—ಪೂರ್ಣವಾಗಿ ಕತ್ತರಿಸಲ್ಪಟ್ಟ ಮಾಂಸದಿಂದ । ಶಕೃತ್—ಪುರೀಷಾದಿಗಳನ್ನು । ಏಕಃ—ಇನ್ನೊಬ್ಬನು । ಅಪಾಭರತ್—(ಹೊರಕ್ಕೆ ಎಸೆಯಲು) ತೆಗೆದುಕೊಂಡು ಹೋದನು । ಪುತ್ರೇಭ್ಯಃ—ಪುತ್ರರೂಪದ ಋಭುಗಳಿಗೆ ಅಥವಾ ರಕ್ಷಕರಾದ ಋತ್ವಿಗ್ರೂಪದ ಋಭುಗಳಿಗೆ । ಪಿತರೌ—ಯಜ್ಞಪಾಲಕರಾದ ಯಜಮಾನನೂ ಮತ್ತು ಆವನ ಪತ್ನಿಯೂ । ಕಿಂಸ್ವಿತ್—ಮತ್ತೇನನ್ನು ತಾನೇ । ಉಪಾವತುಃ—(ಸಹಾಯರೂಪವಾಗಿ) ಹೊಂದಿಸಿ ಕೊಡಬಲ್ಲರು ?

ಭಾವಾರ್ಥ

ಋಭುಗಳಲ್ಲಿ ಒಬ್ಬನು ರಕ್ತವನ್ನು ಯಜ್ಞಭೂಮಿಯಲ್ಲಿಡುತ್ತಾನೆ. ಇನ್ನೊಬ್ಬನು ಮಚ್ಚುಕತ್ತಿಯಿಂದ ಕತ್ತರಿಸಿದ ಮಾಂಸವನ್ನು ಬಿಡಿಸುತ್ತಾನೆ. ಪೂರ್ಣವಾಗಿ ಕತ್ತರಿಸಲ್ಪಟ್ಟ ಮಾಂಸದಿಂದ ಪುರೀಷಾದಿಗಳನ್ನು ಬೇರೆ ಮಾಡಿ ಎಸೆಯಲು ಇನ್ನೊಬ್ಬನು ತೆಗೆದುಕೊಂಡುಹೋಗುತ್ತಾನೆ. ಮಾತಾಪಿತೃರೂಪದ ಯಜಮಾನ ಮತ್ತು ಅವನ ಪತ್ನಿಯು ಋಭುರೂಪದ ಋತ್ವಿಕ್ಕುಗಳಿಗೆ ಇನ್ನಾವ ಸಹಾಯವನ್ನು ತಾನೇ ಮಾಡಬಲ್ಲರು ?

## English Translation

One pours the red water, (the blood), upon the ground; one cuts the flesh, divided into fragments by the chopper; and a third separates the excrement from the other parts: in what manner may the parents (of the sacrifice) render assistance to their sons ?

ವಿಶೇಷವಿಷಯಗಳು

ಈ ಋಕ್ಕಿಗೆ ಎರಡುವಿಧವಾದ ಅರ್ಥಗಳನ್ನು ಮಾಡಿದೆ. ಮೊದಲನೆಯ ಅರ್ಥವನ್ನು ಪ್ರತಿಪದಾರ್ಥದಲ್ಲಿ ತಿಳಿಸಿದೆ. ಎರಡನೆಯ ವಿವರಣೆಯ ಪ್ರಕಾರ, ಶ್ರೋಣಾಶಬ್ದಕ್ಕೆ ಹಂಗುವೆಂದೂ, (Lame) ಸೂನಾಶಬ್ದಕ್ಕೆ ಮಾಂಸವನ್ನು ಮಾರುವ ಅಂಗಡಿಯೆಂದೂ, ನಿಮ್ರುಚಃ ಎಂಬುವಕ್ಕೆ ಅಸ್ತಮಯಕ್ಕಿಂತ ಮುಂಚಿತವಾಗಿ ಎಂದೂ ಅರ್ಥಮಾಡಿದೆ. ಇದರ ಪ್ರಕಾರ ಏಕಃ ಶ್ರೋಣಾಂ ಗಾಂ ಉದಕಂ ಅವಾಜತಿ ಎಂದರೆ ಋಭುಗಳಲ್ಲಿ ಒಬ್ಬನು ಕುಂಟಾದ ಗೋವನ್ನು ಉದಕದ ಹತ್ತಿರ ಕರೆದುಕೊಂಡು ಹೋಗುತ್ತಾನೆಂದೂ, ಏಕಃ ಸೂನಯಾ ಅಭೃತಂ ಮಾಂಸಂ ಪಿಂಶತಿ ಎಂದರೆ ಇನ್ನೊಬ್ಬನು ಮಾಂಸದ ಅಂಗಡಿಯಿಂದ ತಂದ ಮಾಂಸವನ್ನು ವಿಭಾಗಿಸುತ್ತಾನೆಂದೂ, ಏಕಃ ನಿಮ್ರುಚಃ ಶಕೃತ್ ಅವಾಭರತ್ ಎಂದರೆ ಇನ್ನೊಬ್ಬನು ಅಸ್ತಮಯಕ್ಕಿಂತ ಮುಂಚೆಯೇ ಗೋಪುರೀಷಾದಿಗಳನ್ನು (ಶುದ್ಧಿಗಾಗಿ) ತರುತ್ತಾನೆಂದೂ ತಾತ್ಪರ್ಯವಾಗುತ್ತದೆ. ಯಾಗಕ್ಕೆ ಬೇಕಾದ ಸಲಕರಣೆಗಳನ್ನೆಲ್ಲಾ ಋಭುರೂಪರಾದ ಋತ್ವಿಕ್ಕುಗಳೇ ಯಜ್ಞಕ್ಕೆ ಪುತ್ರರ ಸ್ಥಾನದಲ್ಲಿದ್ದು ನಿರ್ವಹಿಸಿದುದರಿಂದ ಮಾತಾಪಿತೃಸ್ಥಾನದ ಯಜಮಾನ ಮತ್ತು ಅವನ ಪತ್ನಿಗೆ ಯಾವ ಶ್ರಮವೂ ಇಲ್ಲವೆಂದರ್ಥ.

ಇಲ್ಲಿ ಋಭುಗಳನ್ನು ಯಜ್ಞಕ್ಕೆ ಪುತ್ರರೂಪರಾದ ಋತ್ವಿಕ್ಕುಗಳೆಂದೂ, ಯಜ್ಞಪಾಲಕರಾದ ಯಜಮಾನ ಮತ್ತು ಅವನ ಪತ್ನಿಯನ್ನು ಪಿತರಾ ಎಂದೂ ನಿರ್ದೇಶಿಸಿದೆ.

ಹನಾಮೈನಾँ ಇತಿ ತ್ವಷ್ಟಾ ಯದಬ್ರವೀಚ್ಚಮಸಂ ಯೇ ದೇವಪಾನಮನಿಂದಿಷುಃ ।
ಅನ್ಯಾ ನಾಮಾನಿ ಕೃಣ್ವತೇ ಸುತೇ ಸಚಾँ ಅನ್ಯೈರೇನಾನ್ ಕನ್ಯಾ೩ನಾಮಭಿಃ ಸ್ಪರತ್ ॥
(ಋ. ಸಂ. ೧-೧೬೧-೫)

ಎಂಬ ಇದೇ ಸೂಕ್ತದ ಹಿಂದಿನ ಋಕ್ಕಿನಲ್ಲಿ ಋಭುಗಳು ಚಮಸಪಾತ್ರೆಯನ್ನು ಕಲುಷಿತವನ್ನಾಗಿ ಮಾಡಿದಾಗ ತ್ವಷ್ಟೃವು ಕೋಪದಿಂದ ಇವರನ್ನು ಹನನಮಾಡಲು ಪ್ರಯತ್ನಿಸಿದಾಗ ಇವರು ನಾಮಾಂತರಗಳನ್ನು ಹೊಂದಿ ಋತ್ವಿಗ್ರೂಪದಿಂದ

ಮರೆಸಿಕೊಂಡಾಗ ಮಾತೆಯು ಋತ್ವಿಗ್ರೂಪದ ಇವರನ್ನು ಸತ್ಕರಿಸಿದಳು ಎಂದು ಹಿಂದಿನ ಕಥೆಯನ್ನು ಉದಹರಿಸಿದ ಋಕ್ಕನ್ನು ವಿವರಿಸುವಾಗ ತಿಳಿಸಿದೆ. ಇಲ್ಲಿ ಅದೇ ಸಂದರ್ಭವನ್ನು ಸೂಚಿಸಿ ಋಭುಗಳ ತಮ್ಮ ಋತ್ವಿಗ್ರೂಪದ ಕರ್ತವ್ಯಗಳನ್ನು ಪೂರ್ಣವಾಗಿ ನೆರವೇರಿಸಿದರು ಎಂದಿದೆ.

**ಪುತ್ರೇಭ್ಯಃ**—ಪುರು ತ್ರಾತೃಭ್ಯಃ ಪುತ್ರಸ್ಥಾನೀಯೇಭ್ಯೋ ಋಭುಭ್ಯಃ । ಸಂಪೂರ್ಣವಾಗಿ ಯಜ್ಞವನ್ನು ರಕ್ಷಿಸುವುದರಿಂದ ಋತ್ವಿಕ್ಕುಗಳನ್ನು ಪುತ್ರರೆಂದು ಕರೆದಿದೆ. ಇಲ್ಲಿ ಋಭುಗಳು ಋತ್ವಿಕ್ಕುಗಳಾದುದರಿಂದ ಅವರಿಗೆ ಪುತ್ರಶಬ್ದದಿಂದ ನಿರ್ದೇಶವಿದೆ.

**ಪಿತರಾ**—ಯಜ್ಞಸ್ಯ ಪಾಲಯಿತಾರೌ ಜಾಯಾಪತೀ ಯಜ್ಞಪಾಲಕರಾದ ಜಾಯಾಪತಿಗಳು, ಯಜಮಾನ ಮತ್ತು ಅವನ ಪತ್ನಿಯರು.

### ವ್ಯಾಕರಣಪ್ರಕ್ರಿಯಾ

**ಶ್ರೋಣಾಮ್**—ಶ್ರು ಶ್ರವಣೇ ಧಾತು. ಧಾಪ್ಸ್ಯಾ ವಸ್ಯ—(ಉ. ಸೂ. ೩-೩೮೬) ಎಂಬುದರಿಂದ ವಿಧಿಸಿದ ನ ಪ್ರತ್ಯಯವು ಬಹುಲಗ್ರಹಣದಿಂದ ಇದಕ್ಕೂ ಬರುತ್ತದೆ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಅಟ್‌ಕುಪ್ವಾಙ್—ಸೂತ್ರದಿಂದ ಪ್ರತ್ಯಯಕ್ಕೆ ಣತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಅಮ್ ಪರವಾದಾಗ ವಾಛಂದಸಿ ಎಂಬುದರಿಂದ ಪರರೂಪ ಬರುವುದಿಲ್ಲ. ಸವರ್ಣದೀರ್ಘ.

**ಉದಕಮ್**—ಉಂದೀ ಕ್ಲೇದನೇ. ಧಾತು. ಉದಕಂಚ—(ಉ. ಸೂ. ೨-೧೯೭) ಎಂಬುದರಿಂದ ಕ್ವನ್ ಪ್ರತ್ಯಯ. ಅನಿದಿತಾಂಹ—ಸೂತ್ರದಿಂದ ಉಪಧಾ ನಕಾರ ಲೋಪ. ಯುವೋರನಾಕೌ (ಪಾ. ಸೂ. ೭-೧-೧) ಎಂಬುದರಿಂದ ಪ್ರತ್ಯಯಕ್ಕೆ ಅಕಾದೇಶ. ಘೃತಾದಿಯಲ್ಲಿ ಸೇರಿರುವುದರಿಂದ ಅಂತೋದಾತ್ತವಾಗುತ್ತದೆ.

**ಅಜತಿ**—ಅಜ ಗತಿಕ್ಷೇಪಣಯೋಃ ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಪಿಂಶತಿ**—ಪಿಶ ಅವಯವೇ ಧಾತು. ತುದಾದಿ. ಶೇಮುಚಾದೀನಾಮ್ ಎಂಬುದರಿಂದ ನುಮಾಗಮ. ಲಟ್ ರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಸೂನಯಾ**—ಷುಞ್ ಅಭಿಷವೇ ಧಾತು. ಸುಞಿಕೋದೀರ್ಘಶ್ಚ (ಉ. ಸೂ. ೨-೨೯೩) ಎಂಬುದರಿಂದ ನ ಪ್ರತ್ಯಯ. ಧಾತುವಿಗೆ ದೀರ್ಘ. ಸ್ತ್ರೀತ್ವದಲ್ಲಿ ಅದಂತನಿಬಂಧನವಾಗಿ ಟಾಪ್. ಉದಾತ್ತನಿವೃತ್ತಿಸ್ವರದಿಂದ ಅದು ಉದಾತ್ತವಾಗುತ್ತದೆ. ತೃತೀಯಾ ಏಕವಚನಾಂತರೂಪ.

**ಆಭೃತಮ್**—ಹೃಞ್ ಹರಣೇ. ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಹೃಗ್ರಹೋರ್ಭಶ್ಛಂದಸಿ ಎಂಬುದರಿಂದ ಹಕಾರಕ್ಕೆ ಭತ್ವ. ಗತಿರನಂತರಃ (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಆ) ಉದಾತ್ತಸ್ವರ ಬರುತ್ತದೆ.

**ಅಭರತ್**—ಪೂರ್ವೋಕ್ತವಾದ ಧಾತುವಿಗೆ ಲಙ್ ಪ್ರಥಮಪುರುಷ ಏಕವಚನ ಪ್ರತ್ಯಯ ಬಂದಾಗ ಉಕ್ತರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಅವತುಃ— ಅವ ಗತ್ಯಾದಿಷು. ಧಾತು. ಇಲ್ಲಿ ಪ್ರಾಪ್ತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಛಂದಸಿ ಲುಙ್-ಲಙ್‌ಲಿಟಃ (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷ ದ್ವಿವಚನಕ್ಕೆ ಪರಸ್ಮೈಪದಾನಾಂ ಣಲ...(ಪಾ. ಸೂ. ೩-೪-೮೨) ಎಂಬುದರಿಂದ ಅತುಸ್ಆದೇಶ. ಧಾತುವಿಗೆ ದ್ವಿತ್ವಾದಿ. ತಿಙಂತನಿಘಾತ ಸ್ವರ ಬರುತ್ತದೆ. ॥ ೧೦ ॥

———— :O: ————

ಸಂಹಿತಾಪಾಠಃ

ಉದ್ವತ್ಸ್ವಸ್ಮಾ ಅಕೃಣೋತನಾ ತೃಣಂ ನಿವತ್ಸ್ವಪಃ ಸ್ವಪಸ್ಯಯಾ ನರಃ ।
ಅಗೋಹ್ಯಸ್ಯ ಯದಸಸ್ತನಾ ಗೃಹೇ ತದದ್ಯೇದಮೃಭವೋ ನಾನು ಗಚ್ಛಥ ।
॥ ೧೧ ॥

ಪದಪಾಠಃ

ಉದ್ವತ್ಽಸು । ಅಸ್ಮೈ । ಅಕೃಣೋತನ । ತೃಣಂ । ನಿವತ್ಽಸು । ಅಪಃ । ಸುಽಅಪಸ್ಯಯಾ । ನರಃ ।
ಅಗೋಹ್ಯಸ್ಯ । ಯತ್ । ಅಸಸ್ತನ । ಗೃಹೇ । ತತ್ । ಅದ್ಯ । ಇದಂ । ಋಭವಃ । ನ । ಅನು । ಗಚ್ಛಥ ।
॥ ೧೧ ॥

ಸಾಯಣಭಾಷ್ಯಂ

ಪುರಾಣಪ್ರಸಿದ್ಧಾನ್ಸುಧನ್ವನಃ ಪುತ್ರಾನ್ ಕರ್ಮಣಾ ದೇವತ್ವಂ ಪ್ರಾಪ್ತವತ ಋಭೂನ್ ಸ್ತುತ್ವಾ ವೇದಪ್ರಸಿದ್ಧಾನ್ ಸೂರ್ಯರಶ್ಮಿರೂಪಾನೃಭೂನಿದಾನೀಂ ಸ್ತೌತಿ । ತಥಾ ಚ ಯಾಸ್ಕೋ ನಿರುಕ್ತೇ ಪುರಾಣಪ್ರಕ್ರಿಯಾಸಿದ್ಧಾನೃಭೂನ್ಬಹುಧಾ ನಿರುಚ್ಯ ತದುದಾಹರಣತ್ವೇನ ವಿಷ್ಟ್ವೀ ಶಮೀತ್ಯೇತಾಮುದಾಹೃತ್ಯಾದಿತ್ಯರಶ್ಮಯೋಽಪ್ಯೃಭವ ಉಚ್ಯಂತ ಇತ್ಯುಕ್ತ್ವಾ ತಸ್ಮಿನ್ನರ್ಥ ಏತಾಮೃಚಮುದಾಜಹಾರ । ನಿ. ೧೧–೧೬. । ಹೇ ಋಭವ ಉರು ಪ್ರಭೂತಂ ಭಾಸಮಾನಾಃ ಋತೇನಾದಿತ್ಯೇನ ಭಾಸಮಾನಾ ವಾ ಋತೇನೋದಕೇನೋದಕಾರ್ಥಮುತ್ಪನ್ನಾ ವಾ । ರಶ್ಮೀನಾಮುರುಭಾಸಮಾನತ್ವಂ ಪ್ರಸಿದ್ಧಂ । ತಥಾದಿತ್ಯಾದುತ್ಪತ್ತಿರಪಿ । ಉದಕಾರ್ಥಂ ಭವನಮಪಿ ರಶ್ಮೀನಾಂ ಘರ್ಮಕಾಲೇ ಭೂಮಿಗತಂ ಸಾರಮಾದಾಯ ಪುನರ್ವರ್ಷಕಾಲೇ ಪ್ರವರ್ಷಂತೀತಿ ಪ್ರಸಿದ್ಧಂ । ಆದಿತ್ಯಾಜ್ಜಾಯತೇ ವೃಷ್ಟಿರಿತಿ ಶಾಸ್ತ್ರಾತ್ । ತಥಾವಿಧಾ ನರಃ ಪ್ರಕಾಶಾವೃಷ್ಟ್ಯುದಕಾದೇರ್ನೇತಾರಃ ಯೂಯಮುದ್ವತ್ಸೂನ್ನತೇಷು ಪ್ರದೇಶೇಷು ಮೇರ್ವಾದಿಷು ತೃಣಂ ವ್ರೀಹಿಯವಾದಿರೂಪಮಸ್ಮೈ ಪ್ರಾಣಿಜಾತಾಯ ತದುಪಕಾರಾರ್ಥಮಕೃಣೋತನ । ಕೃತವಂತಃ ಸ್ಥ ॥ ಉಪಸರ್ಗಾಚ್ಛಂದಸಿ ಧಾತ್ವರ್ಥ ಇತಿ ವತಿಃ ॥ ತಥಾ ನಿವತ್ಸು ಪ್ರವಣದೇಶೇಷ್ವಸ್ಮಾ ಏವಾಪ ಉದಕಾನ್ಯಕೃಣೋತನ । ಅಕುರುತ । ಕಿಂ ಸ್ವಭೋಗಾರ್ಥಂ ನೇತ್ಯಾಹ । ಸ್ವಪಸ್ಯಯಾ

ಶೋಭನಕರ್ಮೇಚ್ಛಯಾ। ಶೋಭನಂ ಕರ್ಮಭಿಃ ಕೃತಮಿತಿ ಯಥಾ ಯಜಮಾನಾಃ ಸ್ತುವಂತಿ ತದಿಚ್ಛಯೇತ್ಯರ್ಥಃ। ಕಿಂಚ ಯೂಯಮಗೋಹ್ಯಸ್ಯಾಗ್ರಾಹ್ಯಸ್ಯಾದಿತ್ಯಸ್ಯ ಗೃಹೇ ಮಂಡಲೇ ಯದ್ಯಾವತ್ಕಾಲಮಸಸ್ತನ ಸುಪ್ತವಂತಃ ಸ್ಥ ರಾತ್ರೌ ನಿರ್ವಾಪ್ಯಪಾರಾಸ್ತಿಷ್ಠಥ ॥ ಷಸ ಸ್ವಪ್ನೇ। ಅಸ್ಮಾಲ್ಲುಙಃ ಪೂರ್ವವತ್ತಸ್ಯ ತನಬಾದೇಶಃ। ಅದಾದಿತ್ವಾಚ್ಛಪೋ ಲುಕ್ ॥ ತತ್ತಾವಂತಂ ಕಾಲಮದ್ಯಾಹನೀದಮಿದಾನೀಂ ನಾನು ಗಚ್ಛಥ। ಅನುಸೃತ್ಯ ನ ಗಚ್ಛಥ। ಯಾವಂತಂ ಕಾಲಂ ರಾತ್ರೌ ಸೂರ್ಯೇ ನಿಗೂಢಾ ವರ್ತಧ್ವೇ ತಾವಂತಮೇವ ಕಾಲಮಹನ್ಯಪಿ ನಾನುಗಚ್ಛಥೇತ್ಯರ್ಥಃ। ಯದ್ವಾ। ಅಗೋಪನೀಯಸ್ಯ ತಸ್ಯ ಗೃಹೇಽಂತರಿಕ್ಷೇ ಯದ್ಯಾವಂತಂ ಕಾಲಮಸಸ್ತನ ವೃಷ್ಟಿಮದತ್ತ್ವಾ ಸ್ವಾಪಮಕುರುತ ತತ್ತಾವಂತಂ ಕಾಲಮದ್ಯೇದಾನೀಂ ವರ್ಷಸಮಯ ಇದಂ ಸಸ್ಯಾಭಿವರ್ಧನವೃಷ್ಟಿಪ್ರವಾಹರೂಪಂ ಕರ್ಮ ನಾನು ಗಚ್ಛಥ। ಅನುಸೃತ್ಯ ನ ಪ್ರಾಪ್ನುಥ। ಯಾವತಂ ಕಾಲಂ ವಿವರ್ಷಥ ತಾವಂತಮೇವ ಕಾಲಂ ಪ್ರವರ್ಷಥೇತ್ಯರ್ಥಃ ॥

ಪ್ರತಿಪದಾರ್ಥ

ನರಃ—(ವೃಷ್ಟ್ಯಾದಿಗಳಿಗೆಲ್ಲಾ) ನೇತೃಗಳಾದವರೂ । ಋಭವಃ—ಅತ್ಯಂತ ಪ್ರಕಾಶಮಾನರಾದವರೂ ಮತ್ತು ಸೂರ್ಯರಶ್ಮಿಗಳ ರೂಪದಲ್ಲಿರುವವರೂ ಆದ ಎಲೈ ಋಭುಗಳೇ ನೀವು। ಉದ್ವತ್ಸು-ಉನ್ನತವಾದ ಪ್ರದೇಶಗಳಲ್ಲಿ। ಅಸ್ಮೈ—ಈ ಲೋಕದ ಪ್ರಾಣಿಗಳ ಪ್ರಯೋಜನಕ್ಕಾಗಿ। ತೃಣಂ—ವ್ರೀಹಿ, ಯವ ಮುಂತಾದ ಸಸ್ಯಾದಿಗಳನ್ನು। ಅಕೃಣೋತನ—ಸೃಷ್ಟಿಸಿದಿರಿ। ಸ್ವಪಸ್ಯಯಾ—ಶ್ರೇಷ್ಠವಾದ ಕರ್ಮಾಚರಣೆಯ ಸಹಾಯಾರ್ಥವಾಗಿ। ನಿವತ್ಸು-ತಗ್ಗುಪ್ರದೇಶಗಳಲ್ಲಿ। ಅಪಃ—ಉದಕಗಳನ್ನು (ಹರಿಯುವಂತೆ ಮಾಡಿದಿರಿ)। ಅಗೋಹ್ಯಸ್ಯ—ಮರೆಸಲು ಸಾಧ್ಯವಿಲ್ಲದಿರುವ ಆದಿತ್ಯನ। ಗೃಹೇ—ವಾಸಸ್ಥಾನದಲ್ಲಿ! ಯತ್—ಎಷ್ಟುಕಾಲ (ರಾತ್ರಿಯವೇಳೆ)।। ಅಸಸ್ತನ—ವಿಶ್ರಮಿಸಿಕೊಂಡಿದ್ದಿರೋ। ತತ್—ಅಷ್ಟೇಕಾಲ। ಇದಂ—ಈ ಹಗಲಿನಲ್ಲಿಯೂ ಸಹ । ನಾನುಗಚ್ಛಥ—(ನಿಮ್ಮ ಕರ್ತವ್ಯವನ್ನು ಬಿಟ್ಟು) ಅಲ್ಲಿಯೇ ಇದ್ದು ಬಿಡಬೇಡಿ.

ಭಾವಾರ್ಥ

ವೃಷ್ಟ್ಯಾದಿಗಳಿಗೆಲ್ಲಾ ನೇತೃಗಳಾದವರೂ, ಅತ್ಯಂತ ಪ್ರಕಾಶಮಾನರಾದವರೂ ಮತ್ತು ಸೂರ್ಯರಶ್ಮಿಗಳ ರೂಪದಲ್ಲಿರುವವರೂ ಆದ ಎಲೈ ಋಭುಗಳೇ, ನೀವು ಈ ಲೋಕದ ಪ್ರಾಣಿಗಳ ಪ್ರಯೋಜನಕ್ಕಾಗಿ ವ್ರೀಹಿ, ಯವ ಮುಂತಾದ ಸಸ್ಯಾದಿಗಳನ್ನು ಸೃಷ್ಟಿಸಿದಿರಿ. ಶ್ರೇಷ್ಠವಾದ ಕರ್ಮಾಚರಣೆಯ ಸಹಾಯಾರ್ಥವಾಗಿ ತಗ್ಗು ಪ್ರದೇಶಗಳಲ್ಲಿ ಉದಕಗಳನ್ನು ಹರಿಯುವಂತೆ ಮಾಡಿದಿರಿ. ಮರೆಸಲು ಸಾಧ್ಯವಿಲ್ಲದಿರುವ ಆದಿತ್ಯನ ವಾಸಸ್ಥಾನದಲ್ಲಿ ಎಷ್ಟುಕಾಲ ರಾತ್ರಿಯವೇಳೆ ವಿಶ್ರಮಿಸಿಕೊಂಡಿದ್ದಿರೋ, ಅಷ್ಟೇಕಾಲ ಈ ಹಗಲಿನಲ್ಲಿಯೂ ಸಹ ನಿಮ್ಮ ಕರ್ತವ್ಯವನ್ನು ಬಿಟ್ಟು ಅಲ್ಲೇ ಇದ್ದು ಬಿಡಬೇಡಿ.

English Translation

Ribhus, leaders (of the rains), you have caused the grass to grow upon the high places; you have caused the waters to flow over the low places; for (the promotion of) good works: as you have reposed for a while

in the dwelling of the unapprehensible (Suu), so desist not to-day from (the discharge of) this (your function).

### ವಿಶೇಷವಿಷಯಗಳು

ಋಭುಗಳ ಮಹಿಮೆಯನ್ನು ಎರಡು ದೃಷ್ಟಿಯಿಂದ ನೋಡತಕ್ಕದ್ದು. ಮೊದಲನೆಯದಾಗಿ ಸುಧನ್ವಪುತ್ರರಾದ ಋಭುಗಳು ತಮ್ಮ ಸುಕರ್ಮಗಳಿಂದ ದೇವತ್ವವನ್ನು ಪಡೆದುದಾಗಿ ವರ್ಣಿಸಿ ಈಗ ವೇದಪ್ರಸಿದ್ಧವಾದ ಸೂರ್ಯರಶ್ಮಿರೂಪರಾದ ಋಭುಗಳನ್ನು ಸ್ತುತಿಸಿದೆಯೆಂದು ವರ್ಣಿಸಿದೆ. ಪುರಾಣದಲ್ಲಿ ಋಭುವನ್ನು ಬ್ರಹ್ಮಮಾನಸಪುತ್ರನೆಂದು ಹೇಳಿದೆ ಮತ್ತು ಸನಕ, ಸನಂದ, ಸನತ್ಕುಮಾರ, ಸನತ್ಸುಜಾತ ಮತ್ತು ಋಭು ಈ ಐವರಲ್ಲಿ ಒಬ್ಬನೆಂದು ಭಾಗವತದಲ್ಲಿ ಹೇಳಿದೆ. (೪-೮). ಸಾಯಣರು ಪುರಾಣಪ್ರಸಿದ್ಧವೆಂದು ಹೇಳಿರುವುದರಿಂದ ಅದು ವಿಮರ್ಶಾರ್ಹವಾದ ವಿಷಯವಾಗಿದೆ.

ಪ್ರಕೃತದಲ್ಲಿ ಆದಿತ್ಯರಶ್ಮಯೋಽಪ್ಯೃಭವ ಉಚ್ಯಂತೇ (ನಿ. ೧೧-೧೬) ಎಂಬ ನಿರುಕ್ತವಚನದಲ್ಲಿ ಹೇಳಿರುವಂತೆ ಇಲ್ಲಿ ಆದಿತ್ಯರಶ್ಮಿಗೂ ಋಭುಗಳಿಗೂ ತಾದಾತ್ಮ್ಯವನ್ನು ಹೇಳಿ ಸಾಯಣರು ಋಕ್ಕನ್ನು ವಿವರಿಸಿದ್ದಾರೆ.

ಅಗೋಹ್ಯಸ್ಯ—ಅಗೋಹ್ಯ ಆದಿತ್ಯೋಽಗೂಹನೀಯಃ। ಮುಚ್ಚಲು ಸಾಧ್ಯವಿಲ್ಲದಿರುವ ಆದಿತ್ಯನಿಗೆ ಈ ವಿಶೇಷಣವು ಪರವಾಗಿ ಅವನ ಸ್ವರೂಪವನ್ನು ತಿಳಿಸುತ್ತದೆ. [೮-೯೮-೪ ನೇ ಋಕ್ಕಿನಲ್ಲಿ ಈ ವಿಶೇಷಣವು ಇದೇ ಅರ್ಥದಲ್ಲಿ ಪರ್ವತಕ್ಕೂ ವಿಶೇಷಣವಾಗಿದೆ].

ಋಭವಃ—ನಿರುಕ್ತನಿರ್ವಚನದೊಂದಿಗೆ ಈ ಪದಕ್ಕೆ ಅರ್ಥವನ್ನು ವಿವರಿಸಿ ಈ ಹೆಸರಿನ ವೈಶಿಷ್ಟ್ಯವೇನೆಂದು ಹಿಂದೆ ತಿಳಿಸಿದೆ.

ಉದ್ವತ್ಸು ನಿವತ್ಸು—ಉನ್ನತೇಷು ಪ್ರದೇಶೇಷು, ಶ್ರವಣದೇಶೇಷು ಎತ್ತರವಾದ ಮತ್ತು ತಗ್ಗಾದ ಪ್ರದೇಶಗಳಲ್ಲಿ ಎಂದರ್ಥ. ನಿರುಕ್ತಕಾರರು ಪ್ರವತ ಉದ್ವತೋ ನಿವತ ಇತಿ ಎಂಬ ಪದಗಳನ್ನು ದೇವ, ಮಾನವ ಮತ್ತು ತಿರ್ಯಕ್ಕುಗಳ ಪರ್ಯಾಯಪದವಾಗಿ ಉಪಯೋಗಿಸಿದ್ದಾರೆ. (೧೦.೨೦) ಅದಕ್ಕೆ ದುರ್ಗಾಚಾರ್ಯರು ಉದ್ವತಃ—ದೇವಾಃ, ಪ್ರವತಃ—ಮನುಷ್ಯಾಃ, ನಿವತಃ—ತಿರ್ಯಂಚಃ ಎಂದು ವಿವರಿಸಿದ್ದಾರೆ. ಅವತಿರ್ಗತಿಕರ್ಮಾ ಗತಿಕರ್ಮವನ್ನು ಸೂಚಿಸುವ ಅವ ಧಾತುವಿನಿಂದ ನಿಷ್ಪನ್ನವಾಗಿ ದೇವಲೋಕಸಂಚಾರಿಗಳಿಗೆ ಉದ್ವತಃ ಎಂದೂ, ಪೃಥ್ವಿಯ ಮೇಲೆ ಸಂಚರಿಸುವ ಮಾನವಾದಿಗಳಿಗೆ ಪ್ರವತಃ ಎಂದೂ ಮತ್ತು ಬಹಳ ಕೆಳಭಾಗದಲ್ಲಿರುವ ಕ್ರಿಮಿಕೀಟಾದಿಗಳಿಗೆ ನಿವತಃ ಎಂದೂ ಹೆಸರೆಂದು ವಿವರಿಸಿದ್ದಾರೆ.

### ವ್ಯಾಕರಣಪ್ರಕ್ರಿಯಾ

ಉದ್ವತ್ಸು—ಉಪಸರ್ಗಾಚ್ಛಂದಸಿ ಧಾತ್ವರ್ಥೇ (ಪಾ. ಸೂ. ೫-೧-೧೧೮) ಎಂಬುದರಿಂದ ಉತ್ ಎಂಬ ಉಪಸರ್ಗಕ್ಕೆ ವತಿ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ಅಕೃಣೋತನ—ಕೃವಿ ಹಿಂಸಾಕರಣಯೋಶ್ಚ ಧಾತು. ಲಙ್ ಮಧ್ಯಮಪುರುಷ ಬಹುವಚನಕ್ಕೆ ತಪ್ತನಪ್ತ-ಎಂಬುದರಿಂದ ತನಬಾದೇಶ ಪಿತ್ತಾದುದರಿಂದ ವಿಕರಣಕ್ಕೆ ಗುಣ ಬರುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

ನಿವತ್ಸು—ಹಿಂದಿನಂತೆ ಉಪಸರ್ಗಕ್ಕೆ ವತಿ ಪ್ರತ್ಯಯ.

ಸ್ವಪಸ್ಯಯಾ—ಸ್ವಪಃ ಆತ್ಮನಃ ಇಚ್ಛತಿ ಸ್ವಪಸ್ಯತಿ. ಸುಪಆತ್ಮನಃ ಕ್ಯಚ್ (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. ಅಪ್ರತ್ಯಯಾತ್ (ಪಾ. ಸೂ. ೩-೩-೧೦೨) ಎಂಬುದರಿಂದ ಕ್ಯಜಂತದ ಮೇಲೆ ಅ ಪ್ರತ್ಯಯ. ಸ್ತ್ರೀತ್ವದಲ್ಲಿ ಟಾಪ್. ಉದಾತ್ತನಿವೃತ್ತಿಸ್ವರದಿಂದ ಉದಾತ್ತವಾಗುತ್ತದೆ. ತೃತೀಯಾಏಕವಚನಾಂತರೂಪ

ಅಗೋಹ್ಯಸ್ಯ—ನಞ್ ತತ್ಪುರುಷಸಮಾಸವಾದಾಗ ತತ್ಪುರುಷೇ—(ಪಾ. ಸೂ. ೬-೨-೨) ಎಂಬುದರಿಂದ ನಞ್ ಪ್ರಕೃತಿಸ್ವರ ಬರುತ್ತದೆ.

ಅಸಸ್ತನ—ಷಸ ಸ್ವಪ್ನೇ ಧಾತು. ಅದಾದಿ. ಲಙ್ ಮಧ್ಯಮಪುರುಷಬಹುವಚನದಲ್ಲಿ ತಪ್ತನಪ್ತನಥನಾಶ್ಚ (ಪಾ. ಸೂ. ೭-೧-೪೫) ಎಂಬುದರಿಂದ ತನಾದೇಶ. ಅದಿಪ್ರಭೃತಿಭ್ಯಃಶಪಃ (ಪಾ. ಸೂ. ೨-೪-೭೨) ಎಂಬುದರಿಂದ ವಿಕರಣಕ್ಕೆ ಲುಕ್. ಅಂಗಕ್ಕೆ ಅಡಾಗಮ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತಪದವಾಗುತ್ತದೆ.

ಗಚ್ಛಥ—ಗಮಲ್ಲ ಗತೌ ಧಾತು. ಲಟ್ ಮಧ್ಯಮಪುರುಷಬಹುವಚನಾಂತರೂಪ. ತಿಙಂತನಿಘಾತ ಸ್ವರ ಬರುತ್ತದೆ. ‖ ೧೧ ‖

———:o:———

ಸಂಹಿತಾಪಾಠಃ

ಸಂಮೀಲ್ಯ ಯದ್ಭುವನಾ ಪರ್ಯಸರ್ಪತ ಕ್ವ ಸ್ವಿತ್ತಾತ್ಯಾ ಪಿತರಾ ವ ಆಸತುಃ ।

ಅಶಪತ ಯಃ ಕರಸ್ನಂ ವ ಆದದೇ ಯಃ ಪ್ರಾಬ್ರವೀತ್ಪ್ರೋ ತಸ್ಮಾ ಅಬ್ರವೀತನ ‖ ೧೨ ‖

ಪದಪಾಠಃ

ಸಂಽಮೀಲ್ಯ । ಯತ್ । ಭುವನಾ । ಪರಿಽಅಸರ್ಪತ । ಕ್ವ । ಸ್ವಿತ್ । ತಾತ್ಯಾ । ಪಿತರಾ । ವಃ । ಆಸತುಃ । ಅಶಪತ । ಯಃ । ಕರಸ್ನಂ । ವಃ । ಆಽದದೇ । ಯಃ । ಪ್ರ । ಅಬ್ರವೀತ್ । ಪ್ರೋ ಇತಿ । ತಸ್ಮೈ । ಅಬ್ರವೀತನ ‖ ೧೨ ‖

ಸಾಯಣಭಾಷ್ಯಂ

ಹೇ ಋಭವೋ ರಶ್ಮಯಃ ಯೂಯಂ ಯದ್ಯದಾ ಭುವನಾ ಭೂತಜಾತಾನಿ ಸಂಮೀಲ್ಯ ಸಂಮೀಲನಂ ಕೃತ್ವಾ ಜಲಧರಪಟಲೈರಾಚ್ಛಾದ್ಯ ಪರ್ಯಸರ್ಪತ ಪರಿತಃ ಸರ್ಪಣಂ ಕುರುಥ । ವರ್ಷಾರ್ಥೇತ್ಯರ್ಥಃ ।

ತಾತ್ಯಾ ತಾತೌ ತಾಯಮಾನೇ ವೃಷ್ಟ್ಯುದಕೇ । ಯದ್ವಾ । ತಾತ್ಯಾ ತಾಸು ವರ್ಷಾಸು ॥ ಛಾಂದಸಸ್ತ್ಯ-ಪ್ರತ್ಯಯೋ ದಕಾರಸ್ಯಾತ್ವಂ ಚ ॥ ಅಥವಾ ಪಿತೃವಿಶೇಷಣಂ । ತಾತ್ಯಾ ತತ್ಕಾಲೀನೌ ಪಿತರಾ ಜಗತಃ ಪಾಲಕೌ ಸೂರ್ಯಾಚಂದ್ರಮಸೌ ಕ್ವ ಸ್ವಿದಾಸತುಃ । ಕುತ್ರ ಖಲು ತಿಷ್ಠತಃ ॥ ಅಸ್ತೇರ್ಲಿಟಿ ವ್ಯತ್ಯಯೇನ ಭೂಭಾವಾಭಾವಃ । ಯದ್ವಾ । ಅಸತೇರ್ಗತ್ಯರ್ಥಸ್ಯ ಲಿಟ್ಯೇತದ್ರೂಪಂ ॥ ಅಹೋರಾತ್ರವಿಭಾಗೇನ ಪ್ರವರ್ತಯಥೇತ್ಯರ್ಥಃ । ಕಿಂಚೇದೃಶಾನ್ವೋ ಯುಷ್ಮಾನ್ ಯಃ ಕೋಽಪಿ ವೃಷ್ಟಿಪ್ರತಿಬಂಧಕಾರೀ ರಾಕ್ಷಸಾದಿಃ ಕರಸ್ನಂ । ಬಾಹುನಾಮೈತತ್ ಕರಸ್ನಾ ಬಾಹೂ ಇತ್ಯುಕ್ತತ್ವಾತ್ ಅತ್ರ ತ್ವಕಾರಾಂತಂ । ಯುಷ್ಮದೀಯಂ ಹಸ್ತಮಾದದೇ ಗೃಹ್ಣಾತಿ ಪ್ರತಿರೋಧಂ ಕರೋತಿ ತಮಶಪತ । ನಾಶಯಥ । ಯಶ್ಚ ಪ್ರಾಬ್ರವೀತ್ ಪ್ರಕರ್ಷೇಣ ವಾಚಾ ನಿರುಂಧೇ । ತಸ್ಮೈ ಪ್ರೋ ಪ್ರೈವಾಬ್ರವೀತನ । ಪ್ರಕರ್ಷೇಣ ಭರ್ತ್ಸ-ನಾದಿಶಬ್ದಂ ಕುರುಥ । ಯದ್ವಾ । ಯೋ ನೂನಂ ಸ್ತೌತಿ ತಂ ಪ್ರಕರ್ಷೇಣ ಸ್ತುತೇತ್ಯರ್ಥಃ ॥

ಪ್ರತಿಪದಾರ್ಥ

(ಋಭವಃ—ರಶ್ಮಿರೂಪರಾದ ಎಲೈ ಋಭುಗಳೇ) । ಯತ್—ಯಾವಾಗ । ಭುವನಾ—ಭೂತಜಾತಗಳನ್ನು । ಸಂಮಿಾಲ್ಯ—(ಮೇಘಗಳಿಂದ) ಆಚ್ಛಾದನೆಯನ್ನು ಮಾಡಿ । ಪರ್ಯಸರ್ಪತ—ಸರಿಯುತ್ತೀರೋ ಅಥವಾ ಮಳೆಯನ್ನು ಸುರಿಸುತ್ತೀರೋ, (ಆಗ) । ತಾತ್ಯಾ—ಮಳೆಯು ಸುರಿಯುತ್ತಿರುವ ಕಾಲದಲ್ಲಿ । ವಃ—ನಿಮ್ಮ ಮತ್ತು ಜಗತ್ತಿನ) । ಪಿತರಾ — ಮಾತಾಪಿತೃಗಳಾದ ಸೂರ್ಯಚಂದ್ರರು । ಕ್ವಸ್ವಿತ್ —ಎಲ್ಲಿ ತಾನೇ । ಆಸತುಃ—ಇರುತ್ತಾರೆ । ಯಃ—ಯಾವ ಶತ್ರುವೇ ಆಗಲಿ । ವಃ—ನಿಮ್ಮ । ಕರಸ್ನಂ—ಬಾಹುರೂಪವಾದ ಕಿರಣಗಳನ್ನು । ಆದದೇ—ಹಿಡಿದು ತಡೆಯುತ್ತಾನೆಯೋ (ಅವನನ್ನು) ಅಶಪತ—ಶಪಿಸಿ ನಾಶಮಾಡಿರಿ । ಯಃ—ಯಾವನು ಪ್ರ ಅಬ್ರವೀತ್—ದೂಷಿಸಿ ಅವಹೇಳನವನ್ನು ಮಾಡುತ್ತಾನೆಯೋ । ತಸ್ಮೈ—ಅವನಿಗೆ । ಪ್ರೋ ಅಬ್ರವೀತನ—ಬೆದರಿಕೆಯನ್ನುಂಟುಮಾಡುವ ಶಬ್ದವನ್ನು ಉಂಟುಮಾಡಿರಿ. [ಅಥವಾ ಯಃ—ಯಾವನು । ಪ್ರ ಅಬ್ರವೀತ್—ನಿಮ್ಮನ್ನು ಸ್ತುತಿಸುತ್ತಾನೆಯೋ । ತಸ್ಮೈ—ಅವನಿಗೆ । ಪ್ರೋ ಅಬ್ರವೀತನ—ಉತ್ತೇಜಕವಾದ ಶಬ್ದವನ್ನು ಮಾಡಿರಿ.]

ಭಾವಾರ್ಥ

ರಶ್ಮಿರೂಪರಾದ ಎಲೈ ಋಭುಗಳೇ, ನೀವು ಯಾವಾಗ ಮೇಘಗಳಿಂದ ಭೂತಜಾತಗಳನ್ನು ಆಚ್ಛಾದನೆಮಾಡಿ ವೃಷ್ಟಿಯನ್ನು ಸುರಿಸುತ್ತೀರೋ, ಆ ಕಾಲದಲ್ಲಿ ನಿಮ್ಮ ಪಾಲಕರೂ ಜಗತ್ತಿಗೆ ಮಾತಾಪಿತೃಗಳೂ ಆದ ಸೂರ್ಯ ಚಂದ್ರರು ಎಲ್ಲ ತಾನೇ ಇರುತ್ತಾರೆ. ನಿಮ್ಮ ಬಾಹುರೂಪವಾದ ರಶ್ಮಿಗಳನ್ನು ಹಿಡಿದು ತಡೆಯುವ ಯಾವ ಶತ್ರುವನ್ನೂ ಸಹ ನೀವು ಶಪಿಸಿ ನಾಶಮಾಡಿರಿ. ನಿಮ್ಮನ್ನು ಅಪಶಬ್ದಪ್ರಯೋಗಗಳಿಂದ ಅವಹೇಳನಮಾಡುವವನನ್ನು ನೀವು ಬೆದರಿಸುವಂತೆ ಶಬ್ದವನ್ನುಂಟುಮಾಡಿರಿ:

## English Translation

As you glide along enveloping the regions (in clouds); where, then, are the parents (of the world)? curse him who arrests your arm: reply sternly to him who speaks disrespectfully (to you).

॥ ವಿಶೇಷವಿಷಯಗಳು ॥

ತಾತ್ಯಾ—ತಾಯಮಾನೇ ವೃಷ್ಟ್ಯುದಕೇ; ಯದ್ವಾ ತಾಸು ವರ್ಷಾಸು । ವೃಷ್ಟ್ಯುದಕವು ಅನುಸ್ಯೂತವಾಗಿಯೂ ಧಾರಾಕಾರವಾಗಿಯೂ ಸುರಿಯುತ್ತಿರುವಾಗ ಎಂದರ್ಥಮಾಡಿದೆ. Monier Williams ಎಂಬುವನು ತನ್ನ Sanskrit—English Dictionary ಯಲ್ಲಿ ಈ ಪದವನ್ನು ತಾತನಿಗೆ ಸಂಬಂಧಪಟ್ಟಿದು ತಾತ್ಯ ಎಂದು ವಿವರಿಸಿ Fatherly ಎಂಬರ್ಥಮಾಡಿ ಪ್ರಕೃತವಾದ ಋಕ್ಕನ್ನೂ; ಮತ್ತು ಋ. ಸಂ. ೭-೩೭-೬ನೇ ಋಕ್ಕನ್ನೂ ಉದಾಹರಣೆಗಾಗಿ ತೋರಿಸುತ್ತಾನೆ. ಆದರೆ ಈ ಋಕ್ಕಿನಲ್ಲಿ ಪುನಃ ಪಿತರಾ ಎಂಬ ಪದವಿರುವುದರಿಂದ ತಾತ್ಯಾ ಎಂಬುದಕ್ಕೆ ತಾತನಸಂಬಂಧಿಯೆಂದರ್ಥಮಾಡುವುದು ಉಚಿತವಲ್ಲ. ಸಾಯಣರ ಅರ್ಥವೇ ಸರಿಯಾಗಿದೆ. ಸಾಯಣರು,

ವಾಸಯಸೀವ ವೇಧಸಸ್ತ್ವಂ ನಃ ಕದಾ ನ ಇಂದ್ರ ವಚಸೋ ಬುಬೋಧಃ ।
ಅಸ್ತಂ ತಾತ್ಯಾ ಧಿಯಾ ರಯಿಂ ಸುವೀರಂ ಪೃಕ್ಷೋ ನೋ ಅರ್ವಾ ನ್ಯುಹೀತ ವಾಜೀ ॥
(ಋ ಸಂ, ೭-೩೭-೬)

ಎಂಬ ಋಕ್ಕಿನಲ್ಲಿ ತಾತ್ಯಾ ಎಂಬ ಪದಕ್ಕೆ ತನೋತೇರಿದಂ ರೂಪಂ ಸಂತತಯಾ (ಧಿಯಾ) । ವಿಸ್ತೃತವಾಗಿರುವುದು ಎಂದರ್ಥವನ್ನು ಕೊಡುವ ತನು (ವಿಸ್ತಾರೇ) ಎಂಬ ಧಾತುವಿನ ಕರ್ಮಣಿಪ್ರಯೋಗವೆಂದು ವಿವರಿಸಿ ಅನುಸ್ಯೂತವಾದ ಸ್ತುತಿಯೆಂದರ್ಥಮಾಡುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅವಿಚ್ಛಿನ್ನವಾಗಿ ಸುರಿಯತಕ್ಕ ವೃಷ್ಟಿಯಿಂದ ಎಂದರೆ ವೃಷ್ಟಿಕಾಲದಲ್ಲಿ ಎಂದರ್ಥವಾಗುತ್ತದೆ. ಅಥವಾ ಪಿತೃವಿಶೇಷಣಂ । ತಾತ್ಯಾ ತತ್ಕಾಲೀನೌ ಪಿತರಾ । ತತ್ಕಾಲಕ್ಕೆ ಸಂಬಂಧಿಸಿದ ಎಂದರ್ಥವಾಗಿ ಪಿತರಾ ಎಂಬ ಪದಕ್ಕೆ ವಿಶೇಷಣವಾಗುತ್ತದೆ ಎಂದೂ ಸಹ ಸಾಯಣರು ಎರಡನೆಯ ಪರ್ಯಾಯವಾದ ಅರ್ಥವನ್ನು ಮಾಡಿದ್ದಾರೆ.

ಕರಸ್ನಂ—ಕರಸ್ನ ಶಬ್ದವನ್ನು ಬಾಹುನಾಮಗಳಲ್ಲಿ ಸೇರಿಸಿದೆ. (ನಿ. ೩-೮) ನಿರುಕ್ತಕಾರರು,

ಬೃಬದುಕ್ಥಂ ಹವಾಮಹೇ ಸೃಪ್ರಕರಸ್ನಮೂತಯೇ । ಸಾಧು ಕೃಣ್ವಂತಮವಸೇ ॥
(ಋ. ಸಂ. ೮-೩೨-೧೦)

ಎಂಬ ಋಕ್ಕನ್ನುದಹರಿಸಿ ಕರಸ್ನ ಶಬ್ದಕ್ಕೆ ಕರ್ಮಣಾಂ ಪ್ರಸ್ನಾತಾರೌ । ಕರ್ಮಗಳಿಗೆ ಪ್ರವರ್ತಕಗಳಾಗಿರುವುದರಿಂದ ಬಾಹುಗಳಿಗೆ ಈ ಹೆಸರು ಪ್ರಸಿದ್ಧವಾಗಿದೆಯೆಂದು ತಿಳಿಸಿದ್ದಾರೆ. (೬-೧೭).

ಪ್ರ ಅಬ್ರವೀತ್—ಈ ಪದಕ್ಕೆ ದೂಷಿಸಿದರಾಗಲಿ ಅಥವಾ ಸ್ತುತಿಸಿದರಾಗಲಿ ಎಂದು ಎರಡರ್ಥಗಳನ್ನೂ ಮಾಡಿದೆ. ಬ್ರೂ್ರಿ ಇಞ್ ಧಾತುವಿಗೆ ಪ್ರ ಎಂಬ ಉಪಸರ್ಗವನ್ನು ಸೇರಿಸಿದರೆ ಗಟ್ಟಿಯಾಗಿ ಉಚ್ಚರಿಸು; ಪ್ರಕಟಿಸು, ಘೋಷಣೆಯನ್ನು ಮಾಡು ಎಂಬರ್ಥಗಳಾಗುತ್ತದೆ. ಈ ಅಂಶವನ್ನೇ Wilson ಎಂಬ ಪಂಡಿತನು ಈ ಋಕ್ಕಿನ ವಿಶೇಷವಿಷಯಗಳನ್ನು ಹೇಳುವಾಗ, ಪ್ರ prefixed to ಬ್ರೂ, may mean, either to speak harshly or kindly; to censure or to praise ಎಂದು ವಿವರಿಸಿದ್ದಾನೆ. ಆ ಎರಡರ್ಥಗಳೂ ಸಾಧ್ಯವಾಗಿರುವುದರಿಂದಲೇ ಸಾಯಣರೂ ಸಹ ತಸ್ಮೈ ಪ್ರೋ ಅಬ್ರವೀತನ ಎನ್ನುವಾಗಲೂ ಸಹ, ನಿಮ್ಮನ್ನು ದೂಷಿಸುವವನನ್ನು ಭಯಪಡುವಂತೆ ಶಬ್ದಮಾಡಿ ಅಥವಾ ನಿಮ್ಮನ್ನು ಸ್ತುತಿಸುವವನನ್ನು ಉತ್ತೇಜನಪಡಿಸುವಂತೆ ಅನುಗ್ರಹವಾಕ್ಯಗಳನ್ನು ಹೇಳಿ ಎಂದರ್ಥವಾಗುತ್ತದೆಂದು ವಿವರಿಸಿದ್ದಾರೆ.

ಪಿತರಾ—ಜಗತಃ ಪಾಲಕೌ । ಜಗತ್ತಿಗೆ ಪಾಲಕರಾದ ಸೂರ್ಯ ಮತ್ತು ಚಂದ್ರ ಇವರು.

ವ್ಯಾಕರಣಪ್ರಕ್ರಿಯಾ

ಸಂಮೀಲ್ಯ—ಮೀಲ ಸಂಕೋಚನೇ ಧಾತು. (ನಿಮೇಷಣೇ) ಸಮಾಸೇನಞ್ಪೂರ್ವೇಕ್ತ್ವೋಲ್ಯಪ್ (ಪಾ. ಸೂ. ೭-೧-೩೭) ಎಂಬುದರಿಂದ ಕ್ತ್ವಾ ಪ್ರತ್ಯಯಕ್ಕೆ ಲ್ಯಬಾದೇಶ. ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

ಭುವನಾ—ಭುವನಾನಿ ಎಂದು ರೂಪವಾದಾಗ ಶೇಶ್ಛಂದಸಿ ಬಹುಲಮ್ (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

ಪರ್ಯಸರ್ಪತ—ಪರಿ ಉಪಸರ್ಗ. ಸೃಪ್ಲೃ ಗತೌ ಧಾತು. ಛಾಂದಸವಾಗಿ ಲಙ್. ಮಧ್ಯಮಪುರುಷ ಬಹುವಚನಾಂತರೂಪ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆದ್ಯುದಾತ್ತವಾಗುತ್ತದೆ. ತಿಙಿ-ಚೋದಾತ್ತವತಿ (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಪರಿ) ನಿಘಾತಸ್ವರ ಬರುತ್ತದೆ.

ತಾತ್ಯಾ—ತದ್ ಶಬ್ದ. ಛಾಂದಸವಾಗಿ ತ್ಯಪ್ ಪ್ರತ್ಯಯ. ಅದರೊಡನೆ ದಕಾರಕ್ಕೆ ಆಕಾರಾದೇಶ. ಸುಪಾಂ ಸುಲುಕ್-ಎಂಬುವರಿಂದ ವಿಭಕ್ತಿಗೆ ಆಕಾರಾದೇಶ. ಪಿತರಾ ಎಂಬಲ್ಲಿಯೂ ದ್ವಿವಚನಕ್ಕೆ ಆಕಾರಾವೇಶ.

ಆಸತುಃ—ಅಸ ಭುವಿ ಧಾತು. ಲಿಟ್ ಪ್ರಥಮಪುರುಷದ್ವಿವಚನ ಪರನಾದಾಗ ವ್ಯತ್ಯಯದಿಂದ ಭೂಭಾವ ಬರುವುದಿಲ್ಲ. ಅಥವಾ ಅಸ ಗತೌ ಧಾತು. ಇದಕ್ಕೆ ಲಿಟನಲ್ಲಿ ಆಸತುಃ ಎಂದು ರೂಪವಾಗುತ್ತದೆ. ತಿಙಂತನಿಘಾತ ಸ್ವರ ಬರುತ್ತದೆ.

ಅಶಪತ—ಶಪ ಆಕ್ರೋಶೇ ಧಾತು. ಲಙ್ ಮಧ್ಯಮಪುರುಷಬಹುವಚನಾಂತರೂಪ. ಪಾದಾದಿಯಲ್ಲಿರುವುದರಿಂದ ತಿಙಂತನಿಘಾತಸ್ವರ ಬರುವುದಿಲ್ಲ. ಆದ್ಯುದಾತ್ತವಾಗುತ್ತದೆ.

ಆದದೇ—ಡುದಾಞ್ ದಾನೇ ಧಾತು. ಲಿಟ್ ಪ್ರಥಮಪುರುಷ ಏಕವಚನಾಂತರೂಪ. ಯದ್ವೃತ್ತಾ-ನ್ನಿತ್ಯಮ್ ಎಂಬುದರಿಂದ ನಿಘಾತಸ್ವರಪ್ರತಿಷೇಧ ಬರುವುದರಿಂದ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ ತಿಙಿಚೋದಾತ್ತವತಿ ಎಂಬುದರಿಂದ ಗತಿಗೆ (ಆಙ್) ಅನುದಾತ್ತಸ್ವರ ಬರುತ್ತದೆ.

ಅಬ್ರವೀತ್—ಹಿಂದಿನಂತೆ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆದ್ಯುದಾತ್ತಸ್ವರ ಬರುತ್ತದೆ. ಅಬ್ರವೀತನ ಎಂಬಲ್ಲಿ ಹಿಂದಿನಂತೆ ಮಧ್ಯಮಬಹುವಚನಕ್ಕೆ ತಪ್ತನಪ್ತನಥನಾಶ್ಚ ಎಂಬುದರಿಂದ ತನಬಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೨ ॥



ಸಂಹಿತಾಪಾಠಃ

ಸುಷುಪ್ವಾಂಸ ಋಭವಸ್ತದಪೃಚ್ಛತಾಗೋಹ್ಯ ಕ ಇದಂ ನೋ ಅಬೂಬುಧತ್ ।
ಶ್ವಾನಂ ಬಸ್ತೋ ಬೋಧಯಿತಾರಮಬ್ರವೀತ್ಸಂವತ್ಸರ ಇದಮದ್ಯಾ ವ್ಯಖ್ಯತ ॥ ೧೩ ॥

॥ ಪದಪಾಠಃ ॥

ಸುಸುಪ್ವಾಂಸಃ । ಋಭವಃ । ತತ್ । ಅಪೃಚ್ಛತ । ಅಗೋಹ್ಯ । ಕಃ । ಇದಂ । ನಃ । ಅಬೂಬುಧತ್ ।
ಶ್ವಾನಂ । ಬಸ್ತಃ । ಬೋಧಯಿತಾರಂ । ಅಬ್ರವೀತ್ । ಸಂವತ್ಸರೇ । ಇದಂ । ಅದ್ಯ । ವಿ । ಅಖ್ಯತ ॥೧೩॥

ಸಾಯಣಭಾಷ್ಯಂ

ಹೇ ಋಭವೋ ರಶ್ಮ್ಯಾತ್ಮಕಾಃ ಯೂಯಂ ಸುಷುಪ್ವಾಂಸ ಆದಿತ್ಯಮಂಡಲೇ ಸ್ವಪಂತೋ ವರ್ಷಣಾಯ ॥ ಸ್ವಪೇರ್ಲಿಟಃ ಕ್ವಸುಃ ॥ ತಮಾದಿತ್ಯಂ ತದ್ವಾಕ್ಯಮಪೃಚ್ಛತ । ಪ್ರಶ್ನಂ ಕುರುಥ । ಕಿಂ ತದಿತಿ ಚೇತ್ ಉಚ್ಯತೇ । ಹೇ ಅಗೋಹ್ಯ ಕೇನಚಿದಗೋಪನೀಯಾದಿತ್ಯ ಸ್ವಾಮಿನ್ ನೋಽಸ್ಮದೀಯಮಿದಂ ಕರ್ಮ ವರ್ಷಣರೂಪಂ ಕೋಽಬೂಬುಧತ್ । ಬೋಧಯತಿ । ಪ್ರೇರಯತಿ । ಸಾಹಾಯ್ಯಂ ಕರೋತಿ ॥ ಬುಧೇರ್ಣ್ಯಂತಾಲ್ಲುಙಿ ಚಙಿ ರೂಪಂ ॥ ಬಸ್ತಃ ಸರ್ವಸ್ಯ ವಾಸಯಿತಾದಿತ್ಯಃ ॥ ವಸೇರೌಣಾದಿಕಸ್ತಪ್ರತ್ಯಯಃ । ಬವಯೋರಭೇದಾದ್ಬತ್ವಂ ॥ ಬೋಧಯಿತಾರಂ ಪ್ರೇರಯಿತಾರಂ ಶ್ವಾನಮಬ್ರವೀತ್ । ಅಂತರಿಕ್ಷೇ ಶ್ವಸಂತಂ ವಾಯುಂ ಪ್ರಾವಾದೀತ್ । ಅಸೌ ಯುಷ್ಮಾನ್ಪ್ರೇರಯತೀತಿ । ಅಥ ವಾಯುಸಹಾಯೇನ ವರ್ಷಂತೋ ಯೂಯಂ ಸಂವತ್ಸರೇ ಪೂರ್ಣೇಽದ್ಯೇದಾನೀಮಿದಂ ಜಗದ್ವ್ಯಖ್ಯತ । ವಿವಿಧಂ ಪ್ರಕಾಶಿತವಂತಃ । ಪೂರ್ವಂ ಸೂರ್ಯಾಚಂದ್ರಮಸೌ ಯಥಾ ನ ದೃಶ್ಯೇತೇ ತಥಾ ವರ್ಷಿತ್ವೇದಾನೀಂ ವರ್ಷಕಾಲೇಽತೀತೇ ವಿಶ್ವಂ ಜಗದ್ವ್ಯಕ್ತಂ ಕುರುಥೇತ್ಯರ್ಥಃ ॥ ಖ್ಯಾತೇರ್ಲುಙ್ಯಸ್ಯತಿವಕ್ತಿಖ್ಯಾತೀತ್ಯಙ್ ॥

। ಪ್ರತಿಪದಾರ್ಥ ।

ಋಭವಃ—ರಶ್ಮಿರೂಪದ ಎಲೈ ಋಭುಗಳೇ । ಸುಷುಪ್ವಾಂಸಃ—ಆದಿತ್ಯಮಂಡಲದ ಅವಲಂಬನವನ್ನಾಶ್ರಯಿಸಿ) ವಿಶ್ರಾಂತರಾಗಿರುತ್ತಾ । ತತ್—ಈ ಪ್ರಶ್ನೆಯನ್ನು । ಅಪೃಚ್ಛತ—ಕೇಳಿರಿ (ಅದೇನೆಂದರೆ) । ಅಗೋಹ್ಯ-(ಯಾರಿಂದಲೂ) ಮರೆಸಲಾಗದ ಎಲೈ ಆದಿತ್ಯನೇ । ಇದಂ—ಈ ವರ್ಷಣ ಕರ್ಮಕ್ಕೆ । ನಃ—ನಮ್ಮನ್ನು । ಕಃ—ಯಾವನು । ಅಬೂಬುಧತ್—ಪ್ರೇರಿಸಿದನು । ಬಸ್ತಃ—(ಸಕಲವನ್ನೂ) ಆಚ್ಛಾದಿಸುವ ಆದಿತ್ಯನು । ಶ್ವಾನಂ—ವಾಯುವನ್ನು । ಬೋಧಯಿತಾರಂ—ಪ್ರೇರಕನೆಂದು । ಅಬ್ರವೀತ್—ಹೇಳಿದನು । ಸಂವತ್ಸರೇ—ಸಂವತ್ಸರವು

ಪೂರ್ಣವಾದನಂತರ | ಅದ್ಯ—ಈಗ | ಇದಂ—ಈ ಜಗತ್ತನ್ನು ! ವ್ಯಖ್ಯತ—ವಿಧವಿಧವಾಗಿ ಪ್ರಕಾಶಿಸುವಂತೆ ಮಾಡಿದಿರಿ (ಎಂದೂ ಹೇಳಿದನು).

ಭಾವಾರ್ಥ

ರಶ್ಮಿರೂಪದ ಎಲೈ ಋಭುಗಳೇ, ಆದಿತ್ಯಮಂಡಲದ ಅವಲಂಬನವನ್ನಾಶ್ರಯಿಸಿ ವಿಶ್ರಾಂತರಾಗಿರುತ್ತಾ-ಯಾರಿಂದಲೂ ಮರೆಸಲಾಗದ ಎಲೈ ಆದಿತ್ಯನೇ ಈ ವರ್ಷಣಕರ್ಮಕ್ಕೆ ನಮ್ಮನ್ನು ಪ್ರೇರಿಸಿದವನು ಯಾರು ಎಂದು ಪ್ರಶ್ನೆಯನ್ನು ಕೇಳಿರಿ. (ಆಗ) ಸಕಲರನ್ನೂ ಆಚ್ಛಾದನೆಮಾಡುವ ಆದಿತ್ಯನು-ವಾಯುವೇ ಈ ಪ್ರೇರಕನೆಂದು ಹೇಳಿದನು. ಅನಂತರ ಸಂವತ್ಸರವು ಪೂರ್ಣವಾದಮೇಲೆ ಈ ಜಗತ್ತನ್ನು ವಿಧವಿಧವಾಗಿ ಪ್ರಕಾಶಿಸುವಂತೆ ಮಾಡಿದಿರಿ ಎಂದೂ ಸಹ ಹೇಳಿದನು.

## English Translation

Ribhus, reposing in the solar orb, you inquire, who awakens us, unapprehensible (Sun), to this office (of sending rain). The sun replies-The awakener is the wind; and the year (being ended), you again to-day light up this (world).

ವಿಶೇಷವಿಷಯಗಳು

ಸೂರ್ಯರಶ್ಮಿಗಳು ಉದಕವನ್ನಾಕರ್ಷಿಸಿ ಮೇಘರೂಪದಿಂದ ವರ್ಷಣಕರ್ಮವನ್ನು ನೆರವೇರಿಸುತ್ತವೆಯೆಂಬುಹು ಪ್ರಸಿದ್ಧವಾದ ವಿಷಯವಾಗಿದೆ. ಸೂಕ್ಷ್ಮವಾಗಿ ಪರಿಶೀಲಿಸಿದರೆ ಕೇವಲ ಸೂರ್ಯರಶ್ಮಿಗಳಿಂದಲೇ ಆ ಕೆಲಸವು ಪೂರ್ಣವಾಗಿ ನಿರ್ವಹಿಸಲಾಗುವುದಿಲ್ಲ. ಬೇರೆ ಸಹಾಯವೂ ಅವಶ್ಯವಾಗಿರುತ್ತದೆ ಎಂಬುದನ್ನು ಸ್ಪಷ್ಟವಾಗಿ ತಿಳಿಸಲು ಇಲ್ಲಿ ಪ್ರಶ್ನೋತ್ತರರೂಪದಿಂದ ವಿವರಿಸಿದೆ. ಅಂತರಿಕ್ಷಪ್ರದೇಶದಲ್ಲೆಲ್ಲಾ ವ್ಯಾಪಿಸಿ ಮಧ್ಯಲೋಕದ ಆಧಿಪತ್ಯವನ್ನು ವಹಿಸಿರುವ ವಾಯುವೇ ಈ ವರ್ಷಣಕರ್ಮಕ್ಕೆ ಮುಖ್ಯಸಹಾಯಕನು ಎಂದು ರಶ್ಮಿಗಳ ಪ್ರಶ್ನೆಗೆ ಉತ್ತರವಾಗಿ ಆದಿತ್ಯನು ಹೇಳುತ್ತಾನೆಂದು ಇಲ್ಲಿ ಆಲಂಕಾರಿಕವಾಗಿ ವರ್ಣಿಸಿದೆ.

ಅಗ್ನಿ, ವಾಯು ಮತ್ತು ಆದಿತ್ಯರಲ್ಲಿ ವಾಯುವು ಮಧ್ಯಲೋಕದ ಅಧಿದೇವತೆಯೆಂಬುನು ಸ್ಪಷ್ಟವಾದ ವಿಷಯ. ಅಂತರಿಕ್ಷದ ಮೂಲಕ ಸಂಚರಿಸತಕ್ಕ ಸೂರ್ಯರಶ್ಮಿಗಳಿಗೆ ವೃಷ್ಟಿವರ್ಷಕ್ಕೆ ಈ ಅಂತರಿಕ್ಷಾಧಿದೇವತೆಯ ಪ್ರೇರಣೆಯು ಅತ್ಯವಶ್ಯವಾಗಿರುತ್ತದೆ. ಈ ಲೋಕದಲ್ಲಿ ನಡೆಯತಕ್ಕ ಸಮಸ್ತವ್ಯವಹಾರಗಳಿಗೂ ವಾಯುವೇ ಪ್ರಭುವಾಗಿದ್ದಾನೆ.

ಅಥ ವಿಶ್ವಜ್ಯೋತಿಷಮುಪದಧಾತಿ | ವಾಯುರ್ವೈ ಮಧ್ಯಮಾ ವಿಶ್ವಜ್ಯೋತಿರ್ವಾಯುರ್ಹ್ಯೇ-
ವಾಂತರಿಕ್ಷಲೋಕೇ ವಿಶ್ವಂ ಜ್ಯೋತಿರ್ವಾಯುಮೇವೈತದುಪದಧಾತಿ ||

(ಶ. ಬ್ರಾ. ೮-೩-೨-೧)

ಅಗ್ನಿ, ವಾಯು, ಆದಿತ್ಯ ಎಂಬ ಮೂರು ವಿಶ್ವಜ್ಯೋತಿಗಳಲ್ಲಿ ವಾಯುವು ಮಧ್ಯಮಲೋಕದ ವಿಶ್ವಜ್ಯೋತಿಯು. ಮತ್ತು ಅಂತರಿಕ್ಷವನ್ನೆಲ್ಲಾ ಬೆಳಗಿಸಿ ಪ್ರಭುವಾಗಿರುವವನು.

ವೇತ್ಥ ಚತ್ವಾರಿ ಮಹಾಂತಿ ವೇತ್ಥ ಚತ್ವಾರಿ ಮಹತಾಂ ಮಹಾಂತೀತ್ಯಗ್ನಿರ್ಮಹಾಂಸ್ತಸ್ಯ ಮಹತೋ ಮಹದೋಷಧಯಶ್ಚ ವನಸ್ಪತಯಶ್ಚ ತದ್ಧ್ಯಸ್ಯಾನ್ನಂ ವಾಯುರ್ಮಹಾಂಸ್ತಸ್ಯ ಮಹತೋ ಮಹದಾಪಸ್ತದ್ಧ್ಯಸ್ಯಾನ್ನಮಾದಿತ್ಯೋ ಮಹಾನ್ .... .... .... ||

(ಶ. ಬ್ರಾ. ೧೦-೩-೪-೪)

ವಿಶ್ವದ ಮಹತ್ತಾದ ವಸ್ತುಗಳು ನಾಲ್ಕು. ಅಗ್ನಿ, ವಾಯು, ಆದಿತ್ಯ ಮತ್ತು ಪುರುಷ. ಈ ನಾಲ್ಕು ಮಹಾವಸ್ತುಗಳಲ್ಲಿ ಅಂತರಿಕ್ಷಸ್ಥನಾದ ವಾಯುವಿಗೆ ಮಹತ್ತಾದ ಉದಕವೇ ಅನ್ನವು.

ಅಯಂ ವೈ ವರ್ಷಸ್ಯೇಷ್ಟೇ ಯೋಽಯಂ ಪವತೇ ಸೋಽಯಮೇಕ ಇವೈವ ಪವತೇ ಸೋಽಯಂ ಪುರುಷೇಽಂತಃ ಪ್ರವಿಷ್ಟಃ ಪ್ರಾಙ್ಚ ಪ್ರತ್ಯಙ್ಚ ತಾವಿಮೌ ಪ್ರಾಣೋದಾನೌ ಪ್ರಾಣೋದಾನೌ ವೈ ಮಿತ್ರಾವರುಣೌ ತದ್ಯ ಏವ ವರ್ಷಸ್ಯೇಷ್ಟೇ ಸ ತ್ವಾ ವೃಷ್ಟ್ಯಾ ಅವತ್ವಿತ್ಯೇವೈತದಾಹ ತಮೇತೇ-ನೈವಾದದೀತ ಯದಾ ಹ್ಯೇವ ಕದಾ ಚ ವೃಷ್ಟಿಃ ಸಮಿವ ಸಮುನಕ್ತ್ಯಾಹುತಿಮೇವೈತತ್ಕರೋ-ತ್ಯಾಹುತಿರ್ಭೂತ್ವಾ ದೇವಲೋಕಂ ಗಚ್ಛಾದಿತಿ ||

(ಶ. ಬ್ರಾ. ೧-೮-೩-೧೨)

ಪುರುಷನ ಅಂತಃಪ್ರವಿಷ್ಟನಾಗಿ ಪ್ರಾಣೋದಾನರೂಪದಿಂದ ಎರಡು ಭಾಗವಾಗಿ ಚಲಿಸುವ ವಾಯುವು ಏಕಮಾತ್ರನಾಗಿ ಅಂತರಿಕ್ಷದಲ್ಲಿ ವ್ಯಾಪಿಸಿ ವೃಷ್ಟಿಗೆಲ್ಲಾ ಏಕಮಾತ್ರ ಪ್ರಭುವಾಗಿರುವನು.... ಅವನಿಗೆ ಉಪಯುಕ್ತವಾದ ಆಹುತ್ಯರ್ಪಣದಿಂದ ಅವನು ವೃಷ್ಟಿಯನ್ನು ಸುರಿಸಲು ಸಹಾಯವಾಗುತ್ತದೆ. ಆ ವೃಷ್ಟಿಯಿಂದ ಅವನು ಎಲ್ಲರನ್ನೂ ರಕ್ಷಿಸುತ್ತಾನೆ

ತದ್ವಾಯವ್ಯಂ ಭವತಿ | ಅಯಂ ವೈ ವಾಯುರ್ಯೋಽಯಂ ಪವತ ಏಷ ವಾ ಇದಗ್ಂ ಸರ್ವಂ ಪ್ರಪ್ಯಾಯಯತಿ ಯದಿದಂ ಕಿಂಚ ವರ್ಷತಿ ವೃಷ್ಟ್ಯಾದೋಷಧಯೋ ಜಾಯಂತೇ.... .... .... ತಸ್ಮಾದ್ವಾಯವ್ಯಂ ಭವತಿ ||

(ಶ. ಬ್ರಾ. ೨-೬-೩-೭)

ವಾಯುವಿನ ಪ್ರೇರಣೆಯಿಂದಲೇ ವೃಷ್ಟಿಪತನವು. ವೃಷ್ಟಿಕಾರಣನೂ, ವೃಷ್ಟಿವರ್ಧಕನೂ ಆದ ವಾಯುವಿನ ಸಹಾಯದಿಂದಲೇ ಸಸ್ಯಾದಿಗಳ ಬೆಳವಣಿಗೆಯು. (ಆದುದರಿಂದ ಶಾಕಮೇಧಾಹುತಿಯು ವಾಯುವಿಗೆ ಅರ್ಪಿತವಾಗತಕ್ಕದ್ದು).

ಇತ್ಯಾದಿಯಾಗಿ ಸಕಲಶ್ರುತಿವಾಕ್ಯಗಳೂ ಸಹ ಅಂತರಿಕ್ಷಸ್ಥನಾದ ವಾಯುವೇ ವೃಷ್ಟಿಪತನಕ್ಕೆ ಪ್ರೇರಕನೆಂದು ಹೇಳಿರುವುದನ್ನು ಇಲ್ಲಿಯೂ ಸಹ ವಿಶದಪಡಿಸಿ ಸೂರ್ಯರಶ್ಮಿಗಳು ನಿಮಿತ್ತಕಾರಣಗಳೆಂದು ತೋರಿಸಿದೆ

ಶ್ವಸನಂ—ಅಂತರಿಕ್ಷೇ ಶ್ವಸಂತಂ ವಾಯುಂ | ಅಂತರಿಕ್ಷದಲ್ಲಿ ಮುಖ್ಯ ಪ್ರಾಣವನ್ನು ಹೊಂದಿರುವುದರಿಂದ ವಾಯುವಿಗೆ ಈ ಹೆಸರು. (ನಿ. ೭-೨೯).

ಸಂವತ್ಸರೇ ಅದ್ಯ ಇದಂ ವ್ಯಖ್ಯತ—ವರ್ಷಾಕಾಲವು ಕಳೆದನಂತರ ಪುನಃ ಗ್ರೀಷ್ಮಕಾಲದಲ್ಲಿ ಸೂರ್ಯರಶ್ಮಿಗಳು ಮೇಘರಹಿತವಾದ ಜಗತ್ತನ್ನು ಪ್ರಕಾಶಗೊಳಿಸುವುವು ಎಂದರ್ಥ.

ವ್ಯಾಕರಣಪ್ರಕ್ರಿಯಾ

**ಸುಷುಪ್ವಾಂಸಃ**—ಞಿಷ್ವಪ್ ಶಯೇ ಧಾತು. ಇದಕ್ಕೆ ಲಿಟ್ ಬಂದಾಗ ಕ್ವಸುಶ್ಚ (ಪಾ. ಸೂ. ೩-೨-೧೦೭) ಎಂಬುದರಿಂದ ಕ್ವಸು ಪ್ರತ್ಯಯ. ಧಾತುವಿಗೆ ದ್ವಿತ್ವಾದಿ. ವಸುವಿನ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನ ಪರವಾದಾಗ ಉಗಿತ್ತಾದುದರಿಂದ ನುಮಾಗಮ.

**ಅಪೃಚ್ಛತ**—ಪ್ರಚ್ಛ ಜ್ಞೀಪ್ಸಾಯಾಂ ವಾಚಿ ಧಾತು. **ಛಂದಸಿ ಲುಙ್ಲಙ್ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ಲಙ್. ಮಧ್ಯಮಪುರುಷಬಹುವಚನಾಂತರೂಪ. ಅತಿಙಂತದ ಪರವಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಗೋಹ್ಯ**—ಸಂಬುದ್ಧ್ಯಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಬೂಬುಧತ್**—ಬುಧ ಅವಗಮನೇ ಧಾತು. **ಹೇತುಮತಿಚ** (ಪಾ ಸೂ. ೩-೧-೨೬) ಎಂಬುದರಿಂದ ಣಿಚ್. ಣ್ಯಂತದ ಮೇಲೆ ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲುಙ್. ಪ್ರಥಮಪುರುಷಏಕವಚನದಲ್ಲಿ ತಿಪ್. ಇತಶ್ಚ ಎಂಬುದರಿಂದ ಇಕಾರಲೋಪ. **ಣಿಶ್ರಿದ್ರುಸ್ರುಭ್ಯಃ**—(ಪಾ. ಸೂ. ೩-೧-೪೮) ಎಂಬುದರಿಂದ ಚ್ಲಿಗೆ ಚಙಾದೇಶ. **ಚಙಿ** (ಪಾ. ಸೂ. ೬-೧-೧೧) ಎಂಬುದರಿಂದ ಧಾತುವಿಗೆ ದ್ವಿತ್ವ. **ಸನ್ವಲ್ಲಘುನಿ ಚಙ್**—(ಪಾ. ಸೂ. ೭-೪-೯೩) ಎಂಬುದರಿಂದ ಸನ್ವದ್ಭಾವವಿರುವುದರಿಂದ **ದೀರ್ಘೋಲಘೋಃ** (ಪಾ. ಸೂ. ೭-೪-೯೪) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ಬಸ್ತಃ**—ವಸ ನಿವಾಸೇ. ಧಾತು. ಇದಕ್ಕೆ ಔಣಾದಿಕ ತ ಪ್ರತ್ಯಯ. **ವಬಯೋರಭೇದಃ** ಎಂಬ ನ್ಯಾಯದಿಂದ ವಕಾರಕ್ಕೆ ಬಕಾರ ಬಂದಿದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ-

**ಬೋಧಯಿತಾರಮ್**—ಬುಧ ಅವಗಮನೇ. ಧಾತು. ಣ್ಯಂತದಮೇಲೆ ಕರ್ತರಿಯಲ್ಲಿ ತೃಚ್ ಪ್ರತ್ಯಯ. ಣಿಚ್ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಪ್ರತ್ಯಯ ನಿಮಿತ್ತವಾಗಿ ಣಿಚಿಗೆ ಗುಣ ಅಯಾದೇಶ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಅಬ್ರವೀತ್**—ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು. ಲಙ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಅದ್ಯ**—**ನಿಪಾತಸ್ಯಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾರ್ಥದಲ್ಲಿ ದೀರ್ಘ ಬರುತ್ತದೆ.

**ಅಖ್ಯತ**—ಖ್ಯಾ ಪ್ರಕಥನೇ. ಧಾತು. ಲುಙ್ ಮಧ್ಯಮಪುರುಷ ಬಹುವಚನದಲ್ಲಿ ಥ ಪ್ರತ್ಯಯ. ಅದಕ್ಕೆ ತಾದೇಶ. ಚ್ಲಿ ವಿಕರಣ ಬಂದಾಗ ಅಸ್ಯತಿವಕ್ತಿಖ್ಯಾತಿಭ್ಯೋಙ್ (ಪಾ. ಸೂ. ೩-೧-೫೨) ಎಂಬುದರಿಂದ ಅದಕ್ಕೆ ಅಙಾದೇಶ. **ಆತೋ ಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಅಡಾಗಮ. ತಿಙಂತ ನಿಘಾತಸ್ವರ ಬರುತ್ತದೆ. ॥ ೧೩ ॥

——— :o: — ———

### ಸಂಹಿತಾಪಾಠಃ

ದಿವಾ ಯಾಂತಿ ಮರುತೋ ಭೂಮ್ಯಾಗ್ನಿರಯಂ ವಾತೋ ಅಂತರಿಕ್ಷೇಣ ಯಾತಿ ।
ಅದ್ಭಿರ್ಯಾತಿ ವರುಣಃ ಸಮುದ್ರೈರ್ಯುಷ್ಮಾ ಇಚ್ಛಂತಃ ಶವಸೋ ನಪಾತಃ ॥ ೧೪ ॥

### ಪದಪಾಠ

ದಿವಾ । ಯಾಂತಿ । ಮರುತಃ । ಭೂಮ್ಯಾ । ಅಗ್ನಿಃ । ಅಯಂ । ವಾತಃ । ಅಂತರಿಕ್ಷೇಣ । ಯಾತಿ ।
ಅತ್ಽಭಿಃ । ಯಾತಿ । ವರುಣಃ । ಸಮುದ್ರೈಃ । ಯುಷ್ಮಾನ್ । ಇಚ್ಛಂತಃ । ಶವಸಃ । ನಪಾತಃ ॥ ೧೪ ॥

### ॥ ಸಾಯಣಭಾಷ್ಯಂ ॥

ಹೇ ಶವಸೋ ವೃಷ್ಟಿಕಾರ್ಯಸ್ಯ ಬಲಸ್ಯ ನಪಾತೋ ನಪಾತಯಿತಾರ ಋಭವಃ ಯುಷ್ಮಾನಿಚ್ಛಂತೋ ವೃಷ್ಟ್ಯನುಕೂಲಚಿಕೀರ್ಷಯಾ ಯುಷ್ಮಾನೇವೇಚ್ಛಂತಃ ಸರ್ವೇ ದೇವಾ ಆಯಾಂತಿ । ಕಸ್ಮಾದಿತಿ ತದುಚ್ಯತೇ । ಮರುತೋ ವೃಷ್ಟ್ಯನುಕೂಲಾ ದೇವಾ ದಿವಾ ದ್ಯುಲೋಕಾದ್ಯಾಂತಿ । ಆಗಚ್ಛಂತಿ ॥ ಸಾವೇಕಾಚ ಇತಿ ತೃತೀಯಾವಿಭಕ್ತೇರುದಾತ್ತತ್ವಂ ॥ ಭೂಮ್ಯಾ ಭೂಮೇಃ ಸಕಾಶಾದಗ್ನಿರ್ಯಾತಿ । ಆಗಚ್ಛತಿ । ಅಯಂ ವಾತಃ ಸರ್ವದಾ ಸಂಚಾರೀ ವಾಯುರಂತರಿಕ್ಷೇಣ ಯಾತಿ । ಅಂತರಿಕ್ಷಾದಾಯಾತಿ । ತಥಾ ವರುಣ ಆವರಕೋ ಜಲಾಭಿಮಾನೀ ದೇವಃ ಸಮುದ್ರೈಃ ಸಮುಂದನಸ್ವಭಾವೈರದ್ಭಿಃ ತಾಭ್ಯ ಆಯಾತಿ । ಯದ್ವಾ । ಪೂರ್ವಂ ವೃಷ್ಟಿಸಾಹಾಯ್ಯಾಯಾಗತಾ ಏತೇ ದೇವಾಃ ಕೃತಕಾರ್ಯಾಃ ಸಂತಃ ಪುನರ್ಯುಷ್ಮಾನ್ಕಾಮಯಮಾನಾಃ ಸ್ವಸ್ವದೇಶಂ ಪ್ರತಿ ಯಾಂತೀತ್ಯರ್ಥಃ ॥ ॥ ೬ ॥

### ಪ್ರತಿಪದಾರ್ಥ

ಶವಸಃ ನಪಾತಃ—ವೃಷ್ಟಿರೂಪವಾದ ಶಕ್ತಿಯನ್ನು ಪ್ರಚೋದಿಸತಕ್ಕ ಎಲೈ ಋಭುಗಳೇ (ಅಥವಾ)ಶಕ್ತಿಪುತ್ರರಾದ ಋಭುಗಳೇ । ಯುಷ್ಮಾನ್ ಇಚ್ಛಂತಃ—ನಿಮ್ಮನ್ನು ಅಪೇಕ್ಷಿಸಿದವರಾಗಿ । ಮರುತಃ—ಮರುತ್ತುಗಳು । ದಿವಾ—ದ್ಯುಲೋಕದಿಂದ । ಯಾಂತಿ—ಬರುತ್ತಾರೆ । ಅಗ್ನಿಃ—ಅಗ್ನಿಯು । ಭೂಮ್ಯಾ—ಪೃಥ್ವಿಯಿಂದ (ಬರುತ್ತಾನೆ) । ಅಯಂ ವಾತಃ— ಈ ವಾಯುವು । ಅಂತರಿಕ್ಷೇಣ— ಅಂತರಿಕ್ಷದಿಂದ । ಯಾತಿ—ಬರುತ್ತಾನೆ । ವರುಣಃ—ವರುಣದೇವನು । ಸಮುದ್ರೈಃ—ಪ್ರವಹಿಸುವ ಸ್ವಭಾವವುಳ್ಳ (ಅಂತರಿಕ್ಷವಾದ) । ಅದ್ಭಿಃ—ಉದಕಗಳಿಂದ । ಯಾತಿ—ಬರುತ್ತಾನೆ.

### ಭಾವಾರ್ಥ

ಶಕ್ತಿಪುತ್ರರಾದ ಎಲೈ ಋಭುಗಳೇ, ನಿಮ್ಮನ್ನು ಅಪೇಕ್ಷಿಸಿ ಮರುತ್ತುಗಳು ದ್ಯುಲೋಕದಿಂದಲೂ, ಅಗ್ನಿಯು ಪೃಥ್ವಿಯಿಂದಲೂ, ವಾಯುವು ಅಂತರಿಕ್ಷದಿಂದಲೂ, ಅಂತರಿಕ್ಷಸ್ಥವಾದ ಉದಕಗಳಿಂದ ವರುಣನೂ ಆಗಮಿಸುತ್ತಾರೆ.

### English Translation

Sons of Strength, the Maruts, desirous of your coming, advance from the sky : Agni comes (to meet you) from the earth : the wind traverses the firmanent ; and Varuna comes with undulating waters.

### ವಿಶೇಷವಿಷಯಗಳು

ಯೊತಿ, ಯೊಂತಿ ಎಂಬ ಪದಗಳಿಗೆ ಆ ಎಂಬ ಉಪಸರ್ಗವನ್ನು ಸೇರಿಸಿ ಒಂದರ್ಥವನ್ನೂ, ಇಲ್ಲದೇ ಇನ್ನೊಂದರ್ಥವನ್ನೂ ಸಾಯಣರು ಮಾಡಿದ್ದಾರೆ. ಮೊದಲನೆಯ ಅರ್ಥದ ಪ್ರಕಾರ ವೃಷ್ಟಿಯ ವರ್ಷಣದ ಸಹಾಯಕ್ಕಾಗಿ ಋಕ್ಕಿನಲ್ಲಿ ನಿರ್ದಿಷ್ಟರಾದ ದೇವತೆಗಳು ನಾನಾಕಡೆಗಳಿಂದ ರಶ್ಮಿಯ ಸಾಹಚರ್ಯಕ್ಕಾಗಿ ಆಸೆಪಟ್ಟು ಬರುತ್ತಾರೆಂದೂ, ಅಥವಾ ಹಿಂದಿನ ಋಕ್ಕಿನಲ್ಲಿ ಸಂವತ್ಸರ ಇದಮುದ್ಯ ವ್ಯಖ್ಯತ ಎಂಬ ವಾಕ್ಯದಿಂದ ವರ್ಷಾಕಾಲವು ಮುಗಿದುದರಿಂದ ರಶ್ಮಿಯ ಪ್ರಕಾಶಕ್ಕೆ ಸಹಾಯವಾಗುವಂತೆ ಎಲ್ಲಾ ದೇವತೆಗಳೂ ತಮ್ಮ ನಿರ್ದಿಷ್ಟವಾದ ಸ್ಥಾನಕ್ಕೆ ಹೊರಟು ಹೋಗುವರೆಂದೂ ಎರಡನೆಯ ವಿವರಣೆಯಿಂದ ತಿಳಿಸಿದ್ದಾರೆ.

ಶ್ವಾನಂ ಬಸ್ತೋ ಬೋಧಯಿತಾರಮಬ್ರವೀತ್ । ಎಂದು ಹಿಂದಿನ ಋಕ್ಕಿನಲ್ಲಿ ಮಾತರಿಶ್ವನ ಮುಖ್ಯ ಸಹಾಯವನ್ನು ತಿಳಿಸಿದೆ. ಅದೇ ವರ್ಷಣಕರ್ಮಕ್ಕೆ ಪ್ರಕೃತವಾದ ಋಕ್ಕಿನಲ್ಲಿ ಮರುತ್ತುಗಳು, ಅಗ್ನಿ, ವಾತ, ವರುಣ ಈ ದೇವತೆಗಳ ಸಾಮೂಹಿಕವಾದ ಸಹಾಯವನ್ನು ಸೂಚಿಸಿದೆ. ವೃಷ್ಟಿಪತನಕ್ಕೂ ಈ ದೇವತೆಗಳಿಗೂ ಇರತಕ್ಕ ಸಂಬಂಧವನ್ನರಿಯಬೇಕಾದರೆ ಈ ದೇವತೆಗಳ ವೈಯಕ್ತಿಕವಾದ ಸ್ವರೂಪವನ್ನೂ ಅವರಿವರಿಗೆ ಇರತಕ್ಕ ಪರಸ್ಪರ ಸಂಬಂಧವನ್ನೂ ಅರಿಯಬೇಕು.

ಮಾತರಿಶ್ವನ್, ವಾಯು ಮತ್ತು ಮರುತ್ತುಗಳು, ಈ ಹೆಸರುಗಳು ರೂಢವಾದ ಈಗಿನ ಅರ್ಥದಲ್ಲಿ ಕೇವಲ ವಾಯುವಿನ ಪರ್ಯಾಯನಾಮಗಳೆಂದು ಪ್ರಸಿದ್ಧವಾಗಿವೆ. ಆದರೆ ಋಕ್ಸಂಹಿತೆಯಲ್ಲಿ ಈ ಹೆಸರುಗಳಿಗೆ ಬೇರೆಬೇರೆ ಸಂಕೇತಗಳಿವೆ. ಆ ಸಂಕೇತಗಳನ್ನು ಪ್ರಕೃತವಾದ ಋಕ್ಕಿನಲ್ಲಿ ವರ್ಣಿಸಿರುವ ವೃಷ್ಟಿಪತನದ ದೃಷ್ಟಿಯಿಂದ ಮಾತ್ರ ಪರಿಶೀಲಿಸಲಾಗುತ್ತದೆ.

ಋಭುಗಳು (ಸೂರ್ಯರಶ್ಮಿಗಳು) ವೃಷ್ಟಿಪತನಕ್ಕೆ ಸಾಧನಗಳು. ಮಾತರಿಶ್ವನು ಅವುಗಳಿಗೆ ಸಹಾಯಕನು. ಈ ಎರಡು ದೇವತಾಕಾರ್ಯಗಳೂ ವಿದ್ಯುದ್ರೂಪದ ಅಗ್ನಿಯ ರೂಪಾಂತರಗಳು. ಋಭುಗಳಿಗೆ ಸೂರ್ಯರಶ್ಮಿಗಳೆಂದು ವಿಶದವಾಗಿಯೇ ಹೇಳಿರುವುದರಿಂದ ಅಲ್ಲಿ ಸಂಶಯಕ್ಕೆ ಕಾರಣವಿಲ್ಲ. ಆದರೆ ವಾಯುವಿನ ರೂಪಾಂತರವಾದ ಮಾತರಿಶ್ವನಿಗೂ ಅಗ್ನಿಗೂ ಏನು ಸಂಬಂಧವೆಂದರೆ, ಕೆಲವು ಋಕ್ಕುಗಳಲ್ಲಿ ಎರಡು ದೇವತೆಗಳಿಗೂ ತಾದಾತ್ಮ್ಯವನ್ನೇ ಹೇಳಿದೆ.

ತನೂನಪಾದುಚ್ಯತೇ ಗರ್ಭ ಆಸುರೋ ನರಾಶಂಸೋ ಭವತಿ ಯದ್ವಿಜಾಯತೇ ।
ಮಾತರಿಶ್ವಾ ಯದಮಿಮೀತ ಮಾತರಿ ವಾತಸ್ಯ ಸರ್ಗೋ ಅಭವತ್ಸರೀಮಣಿ ॥

(ಋ. ಸಂ. ೩-೨೯-೧೧)

ಅಗ್ನಿಯು ಗರ್ಭರೂಪದಲ್ಲಿದ್ದಾಗ ತನೂನಪಾತ್ ಎಂದು ಹೆಸರು. ಅಂತರಿಕ್ಷದಲ್ಲಿ ತನ್ನ ತೇಜಸ್ಸನ್ನು ನಿರ್ಮಿಸಿ ವ್ಯಕ್ತಪಡಿಸಿದಾಗ ಮಾತರಿಶ್ವನೆಂದು ಹೆಸರು. ಎಂದು ಮಾತರಿಶ್ವನು ಅಂತರಿಕ್ಷಸ್ಥವಾದ ಅಗ್ನಿಯ ರೂಪಾಂತರವೆಂದು ಹೇಳಿದೆ.

ಸ ಮಾತರಿಶ್ವಾ ಪುರುವಾರಪುಷ್ಟಿರ್ವಿದದ್ಗಾತುಂ ತನಯಾಯ ಸ್ವರ್ವಿತ್ ।
ವಿಶಾಂ ಗೋಪಾ ಜನಿತಾ ರೋದಸ್ಯೋರ್ದೇವಾ ಅಗ್ನಿಂ ಧಾರಯನ್ದ್ರವಿಣೋದಾಂ ॥

(ಋ. ಸಂ. ೧-೯೬-೪)

ಎಂಬಲ್ಲಿ ಮಾತರಿ ಸರ್ವಸ್ಯ ಜಗತಃ ನಿರ್ಮಾತರಿ ಅಂತರಿಕ್ಷೇ ಶ್ವಸನ್ ವರ್ತಮಾನಃ । ಸಕಲ ಜಗತ್ತಿಗೂ ನಿರ್ಮಾಪಕವಾದ ಅಂತರಿಕ್ಷದಲ್ಲಿರುವ ಅಗ್ನಿಯೆಂದು ಸಾಯಣರೂ, ಮಾತರಿಶ್ವಸಂಬಂಧಾದಗ್ನಿರೇವ ಮಾತರಿ-ಶ್ವೇತ್ಯುಚ್ಯತೇ ಮಾತರಿಶ್ವನಿಗೆ (ವಾಯು) ಸಂಬಂಧಿಸಿದುದರಿಂದ ಎಂದರೆ ಅಗ್ನಿಯ ಆವಿರ್ಭಾವಕ್ಕೆ ಮಾತರಿಶ್ವನೇ ಕಾರಣನಾದುದರಿಂದ ಅಗ್ನಿಗೂ ಮಾತರಿಶ್ವನೆಂದೇ ಹೆಸರು ಎಂದು ಸ್ಕಂದಸ್ವಾಮಿಗಳೂ ವಿವರಿಸಿದ್ದಾರೆ.

ಅಂತರಿಕ್ಷಸ್ಥವಾದುದೂ, ಹಿಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಿರುವಂತೆ ಅಂತರಿಕ್ಷಕ್ಕೆ ಅಧಿದೇವತೆಯೂ ಆದ ವಾಯುದೇವತೆಯೂ ಸಹ ಅಗ್ನಿಯ ರೂಪಾಂತರವೇ ಎಂದು ಹಿಂದೆ ವಿವರಿಸಿದೆ. ವೃಷ್ಟಿಗೆ ಕಾರಣವಾದ ವಿದ್ಯುದ್ರೂಪವಾದ ಅಗ್ನಿಯ ಅವಸ್ಥಾಂತರವೇ ಮಾತರಿಶ್ವಾ, ವಾಯು ಇತ್ಯಾದಿ ಹೆಸರುಗಳಿಂದ ಕರೆಯಲ್ಪಡುತ್ತದೆ.

ವರುಣಃ ಸಮುದ್ರೈರದ್ಭಿರ್ಯಾತಿ—ಅಂತರಿಕ್ಷಸ್ಥವಾದ ಉದಕಗಳಿಂದ ವರುಣನು ಬರುತ್ತಾನೆ ಎನ್ನುವುದರಲ್ಲಿ ಉದಕಕ್ಕೂ ವರುಣನಿಗೂ ಪರಸ್ಪರವಾದ ಸಂಬಂಧವನ್ನೂ ತಿಳಿಸಿದೆ. ಸಮುದ್ರವೆಂದರೆ ಇಲ್ಲಿ ಅಂತರಿಕ್ಷವೆಂದರ್ಥ. (ಇದರ ವಿವರಣೆಯನ್ನ ಹಿಂದೆ ಬಹಳ ವಿಶದವಾಗಿ ತಿಳಿಸಿದೆ.) ವರುಣನಿಗೂ ವೃಷ್ಟಿಗೂ ಇರುವ ಸಂಬಂಧವನ್ನು ಮುಂದೆ ತಿಳಿಸಲಾಗುತ್ತದೆ.

ಪ್ರಕೃತವಾದ ಋಕ್ಕಿನಲ್ಲಿ ಸೂರ್ಯರಶ್ಮಿರೂಪವಾದ ಅಗ್ನಿಯೊಡನೆ, ಮಾತರಿಶ್ವಾದಿ ದೇವತೆಗಳು ಕಲೆತು ವೃಷ್ಟಿ ಕಾಲದಲ್ಲಿ ವೃಷ್ಟಿಯನ್ನೂ, ಅದು ಮುಗಿದು ಸಂವತ್ಸರವು ಪೂರ್ಣವಾದನಂತರ ಲೋಕಕ್ಕೆ ಪ್ರಕಾಶಮಾನವಾದ ಸೂರ್ಯರಶ್ಮಿಯನ್ನೂ ಒದಗಿಸುವ ವಿವರಣೆಯನ್ನು ಕೊಟ್ಟದೆ.

### ವ್ಯಾಕರಣಪ್ರಕ್ರಿಯಾ

ದಿವಾ—ತೃತೀಯಾ ಏಕವಚನಾಂತರೂಪ. ಸಾವೇಕಾಚಸ್ತೃತೀಯಾದಿಃ (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಯಾಂತಿ— ಯಾ ಪ್ರಾಪಣೇ ಧಾತು. ಲಟ್ ಪ್ರಥಮಪುರುಷಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಭೂಮ್ಯಾ—ಭೂ ಸತ್ತಾಯಾಂ ಧಾತು. ಭುವಃ ಕಿತ್ (ಉ. ಸೂ ೪೮೫) ಎಂಬುದರಿಂದ ಮಿ ಪ್ರತ್ಯಯ. ಕಿತ್ವವಿಧಾನಮಾಡಿರುವುದರಿಂದ ಗುಣ ಬರುವುದಿಲ್ಲ.

ಅದ್ಭಿಃ—ಊಡಿದಂಪದಾದಿ- (ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಅಪೋಭಿಃ ಎಂಬುದರಿಂದ ಪಕಾರಕ್ಕೆ ದಕಾರಾದೇಶ.

ಇಚ್ಛಂತಃ—ಇಷ ಇಚ್ಛಾಯಾಂ ಧಾತು. ಲಟಿಗೆ ಶತ್ರಾದೇಶ. ತುದಾದಿಭ್ಯಃ ಶ. ಎಂಬುದರಿಂದ ಶ ವಿಕರಣ. ವಿಕರಣಸ್ವರದಿಂದ ಮಧ್ಯೋದಾತ್ತವಾಗುತ್ತದೆ. ಯುಷ್ಮಾನ್ ಎಂದು ಹಿಂದೆ ಇರುವಾಗ ದೀರ್ಘಾದಟಿಸಮಾನಪಾದೇ (ಪಾ. ಸೂ. ೮-೩-೯) ಎಂಬುದರಿಂದ ನಕಾರಕ್ಕೆ ರುತ್ವ. ಆತೋಟನಿತ್ಯಮ್ ಸೂತ್ರದಿಂದ ಆಕಾರಕ್ಕೆ ಅನುನಾಸಿಕತ್ವ.

ನಪಾತಃ—ನಭ್ರಾಣ್ನಪಾತ್-(ಪಾ. ಸೂ. ೬-೩-೭೫) ಎಂದು ನಿಪಾತಮಾಡಿರುವುದರಿಂದ ನಞಿನ ನಕಾರಕ್ಕೆ ಲೋಪ ಬರುವುದಿಲ್ಲ. ಸಂಬೋಧನಾಬಹುವಚನಾಂತರೂಪ. ಆಮಂತ್ರಿತಸ್ಯಚ (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೧೪ ॥

ಇಲ್ಲಿಗೆ ೧೬೧ನೇ ಸೂಕ್ತವು ಮುಗಿದುದು.

## ನೂರ ಅರವತ್ತೆರಡನೆಯ ಸೂಕ್ತವು

ಮಾ ನೋ ಮಿತ್ರ ಇತಿ ದ್ವಾವಿಂಶತ್ಯೃಚಂ ಷಷ್ಠಂ ಸೂಕ್ತಂ ದೈರ್ಘತಮಸಂ ।. ತೃತೀಯಾಷಷ್ಠ್ಯೌ ಜಗತ್ಯೌ । ಶಿಷ್ಟಾಸ್ತ್ರಿಷ್ಟುಭಃ । ಅಶ್ವಸ್ಯ ಸ್ತೂಯಮಾನತ್ವಾದ್ಯಾ ತೇನೋಚ್ಯತೇ ಸಾ ದೇವತೇತಿ ನ್ಯಾಯೇನಾಶ್ವೋ ದೇವತಾ । ಅತ್ರಾನುಕ್ರಮಣಿಕಾ । ಮಾ ನೋ ದ್ವ್ಯಧಿಕಾಶ್ವಸ್ತುತಿಸ್ತು ತೃತೀಯಾಷಷ್ಠ್ಯೌ ಜಗತ್ಯಾವಿತಿ ॥ ಅಶ್ವಮೇಧಸ್ಯ ಮಧ್ಯಮೇಽಹನ್ಯಧ್ರಿಗುಪ್ರೈಷೇಽಧ್ರಿಗೋ ಶಮೀಧ್ವಮಿತಿ ಶಿಷ್ಟ್ವಾ ಷಡ್ವಿಂಶತಿರಸ್ಯ ವಂಕ್ರಯ ಇತ್ಯಸ್ಮಾತ್ಪುರಸ್ತಾದೈತತ್ಸೂಕ್ತಮಾವಪೇತ್ । ತ್ರೀಣಿ ಸುತ್ಯಾನಿ ಭವಂತೀತಿ ಖಂಡೇ ಸೂತ್ರಿತಂ । ಅಧ್ರಿಗೋ ಶಮೀಧ್ವಮಿತಿ ಶಿಷ್ಟ್ವಾ ಷಡ್ವಿಂಶತಿರಸ್ಯ ವಂಕ್ರಯ ಇತಿ ವಾ ಮಾ ನೋ ಮಿತ್ರ ಇತ್ಯಾವಪೇತ । ಆ ೧೦-೮ । ಇತಿ ॥

ಅನುವಾದವು—ಮಾ ನೋ ಮಿತ್ರಃ ಎಂಬ ಈ ಸೂಕ್ತವು ಇಪ್ಪತ್ತೆರಡನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಇಪ್ಪತ್ತೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ಉಚಥ್ಯಪುತ್ರನಾದ ದೀರ್ಘತಮಸ್ಸೆಂಬುವನು ಋಷಿಯು. ಈ ಸೂಕ್ತದ ಮೂರು ಮತ್ತು ಆರನೆಯ ಋಕ್ಕುಗಳು ಜಗತೀಛಂದಸ್ಸಿನವು. ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಸಿನವು. ಈ ಸೂಕ್ತದಲ್ಲಿ ಅಶ್ವವನ್ನು ಸ್ತುತಿಮಾಡಿರುವುದರಿಂದ ಅಶ್ವಸ್ತುತಿಯೇ ಈ ಸೂಕ್ತಕ್ಕೆ ದೇವತೆಯು. ಏಕೆಂದರೆ ಸೂಕ್ತದಲ್ಲಿ ಯಾವ ವಿಷಯವು ಪ್ರತಿಪಾದಿತವಾಗಿದೆಯೋ ಅದೇ ಆ ಸೂಕ್ತಕ್ಕೆ ದೇವತೆ

ಯೆಂದು ಹೇಳಲ್ಪಡುವದು. ಅನುಕ್ರಮಣಿಕೆಯಲ್ಲಿ—ಮಾ ನೋ ದ್ವ್ಯೃಧಿಕಾಶ್ವಸ್ತುತಿಸ್ತು ತೃತೀಯಾಷಷ್ಠ್ಯೌ ಜಗತ್ಯಾವಿತಿ ಎಂದು ಹೇಳಿರುವುದು. ಅಶ್ವಮೇಧಯಜ್ಞದ ಮಧ್ಯದ ದಿವಸದಲ್ಲಿ ಅಧ್ರಿಗುಪ್ರೈಷಕಾಲದಲ್ಲಿ ಈ ಸೂಕ್ತವನ್ನು ಸ್ತೋಮಾವಃಪಕ್ಕಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ತ್ರೀಣಿ ಸುತ್ಯಾನಿ ಭವಂತಿ ಎಂಬ ಖಂಡದ ಅಧ್ರಿಗೋ ಶಮಿಾಧ್ವಮಿತಿ ಶಿಷ್ವಾ ಷಡ್ವಿಂಶತಿರಸ್ಯ ವಂಕ್ರಯ ಇತಿ ವಾ ಮಾ ನೋ ಮಿತ್ರ ಇತ್ಯಾವಪೇತ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೧೦-೮).

॥ ಓಂ ॥

## ಸೂಕ್ತ—೧೬೨

॥ ಮಂಡಲ—೧ ॥ ಅನುವಾಕ—೨೨ ॥ ಸೂಕ್ತ—೧೬೨ ॥

॥ ಅಷ್ಟಕ— ೨ ॥ ಅಧ್ಯಾಯ— ೩ ॥ ವರ್ಗ— ೭, ೮, ೯, ೧೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೨೨ ॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—ಅಶ್ವಸ್ತುತಿಃ ॥

॥ ಛಂದಃ—೧, ೨, ೪, ೫, ೭- ೨೨, ತ್ರಿಷ್ಟುಪ್ । ೩, ೬, ಜಗತೀ ॥

ಸಂಹಿತಾಪಾಠಃ

ಮಾ ನೋ ಮಿತ್ರೋ ವರುಣೋ ಅರ್ಯಮಾಯುರಿಂದ್ರ ಋಭುಕ್ಷಾ

ಮರುತಃ ಪರಿ ಖ್ಯನ್ ।

ಯದ್ವಾಜಿನೋ ದೇವಜಾತಸ್ಯ ಸಪ್ತೇಃ ಪ್ರವಕ್ಷ್ಯಾಮೋ ವಿದಥೇ

ವೀರ್ಯಾಣಿ ॥ ೧ ॥

ಪದಪಾಠಃ

ಮಾ । ನಃ । ಮಿತ್ರಃ । ವರುಣಃ । ಅರ್ಯಮಾ । ಆಯುಃ । ಇಂದ್ರಃ । ಋಭುಕ್ಷಾಃ । ಮರುತಃ । ಪರಿ । ಖ್ಯನ್ ।

ಯತ್ । ವಾಜಿನಃ । ದೇವಽಜಾತಸ್ಯ । ಸಪ್ತೇಃ । ಪ್ರಽವಕ್ಷ್ಯಾಮಃ । ವಿದಥೇ । ವೀರ್ಯಾಣಿ ॥ ॥ ೧ ॥

ಸಾಯಣಭಾಷ್ಯಂ

ನೋಽಸ್ಮಾನಶ್ವಂ ಸ್ತೋತುಂ ಪ್ರವೃತ್ತಾನ್ಮಿತ್ರಾದಯೋ ದೇವಾ ಮಾ ಪರಿ ಖ್ಯನ್ । ಪರಿಖ್ಯಾನಂ ಮಾ ಕುರ್ವಂತು । ಪರಿಖ್ಯಾನಂ ನಾಮ ನಿಂದಾ । ಮಹಾನುಭಾವಂ ದೇವಜಾತಮಶ್ವಂ ತುಚ್ಛಾ ನರಾಃ ಸ್ತುವಂತೀತಿ ಮಾ ಕುರ್ವಂತು ॥ ಖ್ಯಾತೇರ್ಮಾಙಿ ಲುಙ್ಯಸ್ಯತಿವಕ್ತಿಖ್ಯಾತಿಭ್ಯ ಇತ್ಯಾದಿನಾ ಚ್ಲೇರಙ್ ॥ ಅಹರಭಿಮಾನೀ ದೇವೋ ಮಿತ್ರೋ ರಾತ್ರ್ಯಭಿಮಾನೀ ವರುಣಃ । ಅರ್ಯಮಾ ತಯೋರಂತರಾಲಾಭಿಮಾನ್ಯಾದಿತ್ಯಃ । ಆಯುಃ ಸತತಗಂತಾ ವಾಯುಃ ॥ ವಕಾರಲೋಪೋ ವಾ ॥ ಇಂದ್ರಃ ಪ್ರಸಿದ್ಧಃ । ಋಭುಕ್ಷಾ ದೇವಾನಾಂ ನಿವಾಸಭೂತಃ ಪ್ರಜಾಪತಿಃ । ಯದ್ವಾ । ಏತನ್ಮಹನ್ನಾಮೇಂದ್ರವಿಶೇಷಣಂ ಋಭುಕ್ಷಾ ಉಕ್ಷೇತಿ ತನ್ನಾಮಸು ಪಾಠಾತ್ । ನಿಂದಾಯಾಃ ಪ್ರಸಕ್ತಿಂ ದರ್ಶಯತಿ । ಯದ್ಯಸ್ಮಾದ್ವಾಜಿನೋ .ವೇಜನನತೋ ಬಲ್ಯನ್ನವತೋ ವಾ ದೇವಜಾತಸ್ಯ ಬಹುದೇವತಾಸ್ವರೂಪೇಣೋತ್ಪನ್ನಸ್ಯ । ಉಷಆದೀನಾಮಸ್ಯ ಶಿರಆದ್ಯವಯವತ್ವಾದಿತಿಭಾವಃ । ಉಷಾ ವಾ ಅಶ್ವಸ್ಯ ಮೇಧ್ಯಸ್ಯ ಶಿರ ಇತ್ಯಾದಿಶ್ರುತೇಃ । ಯದ್ವಾ । ದೇವೇಭ್ಯೋ ಜಾತಸ್ಯ ಗಂಧರ್ವಕುಲ ಉತ್ಪನ್ನತ್ವಾತ್ । ಸಪ್ತೇಃ ಸರ್ಪಣಶೀಲಸ್ಯ । ಅಶ್ವನಾಮೈತತ್ । ಏವಂವಿಧಸ್ಯಾಶ್ವಸ್ಯ ಮಹಾನುಭಾವಸ್ಯ ವೀರ್ಯಾಣಿ ವೀರಕರ್ಮಾಣಿ ಸಾಮರ್ಥ್ಯಾನಿ ವಿದಥೇ ವೇದನಸಾಧನೇ ಯಜ್ಞೇ ಪ್ರವಕ್ಷ್ಯಾಮಃ ಪ್ರಕರ್ಷೇಣ ಬ್ರೂಮಃ । ಅತೋ ಮಾ ಪರಿ ಖ್ಯನ್ ಪ್ರತ್ಯುತಾನುಗೃಹ್ಣಂತ್ವಿತ್ಯರ್ಥಃ ॥

ಪ್ರತಿಪದಾರ್ಥ

ಯತ್—ಯಾವಾಗ । ವಿದಥೇ—ಯಾಗದಲ್ಲಿ । ವಾಜಿನಃ—ಶೀಘ್ರಗಾಮಿಯಾದುದೂ । ದೇವಜಾತಸ್ಯ—ದೇವತೆಗಳಿಂದ ಉತ್ಪನ್ನವಾದುದೂ (ಅಥವಾ) ನಾನಾದೇವತೆಗಳ ರೂಪದಲ್ಲಿ ಉತ್ಪನ್ನವಾದುದೂ ಆದ । ಸಪ್ತೇಃ—ಅಶ್ವದ । ವೀರ್ಯಾಣಿ—ವೀರ್ಯಕರ್ಮಗಳನ್ನು । ಪ್ರವಕ್ಷ್ಯಾಮಃ--ಪ್ರಕಟಸಿ ಪ್ರಶಂಸಿಸುತ್ತೇವೆಯೋ (ಆದ್ದರಿಂದ) ಮಿತ್ರಃ—ಮಿತ್ರನೂ । ವರುಣಃ—ವರುಣನೂ । ಅರ್ಯಮಾ—ಅರ್ಯಮನೂ । ಆಯುಃ—ಸತತವಾಗಿ ಸಂಚರಿಸುವ ವಾಯುವೂ । ಇಂದ್ರಃ—ಇಂದ್ರನೂ, । ಋಭುಕ್ಷಾ—ಋಭುಕ್ಷನೂ । ಮರುತಃ—ಮರುತ್ತುಗಳೂ । ನಃ—ನಮ್ಮನ್ನು । ಮಾ ಪರಿಖ್ಯನ್—ಅಲಕ್ಷಿಸದಿರಲಿ. (ನಿಂದಿಸದಿರಲಿ).

ಭಾವಾರ್ಥ

ಶೀಘ್ರಗಾಮಿಯಾದುದೂ, ದೇವತೆಗಳಿಂದ ಉತ್ಪನ್ನವಾದುದೂ ಅಥವಾ ನಾನಾದೇವತೆಗಳ ರೂಪದಲ್ಲಿರುವುದೂ ಆದ ಈ ಯಜ್ಞಾಶ್ವದ ವೀರ್ಯಕರ್ಮಗಳನ್ನು ಪ್ರಕಟಿಸಿ ನಾವು ಈ ಯಜ್ಞದಲ್ಲಿ ಪ್ರಶಂಸಿಸುತ್ತೇವೆಯಾದ್ದರಿಂದ ಮಿತ್ರನೂ, ವರುಣನೂ, ಅರ್ಯಮನೂ, ಸತತವಾಗಿ ಸಂಚರಿಸುವ ವಾಯುವೂ, ಇಂದ್ರನೂ, ಋಭುಕ್ಷನೂ, ಮರುತ್ತುಗಳೂ ನಮ್ಮನ್ನು ಅಲಕ್ಷ್ಯಮಾಡದಿರಲಿ. (ನಿಂದಿಸದಿರಲಿ).

## English Translation

Let neither Mitra nor Varuna, Aryaman, Ayu, Indra, Ribhukshin, nor the Maruts, censure us ; when we proclaim in the sacrifice the virtues of the swift horse sprung from the gods.

### ವಿಶೇಷವಿಷಯಗಳು

(ಕಿಮಾರ್ಥವಂ) ಪರೇ ಮಾ ನೋ ಮೇಧ್ಯಸ್ಯಾಶ್ವಸ್ಯ ಸಂಸ್ತವಃ ।
ಈರ್ಮಾಂತಾಸ ಇತಿ ತ್ವಸ್ಯಾಂ ನೀಯಮಾನಂ ಪ್ರಶಂಸತಿ ॥
(ಬೃಹದ್ದೇವತಾ. ೪-೨೭)

ಮಾ ನೋ ಮಿತ್ರೋ ವರುಣೋ (೧-೧೬೨-೧) ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವೂ, ಯದಕ್ರಂದಃ ಪ್ರಥಮಂ ಜಾಯಮಾನಃ (೧-೧೬೩-೧) ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವೂ ಮೇಧ್ಯಾಶ್ವದ ಪ್ರಶಂಸಾರೂಪವಾದ ಕೃತಿಗಳಾಗಿವೆ. ಈರ್ಮಾಂತಾಸಃ ಸಿಲಿಕಮಧ್ಯಮಾಸಃ (೧-೧೬೩-೧೦) ಇತ್ಯಾದಿ ಋಕ್ಕುಗಳಲ್ಲಿ ಪುಷ್ಟವಾಗಿ ಬೆಳೆದ ಮೇಧ್ಯಾಶ್ವದ ವರ್ಣನೆಯಿದೆ.

ಸ್ವಯೂಥ್ಯಾಸ್ತಸ್ಯ ಚೈವಾತ್ರ ಬಹವಃ ಸಂಸ್ತುತಾ ಹಯಾಃ ।
ನಿಯುಕ್ತಾಶ್ಚಾನಿಯುಕ್ತಾಶ್ಚ ಪ್ರಸಂಗಾದನುಕೀರ್ತಿತಾಃ ॥
(ಬೃ. ದೇ. ೪-೨೮)

ಈ ಮೇಧ್ಯಾಶ್ವದ ಜೊತೆಯಲ್ಲಿ ಸಹಾಯಾರ್ಥವಾಗಿಯಾಗಲಿ ಅಥವಾ ಅಲಂಕಾರಾರ್ಥವಾಗಿಯಾಗಲಿ, ನಿಯುಕ್ತವಾಗಿರಲಿ ಅಥವಾ ಅನಿಯುಕ್ತವಾಗಿರಲಿ, ಇರತಕ್ಕ ಇನ್ನೂ ಇತರ ಅಶ್ವಗಳನ್ನೂ ಸಹ ಅನುಷಂಗಿತವಾಗಿ ಸ್ತುತಿಸಿದೆ.

ಸಂಜ್ಞಪ್ತವವಸಂಜ್ಞಪ್ತಂ ಭವಿಷ್ಯಂ ಚಾಹ ಭೂತವತ್ ।
ತಸ್ಯ ಮಾಂಸಸ್ಯ ಸೂನಸ್ಯ ಚರೂಣಾಂ ಹವಿಷಸ್ತಥಾ ॥
ವಾಸೋಽಧಿವಾಸಸೋಽಶ್ಚಾತ್ರ ಯದ್ವಿಶಸ್ಯಂ ಚ ಕೀರ್ತಿತಂ ।
ಗಾತ್ರಸ್ಯ ಶೂಲಸ್ಥೂಣಾನಾಂ ಸ್ವಧಿತೇಶ್ಚ ಪ್ರಕೀರ್ತನಂ ॥
ಭಾಗಸ್ಯ ಕೀರ್ತನಂ ಚಾತ್ರ ಇಂದ್ರಾಪೂಷ್ಣೋಃ ಸಹ ಸ್ತುತಿಃ ।
(ಬೃ. ದೇ. ೪-೨೯-೩೧)

ಮುಂದೆ ಯಷ್ಟವ್ಯವಾಗಿರುವ ಅಶ್ವವನ್ನು ಆಗಲೇ ಯಜ್ಞಾಹುತಿಯನ್ನಾಗಿ ಅರ್ಪಿಸಿದಂತೆಯೇ ಭಾವಿಸಿ ಈ ಅಶ್ವವನ್ನು ವರ್ಣಿಸಿದೆ. ಇವರ ಮಾಂಸವೂ, ಸೂನವೂ, ಚರುವೂ, ವಾಸಾಧಿವಾಸಗಳೂ, ಗಾತ್ರವೂ, ಶೂಲವೂ, ಸ್ಥೂಣವೂ, ಸ್ವಧಿತಿಯೂ ಇನ್ನೂ ಇತರ ವಿಶೇಷಗಳೂ ಪ್ರಶಂಸಿತವಾಗಿವೆ. ಈ ಯಜ್ಞಕ್ಕೆ ಸಂಬಂಧಿಸಿದ ಭಾಗವೂ (ಮೇಕೆಯೂ) ನಿರ್ದೇಶಿಸಲ್ಪಟ್ಟಿದೆ. ಇಂದ್ರನ ಸ್ತುತಿಯೂ ಪೂಷನ ಸ್ತುತಿಯೂ ಅಡಕವಾಗಿದೆ ಎಂಬುದಾಗಿ ಬೃಹದ್ದೇವತಾಕಾರರ ೧-೧೬೨ ಮತ್ತು ೧-೧೬೩ ನೇ ಸೂಕ್ತಗಳ ವಿವರಣೆಯನ್ನು ಕೊಟ್ಟಿದ್ದಾರೆ. ಪ್ರಕೃತವಾದ ಮೊದಲನೆಯ ಋಕ್ಕಿನಲ್ಲಿಯೂ ಸಹ,

ಯದ್ವಾಜಿನೋ ದೇವಜಾತಸ್ಯ ಸಪ್ತೇಃ ಪ್ರವಕ್ಷ್ಯಾಮೋ ವಿದಥೇ ವೀರ್ಯಾಣಿ ।

ಈ ಯಜ್ಞದಲ್ಲಿ ದೇವಜಾತವಾದ ಅಶ್ವದ ವೀರ್ಯಕರ್ಮಗಳನ್ನು ಪ್ರಶಂಸಿಸುವೆವು ಎಂದು ಸಂಕಲ್ಪಿಸಿದೆ. ಈ ಯಜ್ಞದ ಸ್ವರೂಪವೇನು, ಅದಕ್ಕಾಗಿ ನಿಯುಕ್ತವಾದ ಅಶ್ವದ ಮಹಿಮೆಯೇನು ? ಉಳಿದ ಯಾಗಗಳಿಗಿಂತಲೂ ಅಧಿಕವಾಗಿ ಈ ಯಜ್ಞದಲ್ಲಿರುವ ವೈಶಿಷ್ಟ್ಯವೇನು ಎಂಬುದನ್ನು ಮೊದಲು ತಿಳಿಯಬೇಕು.

ರಾಷ್ಟ್ರಂ ವಾ ಅಶ್ವಮೇಧಃ । ರಾಷ್ಟ್ರೇ ಖಲು ವಾ ಏತೇ ವ್ಯಾಯಚ್ಛಂತೇ ।

(ತೈ. ಬ್ರಾ. ೩-೮-೯-೪)

ಅಶ್ವಮೇಧವು ಅತ್ಯಂತ ಪ್ರಾಚೀನವೂ ಪ್ರಸಿದ್ಧವೂ ಆದ ಯಜ್ಞವು. ರಾಜ್ಯವಿಸ್ತರಣೆಗಾಗಿ ಸಾರ್ವಭೌಮ ಪದವಿಗೆ ಮಾತ್ರ ಅರ್ಹನಾಗಿರತಕ್ಕ ರಾಜನು ನೆರವೇರಿಸತಕ್ಕ ಈ ಯಜ್ಞವು ಒಂದು ರಾಷ್ಟ್ರೀಯವಾದ ಪ್ರಾಮುಖ್ಯತೆಯನ್ನು ಹೊಂದಿದೆ. ಪಟ್ಟಾಭಿಷೇಕದ ಕಾಲದಲ್ಲಿ ನೆರವೇರಿಸತಕ್ಕ ಕರ್ಮಗಳಂತೆಯೂ ಅಥವಾ ರಾಜಸೂಯಯಾಗದಂತೆಯೂ ಕೇವಲ ವೈಯಕ್ತಿಕವಾದ ಆಡಂಬರವಲ್ಲದೆ, ಸಣ್ಣ ಸಣ್ಣ ರಾಜರುಗಳಿಂದ ನಿರ್ವಹಿಸಲು ಅಸಾಧ್ಯವಾದುದೂ, ಅನೇಕ ರಾಜಾಧಿರಾಜರುಗಳಿಗೆ ಸಾರ್ವಭೌಮನಾಗಿ ತನ್ನ ರಾಜಕೀಯವಾದ ಅಧಿಕಾರವನ್ನು ವ್ಯಕ್ತಪಡಿಸುವವನೂ, ಯಾವ ರಾಜನಿಂದಲೂ ಪರಿಭವವನ್ನು ಹೊಂದದಿರುವವನೂ ಆದ ಚಕ್ರವರ್ತಿಯಿಂದ ಮಾತ್ರ ನಿರ್ವಹಿಸಲ್ಪಡುವ ಈ ಮಹಾಯಜ್ಞವು ಬಹಳ ಶ್ರಮಸಾಧ್ಯವಾದ ಕರ್ಮವಾಗಿದೆ.

ಪರಾ ವಾ ಏಷ ಸಿಚ್ಯತೇ । ಯೋಽಬಲೋಽಶ್ವಮೇಧೇನ ಯಜತೇ ।

(ತೈ. ಬ್ರಾ. ೩-೮-೯-೩)

ದುರ್ಬಲನಾದ ಯಾವ ರಾಜನಾಗಲಿ ಅಶ್ವಮೇಧವನ್ನು ತಾನೂ ಮಾಡುತ್ತೇನೆಂದು ಪ್ರಯತ್ನಿಸಿದರೆ ಅವನಿಗೆ ತನ್ನ ಸ್ಥಾನದಿಂದ ಉಚ್ಚಾಟನೆಯಾಗುವುದು ಖಂಡಿತವು.

ಯದಮಿತ್ರಾ ಅಶ್ವಂ ವಿಂದೇರನ್ । ಹನ್ಯೇತಾಸ್ಯ ಯಜ್ಞಃ ।

(ತೈ. ಬ್ರಾ. ೩-೮-೯-೩)

ಶತ್ರುಗಳು ಇವನ ಅಶ್ವವನ್ನಪಹರಿಸಿ ಇವನ ಯಜ್ಞಕ್ಕೆ ವಿಘ್ನವನ್ನು ತರುತ್ತಾರೆ ಇತ್ಯಾದಿಯಾಗಿ ಈ ಯಜ್ಞವನ್ನು ನಿರ್ವಹಿಸುವವನ ಯೋಗ್ಯತೆಯನ್ನು ನಿಷ್ಕರ್ಷಿಸಿ ಇದರ ರಾಜಕೀಯದ ಸಂಕೇತವನ್ನೂ ರಾಷ್ಟ್ರೀಯಮಹತ್ವವನ್ನೂ ತಿಳಿಸಿದೆ. ಇಂತಹ ಮಹತ್ಕಾರ್ಯಕ್ಕೆ ಸಾಧ್ಯವಾದ ಅಶ್ವವೂ ಮಹತ್ತಾದ ಗುಣವುಳ್ಳದ್ದೇ ಆಗಿರಬೇಕು.

ಈ ಅಶ್ವವು ವೇಗಗಾಮಿಯಾಗಿರಬೇಕು. ಮುಂಭಾಗದಲ್ಲಿ ಕೃಷ್ಣವರ್ಣವೂ, ಹಿಂಭಾಗದಲ್ಲಿ ಶ್ವೇತವರ್ಣವೂ, ಒಂದು ಕರಿಯ ಚುಕ್ಕಿಯೂ ಇದರ ವಿಶೇಷಗುಣಗಳು. ಫಾಲ್ಗುಣಮಾಸದ ಎಂಟನೆಯ ಅಥವಾ ಒಂಭತ್ತನೆಯ ದಿನ ಈ ಕಲಾಪಗಳು ಆರಂಭವಾಗುವುವು. ರಾಜನು ಆ ರಾತ್ರಿಯನ್ನು ಗಾರ್ಹಪತ್ಯಾಗ್ನಿಯ ಗೃಹದಲ್ಲಿ ಕಳೆಯುವನು. ಮಾರನೆಯ ದಿನ ಅಶ್ವವು ಸಿದ್ಧವಾಗುವುದು. ಅದಕ್ಕೆ ಸ್ನಾನಾದಿಗಳನ್ನು ಮಾಡಿಸುವರು. ಅನಂತರ ನಾಲ್ಕು ಕಣ್ಣುಗಳ ಒಂದು ನಾಯಿಯನ್ನು ಕತ್ತರಿಸಿ ಅಶ್ವದ ಅಡಿಯಲ್ಲಿ ಹೊರಳಾಡುವಂತೆ ಬಿಡುವರು. ಆಗ ಯಜ್ಞಕರ್ತನು "ಈ ಅಶ್ವವನ್ನು ಎದುರಿಸುವವನು ವರುಣನನ್ನು ಪ್ರತಿಭಟಿಸಿದಂತೆಯೇ" ಎಂದು ಬರೆದು ಅದರ ಮೇಲೆ ಅಂಟಿಸುವನು. ಅನಂತರ ಅಶ್ವವು ಅಗ್ನಿಯ ವೇದಿಕೆಯ ಹತ್ತಿರ ಬರುತ್ತದೆ. ಸವಿತೃವನ್ನು ಉದ್ದೇಶಿಸಿ ಮೂರುದಿನಗಳು

ಆಹುತ್ಯರ್ಪಣಗಳಾದ ನಂತರ ಅದು ಸ್ವತಂತ್ರವಾಗಿ ಬಿಡಲ್ಪಡುವುದು. ಅದರ ರಕ್ಷಣೆಗಾಗಿ ನೂರು ಇತರ ಅಶ್ವಗಳೂ ನೂರಾರು ಯುವಕರೂ ಅನೇಕ ಯೋಧರೂ ಅದನ್ನು ಹಿಂಬಾಲಿಸುವರು . ಸಾರ್ವಭೌಮನಾಗಿರತಕ್ಕವನ ಅಧೀನ ರಾಜರು ಅದರ ರಕ್ಷಣೆಯಲ್ಲಿ ಜಯಶಾಲಿಗಳಾದರೆ ಅವರಿಗೆ ತಮ್ಮ ತಮ್ಮ ಪ್ರಭುತ್ವವೂ ಸುರಕ್ಷಿತವಾಗಿರುವುದು. ಆ ಅಶ್ವವು ಸಂಚಾರಮಾಡುವಕಾಲದಲ್ಲಿ ಯಜ್ಞಕರ್ತನೂ ಅವನ ಪುರೋಹಿತನೂ ಸುವರ್ಣಾಸನದಲ್ಲಿ ಕುಳಿತಿರುವರು. ಹೋತೃವು ಆಖ್ಯಾನಾದಿಗಳನ್ನು ಪಠಿಸುವನು. ಅಧ್ವರ್ಯುವು ಅಶ್ವದ ಜಯಲಾಭಕ್ಕಾಗಿ ಕೆಲವು ಕರ್ಮಗಳನ್ನು ನೆರವೇರಿಸುವನು-ಅದು ಹಿಂತಿರುಗಿದನಂತರ ಯಜ್ಞವು ನೆರವೇರುವುದು.

ಶತಪಥಾದಿಗಳಲ್ಲಿ ಈ ಅಶ್ವಮೇಧದ ಮಹತ್ತ್ವವನ್ನು ಬಹಳವಾಗಿ ಸ್ತುತಿಸಿದೆ. ಋಷಭ ಏಷ ಯಜ್ಞಾನಾಂ ( ಶ. ಬ್ರಾ. ೧೩-೧-೨-೨) ಯಜ್ಞಗಳಲ್ಲೆಲ್ಲಾ ಇದೇ ಬಲಾಶಾಲಿಯಾದ ಋಷಭದಂತೆ ಶ್ರೇಷ್ಠವಾದುದೆಂದೂ, ರಾಜಾ ವಾ ಏಷ ಯಜ್ಞಾನಾಂ ಯದಶ್ವಮೇಧಃ (ಶ. ಬ್ರಾ. ೧೩-೨-೨-೧) ಯಜ್ಞಗಳಿಗೆಲ್ಲಾ ಇದೇ ರಾಜನೆಂದೂ,

> ಏಷ ವೈ ಪ್ರಭೂರ್ನಾಮ ಯಜ್ಞಃ .... .... .... ಏಷ ವೈ ವಿಭೂರ್ನಾಮ ಯಜ್ಞಃ .... .... .... ಏಷ ವೈ ವಿಧೃತಿರ್ನಾಮ ಯಜ್ಞಃ । .... .... .... ಏಷ ವೈ ಪ್ರತಿಷ್ಠಾ ನಾಮ ಯಜ್ಞಃ
>
> (ಶ. ಬ್ರಾ. ೧೩-೩-೭)

ಇತ್ಯಾದಿಯಾಗಿ ನಾನಾವಿಧವಾಗಿ ಈ ಯಜ್ಞದ ವೈಶಿಷ್ಟ್ಯವನ್ನು ಪ್ರಶಂಸಿಸಿದೆ. ಪ್ರಕೃತದಲ್ಲಿ ಈ ಮಹತ್ತಾದ ಯಜ್ಞಕ್ಕೆ ಸಾಧನವಾದ ಅಶ್ವದ ಸ್ತುತಿಯಿದೆ. ಈ ಅಶ್ವವನ್ನು ಸ್ತುತಿಸುವಾಗ ಏನಾದರೂ ನ್ಯೂನತೆಯಿದ್ದರೆ ಮಿತ್ರಾದಿದೇವತೆಗಳು ಅದನ್ನು ಲಕ್ಷ್ಯವಾಗಿಟ್ಟುಕೊಂಡು ನಮ್ಮನ್ನು ದೂಷಿಸದಿರಲಿ ಎಂದು ಪ್ರಾರ್ಥಿಸಿದೆ.

ಸಪ್ತೇಃ—ಸಪ್ತಿಶಬ್ದವು ಅಶ್ವನಾಮಗಳಲ್ಲಿ ಪಠಿತವಾಗಿದೆ. (ನಿ. ೨-೨೭) ನಿರುಕ್ತಕಾರರು ಪ್ರಕೃತವಾದ ಋಕ್ಕನ್ನೇ ಉದಹರಿಸುತ್ತಾ (ನಿ. ೯-೩) ಸಪ್ತೇಃ ಎಂಬ ಪದಕ್ಕೆ ಸರಣಸ್ಯ ಎಂದು ವಿವರಿಸಿದ್ದಾರೆ. ಈ ಪದಕ್ಕೆ ಕೇವಲ ಚಲಿಸುವುದು ಎಂದರ್ಥವಾದರೂ ಸಹ ಚಲನದಲ್ಲಿ ವೇಗವನ್ನೂ ಶಕ್ತಿಯನ್ನೂ ಸೂಚಿಸುತ್ತದೆ.

ವಾಜಿನಃ—ಈ ಪದಕ್ಕೂ ಸಹ ಮೇಲಿನ ಅರ್ಥವೇ ರೂಢಿಯಲ್ಲಿದೆ. ಆದರೆ ಇಲ್ಲಿ ಎರಡು ಪದಗಳೂ ಇರುವುದರಿಂದ ಇದಕ್ಕೆ ಬೇರೆ ಅರ್ಥವಿರಬೇಕು ಅನ್ನನಾಮಗಳಲ್ಲಿ ಪಠಿತವಾಗಿರುವುದರಿಂದ ವಾಜ ಶಬ್ದಕ್ಕೆ ಅನ್ನವೆಂದರ್ಥಮಾಡಿ ಬಹ್ವನ್ನವತಃ ಪ್ರಭೂತವಾದ ಅನ್ನವುಳ್ಳ ಅಶ್ವವೆಂದರ್ಥಮಾಡಿದ್ದಾರೆ. ಆದರೆ ಓವಿಜೀ ಭಯಚಲನಯೋಃ ಎಂದು ಈ ಧಾತುವಿಗೆ ಭಯ, ಚಲನ ಎಂಬ ಎರಡರ್ಥಗಳೂ ಇರುವುದರಿಂದ ಇಲ್ಲಿ ಭಯಪಡಿಸತಕ್ಕದ್ದು ಎಂದು ಹೇಳಿದರೂ ಹೇಳಬಹುದು. ನಿರುಕ್ತಕಾರರು ಉತ ಸ್ಯ ವಾಜೀ ಕ್ಷಿಪಣಿಂ ತುರಣ್ಯತಿ (ಋ. ಸಂ. ೪-೪೦-೪) ಎಂಬ ಋಕ್ಕನ್ನುದಹರಿಸಿ ವಾಜೀ-ವೇಜನವಾನ್ ಎಂದು ವಿವರಿಸಿರುವುದಕ್ಕೆ ದುರ್ಗಾಚಾರ್ಯರು ಭಯವಾನ್ ಪರೇಭ್ಯೋ ಭಯದಾತಾ ಪರೇಷಾಂ ಹಿ ತಂ ದೃಷ್ಟ್ವಾ ಭಯಮುತ್ಪದ್ಯತೇ-ಈ ಅಶ್ವದ ವೇಗದ ಶಕ್ತಿಯನ್ನು ನೋಡಿ ಇತರರಿಗೆ ಭಯವುಂಟಾಗುತ್ತದೆ. ಭಯಜನಕವಾದ ಅಶ್ವವು ಎಂದು ತಾತ್ಪರ್ಯವೆಂದು ಹೇಳಿದ್ದಾರೆ. ಸಪ್ತಿ, ವಾಜೀ ಎಂಬ ಎರಡು ಪದಗಳೂ ಸಹ ತೈತ್ತಿರೀಯ ಸಂಹಿತೆಯಲ್ಲಿ ಒಟ್ಟಿಗೆ ಪ್ರಯೋಗಿಸಲ್ಪಟ್ಟು,

ಅರ್ವಾಸಿ ಸಪ್ತಿರಸಿ ವಾಜ್ಯಸಿ (ತೈ. ಸಂ. ೧-೭-೮) ಎಂದು ಅಶ್ವದ ಸ್ವರೂಪವನ್ನು ವರ್ಣಿಸುವಾಗ ಸಪ್ತಿಶಬ್ದಕ್ಕೆ ಸಂಗ್ರಾಮೇಷು ಸಹಸಾ ಸಮವೈತಿ (ಷಪ ಸಮವಾಯೇ) ನಿಮಿಷ ಮಾತ್ರದಲ್ಲಿ (ಸಂಗ್ರಾಮ ಭೂಮಿಗೆ)

ಸೇರತಕ್ಕ ಶಕ್ತಿಯುಳ್ಳದ್ದೆಂದೂ, ವಾಜೀ ಎಂಬುದಕ್ಕೆ ವೇಗವಾನ್, ಅನ್ನವಾನ್ ವಾ ಎಂದು ಸಹ ವಿವರಿಸುವಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಅರ್ಥಮಾಡಬಹುದು.

ದೇವಜಾತಸ್ಯ—ಈ ಪದಕ್ಕೆ ಎರಡು ವಿಧವಾಗಿ ಅರ್ಥಮಾಡಿದೆ. ಮೊದಲನೆಯದಾಗಿ, ಬಹುದೇವತಾಸ್ವರೂಪೇಣೋತ್ಪನ್ನಸ್ಯ । ಉಷಾದೀನಾಮಸ್ಯ ಶಿರ ಆದ್ಯವಯವತ್ವಾದಿತಿ ಭಾವಃ । ಉಷಸ್ಸು ಸೂರ್ಯ ಇತ್ಯಾದಿ ದೇವತೆಗಳು ಈ ಅಶ್ವದ ಅವಯವಗಳೆಂದು ಹೇಳಿರುವುದರಿಂದ ಈ ಅರ್ಥವೂ ಅಥವಾ ಎರಡನೆಯ:ದಾಗಿ ದೇವೇಭ್ಯೋ ಜಾತಸ್ಯ ಗಂಧರ್ವಕುಲೇ ಉತ್ಪನ್ನತ್ವಾತ್ । ದೇವತೆಗಳಿಂದ ಗಂಧರ್ವಕುಲದಲ್ಲಿ ಉತ್ಪನ್ನವಾದುದರಿಂದ ಈ ವೀಶಿಷಣವೆಂದೂ ವಿವರಿಸಿದೆ. ಈ ಎರಡು ವಿಧವಾದ ವಿವರಣೆಗೂ ಪೂರ್ಣವಾದ ಅವಕಾಶವಿದೆ.

ಉಷಾ ವಾ ಅಸ್ಯ ಮೇಧ್ಯಸ್ಯ ಶಿರಃ । ಸೂರ್ಯಶ್ಚಕ್ಷುರ್ವಾತಃ ಪ್ರಾಣೋ ವ್ಯಾತ್ತಮಗ್ನಿರ್ವೈಶ್ವಾನರಃ ಸಂವತ್ಸರ ಆತ್ಮಾಶ್ವಸ್ಯ ಮೇಧ್ಯಸ್ಯ । ದ್ಯೌಃ ಪೃಷ್ಠಮಂತರಿಕ್ಷಮುದರಂ ಪೃಥಿವೀ ಪಾಜಸ್ಯಂ ದಿಶಃ ಪಾರ್ಶ್ವೇ ಅವಾಂತರದಿಶಃ ಪರ್ಶವ ಋತವೋಽಂಗಾನಿ ಮಾಸಾಶ್ಚಾರ್ಧಮಾಸಾಶ್ಚ ಪರ್ವಾಣ್ಯಹೋರಾತ್ರಾಣಿ ಪ್ರತಿಷ್ಠಾ ನಕ್ಷತ್ರಾಣ್ಯಸ್ಥೀನಿ ನಭೋ ಮಾಂಸಾನಿ ॥

(ಶ. ಬ್ರಾ. ೧೦-೬-೪)

(ಬೃ. ಉ. ೧-೧-೧)

ಉಷಸ್ಸೇ ಈ ಯಜ್ಞಾಶ್ವದ ಶಿರಸ್ಸು, ಸೂರ್ಯನೇ ಕಣ್ಣು, ವಾಯುವೇ ಪ್ರಾಣವು, ವೈಶ್ವಾನರಾಗ್ನಿಯೇ ತೆರೆದ ಮುಖವು, ಸಂವತ್ಸರವೇ ದೇಹವು (ಆತ್ಮಾ) ದ್ಯುಲೋಕವೇ ಪೃಷ್ಠವು, ಅಂತರಿಕ್ಷವೇ ಉದರವು, ಪೃಥಿವಿಯೇ ಅಧೋಭಾಗವು, ದಿಕ್ಕುಗಳೇ ಪಾರ್ಶ್ವಗಳು ಇತ್ಯಾದಿಯಾಗಿ ಈ ಯಜ್ಞಾಶ್ವದ ಸ್ವರೂಪವನ್ನು ವರ್ಣಿಸಿದೆ.

ದೇವೇಭ್ಯೋ ಜಾತಸ್ಯ ಗಂಧರ್ವಕುಲ ಉತ್ಪನ್ನತ್ವಾತ್ । ಎಂಬ ಇನ್ನೊಂದು ಅರ್ಥವಿದೆ. ಈ ಅರ್ಥದಲ್ಲಿ ಅಶ್ವಕ್ಕೂ ದೇವತೆಗಳಿಗೂ ಪರಂಪರಾಸಂಬಂಧವಿದೆ. ದೇವತೆಗಳೊಡನೆ ಸಾಕ್ಷಾತ್ಸಂಬಂಧವಿರುವ ಅಂಶವನ್ನೂ ಸಹ ಅನೇಕಕಡೆ ಹೇಳಿರುವುದರಿಂದ ದೇವಜಾತಸ್ಯ ಎನ್ನುವುದಕ್ಕೆ ಸಾಕ್ಷಾತ್ತಾಗಿ ದೇವತೆಯಿಂದಲೇ ಉತ್ಪನ್ನವಾದ ಎಂದೂ ಹೇಳಬಹುದು.

ಯತ್ಪ್ರಜಾಪತಿರಾಲಬ್ಧೋಽಶ್ವೋಽಭವತ್ । ತಸ್ಮಾದಶ್ವಃ । ಯತ್ಸದ್ಯೋ ಮೇಧೋಽಭವತ್ । ತಸ್ಮಾದಶ್ವಮೇಧಃ ।

(ತೈ. ಬ್ರಾ. ೩-೯-೨೨.೧)

ಪಶುರೂಪದಿಂದ ಲಬ್ಧನಾದ ಪ್ರಜಾಪತಿಯು ಒಡನೆಯೇ ಸರ್ವವ್ಯಾಪಿಯಾದ ಅಶ್ವನಾದನು. ಅದೇ ಅಹಸ್ಸಿನಲ್ಲಿಯೇ ಆ ಅಶ್ವವು ಮೇಧರೂಪವಾದ ಯಜ್ಞವಾಯಿತು. । ಆದುದರಿಂದ ಅಶ್ವಮೇಧವೆಂಬ ಹೆಸರು ಪ್ರಸಿದ್ಧವಾಗಿದೆ. ಅಲ್ಲದೆ,

ಹಯೋ ಭೂತ್ವಾ ದೇವಾನವಹದ್ವಾಜೀ ಗಂಧರ್ವಾನರ್ವಾಸುರಾನಶ್ವೋ ಮನುಷ್ಯಾನ್ ಸಮುದ್ರ ಏವಾಸ್ಯ ಬಂಧುಃ ಸಮುದ್ರೋ ಯೋನಿಃ ॥

(ಬೃ. ಉ. ೧-೧-೨)

ವಿಶ್ವವ್ಯಾಪಕವಾದ ಈ ಮೇಧ್ಯಾಶ್ವವು ಹಯದ ರೂಪದಲ್ಲಿ ದೇವತೆಗಳನ್ನೂ, ವಾಜಿಯ ರೂಪದಲ್ಲಿ ಗಂಧರ್ವರನ್ನೂ, ಅರ್ವರೂಪದಲ್ಲಿ ಅಸುರರನ್ನೂ ಮತ್ತು ಅಶ್ವರೂಪದಲ್ಲಿ ಮಾನವರನ್ನೂ ವಹಿಸುತ್ತದೆ. ಗಂಧರ್ವರಿಗೆ ವಾಸಸ್ಥಾನವಾದ ಅಂತರಿಕ್ಷವೇ ಈ ಅಶ್ವಕ್ಕೆ ಬಂಧುವು ಮತ್ತು ಜನ್ಮಸ್ಥಾನವು. ಇತ್ಯಾದಿಯಾದ ವರ್ಣನೆಗಳ ಆಧಾರದಿಂದ ದೇವಜಾತಸ್ಯ ಎಂಬ ವಿಶೇಷಣಕ್ಕೆ ಮೇಲೆ ಹೇಳಿರುವ ಎರಡನೆಯ ಅರ್ಥವೂ ಸಾಧ್ಯವಾಗುತ್ತದೆ.

**ಋಭುಕ್ಷಾಃ**—ಈ ಪದಕ್ಕೆ ನಿರುಕ್ತಕಾರರೇ ಎರಡರ್ಥವನ್ನು ಹೇಳಿದ್ದಾರೆ. **ಉರುಕ್ಷಯಣಃ ಇಂದ್ರಃ** ಎಂದು ಒಂದರ್ಥವನ್ನೂ, ಋಭೂಣಾಂ ರಾಜಾ ಎಂಬ ಇನ್ನೊಂದರ್ಥವನ್ನೂ ಮಾಡಿದ್ದಾರೆ. ವಿಸ್ತೃತವಾದ ಅಂತರಿಕ್ಷದಲ್ಲಿ ವಾಸಮಾಡುವವನು ಎಂದು ಇಂದ್ರನಿಗೆ ವಿಶೇಷಣವಾಗಿಯಾಗಲಿ, ಅಥವಾ ಋಭುಗಳಿಗೆ ಎಂದರೆ ಪ್ರಕಾಶಮಾನರಾದ ದೇವತೆಗಳಿಗೆ ರಾಜನೆಂದಾಗಲಿ ಅರ್ಥವಾಗುತ್ತದೆ. ಅಥವಾ ಸಾಯಣರು ವಿವರಿಸಿರುವಂತೆ ಮಹನ್ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩--೧೩) ಮಹಾತ್ಮನಾದ ಇಂದ್ರನೆಂದಾದರೂ ಆಗಬಹುದು.

**ಮಾ ಪರಿಖ್ಯನ್**—ಅವಹೇಳನವನ್ನು ಮಾಡದಿರಲಿ ಎಂದು ಪ್ರಾರ್ಥಿಸಿದೆ. ದೇವತಾತ್ಮಕವಾದ ಈ ಅಶ್ವವನ್ನು ತುಚ್ಛರಾದ ಮಾನವರು ಸ್ತುತಿಸುವುದರಲ್ಲಿ ಔಚಿತ್ಯವಿಲ್ಲವೆಂದು ಮಿತ್ರಾದಿದೇವತೆಗಳು ತಿರಸ್ಕರಿಸದೆ ಇರಲಿ ಎಂದರ್ಥ.

**ವಿದಥೇ—ವೇದನಸಾಧನೇ ಯಜ್ಞೇ ।** ತಿಳಿವಳಿಕೆಗೆ ಸಾಧನವಾದ ಯಜ್ಞದಲ್ಲಿ ಎಂದು ಸಾಯಣರು ವಿವರಿಸಿದ್ದಾರೆ. ಆದುದರಿಂದ ಈ ಯಜ್ಞವು ಆಧ್ಯಾತ್ಮಿಕವಾದ ಜ್ಞಾನಸಂಪಾದನೆಗೂ ಸಾಧನವೆಂದು ತಿಳಿಯುತ್ತದೆ. ಈ ಯಜ್ಞಕಾಲದಲ್ಲಿ ಅಧ್ವರ್ಯುವಿಗೂ ಹೋತೃವಿಗೂ ಮತ್ತಿತರ ಋತ್ವಿಕ್ಕುಗಳಿಗೂ ಸಂಬಂಧಿಸಿದಂತೆ ಬ್ರಹ್ಮೋದ್ಯ ಸಭೆಯು ನಡೆದು ಅದರಲ್ಲಿ ವಿಶ್ವತತ್ತ್ವಗಳ ವಿಚಾರದಲ್ಲಿ ಚರ್ಚೆಯು ನಡೆಯುವುದು.

> **ಅಪ ವಾ ಏತಸ್ಮಾತ್ । ತೇಜೋ ಬ್ರಹ್ಮವರ್ಚಸಂ ಕ್ರಾಮತಿ ಯೋಽಶ್ವಮೇಧೇನ ಯಜತೇ ಹೋತಾ ಚ ಬ್ರಹ್ಮಾ ಚ ಬ್ರಹ್ಮೋದ್ಯಂ ವದತ ಆಗ್ನೇಯೋ ವೈ ಹೋತಾ ಬಾರ್ಹಸ್ಪತ್ಯೋ ಬ್ರಹ್ಮಾ ಬ್ರಹ್ಮಾ ಬೃಹಸ್ಪತಿಸ್ತೇಜಶ್ಚೈವಾಸ್ಮಿನ್ಬ್ರಹ್ಮವರ್ಚಸಂ ಚ ಸಮೀಚೀ ಧತ್ತೋ ಯೂಪಮಭಿತೋ ವದತೋ ಯಜಮಾನೋ ವೈ ಯೂಪೋ ಯಜಮಾನಮೇವೈತತ್ತೇಜಸಾ ಚ ಬ್ರಹ್ಮವರ್ಚಸೇನ ಚೋಭಯತಃ ಪರಿಧತ್ತಃ ।**
>
> (ಶ. ಬ್ರಾ ೧೩-೨-೬-೯)
>
> **ತೇಜಸಾ ವಾ ಏಷ .... .... .... ಬ್ರಹ್ಮವರ್ಚಸಮೇವಾವರುಂಧೇ ।**
>
> (ತೈ. ಬ್ರಾ. ૩-೯-೫)

ಇತ್ಯಾದಿ ವಾಕ್ಯಗಳಲ್ಲಿ ಋತ್ವಿಕ್ಕುಗಳಿಗೆ ತಾತ್ತ್ವಿಕವಿಚಾರವಾದ ಚರ್ಚೆಯು ನಡೆದು ಅದು ಜ್ಞಾನಸಾಧನವಾಗುವುದರಿಂದ ಈ ಅಶ್ವಮೇಧವು ನೆರವೇರುವ ಸ್ಥಾನಕ್ಕೆ ವಿದಥವೆಂದು ಹೆಸರು ಎಂದು ಸಾಯಣರ ವಿವರಣೆಯಿದೆ. ಈ ವಿಷಯವನ್ನು ಈ ಸೂಕ್ತದ ಮತ್ತು ಮುಂದಿನ ಸೂಕ್ತದ ಉಪಸಂಹಾರದಲ್ಲಿ ಅಶ್ವಮೇಧದ ಸ್ವರೂಪವನ್ನು ಕರ್ಮದ ದೃಷ್ಟಿಯಿಂದಲೂ ಜ್ಞಾನದ ದೃಷ್ಟಿಯಿಂದಲೂ ವಿವರಿಸುವಾಗ ತಿಳಿಸಲಾಗುತ್ತದೆ. ಆದರೆ ಇಲ್ಲಿ ವಿದಥಶಬ್ದಕ್ಕೆ ಜ್ಞಾನಸಾಧನವಾದ ಯಜ್ಞವೆಂದರ್ಥಮಾಡಿರುವುದರಿಂದ ಆ ಜ್ಞಾನವಿಷಯಕವಾದ ಚರ್ಚೆಯ ಸೂಕ್ಷ್ಮವಾದ ಪರಿಚಯವನ್ನು ಮಾಡಿಕೊಳ್ಳಬಹುದು. ಹೋತೃವಿಗೂ ಬ್ರಹ್ಮನಿಗೂ ನಡೆಯತಕ್ಕ ಬ್ರಹ್ಮೋದ್ಯದ ಚರ್ಚೆಯು ಈ ರೀತಿಯಿದೆ.

> **ಕಃ ಸ್ವಿದೇಕಾಕೀ ಚರತೀತಿ । ಅಸೌ ವಾ ಆದಿತ್ಯ ಏಕಾಕೀ ಚರತ್ಯೇಷ ಬ್ರಹ್ಮವರ್ಚಸಂ ಬ್ರಹ್ಮವರ್ಚಸಮೇವಾಸ್ಮಿನ್ಧತ್ತಃ ।**
>
> (ಶ ಬ್ರಾ. ೧೩-೨-೬-೧೦)

ಏಕಾಕಿಯಾಗಿ ಸಂಚರಿಸುವ ವ್ಯಕ್ತಿಯಾರು ? ಎಂಬ ಪ್ರಶ್ನೆಗೆ ಉತ್ತರವಾಗಿ ದೂರದಲ್ಲಿರುವ ಆದಿತ್ಯನೇ ಏಕಾಕಿಯಾಗಿ ಸಂಚರಿಸುವವನು. ಅವನೇ ಬ್ರಹ್ಮವರ್ಚಸ್ಸು.

ಕಿಗ್ಂಸ್ವಿದಾಸೀದ್ಬೃಹದ್ವಯ ಇತಿ । ಅಶ್ವೋ ವೈ ಬೃಹದ್ವಯ ಆಯುರೇವಾವರುಂಧೇ ।

(ಶ. ಬ್ರಾ. ೧೩-೨-೬-೧೫)

ಆ ಬೃಹತ್ಪಕ್ಷಿ ಯಾವುದು ಎಂಬ ಪ್ರಶ್ನೆಗೆ ಉತ್ತರವಾಗಿ ಮೇಧ್ಯಾಶ್ವನೇ ಆ ಬೃಹದ್ವಯವು. ಅದು ಆಯುಶ್ಶಕ್ತಿಯನ್ನು ಪಡೆಯುತ್ತದೆ. ಇತ್ಯಾದಿಯಾಗಿ ತಾತ್ತ್ವಿಕವಾದ ಚರ್ಚೆಯು ಬ್ರಹ್ಮೋದ್ಯದ ಸ್ವರೂಪವನ್ನು ತಿಳಿಸುತ್ತದೆ. ಈ ರೀತಿಯಾದ ಚರ್ಚೆಯಿಂದ ಅಶ್ವಮೇಧವು ಜ್ಞಾನಸಾಧನವಾದುದರಿಂದ ವಿದಥವೆಂಬ ಹೆಸರು. ಇದೇ ವಿಷಯವನ್ನು ಬೃಹದಾರಣ್ಯಕದಲ್ಲಿ,

ಏಷ ಹ ವಾ ಅಶ್ವಮೇಧೋ ಯ ಏಷ ತಪತಿ ತಸ್ಯ ಸಂವತ್ಸರ ಆತ್ಮಾಯಮಗ್ನಿರರ್ಕಸ್ತಸ್ಯೇಮೇ-
ಲೋಕಾ ಆತ್ಮಾನಸ್ತಾವೇತಾವರ್ಕಾಶ್ವಮೇಧೌ ॥

(ಬೃ ಉ ೧--೨-೭)

ಎಂದು ಅಶ್ವಮೇಧದ ವಿಶ್ವಾತ್ಮಸ್ವರೂಪವನ್ನು ತಿಳಿಸಿದೆ. ಬ್ರಹ್ಮೋದ್ಯದಲ್ಲಿ ಈ ವಿಶ್ವಾತ್ಮದ ಸ್ವರೂಪವನ್ನು ವಿವರಿಸುವ ಚರ್ಚೆಯಿದೆ. ಆದುದರಿಂದ ಬ್ರಹ್ಮೋದ್ಯದ ಚರ್ಚೆಯಿರುವ ಅಶ್ವಮೇಧಕ್ಕೆ ಜ್ಞಾನಸಾಧನವಾದ ವಿದಥವೆಂದು ಹೆಸರು.

### ವ್ಯಾಕರಣಪ್ರಕ್ರಿಯಾ

ಆಯುಃ—ವಾ ಗತಿಗಂಧನಯೋಃ. ಧಾತು. ಕೃವಾಪಾ—(ಉ. ಸೂ. ೧-೧) ಎಂಬುದರಿಂದ ಉಣ್ ಪ್ರತ್ಯಯ. ಆತೋ ಯುಕ್‌ಚಿಣ್‌ಕೃತೋಃ (ಪಾ. ಸೂ. ೭-೩-೩೩) ಎಂಬುದರಿಂದ ಧಾತುವಿಗೆ ಯುಕಾಗಮ. ಛಾಂದಸವಾಗಿ ವಕಾರಲೋಪ ಬರುತ್ತದೆ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಖ್ಯನ್—ಖ್ಯಾ ಪ್ರಕಥನೇ ಧಾತು. ಮಾಙಿಲುಙ್ (ಪಾ. ಸೂ. ೩-೩-೧೭೫) ಎಂಬುದರಿಂದ ಲುಙ್. ಝಿಗೆ ಅಂತಾದೇಶ ಬಂದಾಗ ಇಕಾರಲೋಪ. ಅಸ್ಯತಿವಕ್ತಿಖ್ಯಾತಿಭ್ಯೋಙ್ (ಪಾ. ಸೂ. ೩-೧-೫೨) ಎಂಬುದರಿಂದ ಚ್ಲಿಗೆ ಅಙಾದೇಶ. ಆತೋ ಲೋಪ ಇಟಿ ಚ (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ನ ಮಾಙ್‌ಯೋಗೇ (ಪಾ. ಸೂ. ೬-೪-೭೪) ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

ದೇವಜಾತಸ್ಯ—ತೃತೀಯಾಕರ್ಮಣಿ ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

ಪ್ರವಕ್ಷ್ಯಾಮಃ—ವಚ ಪರಿಭಾಷಣೇ ಧಾತು. ಲಟ್ ಉತ್ತಮಪುರುಷಬಹುವಚನಾಂತರೂಪ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ, ಸ್ಯ ವಿಕರಣಸ್ವರ ಉಳಿಯುತ್ತದೆ. ತಿಙಿಚೋದಾತ್ತವತಿ (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಪ್ರ) ಅನುದಾತ್ತಸ್ವರ ಬರುತ್ತದೆ.

ವಿದಥೇ— ವಿದ ಜ್ಞಾನೇ ಧಾತು. ಇದಕ್ಕೆ ಔಣಾದಿಕ ಅಥ ಪ್ರತ್ಯಯ. ಕಿತ್ವಾತಿದೇಶದಿಂದ ಲಘೂಪಧ ಗುಣ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ॥ ೧ ॥

———-:o:————

ಸಂಹಿತಾಪಾಠಃ

ಯನ್ನಿರ್ಣಿಜಾ ರೇಕ್ಣಸಾ ಪ್ರಾವೃತಸ್ಯ ರಾತಿಂ ಗೃಭೀತಾಂ ಮುಖತೋ ನಯಂತಿ ।
ಸುಪ್ರಾಙಜೋ ಮೇಮ್ಯದ್ವಿಶ್ವರೂಪ ಇಂದ್ರಾಪೂಷ್ಣೋಃ ಪ್ರಿಯಮಪ್ಯೇತಿ ಪಾಥಃ ॥ ೨ ॥

ಪದಪಾಠಃ

ಯತ್ । ನಿಃऽನಿಜಾ । ರೇಕ್ಣಸಾ । ಪ್ರಾವೃತಸ್ಯ । ರಾತಿಂ । ಗೃಭೀತಾಂ । ಮುಖತಃ । ನಯಂತಿ ।
ಸುऽಪ್ರಾಙ್ । ಅಜಃ । ಮೇಮ್ಯತ್ । ವಿಶ್ವऽರೂಪಃ । ಇಂದ್ರಾಪೂಷ್ಣೋಃ । ಪ್ರಿಯಂ । ಅಪಿ । ಏತಿ ।
ಪಾಥಃ ॥೨॥

ಸಾಯಣಭಾಷ್ಯಂ

ಯದ್ಯಸ್ಮಾನ್ನಿರ್ಣಿಜಾ । ನಿರ್ಣಿಗಿತಿ ರೂಪನಾಮ । ರೇಕ್ಣಸಾ । ರೇಕ್ಣ ಇತಿ ಧನನಾಮ । ನಿರ್ಣಿಗ್ಭಿರಿತಿ ರೇಕ್ಣೋ ರಿಕ್ಥಮಿತಿ ಚ ತನ್ನಾಮಸೂಕ್ತತ್ವಾತ್ ॥ ಉಭಯತ್ರ ಮತ್ವರ್ಥೋ ಲುಪ್ಯತೇ ॥ ರೂಪವತಾ ಹಿರಣ್ಯವತಾಭರಣೇನ ಪ್ರಾವೃತಸ್ಯ ಸರ್ವತೋ ವೇಷ್ಟಿತಸ್ಯಾಶ್ವಸ್ಯ ಮುಖತಃ ಪುರಸ್ತಾದ್ಗೃಭೀತಾಂ ಗೃಹೀತಾಂ ರಾತಿಂ ದಾತವ್ಯಾಂ ದಾತವ್ಯತ್ವೇನ ಗೃಹೀತಾಮಜಾಂ ನಯಂತ್ಯೃತ್ವಿಜಃ । ಸ ತಾದೃಶೋಽಜಃ ಸುಪ್ರಾಙ್ ಸುಷ್ಠು ಪ್ರತಸ್ಯಾಗಮನೋ ಮೇಮ್ಯದ್ಭೃಶ್ಯಮಾನಃ ॥ ಮೀಞ್ ಹಿಂಸಾಯಾಂ । ಅಸ್ಮಾದ್ಯಙ್ಲುಗಂತಾತ್ಕರ್ಮಣಿ ವ್ಯತ್ಯಯೇನ ಶತೃ ॥ ಯದ್ವಾ । ತಸ್ಯ ಶಬ್ದಾನುಕರಣಂ ಮೇಮೇಶಬ್ದಂ ಕುರ್ವನ್ । ವಿಶ್ವರೂಪೋ ಬಹುವರ್ಣೋಪೇತಃ ಕೃಷ್ಣಗ್ರೀವಃ ಕೃಷ್ಣಲಲಾಮೋ ವಾ । ನೈಕವರ್ಣ ಇತ್ಯರ್ಥಃ । ಏವಂರೂಪೋಽಯಮಿಂದ್ರಾಪೂಷ್ಣೋಃ । ಇಂದ್ರಃ ಪ್ರಸಿದ್ಧಃ । ಪೂಷಾ ಪೋಷಕೋ ದೇವೋಽಗ್ನಿಃ । ತಯೋಃ ಪ್ರಿಯಂ । ಆಗ್ನೇಯಃ ಕೃಷ್ಣಗ್ರೀವ ಇತ್ಯುಕ್ತತ್ವಾದಗ್ನೇಃ ಪ್ರಿಯತ್ವಂ । ಸರ್ವೇಽಪೀಂದ್ರಸ್ಯೇತೀಂದ್ರಪ್ರಿಯತ್ವಂ । ಏವಂರೂಪಂ ಪಾಥೋಽನ್ನಮಪ್ಯೇತಿ । ಪ್ರಾಪ್ನೋತು ॥

। ಪ್ರತಿಪದಾರ್ಥ ।

ಯತ್—ಯಾವಾಗ । ನಿರ್ಣಿಜಾ—ಸುಂದರವಾದ ರೂಪಗಳಿಂದ ಕೂಡಿದವೂ । ರೇಕ್ಣಸಾ—ಸುವರ್ಣಾದಿಗಳಿಂದ ನಿರ್ಮಿಸಿದವೂ ಆದ ಆಭರಣಗಳಿಂದ । ಪ್ರಾವೃತಸ್ಯ—ಸುತ್ತಲೂ ಅಲಂಕರಿಸಲ್ಪಟ್ಟ ಅಶ್ವದ । ಮುಖತಃ—

ಮುಂಭಾಗದಲ್ಲಿ । ಗೃಭೀತಾಂ—ಹಿಡಿಯಲ್ಪಟ್ಟುದೂ । ರಾತಿಃ — ಅರ್ಪಿತವಾಗತಕ್ಕದ್ದೂ ಆದ ಅಜವನ್ನು । ನಯಂತಿ — (ಋತ್ವಿಕ್ಕುಗಳು) ತರುತ್ತಾರೋ (ಆಗ) । ವಿಶ್ವರೂಪಃ — ನಾನಾವಿಧವಾದ ಬಣ್ಣವುಳ್ಳದ್ದೂ । ಸುಪ್ರಾಙ್—ಶ್ರೇಷ್ಠವಾದ ಗಮನವುಳ್ಳದ್ದೂ ಆದ । ಅಜಃ—ಆಡು । ಮೇಮ್ಯತ್—ಮೇ ಎಂದು ಶಬ್ದಮಾಡುತ್ತಾ ಕೆಹಾಕುತ್ತಾ । ಇಂದ್ರಾ ಪೂಷ್ಣೋಃ—ಇಂದ್ರನಿಗೂ ಮತ್ತು ಪೂಷನಿಗೂ (ಅಥವಾ ಪೂಷರೂಪನಾದ ಅಗ್ನಿಗೂ) । ಪ್ರಿಯಂ ಪಾಥಃ—ಪ್ರಿಯವಾದ ಅನ್ನವಾಗಿ । ಅಪ್ಯೇತಿ—ಸಿದ್ಧವಾಗುತ್ತದೆ.

ಭಾವಾರ್ಥ

ಸುಂದರವಾದ ರೂಪಗಳಿಂದ ಕೂಡಿದವೂ, ಸುವರ್ಣಾದಿಗಳಿಂದ ನಿರ್ಮಿಸಿದವೂ ಆದ ಆಭರಣಗಳಿಂದ ಅಲಂಕರಿಸಲ್ಪಟ್ಟ ಅಶ್ವದ ಮುಂಭಾಗದಲ್ಲಿ ಹಿಡಿಯಲ್ಪಟ್ಟುದೂ, ಆಹುತಿಯಾಗಿ ಅರ್ಪಿತವಾಗತಕ್ಕದ್ದೂ ಆದ ಅಜವನ್ನು ಋತ್ವಿಕ್ಕುಗಳು ತರುವಾಗ ನಾನಾವಿಧವಾದ ಬಣ್ಣವುಳ್ಳದ್ದೂ, ಶ್ರೇಷ್ಠವಾದ ಗಮನವುಳ್ಳದ್ದೂ ಆದ ಆ ಅಜವು ಮೇ ಎಂದು ಶಬ್ದಮಾಡುತ್ತಾ ಇಂದ್ರನಿಗೂ ಅಗ್ನಿರೂಪನಾದ ಪೂಷನಿಗೂ ಪ್ರಿಯವಾದ ಅನ್ನವಾಗಿ ಸಿದ್ಧವಾಗುತ್ತದೆ.

## English Translation

When they, (the priescs), bring the prepared offering to the presence (of the horse), who has been bathed and decorated with rich (trappings), the various-coloured goat going before him, bleating, becomes an acceptable offering to Indra and Pushan.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಮೇಧ್ಯಾಶ್ವದ ಅಲಂಕಾರವನ್ನೂ, ಆಹುತ್ಯರ್ಪಣಕ್ಕೆ ಸಿದ್ಧವಾದುದೂ, ಇಂದ್ರಾಪೂಷರಿಗೆ ಪ್ರಿಯವಾದ ಅನ್ನವಾದುದೂ ಆದ ಅಜವನ್ನು ಆ ಅಶ್ವದ ಮುಂಭಾಗದಲ್ಲಿ ಋತ್ವಿಕ್ಕುಗಳು ಇರಿಸುವುದೂ ವರ್ಣಿತವಾಗಿದೆ.

ನಿರ್ಣಿಜಾ—ನಿರ್ಣಿಕ್. ವವ್ರಿಃ ಇತ್ಯಾದಿ ರೂಪನಾಮಗಳಲ್ಲಿ ಈ ಶಬ್ದವು ಪಠಿತನಾಗಿದೆ. (ನಿ. ೩-೭) ಸಾಧಾರಣವಾಗಿ ಎರಡರ್ಥಗಳಲ್ಲಿಯೂ ಈ ಪದದ ಪ್ರಯೋಗವಿದೆ. ಮೊದಲನೆಯದಾಗಿ, ಶುದ್ಧಿಮಾಡಿದ ಎಂಬರ್ಥದಲ್ಲೂ ಎರಡನೆಯದಾಗಿ ಸ್ವಸ್ವರೂಪವನ್ನು ಪ್ರಕಾಶಗೊಳಿಸತಕ್ಕ ಎಂಬರ್ಥದಲ್ಲೂ ರೂಢವಾಗಿರುವುದರ ಜೊತೆಗೆ ಪುಷ್ಟವಾದ ಎಂಬರ್ಥದಲ್ಲಿಯೂ ಉಪಯೋಗಿಸಲ್ಪಟ್ಟಿದೆ.

ಆಮ್ರುಕ್ತೇನ ರುಶತಾ ವಾಸಸಾ ಹರಿರಮರ್ತ್ಯೋ ನಿರ್ಣಿಜಾನಃ ಪರಿ ವ್ಯತ ।
ದಿವಸ್ಪೃಷ್ಠಂ ಬರ್ಹಣಾ ನಿರ್ಣಿಜೇ ಕೃತೋಪಸ್ತರಣಂ ಚಮ್ವೋರ್ನಭಸ್ಮಯಂ ॥

(ಋ. ಸಂ. ೯-೬೯-೫)

ಇತ್ಯಾದಿ ಋಕ್ಕುಗಳಲ್ಲಿಯೂ

ಸರ್ವಂ ಪಿಬತಿ ನಿರ್ಣಿಜ್ಯ ಕಂಸಂ ಚಮಸಂ ವಾ ।

(ಛಾ. ಉ. ೫-೨-೭)

ಎಂಬ ಉಪನಿಷದ್ವಾಕ್ಯಗಳಲ್ಲಿಯೂ ಸಹ ಶೋಧ್ಯಮಾನಃ, ಪ್ರಕ್ಷಾಲ್ಯ ಎಂಬ ಅರ್ಥಗಳಾಗುತ್ತವೆ. ತೊಳೆಯಲ್ಪಟ್ಟುದು, ಶುದ್ಧಿಮಾಡಿದುದು ಎಂದು ತಾತ್ಪರ್ಯ.

ಯದೀ ಘೃತೇಭಿರಾಹುತೋ ವಾಶೀಮಗ್ನಿರ್ಭರತ ಉಚ್ಚಾವ ಚ । ಅಸುರ ಇವ ನಿರ್ಣಿಜಂ ॥

(ಋ. ಸಂ ೮-೧೯-೨೩)

ಎಂಬಲ್ಲಿ ಅಗ್ನಿಯು ತನ್ನ ಸ್ವಸ್ವರೂಪವನ್ನು ಪ್ರಕಾಶಪಡಿಸುತ್ತಾನೆಂದು ಹೇಳುವಾಗ ನಿರ್ಣಿಜಂ ಎಂದರೆ ಸ್ವರೂಪವನ್ನು ಎಂದರ್ಥವಾಗುತ್ತದೆ.

ಬಿಭ್ರದ್ದ್ರಾಪಿಂ ಹಿರಣ್ಯಯಂ ವರುಣೋ ವಸ್ತ ನಿರ್ಣಿಜಂ । ಪರಿ ಸ್ಪಶೋ ನಿ ಷೇದಿರೇ ॥

(ಋ. ಸಂ. ೧-೨೫-೧೩)

ಎಂಬಲ್ಲಿ ವರುಣದೇವನ ಶರೀರವನ್ನು ವರ್ಣಿಸಿದೆ. ನಿರ್ಣಿಜಂ ಎಂದರೆ ಇಲ್ಲಿ ಪುಷ್ಟವಾಗಿ ಬೆಳೆದ ಶರೀರವೆಂದು ತಾತ್ಪರ್ಯ. ಹೀಗೆ ನಾನಾರ್ಥಗಳಲ್ಲಿ ಈ ಪದದ ಪ್ರಯೋಗವಿರುವುದರಿಂದ ಪ್ರಕೃತವಾದ ಋಕ್ಕಿನಲ್ಲಿ ರೂಪವತಾ ಆಭರಣೇನ ಎಂದರೆ ಸುಂದರವಾದ ರೂಪವುಳ್ಳ ಆಭರಣದಿಂದ ಎಂದರ್ಥಮಾಡಿದೆ.

ರೇಕ್ಣಸಾ—ಈ ಪದವು ಧನನಾಮಗಳಲ್ಲಿ ಪಠಿತವಾಗಿದೆ. (ನಿ ೩-೯) ನಿರುಕ್ತಕಾರರು,

ಪರಿಷದ್ಯಂ ಹ್ಯರಣಸ್ಯ ರೇಕ್ಣೋ ನಿತ್ಯಸ್ಯ ರಾಯಃ ಪತಯಃ ಸ್ಯಾಮ ।

(ಋ. ಸಂ. ೭-೪-೭)

ಎಂಬ ಋಕ್ಕನ್ನುದಹರಿಸಿ ರೇಕ್ಣಃ ಇತಿ ಧನನಾಮ ; ರಿಚ್ಯತೇ ಪ್ರಯತಃ । (ನಿ. ೩-೨) ಮೃತಿಯನ್ನು ಹೊಂದಿದವರಿಂದ ಬಿಡಲ್ಪಡುವ ಪದಾರ್ಥವಾದುದರಿಂದ ಧನಕ್ಕೆ ಈ ಹೆಸರು ಪ್ರಸಿದ್ಧವಾಗಿದೆಯೆಂದು ತೋರಿಸಿದ್ದಾರೆ. ಅದರಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಧನವೆಂದರ್ಥಮಾಡಿದರೆ, ಇಲ್ಲಿ ರೇಕ್ಣಸಾ ಎಂಬುವಕ್ಕೆ ಹಿರಣ್ಯವತಾಭರಣೇನ ಸುವರ್ಣರೂಪವಾದ ಧನವುಳ್ಳ ಆಭರಣದಿಂದ ಅಲಂಕೃತವಾದ ಅಶ್ವವೆಂದರ್ಥ.

ಅಜಃ ಪ್ರಿಯಂ ಪಾಥಃ ಅಪ್ಯೇತಿ—ಇಂದ್ರಾಪೂಷರಿಗೆ ಅಜವು ಪ್ರಿಯವಾದ ಅನ್ನವಾಗುತ್ತದೆಂದು ಹೇಳಿದೆ. ಮೇಧ್ಯಾಶ್ವವು ಅಲಂಕೃತವಾಗಿ ಕರೆತರಲ್ಪಟ್ಟಾಗ ನಾಲ್ಕು ಕಣ್ಣುಳ್ಳ ನಾಯಿಯನ್ನು ಆಹುತಿಯಾಗಿ ಕೊಡುವ ಸಂಪ್ರದಾಯವು ಕೆಲವು ಕಡೆಗಳಲ್ಲಿ ಹೇಳಿದೆ.

ಪಾಪ್ಮಾ ವಾ ಏತಂ ಭ್ರಾತೃವ್ಯ ಈಪ್ಸತಿ ಯೋಽಶ್ವಮೇಧೇನ ಯಜೇತ ವಜ್ರೋಽಶ್ವಃ ಪರೋಮರ್ತಃ ಪರಃ ಶ್ವೇತಿ ಶ್ವಾನಂ ಚತುರಕ್ಷಗ್ಂ ಹತ್ವಾಧಸ್ಪದಮಶ್ವಸ್ಯೋಪಪ್ಲಾವಯತಿ ವಜ್ರೇಣೈವೈನಮವಕ್ರಾಮತಿ ನೈನಂ ಪಾಪ್ಮಾ ಭ್ರಾತೃವ್ಯ ಆಪ್ನೋತಿ ॥

(ಶ. ಬ್ರಾ. ೧೩-೧-೨-೯)

ಅಶ್ವಮೇಧವನ್ನು ನಿರ್ವಹಿಸುತ್ತಿರುವ ಯಜಮಾನನಿಗೆ ಅಸೂಯೆಯಿಂದ ಶತ್ರುವಾದವನು ತೊಂದರೆಯನ್ನು ಕೊಟ್ಟರೆ ಆಗ ನಾಲ್ಕು ಕಣ್ಣುಗಳುಳ್ಳ ನಾಯಿಯನ್ನು ಕೊಂದು ಶತ್ರುವನ್ನು ಶಪಿಸಿ ಅಶ್ವದ ಕೆಳಗೆ ಆಹುತಿಯಾಗಿ ಅರ್ಪಿಸಿ

ದರೆ ಶತ್ರುವೂ ಸಹ ಅಶ್ವರೂಪವಾದ ವಜ್ರಾಯುಧದ ಏಟನಿಂದ ನಾಶವಾಗುತ್ತಾನೆಂದು ತಾತ್ಪರ್ಯವುಳ್ಳ ಈ ವಾಕ್ಯಗಳಿಂದ ಈ ಸಂಪ್ರದಾಯವು ಬೇರೆಯೆಂದು ವಿಶದವಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ಅಜವೆಂದಿರುತ್ತದೆ. ಈ ಅಜದ ಸ್ವರೂಪವೇನೆಂದರೆ,

ವಿಶ್ವರೂಪಃ—ಬಹುವರ್ಣೋಪೇತಂ । ಕೃಷ್ಣಗ್ರೀವಃ । ಕೃಷ್ಣಲಲಾಮೋ ವಾ । ಕಪ್ಪುಕತ್ತುಳ್ಳದ್ದೂ ಅಥವಾ ಕರಿಯ ಮುಖವುಳ್ಳದ್ದು. ಏತಕ್ಕೆಂದರೆ,

ಆಗ್ನೇಯಃ ಕೃಷ್ಣಗ್ರೀವಃ ಸಾರಸ್ವತೀ ಮೇಷೀ ।

(ತೈ. ಸಂ. ೫ ೫-೨೨)

ಎಂದು ಅಗ್ನಿಪ್ರಿಯವಾದ ವರ್ಣವು ಕೃಷ್ಣವಾದುದೆಂದೂ ಅದರಲ್ಲೂ ಕತ್ತಿನ ಹತ್ತಿರ ಕೃಷ್ಣವರ್ಣವಿರಬೇಕೆಂದು ಹೇಳಿರುವುದರಿಂದ ಇಲ್ಲಿ ಈ ಅರ್ಥವನ್ನು ಮಾಡಿದೆ.

ಇಲ್ಲಿ ಪೂಷನ್—ಎಂಬ ಪದಕ್ಕೆ ಪೋಷಕಃ ದೇವಃ ಅಗ್ನಿಃ ಪೋಷಕನೂ ದೇವತಾತ್ಮನೂ ಆದ ಅಗ್ನಿಯೆಂದರ್ಥಮಾಡಿದೆ. ಅಲ್ಲದೇ ಅಶ್ವಮೇಧದ ಕಾಲದಲ್ಲಿ,

ಇಂದ್ರಾಗ್ನೀ ವೈ ಸರ್ವೇ ದೇವಾಸ್ತದೇವೈನಾನ್ಯಥಾದೇವತಂ ಪ್ರೀಣಾತೀತಿ ।

(ಶ. ಬ್ರಾ. ೧೩-೫-೩-೧೨)

ಎಂದು ಇಂದ್ರಾಗ್ನಿಗಳನ್ನು ವಿಶ್ವೇದೇವತೆಗಳೊಂದಿಗೆ ಸೇರಿಸಿ, ತಾದಾತ್ಮ್ಯವನ್ನು ಹೇಳಿದೆ.

### ವ್ಯಾಕರಣಪ್ರಕ್ರಿಯಾ

ನಿರ್ಣಿಜಾ—ಇಲ್ಲಿ ಮುಂದೆ ರೇಕ್ಣಸಾ ಎಂಬಲ್ಲಿಯೂ ಅದು ಉಳ್ಳದ್ದು ಎಂಬರ್ಥ ತೋರುವುದರಿಂದ ಛಾಂದಸವಾಗಿ ಮತುಪಿಗೆ ಲೋಪ ಬಂದಿದೆ.

ಪ್ರಾವೃತಸ್ಯ—ವೃಞ್ ವರಣೇ. ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಗತಿರನಂತರಃ (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಪ್ರ+ಆಙ್) ಉದಾತ್ತಸ್ವರ ಬರುತ್ತದೆ.

ರಾತಿಮ್ — ಮಂತ್ರೇವೃಷೇಷಪಚೆ—(ಪಾ. ಸೂ ೩-೩-೯೬) ಎಂಬುದರಿಂದ ಕ್ತಿನ್ ಉದಾತ್ತವಾಗುತ್ತದೆ.

ಗೃಭೀತಾಮ್—ಗ್ರಹ ಉಪಾದಾನೇ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಆರ್ಧಧಾತುಕಸ್ಯೇಡ್ವಲಾದೇಃ (ಪಾ. ಸೂ. ೭-೨-೩೫) ಎಂಬುದರಿಂದ ಇಡಾಗಮ. ಗ್ರಹೋಽಲಿಟಿದೀರ್ಘಃ (ಪಾ. ಸೂ. ೭-೨-೩೭) ಎಂಬುದರಿಂದ ಅದಕ್ಕೆ ದೀರ್ಘ. ಹೃಗ್ರಹೋರ್ಭಶ್ಛಂದಸಿ ಎಂಬ ವಚನದಿಂದ ಹಕಾರಕ್ಕೆ ಭತ್ವ. ಸ್ತ್ರೀತ್ವದಲ್ಲಿ ಟಾಪ್. ಉದಾತ್ತನಿವೃತ್ತಿಸ್ವರದಿಂದ ಇದು ಉದಾತ್ತವಾಗುತ್ತದೆ.

ಮುಖತಃ—ಪಂಚಮ್ಯರ್ಥದಲ್ಲಿ ತಸಿ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ

ನಯಂತಿ—ಣೀಞ್ ಪ್ರಾಪಣೇ ಧಾತು. ಲಟ್ ಪ್ರಥಮಪುರುಷಬಹುವಚನಾಂತರೂಪ. ತಾಸ್ಯನುದಾತ್ತೇತ್ (ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ.

ಮೇಮ್ಯತ್—ಮೀಞ್ ಹಿಂಸಾಯಾಂ ಧಾತು. ಅತಿಶಯಾರ್ಥದಲ್ಲಿ ಯಙ್ ಬಂದಾಗ ಯಙೋಽಚಿಚ (ಪಾ. ಸೂ. ೨-೪-೭೪) ಎಂಬುದರಿಂದ ಅದಕ್ಕೆ ಲುಕ್ ಯಙ್ ಲುಗಂತದ ಮೇಲೆ ಕರ್ಮಣಿಯಲ್ಲಿ ವ್ಯತ್ಯಯದಿಂದ ಶತೃ ಪ್ರತ್ಯಯ. ಅಭ್ಯಸ್ತಾನಾಮಾದಿಃ (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ನಾಭ್ಯಸ್ತಾಚ್ಛತುಃ (ಪಾ. ಸೂ. ೭-೧-೭೮) ಎಂಬುದರಿಂದ ನುಮಾಗಮ ಬರುವುದಿಲ್ಲ.

ವಿಶ್ವರೂಪಃ - ಬಹುವ್ರೀಹೌ ವಿಶ್ವಂ ಸಂಜ್ಞಾಯಾಮ್ (ಪಾ. ಸೂ. ೬-೨-೧೦೬) ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ.

ಇಂದ್ರಾಪೂಷ್ಣೋಃ—ಇಂದ್ರಶ್ಚ ಪೂಷಾ ಚ ಇಂದ್ರಾಪೂಷಣೌ ತಯೋಃ ದೇವತಾದ್ವಂದ್ವೇ ಚ (ಪಾ, ಸೂ. ೬-೩-೨೬) ಎಂಬುದರಿಂದ ಪೂರ್ವಪದಕ್ಕೆ ಆನಙ್. ದೇವತಾದ್ವಂದ್ವೇ ಚ (ಪಾ. ಸೂ. ೬-೨-೧೪೧) ಎಂಬುದರಿಂದ ಉಭಯಪದಪ್ರಕೃತಿಸ್ವರವು ಪ್ರಾಪ್ತವಾದರೆ ಅದಕ್ಕೆ ನೋತ್ತರಪದೇ-(ಪಾ. ಸೂ. ೬-೨-೧೪೨) ಎಂಬುದರಿಂದ ನಿಷೇಧ ಬರುತ್ತದೆ. ಸಮಾಸಸ್ವರದಿಂದ ಅಂತೋದಾತ್ತವಾಗುತ್ತದೆ.

ಏತಿ—ಇಣ್ ಗತೌ ಧಾತು. ಲಟ್ ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಪಾಥಃ—ಪಾ ರಕ್ಷಣೇ ಧಾತು. ಅನ್ಯೇಭ್ಯೋಽಪಿ ದೃಶ್ಯಂತೇ (ಉ. ಸೂ. ೬೪೪) ಎಂಬುದರಿಂದ ಅಸುನ್ ಪ್ರತ್ಯಯ. ಥುಟಾಗಮ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೨ ॥

---

। ಸಂಹಿತಾಪಾಠಃ ।

ಏಷ ಛಾಗಃ ಪುರೋ ಅಶ್ವೇನ ವಾಜಿನಾ ಪೂಷ್ಣೋ ಭಾಗೋ ನೀಯತೇ ವಿಶ್ವದೇವ್ಯಃ ।

ಅಭಿಪ್ರಿಯಂ ಯತ್ಪುರೋಳಾಶಮರ್ವತಾ ತ್ವಷ್ಟೇದೇನಂ ಸೌಶ್ರವಸಾಯ ಜಿನ್ವತಿ ॥ ೩ ॥

ಪದಪಾಠಃ

ಏಷಃ । ಛಾಗಃ । ಪುರಃ । ಅಶ್ವೇನ । ವಾಜಿನಾ । ಪೂಷ್ಣಃ । ಭಾಗಃ । ನೀಯತೇ । ವಿಶ್ವಽದೇವ್ಯಃ ।

ಅಭಿಽಪ್ರಿಯಂ । ಯತ್ । ಪುರೋಳಾಶಂ । ಅರ್ವತಾ । ತ್ವಷ್ಟಾ । ಇತ್ । ಏನಂ । ಸೌಽಶ್ರವಸಾಯ । ಜಿನ್ವತಿ ॥ ೩ ॥

ಸಾಯಣಭಾಷ್ಯಂ

ಏಷ ಛಾಗಃ ಶೃಂಗರಹಿತೋಽಜೋಽಶ್ವೇನ ವಾಜಿನಾ ಶೀಘ್ರವ್ಯಾಪಕೇನಾಶ್ವೇನ ಸಹ ಪೂಷ್ಣಃ ಪೋಷಕಸ್ಯಾಗ್ನೇರ್ಭಾಗೋ ಭಜನೀಯೋ ವಿಶ್ವದೇವ್ಯಃ ಸರ್ವದೇವಾರ್ಹಃ । ಅಗ್ನೇಃ ಸರ್ವದೇವಾತ್ಮಕತ್ವಾತ್ ತದರ್ಹತ್ವೇನ ಸರ್ವದೇವಪ್ರಿಯತ್ವಂ । ಏವಂವಿಧೋಽಜಃ ಪುರಃ ಪುರಸ್ತಾನ್ನೀಯತೇ । ಪ್ರಾಪ್ಯತೇ। ಯದ್ಯಸ್ಮಾದೇವಂ ಕ್ರಿಯತೇ ತಸ್ಮಾತ್ಪ್ರಿಯಂ ಪ್ರೀಣಯಿತಾರಂ ಪುರೋಡಾಶಂ ಪುರಸ್ತಾದ್ದಾತವ್ಯಮೇನಮಜಂ ತ್ವಷ್ಟಾ ಸರ್ವಸ್ಯೋತ್ಪಾದಕೋ ದೇವಃ । ತ್ವಷ್ಟಾ ರೂಪಾಣಿ ವಿಕರೋತೀತಿ ಶ್ರುತೇಃ । ತೂರ್ಣಿವ್ಯಾಪಕೋಽಗ್ನಿರ್ವಾ । ಉಭೇ ತ್ವಷ್ಟುರ್ಬಿಭ್ಯತುರಿತ್ಯುಕ್ತತ್ವಾತ್ ಅಹೋರಾತ್ರೇ ಇತಿ ವಾರಣೀ ಇತಿ ವೇತಿ ಯಾಸ್ಕೇನಾರಣೀ ಬಿಭ್ಯತುರಿತ್ಯುಕ್ತತ್ವಾತ್ । ನಿ ೮-೧೫ । ಅರಣಿಸಂಬಂಧೋಽಗ್ನೇರೇವೇತಿ ಗಮ್ಯತೇ ಅರ್ವತಾರಣವತಾಶ್ವೇನ ಸಹ ಸೌಶ್ರವಸಾಯ ದೇವಾನಾಂ ಶೋಭನಾನ್ನನಿಮಿತ್ತಮಭಿ ಜಿನ್ವತಿ । ಪ್ರೀತಿಹೇತುಕಂ ಕರೋತಿ ॥

ಪ್ರತಿಪದಾರ್ಥ

ವಿಶ್ವದೇವ್ಯಃ—ಎಲ್ಲಾ ದೇವತೆಗಳಿಗೂ ಅರ್ಪಿಸಲು ಯೋಗ್ಯವಾದುದೂ । ಪೂಷ್ಣಃ ಭಾಗಃ—ಪೋಷಕನಾದ ಅಗ್ನಿಗೆ ನಿರ್ದಿಷ್ಟವಾದುದೂ (ಸೇರತಕ್ಕದ್ದೂ) ಆದ । ಏಷಃ ಛಾಗಃ—ಈ ಅಜವು । ವಾಜಿನಾ—ವೇಗಗಾಮಿಯಾದ । ಅಶ್ವೇನ—ಅಶ್ವದೊಂದಿಗೆ । ಪುರಃ—ಮುಂಭಾಗದಲ್ಲಿ । ನೀಯತೇ—ಒಯ್ಯಲ್ಪಡುತ್ತದೆ । ಯತ್—ಆದ್ದರಿಂದಲೇ । ಪ್ರಿಯಂ— ಪ್ರಿಯವನ್ನುಂಟುಮಾಡುವುದೂ । ಪುರೋಳಾಶಂ — ಪ್ರಥಮದಲ್ಲಿ ಅರ್ಪಿತವಾಗತಕ್ಕದ್ದೂ ಆದ । ಏನಂ—ಈ ಅಜವನ್ನು । ತ್ವಷ್ಟಾ—ತ್ವಷ್ಟೃವು ಅಥವಾ ಅಗ್ನಿಯು । ಅರ್ವತಾ—ಅಶ್ವದೊಂದಿಗೆ । ಸೌಶ್ರವಸಾಯ—ಶ್ರೇಷ್ಠವಾದ ಅನ್ನವಾಗುವಂತೆಯೂ । ಅಭಿ ಜಿನ್ವತಿ ಇತ್— ಪ್ರೀತಿದಾಯಕವಾಗಿಯೂ ಇರುವಂತೆ ಮಾಡುತ್ತಾನೆ.

ಭಾವಾರ್ಥ

ಎಲ್ಲಾ ದೇವತೆಗಳಿಗೂ ಅರ್ಪಿಸಲು ಯೋಗ್ಯವಾದುದೂ, ಪೋಷಕನಾದ ಅಗ್ನಿಯ ಭಾಗಕ್ಕೆ ಸೇರತಕ್ಕದ್ದೂ ಆದ ಈ ಅಜವು ವೇಗಗಾಮಿಯಾದ ಅಶ್ವದೊಂದಿಗೆ ಮುಂಭಾಗದಲ್ಲಿ ಒಯ್ಯಲ್ಪಡುತ್ತದೆ. ಆದುದರಿಂದಲೇ, ಪ್ರಿಯವನ್ನುಂಟುಮಾಡುವುದೂ, ಪ್ರಥಮದಲ್ಲಿ ಅರ್ಪಿತವಾಗತಕ್ಕದ್ದೂ ಆದ ಈ ಅಜವನ್ನು ತ್ವಷ್ಟೃವು ಅಶ್ವದೊಂದಿಗೆ ಸೇರಿ ಶ್ರೇಷ್ಠವಾದ ಅನ್ನವಾಗುವಂತೆಯೂ ಪ್ರೀತಿದಾಯಕವಾಗಿಯೂ ಇರುವಂತೆ ಮಾಡುತ್ತಾನೆ.

## English Translation

This goat, the portion of Pushan, fit for all the gods, is brought first with the fleet courser, so that Twashtri may prepare him along with the horse, as an acceptable preliminary offering for the (sacrifical) food.

ವಿಶೇಷವಿಷಯಗಳು

ಅಶ್ವಮೇಧದಲ್ಲಿ ಪುರೋಡಾಶರೂಪದಲ್ಲಿರುವ ಅಜವನ್ನು ದೇವತೆಗಳಿಗೆ ಪ್ರಿಯವಾಗಿರುವಂತೆ ಮಾಡುವ ವಿಧಿಯನ್ನು ಹೇಳುವಾಗ ಈ ಅಜರೂಪವಾದ ಅನ್ನಕ್ಕೆ ವಿಶ್ವದೇವ್ಯಃ ಎಂಬ ಒಂದು ವಿಶೇಷಣವಿದೆ. ಈ ಸಂದರ್ಭದಲ್ಲಿ ಒಂದು ಆಕ್ಷೇಪವು ತಲೆದೋರಿ ಅದಕ್ಕೆ ಸಮಾಧಾನವೂ ಈ ರೀತಿಯಿದೆ.

ಯತ್ಪ್ರಾಜಾಪತ್ಯೋಽಶ್ವೋಽಥ ಕಥಾಪ್ಯನ್ಯಾಭ್ಯೋ ದೇವತಾಭ್ಯಃ ಪ್ರೋಕ್ಷತೀತಿ ಸರ್ವಾ ವೈ ದೇವತಾ ಅಶ್ವಮೇಧೇಽನ್ವಾಯತ್ತಾ ಯದಾಹ ಸರ್ವೇಭ್ಯಸ್ತ್ವಾ ದೇವೇಭ್ಯಃ ಪ್ರೋಕ್ಷಾಮೀತಿ ಸರ್ವಾ ಏವಾಸ್ಮಿನ್ದೇವತಾ ಅನ್ವಾಯಾತಯತಿ ತಸ್ಮಾದಶ್ವಮೇಧೇ ಸರ್ವಾ ದೇವತಾ ಅನ್ವಾಯತ್ತಾಃ ॥

(ಶ. ಬ್ರಾ. ೧೩-೧-೨-೯)

ಮೇಧ್ಯಾಶ್ವವು ಮುಖ್ಯವಾಗಿ ಪ್ರಜಾಪತಿಗೆ ಮಾತ್ರ ಸಂಬಂಧಿಸಿದುದರಿಂದ ಈ ಯಜ್ಞಭಾಗವೆಲ್ಲವೂ ಆ ದೇವತೆಗೆ ಮಾತ್ರ ಸೇರತಕ್ಕದ್ದು. ಹೀಗಿರುವಲ್ಲಿ ಇತರ ದೇವತೆಗಳನ್ನೂ ಉದ್ದೇಶಿಸಿ ಈ ಅಶ್ವಕ್ಕೆ ಪ್ರೋಕ್ಷಣವೇತಕ್ಕೆ ಎಂಬ ಪ್ರಶ್ನೆಗೆ ಉತ್ತರವಾಗಿ ಅಶ್ವಮೇಧದಲ್ಲಿ ಎಲ್ಲಾ ದೇವತೆಗಳಿಗೂ ಸಂಬಂಧವಿರುವುದರಿಂದ ಎಲ್ಲರನ್ನೂ ಉದ್ದೇಶಿಸಲಾಗುತ್ತದೆ ಎಂದು ಉತ್ತರವನ್ನು ಹೇಳಿದೆ. ಆ ನಿಯಮದಂತೆ ಪ್ರಕೃತದಲ್ಲಿ ವರ್ಣಿತವಾಗಿರುವುದೂ ಪುರೋಡಾಶರೂಪದಲ್ಲಿರುವುದೂ ಆದ ಅಜರೂಪವಾದ ಅನ್ನವೂ ಸಹ ವಿಶ್ವದೇವ್ಯವಾಗಿದೆ.

ಪುರೋಳಾ (ಡಾ)ಶಂ—ಪುರಸ್ತಾದ್ದಾತವ್ಯಂ । ಪೂರ್ವಭಾವಿಯಾಗಿ ಅರ್ಪಿಸತಕ್ಕದ್ದು.

ಸ ವಾ ಏಭ್ಯಸ್ತತ್ಪುರೋಽದಾಶಯತ್ । ಯ ಏಭ್ಯೋ ಯಜ್ಞಂ ಪ್ರಾರೋಚಯತ್ತಸ್ಮಾತ್ಪುರೋದಾಶಃ ಪುರೋದಾಶೋ ಹ ವೈ ನಾಮ್ಯೈತದ್ಯತ್ಪುರೋಡಾಶ ಇತಿ ॥

(ಶ. ಬ್ರಾ. ೧-೬-೨-೫)

ಯಜ್ಞವನ್ನು ಆಕರ್ಷಕವಾಗಿಯೂ ಯಜ್ಞಭಾಗವನ್ನು ರುಚಿಕರವಾಗಿಯೂ ಮಾಡತಕ್ಕ ಪೂರ್ವಭಾವಿಯಾದ ಅರ್ಪಣೆಗೆ ಪುರೋಡಾಶವೆಂಬ ಹೆಸರು. ಇಲ್ಲಿ ಅಶ್ವಾಹುತಿಗೆ ಪೂರ್ವಭಾವಿಯಾದುದು ಅಜಾಹುತಿ. ಅದು ಪುರೋಡಾಶವಾಗಿದೆ.

ವಾಜಿನಾ, ಅರ್ವತಾ—ವಾಜೀ, ಅರ್ವಾ ಎಂಬ ಎರಡು ಶಬ್ದಗಳೂ ಸಹ ಅಶ್ವನಾಮಗಳಲ್ಲಿ ಪಠಿತವಾಗಿವೆ (ನಿ ೨-೨೭). ನಿರುಕ್ತಕಾರರು ದಧಿಕ್ರಾಃ ಎಂಬ ಅಶ್ವದ ವರ್ಣನೆಯನ್ನು ವಿವರಿಸುವಾಗ,

ಆ ದಧಿಕ್ರಾಃ ಶವಸಾ ಪಂಚ ಕೃಷ್ಟೀಃ ಸೂರ್ಯ ಇವ ಜ್ಯೋತಿಷಾಪಸ್ತತಾನ ।
ಸಹಸ್ರಸಾಃ ಶತಸಾ ವಾಜ್ಯರ್ವಾ ಪೃಣಕ್ತು ಮಧ್ವಾ ಸಮಿಮಾ ವಚಾಂಸಿ ॥

(ಋ. ಸಂ. ೪-೩೮-೧೦)

ಎಂಬ ಋಕ್ಕನ್ನುದಹರಿಸಿ ವಾಜೀ ವೇಜನವಾನ್, ಅರ್ವೇರಣವಾನ್, ವೇಗ, ಚಲನ ಎರಡೂ ಉಳ್ಳದ್ದೆಂದು ವಿವರಿಸಿದ್ದಾರೆ. ಆದರ ವೀ ಧಾತುವು (ಓವಿಜೀ ಭಯಚಲನಯೋಃ) ಭಯಾರ್ಥದಲ್ಲಿಯೂ ಚಲನಾರ್ಥದಲ್ಲಿಯೂ

ಇರುವುದರಿಂದ ಅಶ್ವವು ತನ್ನ ವೇಗವಾದ ಗತಿಯಿಂದ (ಶತ್ರುಗಳನ್ನು) ಭಯಪಡಿಸುವುದು ಎಂದು ಬೇಕಾದರೂ ಹೇಳಬಹುದು.

ತ್ವಷ್ಟಾ ಅಭಿಜಿನ್ವತಿ—ತ್ವಷ್ಟೃವು ಪ್ರೀತಿಕರವಾಗುವಂತೆ ಎಂದರೆ ಆಪ್ಯಾಯಮಾನವಾಗಿರುವಂತೆ ಮಾಡುತ್ತಾನೆ, ಎಂದಿರುವಾಗ ತ್ವಷ್ಟಾ ಸರ್ವಸ್ಯ ಉತ್ಪಾದಕೋ ದೇವಃ ಎಂದು ವಿವರಿಸಿ ತ್ವಷ್ಟೃದೇವತೆಯೆಂದು ಮೊದಲು ಅರ್ಥಮಾಡಿ ಅನಂತರ ತೂರ್ಣವ್ಯಾಪಕೋಽಗ್ನಿರ್ವಾ ತ್ವಷ್ಟೃ ಶಬ್ದಕ್ಕೆ ವೇಗವಾಗಿ ಹರಡಿ ವ್ಯಾಪಿಸುವ ಎಂಬರ್ಥವನ್ನುಮಾಡಿ ಅಗ್ನಿಗೆ ವಿಶೇಷಣವನ್ನಾಗಿ ಮಾಡಿರುವುದರಿಂದ ತ್ವಷ್ಟೃ ಶಬ್ದಕ್ಕೆ ಅಗ್ನಿಯೆಂದಾದರೂ ಅರ್ಥವಾಗಬಹುದೆಂದು ಹೇಳಿದ್ದಾರೆ. ಈ ಅರ್ಥವನ್ನು ಸಮರ್ಥಿಸುವುದಕ್ಕೆ,—

ಆವಿಷ್ಟ್ಯೋ ವರ್ಧತೇ ಚಾರುರಾಸು ಜಿಹ್ಮಾನಾಮೂರ್ಧ್ವಃ ಸ್ವಯಶಾ ಉಪಸ್ಥೇ।
ಉಭೇ ತ್ವಷ್ಟುರ್ಬಿಭ್ಯತುರ್ಜಾಯಮಾನಾತ್ಪ್ರತೀಚೀ ಸಿಂಹಂ ಪ್ರತಿ ಜೋಷಯೇತೇ ॥

(ಋ. ಸಂ. ೧-೯೫-೫)

ಎಂಬ ಋಕ್ಕನ್ನುದಹರಿಸಿ ಅಲ್ಲಿ ತ್ವಷ್ಟುರ್ಬಿಭ್ಯತುಃ ಎಂಬ ವಾಕ್ಯದಲ್ಲಿ ತ್ವಷ್ಟೃ ಶಬ್ದವನ್ನು ಅಗ್ನಿಪರ್ಯಾಯವಾಗಿ ಉಪಯೋಗಿಸಿದೆಯೆಂದು ಸಾಯಣರು ವಿವರಿಸಿದ್ದಾರೆ. ಅರಣೀ ಇತಿ ವಾ (ನಿ. ೮. ೧೫) ಇತಿ ಯಾಸ್ಕೇನ ಬಿಭ್ಯತುರಿತ್ಯುಕ್ತತ್ವಾತ್ ಅರಣಿಸಂಬಂಧಃ ಅಗ್ನೇರೇವೇತಿ ಗಮ್ಯತೇ। ತ್ವಷ್ಟೃಶಬ್ದದ ನಿರ್ವಚನವನ್ನು ಮಾಡುವಾಗ ಯಾಸ್ಕರು ಅಗ್ನಿಪರ್ಯಾಯವಾಗಿಯೂ ನಿರ್ವಚನವನ್ನು ತೋರಿಸಿದ್ದಾರೆಂದು ಸಾಯಣರು ವಿವರಿಸಿದ್ದಾರೆ.

ಜಿನ್ವತಿ—ಜಿನ್ವತಿಃ ಪ್ರೀತಿಕರ್ಮಾ। ತೃಪ್ತಿಯನ್ನುಂಟುಮಾಡು ಎಂಬರ್ಥದಲ್ಲಿ ಈ ಪದದ ಪ್ರಯೋಗವಿದೆ.

ಭೂಮಿಂ ಪರ್ಜನ್ಯಾ ಜಿನ್ವಂತಿ ದಿವಂ ಜಿನ್ವಂತ್ಯಗ್ನಯಃ।

(ಋ. ಸಂ. ೧-೧೬೪-೫೧)

ಪರ್ಜನ್ಯನು ಅನ್ನಸಂಪತ್ತನ್ನೊದಗಿಸಿ ಭೂಮಿಯನ್ನು ತೃಪ್ತಿಯನ್ನುಂಟುಮಾಡುವಂತೆಯೂ ಅಗ್ನಿಗಳು ಹವಿಸ್ಸಿನರೂಪದ ಅನ್ನವನ್ನೊದಗಿಸಿ ದೇವತೆಗಳನ್ನು ತೃಪ್ತಿಪಡಿಸುವಂತೆಯೂ ಎಂದಿರುವಂತೆ ಅದೇ ವಿಧವಾದ ತೃಪ್ತಿಯನ್ನು ಸೂಚಿಸುವ ಸಂದರ್ಭದಲ್ಲಿ ಈ ಪದದ ಪ್ರಯೋಗವಿದೆ.

॥ ವ್ಯಾಕರಣಪ್ರಕ್ರಿಯಾ ॥

ಭಾಗಃ—ಭೋ ಭೇದನೇ ಧಾತು. ಭಾಪೂಖಡಿಭ್ಯಃಕಿತ್ (ಉ ಸೂ. ೧-೧೨೧) ಎಂಬುದರಿಂದ ಗನ್ ಪ್ರತ್ಯಯ. ಆದೇಶಉಪದೇಶೇಽಶಿತಿ (ಪಾ. ಸೂ. ೬-೧-೪೫) ಎಂಬುದರಿಂದ ಧಾತುವಿಗೆ ಆತ್ವ. ಞ್ನಿತ್ಯಾದಿರ್ನಿತ್ಯಮ್ (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಭಾಗಃ—ಭಜ ಸೇವಾಯಾಮ್. ಘಞ್ ಪ್ರತ್ಯಯ. ಅತಉಪಧಾಯಾಃ (ಪಾ. ಸೂ. ೭-೨-೧೧೬) ಎಂಬುದರಿಂದ ಆದಿವೃದ್ಧಿ. ಚಜೋಃ ಕುಘಿಣ್ಣ್ಯತೋಃ (ಪಾ. ಸೂ, ೭-೩-೫೨) ಎಂಬುದರಿಂದ ಕುತ್ವ. ಕರ್ಷಾತ್ವತಃ—(ಪಾ. ಸೂ ೬-೧-೧೫೯) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ನೀಯತೇ—ಣೀಞ್ ಪ್ರಾಪಣೇ ಧಾತು. ಕರ್ಮಣಿಯಲ್ಲಿ ಲಟ್. ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ

ವಿಶ್ವದೇವ್ಯಃ—ದೇವಾಹೋ್ಃ ಭಾಗೋ ದೇವ್ಯಃ ಛಂದಸಿ ಚ (ಪಾ. ಸೂ. ೫-೧-೬೭) ಎಂಬುದರಿಂದ ಯ ಪ್ರತ್ಯಯ. ವಿಶ್ವೇ ಸರ್ವೇ ದೇವಾಃ ಯಸ್ಮಿನ್. ಸಃ. ಸಂಜ್ಞಾ ತೋರದಿದ್ದರೂ ವ್ಯತ್ಯಯದಿಂದ ಬಹುವ್ರೀಹೌ ವಿಶ್ವಂ ಸಂಜ್ಞಾಯಾಮ್ (ಪಾ. ಸೂ. ೬-೨-೧೦೬) ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ.

ಸೌಶ್ರವಸಾಯ—ಸು ಶ್ರವಸಃ ಇದಮ್. ಸೌಶ್ರವಸಮ್. ತಸ್ಯೇದಮ್ ಎಂಬುದರಿಂದ ಅಣ್ ಪ್ರತ್ಯಯ. ತದ್ಧಿತೇಷ್ವಚಾಮಾದೇಃ ಎಂಬುದರಿಂದ ಆದಿವೃದ್ಧಿ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಜಿನ್ವತಿ—ಜಿವಿ ಪ್ರೀಣನೇ ಧಾತು. ಇದಿತೋ ನುಮ್ ಧಾತೋಃ (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ ಲಟ್ ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೩ ॥

———:o:———

ಸಂಹಿತಾಪಾಠಃ

ಯದ್ಧ ವಿಷ್ಯಮೃತುಶೋ ದೇವಯಾನಂ ತ್ರಿರ್ಮಾನುಷಾಃ ಪರ್ಯಶ್ವಂ

ನಯಂತಿ ।

ಅತ್ರಾ ಪೂಷ್ಣಃ ಪ್ರಥಮೋ ಭಾಗ ಏತಿ ಯಜ್ಞಂ ದೇವೇಭ್ಯಃ ಪ್ರತಿವೇ-

ದಯನ್ನಜಃ ॥ ೪ ॥

ಪದಪಾಠಃ

ಯತ್ । ಹ ವಿಷ್ಯಂ । ಋತುಽಶಃ । ದೇವಽಯಾನಂ । ತ್ರಿಃ । ಮಾನುಷಾಃ । ಪರಿ । ಅಶ್ವಂ । ನಯಂತಿ ।

ಅತ್ರ । ಪೂಷ್ಣಃ । ಪ್ರಥಮಃ । ಭಾಗಃ । ಏತಿ । ಯಜ್ಞಂ । ದೇವೇಭ್ಯಃ । ಪ್ರತಿಽವೇದಯನ್ । ಅಜಃ ॥ ೪ ॥

ಸಾಯಣಭಾಷ್ಯಂ

ಹವಿಷ್ಯಂ ಹವಿರ್ಯೋಗ್ಯಂ ದೇವಯಾನಂ ದೇವಾನಾಂ ಪ್ರಾಪಣೀಯಮಶ್ವಂ ಯದ್ಯದಾ ಮಾನುಷಾ ಋತ್ವಿಜ ಋತುಶ ಋತಾವೃತೌ ಕಾಲೇ ಕಾಲೇ ತ್ರಿಃ ಪರಿಣಯಂತಿ । ಪರ್ಯಗ್ನಿ ಕುರ್ವಂತೀತ್ಯರ್ಥಃ । ಅತ್ರಾಸ್ಮಿನ್ಸಮಯೇ ॥ ಋಚಿ ತುನುಘೇತಿ ದೀರ್ಘಃ ॥ ಪೂಷ್ಣಃ ಪೋಷಕಸ್ಯಾಗ್ನೇರ್ಭಾಗೋಽಜಃ ಪ್ರಥಮ ಏತಿ । ಪುರೋಗಾಮೀ ಸನ್ ಗಚ್ಛತಿ । ಕಿಂ ಕುರ್ವನ್ । ಯಜ್ಞಂ ದೇವೇಭ್ಯಃ ಪ್ರತಿವೇದಯನ್ ಪ್ರಖ್ಯಾಪಯನ್ ॥

ಪ್ರತಿಪದಾರ್ಥ

ಯತ್—ಯಾವಾಗ | ಮಾನುಷಾಃ—ಋತ್ವಿಕ್ಕುಗಳು | ಹವಿಷ್ಯಂ—ಹವಿಸ್ಸಿಗೆ (ಅರ್ಪಣೆಗೆ) ಯೋಗ್ಯವಾದುದೂ | ದೇವಯಾನಂ—ದೇವತೆಗಳಿಗೆ ಸೇರತಕ್ಕದ್ದೂ ಆದ | ಅಶ್ವಂ—ಅಶ್ವವನ್ನು | ಋತುಶಃ—ಯಜ್ಞಕಾಲಗಳಲ್ಲಿ | ತ್ರಿಃ—ಮೂರು ಸಲ | ಪರಿ—(ಅಗ್ನಿಯ) ಸುತ್ತಲೂ | ನಯಂತಿ—ಕರೆದುಕೊಂಡು ಹೋಗುತ್ತಾರೆಯೋ (ಪ್ರದಕ್ಷಿಣವನ್ನು ಮಾಡಿಸುತ್ತಾರೆಯೋ) | ಅತ್ರ—ಈ ಕಾಲದಲ್ಲಿ | ಪೂಷ್ಣಃ—ಪೋಷಕನಾದ ಅಗ್ನಿಯ | ಪ್ರಥಮಃ ಭಾಗಃ—ಮೊದಲನೆಯ ಅಂಶವಾದ | ಅಜಃ—ಅಜವು | ದೇವೇಭ್ಯಃ—ದೇವತೆಗಳಿಗೆ | ಯಜ್ಞಂ—ಯಜ್ಞವನ್ನು | ಪ್ರತಿವೇದಯನ್—ಪ್ರಕಟಿಸುತ್ತಾ | ಏತಿ—ಪುರೋಗಾಮಿಯಾಗಿ ಬರುತ್ತದೆ |

॥ ಭಾವಾರ್ಥ ॥

ಹವಿಸ್ಸಿಗೆ ಯೋಗ್ಯವಾದುದೂ, ದೇವತೆಗಳಿಗೆ ಸೇರತಕ್ಕದ್ದೂ ಆದ ಅಶ್ವವನ್ನು ಯಜ್ಞಕಾಲಗಳಲ್ಲಿ ಋತ್ವಿಕ್ಕುಗಳು ಮೂರು ಸಲ ಅಗ್ನಿಯ ಸುತ್ತಲೂ ಸುತ್ತಿಸುತ್ತಾರೆ. ಆ ಕಾಲದಲ್ಲಿ ಅಗ್ನಿಗೆ ಮೊದಲು ಸೇರಬೇಕಾದ ಅಜವು ದೇವತೆಗಳಿಗೆ ಯಜ್ಞವನ್ನು ಪ್ರಕಟಿಸುತ್ತಾ ಪುರೋಗಾಮಿಯಾಗಿ ಮುಂದೆ ಬರುತ್ತದೆ.

## English Translation

When the priests at the season (of the ceremony) lead forth the horse, the offering devoted to the gods, thrice round (the sacrifical fire); then the goat, the portion of Pushan, goes first, announcing the sacrifice to the gods.

ವಿಶೇಷವಿಷಯಗಳು

ಋತುಶಃ—ಋತು ಶಬ್ದವು ಇಲ್ಲಿ ಕಾಲವಾಚಕವಾಗಿದೆ. ಮಾನುಷಾಃ-ಎಂಬುದು ಋತ್ವಿಕ್ಕುಗಳಿಗೆ ಪರ್ಯಾಯಪದವಾಗಿದೆ. ಋತುಶಃ ಎಂಬ ಪದದ ಪ್ರಯೋಗವಿರುವೆಡೆಗಳಲ್ಲೆಲ್ಲಾ ನಿಯಮಿತವಾದ ಕಾಲಕ್ಕೆ ಸರಿಯಾಗಿ ಎಂದೇ ಅರ್ಥವಾಗುತ್ತದೆ. ಕೆಲವೆಡೆಗಳಲ್ಲಿ ಸಾಯಣರು ನಿರುಕ್ತಕ್ಕೆ ವಿರೋಧವಾಗಿ ಅರ್ಥಮಾಡಿರುತ್ತಾರೆ. ಉದಾಹರಣೆಗೆ—

ಆಯೊಯಾ ಧೃಷ್ಣೋ ಅಭಿಗೂರ್ಯಾ ತ್ವಂ ನೇಷ್ಟ್ರಾತ್ಸೋಮಂ ದ್ರವಿಣೋದಃ ಪಿಬ ಋತುಭಿಃ |

(ಋ. ಸಂ. ೨-೩೭-೩)

ಎಂಬ ಋಕ್ಕಿನಲ್ಲಿ ಋತುಭಿಃ ಎಂಬುದಕ್ಕೆ ಸಕಾಲಕ್ಕೆ ಸರಿಯಾಗಿ ಎಂದು ನಿರುಕ್ತಕಾರರು ವಿವರಿಸಿದ್ದರೆ (ನಿ. ೮-೩) ಸಾಯಣರು ಈ ಪದಕ್ಕೆ ಸಂಜ್ಞಕೈಃ ಸಹ ಎಂದರ್ಥಮಾಡಿದ್ದಾರೆ.

ಯತ್ಪಾಕತ್ರಾ ಮನಸಾ ದೀನದಕ್ಷಾ ನ ಯಜ್ಞಸ್ಯ ಮನ್ವತೇ ಮರ್ತ್ಯಾಸಃ |

ಅಗ್ನಿಷ್ಟದ್ಧೋತಾ ಕ್ರತುವಿದ್ವಿಜಾನನ್ಯಜಿಷ್ಠೋ ದೇವಾ ಋತುಶೋ ಯಜಾತಿ |

(ಋ. ಸಂ ೧೦-೨-೫)

ಎಂಬ ಋಕ್ಕಿನಲ್ಲಿ ಮರ್ತ್ಯಾಸಃ, ಋತುಶಃ ಎಂಬ ಎರಡು ಪದಗಳೂ ಒಟ್ಟಿಗೆ ಉಪಯೋಗಿಸಲ್ಪಟ್ಟಿವೆ. ಇಲ್ಲಿ ಮರ್ತ್ಯಾಸಃ ಎಂದರೆ ಮನುಷ್ಯಾ ಋತ್ವಿಜಃ ಎಂದೂ ಋತುಶಃ ಎಂದರೆ ಸ್ವೇ ಸ್ವೇ ಯಾಗಯೋಗ್ಯೇ ಕಾಲೇ ಎಂದೂ ಅರ್ಥವಾಗುತ್ತದೆ. ಅದರಂತೆಯೇ ಎಲ್ಲಾ ಕಡೆಯೂ ಅರ್ಥಮಾಡಬೇಕು. ಪ್ರಕೃತವಾದ ಋಕ್ಕಿನಲ್ಲಿ ಅಶ್ವಮೇಧಯಾಗದ ನಿರ್ದಿಷ್ಟವಾದ ಕಾಲಗಳಲ್ಲಿ ಎಂದರ್ಥ. ಎಂದರೆ ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುವುದಕ್ಕೆ ಮೊದಲು ಹವೀರೂಪವಾದ ಪಶುವನ್ನು ಅಗ್ನಿಯ ಸುತ್ತಲೂ ಮೂರುಸಲ ಸುತ್ತಿಸುವುದು ಪರ್ಯಗ್ನಿಕರಣವೆಂಬ ವಿಧಿಯು. ಇವನ್ನು ಮಾಡುವ ಕಾಲದಲ್ಲಿ ಎಂದು ಇಲ್ಲಿ ಅರ್ಥಮಾಡಬೇಕು. ಇದೇ ವರ್ಣನೆಯು,

ಕೃಷ್ಣಗ್ರೀವಮಾಗ್ನೇಯಗ್‌ಂ ರರಾಟೇ ಪುರಸ್ತಾತ್ ‌। ಪೂರ್ವಾಗ್ನಿಮೇವ ತಂ ಕುರುತೇ ॥

(ಶ. ಬ್ರಾ. ೧೩-೨-೨-೩)

ಕೃಷ್ಣಗ್ರೀವವಾದುದೂ, ಅಗ್ನ್ಯಾಹುತಿಗೆ ಸಿದ್ಧವಾದುದೂ ಆದ ಅಜವು ಅಶ್ವದ ಮುಂಭಾಗದಲ್ಲಿ ಅಗ್ನಿಯ ಸುತ್ತಲೂ ಹೋಗುತ್ತದೆ ಎಂದುಅಶ್ವದ ಮುಂಭಾಗದಲ್ಲಿ ಅಜವೂ ಸಹ ಅಗ್ನಿಪ್ರದಕ್ಷಿಣವನ್ನು ಮಾಡುತ್ತಾ ಯಜ್ಞವು ನೆರವೇರುತ್ತದೆಂದು ದೇವತೆಗಳಿಗೆ ತಿಳಿಸುತ್ತದೆ ಎಂಬುದನ್ನು ಸೂಚಿಸುತ್ತದೆ.

ಪೂಷ್ಣಃ — ಪೂಷನ್ ಎಂಬುದು ಇಲ್ಲಿ ಅಗ್ನಿಪರ್ಯಾಯವಾದ ಹೆಸರಾಗಿದೆ. ದ್ವಾದಶಾದಿತ್ಯರಲ್ಲಿ ಒಬ್ಬನೆಂದು ಪ್ರಸಿದ್ಧವಾದ ಹೆಸರಾಗಿದೆ. ಎರಡರ್ಥದಲ್ಲೂ ಸಹ ಒಂದೇ ನಿರ್ವಚನವಿರುತ್ತದೆ. ಈ ನಿರ್ವಚನದಿಂದಲೇ ಅಗ್ನಿಯೆಂದಾದರೂ ಅರ್ಥಮಾಡಬಹುದು ಅಥವಾ ಆದಿತ್ಯನೆಂದು ಬೇಕಾದರೂ ಅರ್ಥಮಾಡಬಹುದು. ಇಲ್ಲಿ ಅಗ್ನಿಯು.

ಪೂಷಾ ಯದ್ರಶ್ಮಿಪೋಷಂ ಪುಷ್ಯತಿ ತತ್ ಪೂಷಾ ಭವತಿ ।

(ನಿ. ೧೨-೧೬)

ರಶ್ಮಿಗಳಿಂದ ಪೋಷಿಸುವವನಾದ್ದರಿಂದ ಪೂಷಾ ಎಂಬ ಹೆಸರು ಎಂದು ನಿರುಕ್ತಕಾರರ ನಿರ್ವಚನವಿದೆ. ಶತಪಥ ಬ್ರಾಹ್ಮಣದಲ್ಲಿಯೂ ಸಹ,

ಇಯಂ ವೈ ಪೂಷಾ ಪೂಷೇಯಂ ಹೀದಂ ಸರ್ವಂ ಪುಷ್ಯತಿ ಯದಿದಂ ಕಿಂಚ ॥

(ಶ. ಬ್ರಾ. ೧೪-೪-೨-೨೫)

ಈ ದೇವತೆಯು ಎಲ್ಲವನ್ನೂ ಪೋಷಿಸುವವನಾದ್ದರಿಂದ ಪೂಷನೆಂದು ಕರೆಯಲ್ಪಡುವನು ಎಂದು ಹೇಳಿದೆ. ಈ ವಿಧವಾದ ಅರ್ಥವು ಆದಿತ್ಯಪರವಾಗಿಯೂ ಆಗಬಹುದು, ಅಥವಾ ಹವ್ಯವಾಹನನಾಗಿ, ದೇವಮಾನವಾದಿಸಕಲರ ಪೋಷಣೆಗೂ ಕಾರಣನಾದುದರಿಂದ ಅಗ್ನಿಪರವಾಗಿಯೂ ಆಗಬಹುದು. ಅಥವಾ ಆದಿತ್ಯನೇ ಅಗ್ನಿಯ ರೂಪಾಂತರಗಳಲ್ಲಿ ಒಂದು ಎಂದರ್ಥಮಾಡಿದರೆ ಆಗ ಕ್ಲೇಶವೇ ಇರುವುದಿಲ್ಲ. ಇದೇ ಅರ್ಥವನ್ನು,

ಪುಷ್ಯನ್ ಕ್ಷಿತಿಂ ಪೋಷಯತಿ ಪ್ರಣುದನ್ ರಶ್ಮಿಭಿಸ್ತಮಃ ।
ತೇನೈನಮಸ್ತೌತ್ಪೂಷೇತಿ ಭರದ್ವಾಜಸ್ತು ಪಂಚಭಿಃ ॥

(ಬೃ. ದೇ. ೨-೬೩)

ಕತ್ತಲನ್ನು ನಾಶಮಾಡುತ್ತಾ ಪೃಥ್ವಿಯು ವೃದ್ಧಿಯನ್ನು ಹೊಂದುವಂತೆ ಅದನ್ನು ಪೋಷಿಸುವುದರಿಂದ ಪೂಷಾ ಎಂಬ ಹೆಸರು ಎಂಬ ಬೃಹದ್ದೇವತಾವಾಕ್ಯವೂ ಸೂಚಿಸುತ್ತದೆ. ಅಲ್ಲದೇ,

ತ್ವಂ ವಾತೈರರುಣೈರ್ಯಾಸಿ ಶಂಗಯಸ್ತ್ವಂ ಪೂಷಾ ವಿಧತಃ ಪಾಸಿ ನು ತ್ಮನಾ ।
(ಋ. ಸಂ. ೨-೧-೬)

ತ್ವಮಗ್ನೇ ಪ್ರವಿಣೋದಾ ಅರಂಕೃತೇ ತ್ವಂ ದೇವಃ ಸವಿತಾ ರತ್ನಧಾ ಅಸಿ ॥
ತ್ವಂ ಭಗೋ ನೃಪತೇ ವಸ್ವ ಈಶಿಷೇ ತ್ವಂ ಪಾಯುರ್ದಮೇ ಯಸ್ತೇಽವಿಧತ್ ॥
(ಋ. ಸಂ. ೨-೧-೭)

ಇತ್ಯಾದಿ ಋಕ್ಕುಗಳಲ್ಲಿ ಪೂಷ, ಭಗ, ಸವಿತೃ ಇವರುಗಳೊಂದಿಗೆಲ್ಲಾ ತಾದಾತ್ಮ್ಯವನ್ನು ಹೇಳಿರುವುದರಿಂದ ದ್ವಾದಶಾದಿತ್ಯರು ಅಗ್ನಿಯ ರೂಪಾಂತರಗಳು. ಆದುದರಿಂದ ಇಲ್ಲಿ ನಿರುಕ್ತನಿರ್ವಚನದಂತೆಯೂ ಅಗ್ನಿಯೆಂಬರ್ಥವೇ ಆಗುತ್ತದೆ. ಅಥವಾ,

ಅಜಾ ಅನ್ಯಸ್ಯ ವಹ್ನಯೋ ಹರೀ ಅನ್ಯಸ್ಯ ಸಂಭೃತಾ । ತಾಭ್ಯಾಂ ವೃತ್ರಾಣಿ ಜಿಘ್ನತೇ ॥
(ಋ. ಸಂ. ೬-೫೭-೩)

ಪೂಷನಿಗೆ ಅಜವು ಪ್ರಿಯವಾದ ಹವಿಸ್ಸಾದುದರಿಂದ ಇಲ್ಲಿ ಅರ್ಪಿಸತಕ್ಕ ಅಜವು ರೂಢವಾಗಿರತಕ್ಕ ಪೂಷದೇವನನ್ನೇ ಉದ್ದೇಶಿಸಿರಬಹುದೆಂದೂ ಒಂದು ಮತ.

ವ್ಯಾಕರಣಪ್ರಕ್ರಿಯಾ

ಹವಿಷ್ಯಮ್—ಹವಿರ್ಯೋಗ್ಯಮ್ ಹವಿಷ್ಯಮ್. ಯತ್ ಪ್ರತ್ಯಯ- ತಿತ್‌ಸ್ವರಿತಮ್ (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

ಋತುಶಃ—ಸಂಖ್ಯೈಕವಚನಾಚ್ಚ ವೀಪ್ಸಾಯಾಮ್ (ಪಾ ಸೂ. ೫-೪-೪೩) ಎಂಬುದರಿಂದ ಶಸ್ ಪ್ರತ್ಯಯ. 'ಶಸ್‌ಪ್ರಭೃತಯಃ ಪ್ರಾಕ್‌ಸಮಾಸಾಂತೇಭ್ಯಃ' ಎಂದು ಪರಿಗಣನಮಾಡಿರುವುದರಿಂದ ಅವ್ಯಯಸಂಜ್ಞಾ ಬರುತ್ತದೆ.

ದೇವಯಾನಮ್—ಯಾ ಪ್ರಾಪಣೇ ಧಾತು. ಲ್ಯುಟ್ ಪ್ರತ್ಯಯ. ದೇವಾನಾಂ ಯಾನಮ್. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

ತ್ರಿಃ—ದ್ವಿತ್ರಿಚತುರ್ಭ್ಯಃಸುಚ್ (ಪಾ. ಸೂ. ೫-೪-೧೮) ಎಂಬುದರಿಂದ ಆವೃತ್ತಿಯಲ್ಲಿ ಸುಚ್ ಪ್ರತ್ಯಯ. ಸಕಾರಕ್ಕೆ ರುತ್ವ ವಿಸರ್ಗ.

ನಯಂತಿ—ಣೀಞ್ ಪ್ರಾಪಣೇ ಧಾತು. ಲಡಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

ಅತ್ರಾ—ಋಚಿತುನುಘ—(ಪಾ. ಸೂ. ೬-೩-೧೩೩) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ

ಪ್ರತಿವೇದಯನ್—ವಿದ ಜ್ಞಾನೇ ಧಾತು. ಹೇತುಮತಿ ಚ ಎಂಬುದರಿಂದ ಣಿಚ್. ಪುಗಂತಲಘೂಪಧಸ್ಯಚ (ಪಾ ಸೂ. ೭-೩-೮೬) ಎಂಬುದರಿಂದ ಲಘೂಪಧಗುಣ. ಣಿಜಂತದ ಮೇಲೆ ಶತೃ ಪ್ರತ್ಯಯ. ಶಪ್ ವಿಕರಣ, ಅದನ್ನು ನಿಮಿತ್ತೀಕರಿಸಿ ಣಿಚಿಗೆ ಗುಣ, ಅಯಾದೇಶ. ಣಿಚ್‌ಸ್ವರ ಬರುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ॥ ೪ ॥

———:O:———

**ಸಂಹಿತಾಪಾಠಃ**

ಹೋತಾಧ್ವರ್ಯುರಾವಯಾ ಅಗ್ನಿಮಿಂಧೋ ಗ್ರಾವಗ್ರಾಭ ಉತ ಶಂಸ್ತಾ

ಸುವಿಪ್ರಃ ।

ತೇನ ಯಜ್ಞೇನ ಸ್ವರಂಕೃತೇನ ಸ್ವಿಷ್ಟೇನ ವಕ್ಷಣಾ ಆ ಪೃಣಧ್ವಂ ॥ ೫ ॥

**। ಪದಪಾಠಃ ।**

ಹೋತಾ । ಅಧ್ವರ್ಯುಃ । ಆಽವಯಾಃ । ಅಗ್ನಿಂಽಇಂಧಃ । ಗ್ರಾವಽಗ್ರಾಭಃ । ಉತ । ಶಂಸ್ತಾ ।

ಸುಽವಿಪ್ರಃ ।

ತೇನ । ಯಜ್ಞೇನ । ಸುಽಅರಂಕೃತೇನ । ಸುಽಇಷ್ಟೇನ । ವಕ್ಷಣಾಃ । ಆ । ಪೃಣಧ್ವಂ ॥ ೫ ॥

**॥ ಸಾಯಣಭಾಷ್ಯಂ ॥**

ಹೋತಾ ದೇವಾನಾಮಾಹ್ವಾತೈತನ್ನಾಮಕ ಋತ್ವಿಕ್ ಅಧ್ವರ್ಯುರಧ್ವರಯುರಧ್ವರಸ್ಯ ನೇತಾ ಸೋಽಪ್ಯಾವಯಾ ಆಭಿಮುಖ್ಯೇನ ಹವಿಷಾಂ ಗಮಯಿತಾ । ಅಧ್ವರ್ಯೋರ್ವಿಶೇಷಣಮೇತತ್ ॥ ಆಙ್ಪೂರ್ವಾದ್ವೇತೇರಸುನ್ । ಪೂರ್ವಪದಪ್ರಕೃತಿಸ್ವರತ್ವಂ ಚ ॥ ಯದ್ವಾ । ಆಭಿಮುಖ್ಯೇನಾವಯಷ್ಟಾ ಪ್ರತಿಪ್ರಸ್ಥಾತೋಚ್ಯತೇ ॥ ಅವೇ ಯಜಃ । ಪಾ ೩-೨-೭೨ । ಇತಿ ಣ್ವಿನ್ । ಅವಾಪ್ಯೋರುಪಸರ್ಗಯೋರಿತ್ಯಲ್ಲೋಪಃ ॥ ಅಗ್ನಿಮಿಂಧೋಽಗ್ನೀತ್ ॥ ಭ್ರಾಷ್ಟ್ರಾಗ್ನ್ಯೋರಿಂಧೇ । ಪಾ. ೬-೩-೭೦-೬ । ಇತಿ ಮುಮ್ ॥ ಗ್ರಾವಗ್ರಾಭಃ । ಗ್ರಾವ್ಣಃ ಸ್ತುತ್ಯಾ ಗೃಹ್ಣಾತೀತಿ ಗ್ರಾವಸ್ತುತ್ ॥ ಕರ್ಮಣ್ಯಣ್ ॥ ಉತಾಪಿ ಚ ಶಂಸ್ತಾ ಪ್ರಶಾಸ್ತಾ । ಸುವಿಪ್ರ ಇತಿ ಮೇಧಾವಿನಾಮ । ಶೋಭನಮೇಧೋಪೇತೋ ಬ್ರಹ್ಮೋಚ್ಯತೇ । ಬ್ರಹ್ಮಾ ತ್ವೋ ವದತಿ ಜಾತವಿದ್ಯಾಮಿತ್ಯತ್ರ ಬ್ರಹ್ಮೈಕೋ ಜಾತೇ ಜಾತೇ ವಿದ್ಯಾಂ ವದತಿ ಬ್ರಹ್ಮಾ ಸರ್ವವಿದ್ಯಃ ಸರ್ವಂ ವೇದಿತುಮರ್ಹತಿ । ನಿ. ೧-೮ । ಇತ್ಯುಕ್ತತ್ವಾದ್ಬ್ರಹ್ಮೈವ ಸುವಿಪ್ರಶಬ್ದೇನಾಭಿಧೇಯಃ । ಸ ಚಾನುಕ್ತರ್ತ್ವಿಗುಪಲಕ್ಷಕಃ । ಏತೇ ಸರ್ವೇ ತೇನ ಪ್ರಸಿದ್ಧೇನ ಸ್ವರಂಕೃತೇನ ಸುಷ್ಠ್ವರಣೀಯಂ ಕೃತೇನ ಸ್ವಲಂಕೃತೇನ ವೋಚ್ಚಾರಸೌಷ್ಠವಾದಿನಾ ಸುಷ್ಠು ಸಂಪಾದಿತೇನ ಸ್ವಿಷ್ಟೇನ ಸುಷ್ಠ್ವಿಷ್ಟೇನ ಯಜ್ಞೇನ ವಕ್ಷಣಾ ಅಭಿತೋ ಘೃತಕುಲ್ಯಾದೀನ್ ಪ್ರವಹಣಸ್ವಭಾವಾಃ ಪ್ರಸಿದ್ಧಾ ನದೀರ್ವಾ ಪೃಣಧ್ವಂ । ಸರ್ವತಃ ಪೂರಯತ । ಯಜ್ಞಂ ಸಮ್ಯಗ್ನಿರ್ವರ್ತ್ಯ ಫಲಂ ಸಾಧಯತೇತ್ಯರ್ಥಃ ॥

ಪ್ರತಿಪದಾರ್ಥ

ಹೋತಾ—ದೇವತೆಗಳನ್ನು ಆಹ್ವಾನಿಸುವ ಹೋತೃವೂ । ಗ್ರಾವಗ್ರಾಭಃ—ಸೋಮಲತೆಯನ್ನು ಜಜ್ಜುವ ಗ್ರಾವಾಣವೆಂಬ ಕಲ್ಲುಗಳನ್ನು ಸ್ತುತಿಸುವ ಋತ್ವಿಕ್ಕೂ । ಆವಯಾಃ—ಅಭಿಮುಖವಾಗಿ ಅಗ್ನಿಗೆ ಹವಿಸ್ಸುಗಳನ್ನು ಅರ್ಪಿಸುವವನೂ । ಅಗ್ನಿಮಿಂಧಃ—ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವ ಆಗ್ನೀಧ್ರನೆಂಬ ಋತ್ವಿಕ್ಕೂ । ಅಧ್ವರ್ಯುಃ—ಅಧ್ವರ್ಯುವೆಂಬ ಋತ್ವಿಕ್ಕೂ । ಉತ—ಮತ್ತು । ಶಂಸ್ತಾ—ಪ್ರಶಾಸ್ತೃವೂ । ಸುವಿಪ್ರಃ—ಮೇಧಾವಿಯಾದ ಬ್ರಹ್ಮನೂ । ತೇನ—ಪ್ರಸಿದ್ಧವಾದುದೂ । ಸ್ವರಂಕೃತೇನ—ಶ್ರೇಷ್ಠವಾಗಿ ಅಲಂಕೃತವಾದದ್ದೂ । ಸ್ವಿಷ್ಟೇನ-ಶ್ರೇಷ್ಠವಾಗಿ ಆಹುತ್ಯರ್ಪಣೆಯನ್ನು ಮಾಡಲ್ಪಟ್ಟುದೂ ಆದ । ಯಜ್ಞೇನ—ಯಜ್ಞದಿಂದ । ವಕ್ಷಣಾ—ಪ್ರವಹಿಸತಕ್ಕ ಘೃತಕುಲ್ಯಾದಿಗಳನ್ನು । ಆ ಪೃಣಧ್ವಂ—ಸುತ್ತಲೂ ತುಂಬಿಹರಿಯುವಂತೆ ಮಾಡಲಿ ।

ಭಾವಾರ್ಥ

ದೇವತೆಗಳನ್ನು ಆಹ್ವಾನಿಸುವ ಹೋತೃವೂ, ಸೋಮಲತೆಯನ್ನು ಜಜ್ಜುವ ಗ್ರಾವಾಣಗಳನ್ನು ಸ್ತುತಿಸುವ ಋತ್ವಿಕ್ಕೂ ಅಗ್ನಿಗೆ ಅಭಿಮುಖವಾಗಿ ಹವಿಸ್ಸುಗಳನ್ನು ಅರ್ಪಿಸುವವನೂ, ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವವನೂ ಆದ ಅಧ್ವರ್ಯುವೆಂಬ ಋತ್ವಿಕ್ಕೂ ಮತ್ತು ಪ್ರಶಾಸ್ತೃವೂ, ಮೇಧಾವಿಯಾದ ಬ್ರಹ್ಮನೂ, ಸಹ ಪ್ರಸಿದ್ಧವಾದುದೂ, ಶ್ರೇಷ್ಠವಾಗಿ ಅಲಂಕೃತವಾದುದ್ದೂ, ಶ್ರೇಷ್ಠವಾದ ಆಹುತ್ಯರ್ಪಣೆಯನ್ನು ಮಾಡಲ್ಪಟ್ಟುದೂ ಆದ ಯಜ್ಞದಿಂದ ಪ್ರವಹಿಸತಕ್ಕ ಘೃತಕುಲ್ಯಾದಿಗಳನ್ನು ಸುತ್ತಲೂ ತುಂಬಿ ಹರಿಯುವಂತೆ ಮಾಡಲಿ.

## English Translation

The innoker of the gods, the minister of the rite, the offerer of the oblation, the kindler of the fire, the bruiser of the Soma plant, the director of the ceremony, the sage (superintendent of the whole); do you replenish the rivers by this well-ordered, well conducted, sacrifice.

॥ ವಿಶೇಷವಿಷಯಗಳು ॥

ಇದು ಯಜ್ಞಫಲದ ಸ್ವರೂಪವನ್ನು ವರ್ಣಿಸುತ್ತದೆ. ಆದರೆ ಇಲ್ಲಿ ವರ್ಣಿತವಾದ ಫಲಕ್ಕೆ ಸಾಧನವಾದ ಕರ್ತವ್ಯಜ್ಞಾನವನ್ನೂ ತಿಳಿಸುತ್ತದೆ. ಹೋತ್ರಾದಿಗಳು ಅವರವರ ಕರ್ತವ್ಯವನ್ನು ಲೋಪವಿಲ್ಲದೇ ನೆರವೇರಿಸಿದರೆ ಫಲವು ಸಿದ್ಧವೆಂದು ಹೇಳಿದೆ.

ಹೋತಾ—ಮುಖ್ಯವಾದ ನಾಲ್ಕು ಋತ್ವಿಕ್ಕುಗಳಲ್ಲಿ ಇವನು ಋಙ್ಮಂತ್ರಗಳನ್ನು ಪಠಿಸಿ ದೇವತೆಗಳಿಗೆ ಆಹ್ವಾನವನ್ನು ಕೊಡತಕ್ಕವನು. ಇವನ ಕರ್ತವ್ಯವನ್ನು ಐತರೇಯಬ್ರಾಹ್ಮಣದಲ್ಲಿ ಈ ರೀತಿಯಲ್ಲಿ ವಿವರಿಸಿದೆ—

> ತದಾಹುರ್ಯದನ್ಯೋ ಜುಹೋತ್ಯಥ ಯೋಽನು ಚಾಹ ಯಜತಿ ಚ ಕಸ್ಮಾತ್ತಂ ಹೋತೇತ್ಯಾಚಕ್ಷತ ಇತಿ । ಯದ್ವಾವ ಸ ತತ್ರ ಯಥಾಭಾಜನಂ ದೇವತಾ ಅಮುಮಾವಹಾಮುಮಾವಹೇತ್ಯಾವಾಹಯತಿ ತದೇವ ಹೋತುರ್ಹೋತೃತ್ವಂ ಹೋತಾ ಭವತಿ ॥ ಹೋತೇತ್ಯೇನಮಾಚಕ್ಷತೇ ಯ ಏವಂ ವೇದ ।
>
> (ಐ. ಬ್ರಾ. ೧-೨)

ಅನುವಾಕ್ಯ ಮತ್ತು ಯಾಜ್ಯಮಂತ್ರವನ್ನು ಪಠಿಸುವವನಿಗೆ ಹೋತೃವೆಂದು ಏತಕ್ಕೆ ಕರೆಯುತ್ತಾರೆಂದು ಕೇಳಿದರೆ ದೇವತೆಗಳಿಗೆ ಅವನು ಮಂತ್ರರೂಪವಾದ ಆಹ್ವಾನವನ್ನಿತ್ತು ಅವರವರ ಸ್ಥಾನಗಳಲ್ಲಿ ಬಂದು ಕುಳಿತುಕೊಳ್ಳುವಂತೆ ನಿರ್ದೇಶಿಸುತ್ತಾನೆ. ಆವಹಾ (ಎಂದರೆ ಹತ್ತಿರಕ್ಕೆ ಕರೆದುಕೊಂಡುಬರುವುದು) ಎಂಬುದರಿಂದ ಹೋತೃವೆಂದಾಗಿದೆ. ದೇವತಾಸ್ವರೂಪವನ್ನರಿತು ಆಯಾ ದೇವತೆಗೆ ತಕ್ಕ ಆಹ್ವಾನವನ್ನು ಕೊಡತಕ್ಕ ಮಂತ್ರಜ್ಞಾನವಿರುವವನು ಹೋತೃವೆಂದು ಕರೆಯಲ್ಪಡುತ್ತಾನೆ.

ಗ್ರಾವಗ್ರಾಭಃ—ಗ್ರಾವ್ಣಃ ಸ್ತುತ್ಯಾ ಗೃಹ್ಣಾತೀತಿ ಗ್ರಾವಸ್ತುತ್ ।
ಮೈತ್ರಾವರುಣ, ಅಚ್ಛಾವಾಕ, ಗ್ರಾವಸ್ತುತ್ ಎಂದು ಹೋತೃವಿಗೆ ಸಹಾಯಕರಾದ ಮೂರು ಋತ್ವಿಕ್ಕುಗಳಲ್ಲಿ ಇವನೊಬ್ಬನು.

ಪ್ರೈತೇ ವದಂತು ಪ್ರ ವಯಂ ವದಾಮ ಗ್ರಾವಭ್ಯೋ ವಾಚಂ ವದತಾ ವದದ್ಭ್ಯಃ ।
ಯದದ್ರಯಃ ಪರ್ವತಾಃ ಸಾಕಮಾಶವಃ ಶ್ಲೋಕಂ ಘೋಷಂ ಭರಥೇಂದ್ರಾಯ ಸೋಮಿನಃ ॥

(ಋ. ಸಂ. ೧೦-೯೪-೧)

ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವನ್ನೂ

ಆ ವ ಋಂಜಸ ಊರ್ಜಾಂ ವ್ಯುಷ್ಟಿಷ್ವಿಂದ್ರಂ ಮರುತೋ ರೋದಸೀ ಅನಕ್ತನ ॥
ಉಭೇ ಯಥಾ ನೋ ಅಹನೀ ಸಚಾಭುವಾ ಸದಃ ಸದೋ ವರಿವಸ್ಯಾತ ಉದ್ಭಿದಾ ॥

(ಋ. ಸಂ. ೧-೭೬-೧)

ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವನ್ನೂ

ಪ್ರ ವೋ ಗ್ರಾವಾಣಃ ಸವಿತಾ ದೇವಃ ಸುವತು ಧರ್ಮಣಾ । ಧೂರ್ಷು ಯುಜ್ಯಧ್ವಂ ಸುನುತ ॥
(ಋ. ಸಂ. ೧೦-೧೭೫-೧)

ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವನ್ನೂ ಸಹ ಮಾಧ್ಯಂದಿನಸವನದ ಕಾಲದಲ್ಲಿ ಪಠಿಸಿ ಸೋಮರಸವನ್ನು ಹಿಂಡಲು ಸಹಾಯವನ್ನು ಮಾಡತಕ್ಕ ಋತ್ವಿಕ್ಕು ಎಂದು ಇವನ ಕರ್ತವ್ಯವನ್ನು ತಿಳಿಸಿದೆ.

ಈ ಗ್ರಾವಸ್ತುತ್ತಿನ ಅವಶ್ಯಕತೆಯನ್ನೂ ಇವನ ಕರ್ತವ್ಯವನ್ನೂ ವಿವರಿಸತಕ್ಕ ಒಂದು ಸನ್ನಿವೇಶವು ಕಥಾ ರೂಪದಲ್ಲಿ ಐತರೇಯಬ್ರಾಹ್ಮಣದಲ್ಲಿ ಹೇಳಿದೆ.

ದೇವಾ ಹ ವೈ ಸರ್ಪಚರೌ ಸತ್ರಂ ನಿಷೇದಸ್ತೇ ಹ ಪಾಪ್ಮಾನಂ ನಾಪಜಘ್ನಿರೇ ತಾನ್ಹೋವಾ-ಚಾರ್ಬುದಃ ಕಾದ್ರವೇಯಃ ಸರ್ಪ ಋಷಿರ್ಮಂತ್ರಕೃದೇಕಾ ವೈ ವೋ ಹೋತ್ರಾऽಕೃತಾ ತಾಂ ವೋऽಹಂ ಕರವಾಣ್ಯಥ ಪಾಪ್ಮಾನಮಪಹನಿಷ್ಯಥ್ವ ಇತಿ ತೇ ಹ ತಥೇತ್ಯೂಚುಸ್ತೇಷಾಂ ಹ ಸ್ಮ ಸ ಮಧ್ಯಂದಿನೇ ಮಧ್ಯಂದಿನ ಏವೋಪೋದಾಸರ್ಪದ್ಗ್ರಾವ್ಣೋऽಭಿಷ್ಟೌತಿ । ತಸ್ಮಾನ್ಮಧ್ಯಂ-ದಿನೇ ಮಧ್ಯಂದಿನ ಏವ ಗ್ರಾವ್ಣೋऽಭಿಷ್ಟುವಂತಿ ತದನುಕೃತಿ ಸ ಹ ಸ್ಮ ಯೇನೋಪೋದಾ-ಸರ್ಪತ್ತದ್ಧಾಪ್ಯೇತರ್ಹ್ಯರ್ಬುದೋದಾಸರ್ಪಣೀ ನಾಮ ಪ್ರಪದಸ್ತಿ ।

(ಐ. ಬ್ರಾ. ೬-೧)

ದೇವತೆಗಳು ಒಂದುಸಲ ಸರ್ವಚರುವೆಂಬ ಸತ್ರವನ್ನಾರಂಭಿಸಿದರು. ಆಗ ಅವರು ತಮ್ಮ ದೋಷವನ್ನು ನಾಶಮಾಡಿಕೊಳ್ಳಲಾಗಲಿಲ್ಲ. ಆಗ ಕದ್ರುಪುತ್ರನೂ, ಮಂತ್ರದ್ರಷ್ಟೃವೂ ಸರ್ಪಋಷಿಯೂ ಆದ ಅರ್ಬುದನು ಬಂದು ಹೋತೃವಿನಿಂದ ನೆರವೇರಿಸಲ್ಪಡಬೇಕಾದ ಮುಖ್ಯವಾದ ಒಂದು ಕರ್ಮವನ್ನು ನೀವು ಮರೆತಿದ್ದೀರಿ ನಿಮಗಾಗಿ ನಾನು ಅದನ್ನು ನೆರವೇರಿಸಿಕೊಡುತ್ತೇನೆ. ಆಗ ನೀವು ನಿಮ್ಮ ದೋಷವನ್ನು ನಾಶಮಾಡಲು ಸಮರ್ಥರಾಗುತ್ತೀರಿ ಎಂದಾಗ ದೇವತೆಗಳು ಅದಕ್ಕೊಪ್ಪಿದರು. ಅರ್ಬುದನು ಪ್ರತಿಸಲವೂ ಮಾಧ್ಯಂದಿನ ಸವನದವೇಳೆಗೆ ಸರಿಯಾಗಿ ಬಂದು ಸೋಮಪೇಷಣದಕಾಲದಲ್ಲಿ ಅಭಿಷವಮಂತ್ರವನ್ನು ಪಠಿಸುತ್ತಿದ್ದನು. (ಸರ್ಪರಾಜನು ಬರುತ್ತಿದ್ದ ಮಾರ್ಗಕ್ಕೆ ಅರ್ಬುದ ಸರ್ಪಣೀ ಎಂಬ ಹೆಸರಾಯಿತು).

> ತಾನ್ಹ ರಾಜಾ ಮದಯಾಂಚಕಾರ ತೇ ಹೋಚುರಾಶೀವಿಷೋ ವೈ ನೋ ರಾಜಾನಮವೇಕ್ಷತೇ ಹಂತಾಸ್ಯೋಽಕ್ಷ್ಣೀಽಪೇಣಾಹ್ಯಾವಪಿನಹ್ಯಾಮೇತಿ ತಥೇತಿ ತಸ್ಯ ಹೋಕ್ಷ್ಣೀಽಪೇಣಾಹ್ಯಾವಪಿನಹ್ಯುಸ್ತಸ್ಮಾದುಕ್ಷ್ಣೀಽಷಮೇವ ಪರ್ಯಸ್ಯ ಗ್ರಾವ್ಣೋಽಭಿಷ್ಟುವಂತಿ ತದನುಕೃತಿ। ತಾನ್ಹ ರಾಜಾ ಮದಯಾಮೇವ ಚಕಾರ ತೇ ಹೋಚುಃ ಸ್ವೇನ ವೈ ನೋ ಮಂತ್ರೇಣ ಗ್ರಾವ್ಣೋಽಭಿಷ್ಟೌತಿ ಹಂತಾಸ್ಯಾನ್ಯಾಭಿರ್ಋಗ್ಭಿರ್ಮಂತ್ರಮಾಪೃಣಚಾಮೇತಿ ತಥೇತಿ ತಸ್ಯ ಹಾನ್ಯಾಭಿರ್ಋಗ್ಭಿರ್ಮಂತ್ರಮಾಸಪೃಚುಸ್ತತೋ ಹೈನಾನ್ನ ಮದಯಾಂಚಕಾರ ತದ್ಯದಸ್ಯಾಭಿರ್ಋಗ್ಭಿರ್ಮಂತ್ರಮಾಪೃಂಚಂತಿ ಶಾಂತ್ಯಾ ಏವ । ತೇ ಹ ಪಾಪ್ಮಾನಮಪಜಘ್ನಿರೇ ಕೇಷಾಮನ್ವಪಹತಿಂ ಸರ್ಪಾಃ ಪಾಪ್ಮಾನಮಪಜಘ್ನಿರೇ ತ ಏತೇಽಪಹತಪಾಪ್ಮಾನೋ ಹಿತ್ವಾ ಪೂರ್ವಾಂ ಜೀರ್ಣಾಂ ತ್ವಚಂ ನವಯೈವ ಪ್ರಯಂತಿ ॥
>
> (ಐ. ಬ್ರಾ. ೬ ೧)

ಆಗ ಸೋಮರಾಜನು ದೇವತೆಗಳನ್ನು ಪಾನಮಾಡುವಂತೆ ಮಾಡಿದನು. ಆಗ ಅವರು "ವಿಷಸರ್ಪವು ನಮ್ಮ ರಾಜನನ್ನು ನೋಡುತ್ತಿರುವುದರಿಂದ ಅದರ ಕಣ್ಣನ್ನು ಕಟ್ಟಿಬಿಡೋಣ" ಎಂದು ಹಾಗೆಯೇ ಮಾಡಿದರು. [ಆದುದರಿಂದಲೇ ಸಾಮಾನ್ಯವಾಗಿ ಈ ಸ್ತುತಿಯನ್ನು ಪಠಿಸುವ ಕಾಲಗಳಲ್ಲೆಲ್ಲಾ ಸರ್ಪಕ್ಕೆ ದೇವತೆಗಳನ್ನು ಮಾಡಿದುದನ್ನು ಅನುಕರಿಸುವುದಕ್ಕಾಗಿ ಕಣ್ಣುಗಳನ್ನು ಕಟ್ಟಿಕೊಳ್ಳುತ್ತಾರೆ.] ಆಗ ಸೋಮರಾಜನು ಅವರನ್ನು ಪಾನಮಾಡುವಂತೆ ಮಾಡಿದನು. ಆಗ ಸರ್ಪವು ಪಠಿಸುವ ಮಂತ್ರಗಳೊಂದಿಗೆ ಇತರ ಮಂತ್ರಗಳನ್ನೂ ಪಠಿಸುವಂತೆ ಯೋಜಿಸಿದರು. ಆಗ ಮಿಶ್ರಮಾಡಿ ಎರಡು ಮಂತ್ರಗಳನ್ನೂ ಒಟ್ಟಿಗೆ ಪಠಿಸಿದಾಗ ಅವರ ಪಾಪವು ಪರಿಹಾರವಾಯಿತು. ಇದು ಗ್ರಾವಸ್ತುತಿಯ ಮೂಲವು. ಇದನ್ನು ಮಾಧ್ಯಂದಿನ ಸವನದಕಾಲಗಳಲ್ಲಿ ಪಠಿಸುವವನಿಗೆ ಗ್ರಾವಸ್ತುತ್ತೆಂದು ಹೆಸರು. ಇವನು ಹೋತೃವಿನ ಸಹಾಯಕನು.

ಅಧ್ವರ್ಯುಃ— ಅಧ್ವರ್ಯುರಧ್ವರಯುರಧ್ವರಂ ಯುನಕ್ತ್ಯಧ್ವರಸ್ಯ ನೇತಾಧ್ವರಂ ಕಾಮಯತ ಇತಿ ವಾ । ಯಜ್ಞವನ್ನು ನಿರ್ವಹಿಸುತ್ತಾನೆಂದಾಗಲಿ, ಯಜ್ಞಕ್ಕೆ ನೇತೃವಾಗಿರುವುದರಿಂದಾಗಲಿ, ಯಜ್ಞವನ್ನು ಭಕ್ತಿಯಿಂದ ಸೇವಿಸುವುದರಿಂದಾಗಲಿ ಅಧ್ವರ್ಯುವೆಂಬ ಹೆಸರು ಪ್ರಸಿದ್ಧವಾಗಿದೆ. (ನಿ. ೧. ೮) ಯಜ್ಞಭೂಮಿಯನ್ನಳೆಯುವುದೂ, ವೇದಿಯನ್ನು ನಿರ್ಮಿಸುವುದೂ, ಯಜ್ಞಪಾತ್ರೆಗಳನ್ನು ಸಿದ್ಧಪಡಿಸುವುದೂ, ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವುದೂ ಇವಕ್ಕೆ ಅನುಕೂಲವಾದ ಇತರ ಕೆಲಸಗಳು ಅಧ್ವರ್ಯುವು ಮಾಡತಕ್ಕವು. ಈ ಕಾರ್ಯಗಳನ್ನು ಮಾಡುವಾಗಲೆಲ್ಲಾ ಇವನು ಆಯಾ ಮಂತ್ರವನ್ನು ಪಠಿಸಬೇಕು.

ಅವಯಾಃ – ಆಭಿಮುಖ್ಯೇನ ಹವಿಷಾಂ ಗಮಯಿತಾ ಅಧ್ವರ್ಯೋರ್ವಿಶೇಷಣಮೇತತ್ । ಅಗ್ನಿಗಭಿಮುಖವಾಗಿದ್ದು ಹವಿಸ್ಸನ್ನರ್ಪಿಸುವವನು. ಇದು ಅಧ್ವರ್ಯುವಿಗೆ ವಿಶೇಷಣವಾಗಿದೆಯೆಂದು ಒಂದುವಿಧವಾಗಿಯೂ; ಅಥವಾ ಆಭಿಮುಖ್ಯೇನ ಅವಯಷ್ಟಾ । ಪ್ರತಿಪ್ರಸ್ಥಾತಾ ಉಚ್ಯತೇ । ಪ್ರತಿಪ್ರಸ್ಥಾತೃ, ನೇಷ್ಟೃ, ಉನ್ನೇತೃ ಎಂಬ ಅಧ್ವರ್ಯುವಿನ ಸಹಾಯಕರಲ್ಲಿ ಮೊದಲನೆಯವನು ಪ್ರತಿಪ್ರಸ್ಥಾತೃವೆಂದೂ ಆಗಬಹುದೆಂದು ಇನ್ನೊಂದು ವಿಧವಾಗಿಯೂ ಅರ್ಥಮಾಡಿದೆ. ಈ ಮಂತ್ರವು ತೈತ್ತಿರೀಯಸಂಹಿತೆಯಲ್ಲಿಯೂ ಇರುವುದು. (೪. ೬. ೮) ಇದಕೆ ಪರಿವರ್ತನವನ್ನು ಹೇಳುವಾಗ Keith ಎಂಬುವನು ಈ ಪದಕ್ಕೆ ಈ ರೀತಿ ವಿವರಣೆಯನ್ನು ಹೇಳುತ್ತಾನೆ.

The origin of ಅವಯಾಃ is uncertain. The tradition here of the ಪದ derives it from ಆ-ವಯಾಃ but ಯಜ್ or ಯಾ have also been in the last part, what priest of the later ritual is meant is uncertain.

(Taittiriya Sampita I Vol. H, O. S. P. 378

ಸಾಯಣರು ಎರಡನೆಯ ಪರ್ಯಾಯವಾಗಿ ವಿವರಿಸಿರುವಂತೆ ಪ್ರತಿ-ಪ್ರಸ್ಥಾತೃವೇ ಇರಬೇಕು.

ಅಗ್ನಿಮಿಂಧಃ—ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವವನು ಅಧ್ವರ್ಯುವಾದುದರಿಂದ ಇದೂ ಅಧ್ವರ್ಯುವಿಗೇ ವಿಶೇಷಣವಾಗಿರಬೇಕು.

ಶಂಸ್ತಾ—ಶಂಸ್ತಾ ಎಂದರೆ ಪ್ರಶಾಸ್ತೃವೆಂಬ ಋತ್ವಿಜನು.

ಸುವಿಪ್ರಃ— ವಿಪ್ರ ಇತಿ ಮೇಧಾವಿನಾಮ । ಶೋಭನಮೇಧೋಪೇತೋ ಬ್ರಹ್ಮೋಚ್ಯತೇ । ಶ್ರೇಷ್ಠವಾದ ಬುದ್ಧಿಯುಳ್ಳ ಬ್ರಹ್ಮ ನೆಂಬ ಋತ್ವಿಕ್ಕಿನ ಪರ್ಯಾಯಪದವಾಗಿದೆಯೆಂದು ಸಾಯಣರು ವಿವರಿಸಿ,

ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್ ಗಾಯತ್ರಂ ತ್ವೋ ಗಾಯತಿ ಶಕ್ವರೀಷು ।
ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ ಯಜ್ಞಸ್ಯ ಮಾತ್ರಾಂ ವಿ ಮಿಮೀತೆ ಉ ತ್ವಃ ॥

(ಋ. ಸಂ. ೧೦. ೭೧-೧೧)

ಎಂಬ ಋಕ್ಕನ್ನುದಹರಿಸಿ ಅದಕ್ಕೆ " ಬ್ರಹ್ಮೈಕೋ ಜಾತೇ ಜಾತೇ ವಿದ್ಯಾಂ ವದತಿ ಬ್ರಹ್ಮಾ ಸರ್ವವಿದ್ಯಃ ಸರ್ವಂ ವೇದಿತುಮರ್ಹತಿ । ಬ್ರಹ್ಮನು ಸಕಲಶಾಸ್ತ್ರಗಳನ್ನೂ ಪ್ರತಿಪಾದಿಸುತ್ತಾನೆ; ಅವನು ಸರ್ವಜ್ಞನು, ಜ್ಞಾನದಿಂದ ಸರ್ವಾಧಿಕನು, ಇತ್ಯಾದಿಯಾಗಿ ವಿವರಿಸಿರುವ ನಿರುಕ್ತವಾಕ್ಯದ ಆಧಾರದ ಮೇಲೆ (ನಿ. ೧. ೮) ಸುವಿಪ್ರಃ ಎನ್ನುವುದಕ್ಕೆ ಬ್ರಹ್ಮನೆಂದು ಅರ್ಥಮಾಡಿದ್ದಾರೆ.

ವಕ್ಷಣಾ—ಈ ಪದವು ನದೀನಾಮಗಳಲ್ಲಿ ಪಠಿತವಾಗಿದೆ- (ನಿ ೨. ೨೪), ಇಲ್ಲಿ ನದಿಯಂತೆ ಪ್ರವಹಿಸುವ ಘೃತಾದಿಗಳ ಪ್ರವಾಹವನ್ನು ಎಂದರ್ಥ. ಎಂದರೆ ಯಜ್ಞವನ್ನು ಸಾಂಗವಾಗಿ ನೆರವೇರಿಸಿ ಅದರ ಪೂರ್ಣಫಲವನ್ನು ಪಡೆಯಿರಿ ಎಂದರ್ಥ.

ವ್ಯಾಕರಣಪ್ರಕ್ರಿಯಾ

ಅಧ್ವರ್ಯುಃ—ಅಧ್ವರಂ ಆತ್ಮನಃ ಇಚ್ಛತೀತಿ ಅಧ್ವರ್ಯುಃ ಸುಪ ಆತ್ಮನಃ ಕ್ಯಚ್ (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಕವ್ಯಧ್ವರ—(ಪಾ. ಸೂ. ೭-೪-೩೯) ಎಂಬುದರಿಂದ ಕ್ಯಚ್ ಪರವಾದಾಗ ಅಕಾ

ರಕ್ಕೆ ಲೋಪ. ಕ್ಯಾಚ್ಛಂದಸಿ (ಪಾ. ಸೂ. ೩-೨-೧೭೦) ಎಂಬುದರಿಂದ ಉ ಪ್ರತ್ಯಯ ಆತೋ ಲೋಪಃ ಎಂಬುದರಿಂದ ಕ್ಯಚಿನ ಅಕಾರಕ್ಕೆ ಲೋಪ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಆವಯಾಃ—ಆಙ್ ಉಪಸರ್ಗ. ವೀ ಗತ್ಯಾದಿಷು. ಧಾತು. ಗತಿಕಾರಕೋಪ-(ಉ. ಸೂ. ೪.೬೬೬) ಎಂಬುದರಿಂದ ಅಸುನ್ ಪ್ರತ್ಯಯ. ಪೂರ್ವಪದಪ್ರಕೃತಿಸ್ವರ ಬರುತ್ತದೆ ಅಸುನ್ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಅಯಾದೇಶ. ಅಥವಾ ಯಜ ಧಾತು. ಅದಕ್ಕೆ ಅವೇ ಯಜಃ (ಪಾ. ಸೂ. ೩-೨-೭೨) ಎಂಬುದರಿಂದ ಣ್ವಿನ್ ಪ್ರತ್ಯಯ. ಶ್ವೇತವಹಾದೀನಾಂ ಡಸ್‌ಪದಸ್ಯೇತಿವಕ್ತವ್ಯಮ್ ಎಂಬ ವಚನದಿಂದ ಅದಕ್ಕೆ ಡಸ್. ಡಿತ್ತಾದುದರಿಂದ ಟಿ (ಅಙ್)ಗೆ ಲೋಪ. ಅವಾಪ್ಯೋರುಪಸರ್ಗಯೋಃ ಎಂಬ ಭಾಗುರಿ ವಚನದಿಂದ ಅವ ಉಪಸರ್ಗದ ಅಕಾರಕ್ಕೆ ಲೋಪ. ವಯಸ್ ಶಬ್ದವಾಗುತ್ತದೆ. ಪ್ರಥಮಾಏಕವಚನಾಂತರೂಪ.

ಅಗ್ನಿಮಿಂಧಃ—ಞಿಇಂಧೀ ದೀಪ್ತೌ. ಧಾತು. ಅಚ್ ಪ್ರತ್ಯಯ. ಭ್ರಾಷ್ಟ್ರಾಗ್ನ್ಯೋರಿಂಧೇ (ಪಾ. ಸೂ. ೬-೩-೭೦-೬) ಎಂಬುದರಿಂದ ಪೂರ್ವಕ್ಕೆ ಮುಮಾಗಮ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

ಗ್ರಾವಗ್ರಾಭಃ—ಗ್ರಾವ್ಣಃ ಗ್ರಾಭಃ ಗ್ರಾವಗ್ರಾಭಃ. ಗ್ರಹ ಉಪಾದಾನೇ ಧಾತು. ಕರ್ಮಣ್ಯಣ್ (ಪಾ.ಸೂ. ೩-೨-೧) ಎಂಬುದರಿಂದ ಅಣ್ ಪ್ರತ್ಯಯ. ಅತಉಪಧಾಯಾಃ (ಪಾ. ಸೂ. ೭-೨-೧೧೬) ಸೂತ್ರದಿಂದ ಉಪಧಾ ವೃದ್ಧಿ. ಹೃಗ್ರಹೋರ್ಭಶ್ಛಂದಸಿ ಎಂಬ ವಚನದಿಂದ ಧಾತು ಹಕಾರಕ್ಕೆ ಭತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

ಶಂಸ್ತಾ—ಶಂಸು ಸ್ತುತೌ ಧಾತು. ಕರ್ತರಿಯಲ್ಲಿ ತೃನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಸ್ವರಂಕೃತೇನ—ಸು+ಅಲಂಕೃತೇನ ಎಂದಿರುವಾಗ ವಾಲಮೂಲ—(ಪಾ. ಸೂ. ೧–೨೯) ಎಂಬುದರಿಂದ ವಿಕಲ್ಪವಾಗಿ ಲತ್ವವಿಧಾನ ಮಾಡಿರುವುದರಿಂದ ರೇಫ ಶ್ರವಣವಾಗಿದೆ. ಗತಿರನಂತರಃ (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಸು) ಉದಾತ್ತಸ್ವರ ಬರುತ್ತದೆ. ಸ್ವಿಷ್ಟೇನ ಎಂಬಲ್ಲಿಯೂ ಕ್ತಾಂತಪದ ಪರದಲ್ಲಿರುವುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ

ವಕ್ಷಣಾಃ—ವಕ್ಷ ರೋಷೇ ಧಾತು. ಕ್ರುಧಮಂಡಾರ್ಥೇಭ್ಯಶ್ಚ (ಪಾ. ಸೂ. ೩-೨-೧೫೧) ಎಂಬುದರಿಂದ ಯುಚ್ ಪ್ರತ್ಯಯ. ಯುವೋರನಾಕೌ (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. ವ್ಯತ್ಯಯದಿಂದ ಚಿತ್ ಸ್ವರವು ಬಾಧಿತವಾಗಿ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ಪೃಣಧ್ವಮ್—ಪೄ ಪಾಲನಪೂರಣಯೋಃ ಧಾತು. ಕ್ರ್ಯಾದಿ. ಲೋಟ್ ಮಧ್ಯಮಪುರುಷಬಹುವಚನದಲ್ಲಿ ಸವಾಭ್ಯಾಂವಾಮೌ ಎಂಬುದರಿಂದ ಟಿಗೆ ಅಮಾದೇಶ. ಶ್ನಾ ವಿಕರಣ. ಪ್ವಾದೀನಾಂ ಹ್ರಸ್ವಃ ಎಂಬುದರಿಂದ ಧಾತುವಿಗೆ ಹ್ರಸ್ವ. ತಿಙಂತನಿಘಾತಸ್ವರ ಬರುತ್ತದೆ. ॥ ೫ ॥



ಸಂಹಿತಾಪಾಠಃ

ಯೂಪವ್ರಸ್ಕಾ ಉತ ಯೇ ಯೂಪವಾಹಾಶ್ಚಷಾಲಂ ಯೇ ಅಶ್ವಯೂ-
ಪಾಯ ತಕ್ಷತಿ ।
ಯೇ ಚಾರ್ವತೇ ಪಚನಂ ಸಂಭರಂತ್ಯುತೋ ತೇಷಾಮಭಿಗೂರ್ತಿರ್ನ
ಇನ್ವತು ॥ ೬ ॥

ಪದಪಾಠಃ

ಯೂಪಽವ್ರಸ್ಕಾಃ । ಉತ । ಯೇ । ಯೂಪಽವಾಹಾಃ । ಚಷಾಲಂ । ಯೇ । ಅಶ್ವಽಯೂಪಾಯ ।
ತಕ್ಷತಿ ।
ಯೇ । ಚ । ಅರ್ವತೇ । ಪಚನಂ । ಸಂಽಭರಂತಿ । ಉತೋ ಇತಿ । ತೇಷಾಂ । ಅಭಿಽಗೂರ್ತಿಃ ।
ನಃ । ಇನ್ವತು ॥ ೬ ॥

ಸಾಯಣಭಾಷ್ಯಂ

ಯೂಪವ್ರಸ್ಕಾ ಯೂಪಾರ್ಹವೃಕ್ಷಸ್ಯ ವ್ರಶ್ಚನಕರ್ತಾರಶ್ಛೇತ್ತಾರಃ । ಉತ ಯೇ ಚ ಯೂಪವಾ-ಹಾಶ್ಛಿನ್ನಸ್ಯ ವೋಢಾರಃ । ಯೇ ಚ ಚಷಾಲಂ । ಯೂಪಸ್ಯೋಪರಿಸ್ಥಾಪ್ಯಂ ಯೂಪಾಗ್ರಭಾಗಂ ಚಷಾಲ-ಮಾಹುಃ । ತದ್ಯೇಽಶ್ವ ಯೂಪಾಯ ಬಂಧನಯೂಪಾಯ ತಕ್ಷತಿ ॥ ತಕ್ಷತೀತಿ ವಚನವ್ಯತ್ಯಯಃ ॥ ಸಾಧು ಸಂಪಾದಯಂತಿ । ಯೇ ಚಾರ್ವತೇಽರಣವತೇಽಶ್ವಾಯ ಪಚನಂ ಪಾಕಸಾಧನಂ ಕಾಷ್ಠಭಾಂಡಾದಿಕಂ ಸಂಭರಂತಿ । ಉತೋ ಅಪಿ ಚ ನೋಽಸ್ಮತ್ಸಂಬಂಧಿನಾಂ ತೇಷಾಮೃತ್ವಿಜಾಮಭಿಗೂರ್ತಿಃ ಸಂಕಲ್ಪಃ ಸರ್ವಥಾ ಕರಣೀಯಮಿತಿ ಬುದ್ಧಿರಿನ್ವತು । ವ್ಯಾಪ್ನೋತು ॥ ಇನ್ವತಿರ್ವ್ಯಾಪ್ತಿವಚನಃ ಇನ್ವತಿ ನನಕ್ಷೇತಿ ತದ್ವಚನೇಷು ಪಾಠಾತ್ ॥ ಯದ್ವಾ । ತೇಷಾಮಭಿಗೂರ್ತಿರ್ನೋಽಸ್ಮಾನಿನ್ವತು । ಯಾಗಂ ಸಾಧುಪಾರಂ ಪ್ರಾಪಯ್ಯ ಫಲೇನ ಯೋಜಯತ್ವಿತ್ಯರ್ಥಃ ॥

ಪ್ರತಿಪದಾರ್ಥ

ಯೇ—ಯಾರು । ಯೂಪವ್ರಸ್ಕಾಃ—ಯೂಪಕ್ಕೆ ಯೋಗ್ಯವಾದ ವೃಕ್ಷವನ್ನು ಛೇದಿಸುವರೋ । ಉತ—ಮತ್ತು । (ಯೇ—ಯಾರು) । ಯೂಪವಾಹಾಃ—(ಕತ್ತರಿಸಿದ) ಯೂಪವೃಕ್ಷವನ್ನು ಹೊತ್ತುಕೊಂಡು ಬರುವರೋ । ಯೇ—ಯಾರು । ಅಶ್ವಯೂಪಾಯ—ಅಶ್ವವನ್ನು ಕಟ್ಟತಕ್ಕ ಯೂಪಕ್ಕೆ । ಚಷಾಲಂ—ಯೂಪದ ಮೇಲು ಭಾಗಕ್ಕೆ ಸೇರಿಸತಕ್ಕ ಕೊಂಡಿಯನ್ನು । ತಕ್ಷತಿ—ಸಂಪಾದಿಸುತ್ತಾರೆಯೋ । ಯೇ—ಯಾರು । ಅರ್ವತೇ-ಯಜ್ಞಾಶ್ವ

ಕ್ಕಾಗಿ | ಪಚನಂ—ಪಾಕಸಾಧನವಾದ ಭಾಂಡಾದಿಗಳನ್ನು | ಸಂಭರಂತಿ—ಸಂಪಾದಿಸುತ್ತಾರೆಯೋ ಅವರ | ಅಭಿಗೂರ್ತಿಃ—ಶ್ರದ್ಧಾಯುತವಾದ ಬುದ್ಧಿಯು | ನಃ—ನಮ್ಮ (ಮತ್ತು) | ತೇಷಾಂ—ತಮಗೆ ಸಂಬಂಧಿಸಿದ ಋತ್ವಿಕ್ಕುಗಳ (ಇಷ್ಟಾರ್ಥಗಳನ್ನು) | ಇನ್ವತು—ಕೈ ಕೂಡುವಂತೆ ಮಾಡಲಿ

**ಭಾವಾರ್ಥ**

ಯಾರು ಯೂಪಕ್ಕೆ ಯೋಗ್ಯವಾದ ವೃಕ್ಷವನ್ನು ಛೇದಿಸುವರೋ, ಮತ್ತು ಯಾರು ಆ ವೃಕ್ಷವನ್ನು ಹೊತ್ತುಕೊಂಡು ಬರುವರೋ, ಅನಂತರ ಅಶ್ವಬಂಧನಕ್ಕಾಗಿ ಯಾರು ಆ ಯೂಪದ ಮೇಲೆ ನೆಡತಕ್ಕಕೊಂಡಿಯನ್ನು ಸಂಪಾದಿಸುವರೋ, ಯಾರು ಯಜ್ಞಾಶ್ವಕ್ಕಾಗಿ ಪಾಕಸಾಧನವಾದ ಭಾಂಡಾದಿಗಳನ್ನು ಸಿದ್ಧಪಡಿಸುವರೋ, ಅವರೆಲ್ಲರ ಶ್ರದ್ಧಾಯುತವಾದ ಬುದ್ಧಿಯು ನಮ್ಮ ಮತ್ತು ನಮಗೆ ಸಂಬಂಧಿಸಿದ ಋತ್ವಿಕ್ಕುಗಳ ಇಷ್ಟಾರ್ಥಗಳನ್ನು ಕೈಗೂಡವಂತೆ ಮಾಡಲಿ.

## English Translation

Whether they be those who cut the (sacrificial) post, or those who bear the post, or those who fasten the rings on the top of the post, to which horse (is bound), or those who prepare the vessels in which the food of the horse is dressed, let the exertions of them all fulfil our expectations.

**ವಿಶೇಷವಿಷಯಗಳು**

ತಕ್ಷತಿ--ತಕ್ಷತಿಃ ಕರೋತಿಕರ್ಮಾ | (ನಿ. ೪-೧೯) ಚಷಾಲವನ್ನು ಎಂದರೆ ಅಶ್ವವನ್ನು ಯೂಪಕ್ಕೆ ಕಟ್ಟಲು ಅದರ ಮೇಲಿನ ಕೊಂಡಿಯನ್ನು ಯಾರು ಪರಿಷ್ಕೃತವನ್ನಾಗಿ ಮಾಡಿ ಸಿದ್ಧಪಡಿಸುತ್ತಾರೋ ಅವರು ಎಂದರ್ಥ.

ಅಭಿಗೂರ್ತಿಃ—ಈ ಪದಕ್ಕೆ ಸಂಕಲ್ಪವೆಂದರ್ಥಮಾಡಿದ್ದಾರೆ. ವಿಧ್ಯುಕ್ತವಾದ ಕರ್ಮಗಳನ್ನು ಮಾಡಲೇಬೇಕೆಂಬ ಸದ್ಬುದ್ಧಿಯೂ ಕರ್ಮನಿಷ್ಠೆಯೂ ಸೂಚಿತವಾಗಿದೆ.

ಇನ್ವತಿ—ಇನ್ವತಿಃ ವ್ಯಾಪ್ತಿಕರ್ಮಾ (ನಿ. ೨-೧೮) ಯಾಗಂ ಸಾಧುಪಾರಂ ಪ್ರಾಪಯ್ಯ ಫಲೇನ ಯೋಜಯತ್ವಿತ್ಯರ್ಥಃ | ಅವರೆಲ್ಲರ ಶ್ರೇಷ್ಠವಾದ ಸಂಕಲ್ಪವು ನಮ್ಮ ಇಷ್ಟಾರ್ಥಗಳನ್ನು ನೆರವೇರುವಂತೆ ಮಾಡಲಿ ಎಂದು ತಾತ್ಪರ್ಯವು.

ಯೇ ಯೂಪವ್ರಸ್ಕಾಃ ಉತ ಯೇ ಯೂಪವಾಹಾಃ (ಉತ) ಯೇ ಅಶ್ವಯೂಪಾಯ ಚಷಾಲಂ ತಕ್ಷತಿ—ಈ ಋಕ್ಕಿನಲ್ಲಿ ಯೂಪಸ್ತಂಭವನ್ನು ನೆಡುವುದಕ್ಕೆ ಪೂರ್ವಭಾವಿಯಾಗಿ ಆಚರಿಸಬೇಕಾದ ಕೆಲವು ಕಾರ್ಯಗಳನ್ನು ವಿವರಿಸಿರುವುದು. ಯೂಪವೆಂದರೆ ಯಜ್ಞದಲ್ಲಿ ಪಶುವನ್ನು ಕಟ್ಟುವುದಕ್ಕೆ ನೆಟ್ಟಿರುವ ಮರದ ಕಂಭ. ಋಗ್ವೇದದಲ್ಲಿ ಯೂಪಶಬ್ದದ ಪ್ರಯೋಗವು ಹೆಚ್ಚಾಗಿಲ್ಲದಿದ್ದರೂ (ಋ ಸಂ. ೧-೫೧-೧೪, ೧-೧೬೨-೬, ೪-೩೩-೩, ೫-೨-೭ ಎಂಬ ಋಕ್ಕುಗಳಲ್ಲಿ ಮಾತ್ರವಿರುವುದು) ಇದೇ ಅರ್ಥವನ್ನು ಸೂಚಿಸುವ ವನಸ್ಪತಿಶಬ್ದವು ವಿಶೇಷವಾಗಿ ಬಳಕೆಯಲ್ಲಿದೆ. ಆದುದರಿಂದ ಈ ಕಂಭವು ಯಾವಾಗಲೂ ಮರ ಅಥವಾ ವೃಕ್ಷ ಸಂಬಂಧವಾದದ್ದೇ ಆಗಿರುವುದು. ಲೋಹಸಂಬಂಧ

ವಾದದ್ದಲ್ಲದೆಂದು ಹೇಳಬಹುದು. ಯಜ್ಞಮಾಡುವಾಗ ಯಜಮಾನರ ಕಡೆಯ ಜನರು ವನಕ್ಕೆ ಹೋಗಿ ಯೂಪ ಸ್ತಂಭಕ್ಕೆ ಯೋಗ್ಯವಾದ (ಅನುರೂಪವಾದ) ಮರವನ್ನು ಸರಿಯಾದ ಆಕಾರಕ್ಕೆ ಇರುವಂತೆ ಕತ್ತರಿಸುವರು. ಮತ್ತೆ ಕೆಲವರು ಅವುಗಳನ್ನು ಹೊತ್ತುಕೊಂಡು ಬಂದು ಯಜ್ಞಭೂಮಿಗೆ ತರುವರು. ಮತ್ತೆ ಕೆಲವರು ಅವುಗಳನ್ನು ಚೆನ್ನಾಗಿ ಕೆತ್ತಿ ಅದರ ತುದಿಯಲ್ಲಿ ಕುದುರೆಯನ್ನು (ಕಟ್ಟುವುದಕ್ಕಾಗಿ) ಬಳೆ ಅಥವಾ ಕೊಂಡಿಯನ್ನು ಸೇರಿಸುವರು. ಈ ವಿಷಯ ವನ್ನೇ ಈ ಋಕ್ಕಿನ ಪೂರ್ವಾರ್ಧದಲ್ಲಿ ಹೇಳಿದೆ. ಯೂಪವ್ರಸ್ಕಾಃ—ಎಂದರೆ ಯೂಪಸ್ತಂಭಕ್ಕಾಗಿ ಕಾಡಿಗೆ ಹೋಗಿ ಮರವನ್ನು ಕಡಿಯುವವರು ಎಂದೂ ಯೂಪವಾಹಾಃ-ಎಂದರೆ ಕಡಿದಿರುವ ಮರವನ್ನು ಕಾಡಿನಿಂದ ಯಜ್ಞಭೂಮಿಗೆ ಹೊತ್ತುಕೊಂಡು ಬರುವವರೆಂದೂ ಅರ್ಥವು. ಯೇ ಅಶ್ವಯೂಪಾಯ ಚಷಾಲಂ ತಕ್ಷತಿ—ಎಂದರೆ ಅಶ್ವವನ್ನು ಕಟ್ಟುವ ಯೂಪದ ತುದಿಯಲ್ಲಿ (ಚಷಾಲ) ಬಳೆಯನ್ನು (ಅಥವಾ ಕೊಂಡಿಯನ್ನು) ಸೇರಿಸುವವರೆಂದಭಿಪ್ರಾಯವು. ಇವರು ಸಾಧಾರಣವಾಗಿ ಮರಗೆಲಸವನ್ನು ತಿಳಿದವರಾಗಿರಬೇಕು. ಮರವನ್ನು ಚೆನ್ನಾಗಿ (ನಯವಾಗುವಂತೆ) ಕೆತ್ತಿ ಸರಿಯಾದ ಆಳತೆಗೆ ಕತ್ತರಿಸಿ ತುದಿಗೆ ಬಳೆಯನ್ನು ಜೋಡಿಸಿ ಸಿದ್ಧಪಡಿಸಬೇಕಾದರೆ ಇವರು ಆ ಕೆಲಸಗಳಲ್ಲಿ ಕುಶಲ ರಾಗಿರಬೇಕು. ಈರೀತಿ ಸಿದ್ಧಪಡಿಸಿದ ಮರವನ್ನು ಯಜ್ಞಭೂಮಿಯಲ್ಲಿ ನೆಟ್ಟಗೆ ಊರ್ಧ್ವಮುಖವಾಗಿ ನೆಡುವರು. ಈ ವಿಷಯದಲ್ಲಿ—

ಊರ್ಧ್ವ ಊ ಷು ಣ ಊತಯೇ ತಿಷ್ಠಾ ದೇವೋ ನ ಸವಿತಾ ।
ಊರ್ಧ್ವೋ ವಾಜಸ್ಯ ಸನಿತಾ ಯದಂಜಿಭಿರ್ವಾಘದ್ಭಿರ್ವಿಹ್ವಯಾಮಹೇ ॥
ಊರ್ಧ್ವೋ ನಃ ಪಾಹ್ಯಂಹಸೋ ನಿ ಕೇತುನಾ ವಿಶ್ವಂ ಸಮತ್ರಿಣಂ ದಹ ।
ಕೃಧೀ ನ ಊರ್ಧ್ವಾಞ್ಚರಥಾಯ ಜೀವಸೇ ವಿದಾ ದೇವೇಷು ನೋ ದುವಃ ॥

(ಋ. ಸಂ. ೧-೩೬-೧೩-೧೪)

ಎಂಬ ಋಕ್ಕುಗಳಲ್ಲಿ ಯೂಪವನ್ನು ನೆಡುವಾಗ ಅದನ್ನು ಪ್ರಾರ್ಥಿಸುವ ವಿಷಯವು ಉಕ್ತವಾಗಿರುವುದು. ಯೂಪವನ್ನು ನೆಟ್ಟನಂತರ ಅದನ್ನು ಘೃತಾದಿಗಳಿಂದ ಅಂಜನಮಾಡಿ (ತುಪ್ಪದಿಂದ ಸವರಿ) ಅದನ್ನು ಅಲಂಕರಿಸಿ, ಅನೇಕ ಸಂಸ್ಕಾರ ಗಳನ್ನು ಮಂತ್ರಪೂರ್ವಕವಾಗಿಮಾಡಿ ಅದನ್ನು ಪ್ರಾರ್ಥಿಸುವರು. ಈ ವಿಷಯವು ಅಂಜಂತಿ ತ್ವಾಮಧ್ವರೇ ದೇವ ಯಂತಃ (ಋ. ಸಂ. ೩-೮) ಎಂಬ ಸೂಕ್ತದಲ್ಲಿ ವಿಶದವಾಗಿ ಹೇಳಲ್ಪಟ್ಟಿರುವುದು. ಈ ಸೂಕ್ತವೆಲ್ಲಾ ಯೂಪದ ಸ್ತುತಿಯೇ ಆಗಿರುವುದು.

ಅಶ್ವಮೇಧಯಜ್ಞದಲ್ಲಿ ಯೂಪವು ಒಂದೇ ಆದರೂ ಕೆಲವು ಯಜ್ಞಗಳಲ್ಲಿ ಪಶುಗಳ ಸಂಖ್ಯೆಗೆ ಅನುಸಾರವಾಗಿ ಅನೇಕ ಯೂಪಗಳನ್ನು ನೆಡುವುದು ರೂಢಿಯಲ್ಲಿದ್ದಂತೆ ಕಾಣುವುದು. ಈ ವಿಷಯದಲ್ಲಿ ಕೆಲವು ಪಾಶ್ಚಾತ್ಯಪಂಡಿತರ ಅಭಿಪ್ರಾಯವು—

Twenty-one posts, of different kinds of wood, each twenty-one cubits long, are to be set up to which the different animals are to be fastened, amounting to three-hundred and forty-nine, besides two hundred and sixty wild animals, making altogether six hundred and nine according to Katyayana ; a similar enumeration occurs in the Ramayana b. i. ch. 12, 13 ; but the text is no warrant for such a multiplication and it would seem as if a single post

was intended ; when the word occurs uncompounded it is in the singular ಚಷಾಲಂ ಯೇ ಅಶ್ವಯೂಪಾಯ ತಕ್ಷತಿ. ಚಷಾಲ is given in the ಅಮರಕೋಶ and is explained by most of the commentators a wooden ring. or bracalet on the top of the sacrifical post ; some notice also authority for its being an iron ring at the foot of the post.

ಎಂದಿರುವುದು. ಯೂಪದ ವಿಚಾರವನ್ನು ಅಜಂತಿತ್ವಾ ಎಂಬ ಸೂಕ್ತವನ್ನು ವ್ಯಾಖ್ಯಾನಮಾಡುವಾಗ ವಿಸ್ತಾರವಾಗಿ ವಿವರಿಸಲಾಗುವುದು

ಯೇ ಚ ಅರ್ವತೇ ಪಚನಂ ಸಂಭರಂತಿ—ಈ ವಾಕ್ಯಕ್ಕೆ ಕುದುರೆಗೆ ಆಹಾರವನ್ನು ಬೇಯಿಸುವುದಕ್ಕಾಗಿ ಬೇಕಾದ ಸಲಕರಣೆಗಳನ್ನು ಎಂದರೆ ಪಾತ್ರೆ ಮೊದಲಾದುವುಗಳನ್ನು ಸಿದ್ಧಪಡಿಸುವ ಜನರು ಎಂದು ಭಾಷ್ಯಕಾರರೂ ಇತರರೂ ಅರ್ಥಮಾಡಿರುವರು. ವಾಕ್ಯದಲ್ಲಿರುವ ಶಬ್ದಗಳಿಗೆ ಇದೇ ಅಭಿಪ್ರಾಯವು ಭಾಸವಾಗುವುದಾದರೂ ಈ ಅರ್ಥವಲ್ಲದೆ ಬೇರೆ ಅರ್ಥವಿರಬಹುದೆಂದು ಊಹಿಸಲು ಸಾಧ್ಯವಿದೆ. ಯಜ್ಞದಲ್ಲಿ ಕುದುರೆಗೆ ಆಹಾರವನ್ನು ಬೇಯಿಸುವ ಪಾತ್ರೆಗಳನ್ನು ಮಾಡಲು ಕಾರಣವು ಅಷ್ಟಾಗಿರುವುದಿಲ್ಲ. ಪ್ರಾಯಶಃ ಕುದುರೆಯ ಅಂಗಗಳನ್ನೂ ಮಾಂಸಾದಿಗಳನ್ನೂ ದೇವತೆಗಳನ್ನುದ್ದೇಶಿಸಿ ಹೋಮಮಾಡುವಾಗ ಅವುಗಳನ್ನು ಬೇಯಿಸುವುದಕ್ಕೆ ಬೇಕಾಗುವ ಪಾತ್ರೆಗಳೇ ಇಲ್ಲಿ ಸೂಚಿತವಾಗಿರಬಹುದು ಎಂದು ಕೆಲವರ ಅಭಿಪ್ರಾಯವಿರುವುದು. ಮರದ ಪಾತ್ರೆಯಲ್ಲಿ ಆಹಾರವನ್ನು ಬೇಯಿಸುವುದು ಸಾಧ್ಯವಿಲ್ಲದ್ದರಿಂದ ಬೇಯಿಸಿದ ಆಹಾರವನ್ನು ಅಥವಾ ಹೋಮಮಾಡುವುದಕ್ಕೆ ಮುಂಚೆ ಮಾಂಸ ಮೊದಲಾದ ಕುದುರೆಯ ಅವಯವಗಳನ್ನು ಇರಿಸಲು ಬೇಕಾದ ಮರದ ಪಾತ್ರೆಗಳನ್ನು ಮಾಡುವ ವಿಷಯವು ನಿರ್ದಿಷ್ಟವಾಗಿದ್ದರೂ ಇರಬಹುದು. ಏಕಂದರೆ ಈ ಸೂಕ್ತದ-ಅಥವಾ ಪಚನಂ ಸಂಭರಂತಿ ಎಂಬ ಶಬ್ದಗಳಿಗೆ

ಯೇ ವಾಜಿನಂ ಪರಿಪಶ್ಯಂತಿ ಪಕ್ವಂ ಯ ಈಮಾಹುಃ ಸುರಭಿರ್ನಿರ್ಹರೇತಿ ।
ಯೇ ಚಾರ್ವತೋ ಮಾಂಸಭಿಕ್ಷಾಮುಪಾಸತ ಉತೋ ತೇಷಾಮಭಿಗೂರ್ತಿರ್ನ ಇನ್ವತು ॥

(ಋ. ಸಂ. ೧-೧೬೨-೧೨)

ಎಂಬ ಈ ಋಕ್ಕಿನಲ್ಲಿ ಕುದುರೆಯ (ಯಜ್ಞಪಶುವಿನ) ಮಾಂಸವನ್ನು ಬೇಯಿಸುವ ವಿಷುಯವು ಉಕ್ತವಾಗಿರುವುದರಿಂದ ಈ ವಿಧವಾದ ಅರ್ಥಕ್ಕೆ ಸಮರ್ಥನೆ ದೊರೆತಿರುವುದು. ಪಚನಮಾಡುವುದಕ್ಕೆ ಸಾಧನಭೂತವಾದ ಕಾಷ್ಠಾದಿಗಳನ್ನು (ಸೌದೆ) ಸಂಗ್ರಹಮಾಡಿ ತರುವುದು ಎಂದಾದರೂ ಅರ್ಥವಾಗಬಹುದು.

ತೇಷಾಂ ಅಭಿಗೂರ್ತಿಃನಃ ಇನ್ವತು—ಈ ವಾಕ್ಯಕ್ಕೆ ಸಾಯಣರು ನೋऽಸ್ಮತ್ಸಂಬಂಧಿನಾ ತೇಷಾಮೃತ್ವಿಜಾಮಭಿಗೂರ್ತಿಃ ಸಂಕಲ್ಪಃ ಸರ್ವಥಾ ಕರಣೀಯಮಿತಿ ಬುದ್ಧಿರಿನ್ವತು ವ್ಯಾಪ್ನೋತು । ಯಾಗಂ ಸಾಧುಪಾರಂ ಪ್ರಾಪಯ್ಯ ಫಲೇನ ಯೋಜಯತ್ವಿತ್ಯರ್ಥಃ—ಎಂದರೆ ಮೇಲೆ ಹೇಳಿದ ವಿಷಯಗಳಲ್ಲಿ ಎಂದರೆ, ಯೂಪಕ್ಕಾಗಿ ವೃಕ್ಷವನ್ನು ಛೇದನಮಾಡುವುದು, ಅದನ್ನು ಹೊತ್ತುತರುವುದು, ಅದನ್ನು ಕೆತ್ತಿಸರಿಪಡಿಸಿ ಅಗ್ರಭಾಗಕ್ಕೆ ಬಳೆಯನ್ನು ಸೇರಿಸುವುದು, ಅಶ್ವದ ಆಹಾರವನ್ನು ಸಿದ್ಧಪಡಿಸುವ ಪಾತ್ರೆಗಳನ್ನುಮಾಡುವುದು, ಮೊದಲಾದ ಕರ್ಮಗಳಲ್ಲಿ ನಮ್ಮ ಋತ್ವಿಜರು ಯಾವರೀತಿ ಅನುಕೂಲವಾಗಬೇಕೆಂದು ಇಷ್ಟಪಡುವರೋ ಆರೀತಿ ಆಗಿ ಅವರ ಉದ್ದೇಶವು ನೆರವೇರಿ ನಮಗೆ ಯಾಗ ಮಾಡಿದ ಫಲವು ಸೇರಲಿ ಎಂಬ ಅಭಿಪ್ರಾಯ ಬರುವಂತೆ ಅರ್ಥವಿವರಣೆ ಮಾಡಿರುವರು. ಎಂದರೆ Wilson ಪಂಡಿತನು ಹೇಳಿರುವಂತೆ Let the exertions of them all fulfil our expectations ಈ ವಿಷಯಗಳಲ್ಲಿ ಅವರು ವಹಿಸಿದ ಶ್ರಮವು ಸಾರ್ಥಕವಾಗಿ ನಮಗೆ ತೃಪ್ತಿಯನ್ನುಂಟುಮಾಡಲಿ ಎಂದಭಿಪ್ರಾಯವು.

ಅಭಿಗೂರ್ತಿಃ—ಈ ಶಬ್ದಕ್ಕೆ ಈ ಋಕ್ಕಿನಲ್ಲಿ ಭಾಷ್ಯಕಾರರು ಅಭಿಗೂರ್ತಿಃ ಸಂಕಲ್ಪಃ ಸರ್ವಥಾಕರಣೀಯಮಿತಿ ಬುದ್ಧಿಃ—ಅವಶ್ಯಕವಾಗಿ ಹೀಗೆಯೇ ಮಾಡಬೇಕೆಂಬು ಬುದ್ಧಿಯು ಎಂದೂ, ಇದೇ ಸೂಕ್ತದ ೧೨ನೇಯ ಋಕ್ಕಿನಲ್ಲಿರುವ ಇದೇ ಶಬ್ದಕ್ಕೆ ಅಭಿಗೂರ್ತಿರಭಿತ ಉದ್ಯಮನಂ ಸುತ್ತಲೂ ವ್ಯಾಪಿಸಿರುವ ಎಂದರೆ ನೆರವೇರುತ್ತಿರುವ ಕೆಲಸವು ಎಂದೂ, ಹದಿನೈದನೆಯ ಋಕ್ಕಿನಲ್ಲಿರುವ ಅಭಿಗೂರ್ತಂ ಎಂಬ ಶಬ್ದಕ್ಕೆ-ಅಭಿಮುಖ್ಯೇನ ಪ್ರದಾನಾಯೋದ್ಯತಂ ಮುಖ್ಯವಾಗಿ ಅರ್ಪಿಸುವುದಕ್ಕೆ ಸಿದ್ಧಪಡಿಸಿರುವ ಎಂದೂ, ಅನೇಕವಿಧವಾಗಿ ಅರ್ಥಮಾಡಿರುವರು,

ವ್ಯಾಕರಣಪ್ರಕ್ರಿಯಾ

ಯೂಪವ್ರಸ್ಕಾಃ—ಓ ವ್ರಶ್ಚೂ ಛೇದನೇ ಧಾತು. ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ಛಾಂದಸವಾಗಿ ವರ್ಣವ್ಯತ್ಯಯ ಬಂದಿದೆ. ಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

ಯೂಪವಾಹಾಃ—ವಹ ಪ್ರಾಪಣೇ ಧಾತು ಘಞ್ ಪ್ರತ್ಯಯ. ಅತಉಪಧಾಯಾಃ (ಪಾ. ಸೂ. ೭-೨-೧೧೬) ಎಂಬುದರಿಂದ ಆದಿವೃದ್ಧಿ. ಕರ್ಷಾತ್ವತಃ (ಪಾ. ಸೂ. ೬-೧-೧೫೯) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ಚಷಾಲಮ್—ಚಷ ಭಕ್ಷಣೇ ಧಾತು. ಸಾನಸಿವರ್ಣಸಿ-(ಉ. ಸೂ. ೫೪೭) ಎಂಬುದರಿಂದ ಆಲಪ್ರತ್ಯಯದಿಂದ ನಿಪಾತಿತವಾಗಿದೆ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ಅಶ್ವಯೂಪಾಯ—ಯುವಂತಿ ಬಧ್ನಂತಿ ಅಸ್ಮಿನ್ ಇತಿ ಯೂಪಃ ಯಜ್ಞಸ್ತಂಭಃ ಕುಯೋಭ್ಯಾಂ ಚ (ಉ. ಸೂ. ೩೦೭) ಎಂಬುದರಿಂದ ಮಿಶ್ರಣಾರ್ಥಕಯು ಧಾತುವಿಗೆ ಪ ಪ್ರತ್ಯಯ. ಧಾತುವಿಗೆ ದೀರ್ಘ. ಸಮಾಸ ಸ್ವರದಿಂದ ಅಂತೋದಾತ್ತವಾಗುತ್ತದೆ.

ತಕ್ಷತಿ—ತಕ್ಷೂ ತನೂಕರಣೇ ಧಾತು. ಲಡಂತರೂಪ ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

ಪಚನಮ್—ಡುಪಚಿಷ್ ಪಾಕೇ ಧಾತು. ಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ. ಅದಕ್ಕೆ ಅನಾದೇಶ. ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

ಸಂಭರಂತಿ—ಭೃಞ್ ಭರಣೇ ಧಾತು. ಲಟ್ ಪ್ರಥಮಪುರುಷಬಹುವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ತಿಙಚೋದಾತ್ತವತಿ (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಸಮ್) ಅನುದಾತ್ತಸ್ವರ ಬರುತ್ತದೆ.

ಅಭಿಗೂರ್ತಿಃ—ಗೂರೀ ಹಿಂಸಾಗತ್ಯೋಃ ಧಾತು. ಸ್ತ್ರಿಯಾಂಕ್ತಿನ್ (ಪಾ. ಸೂ. ೩-೩-೯೪) ಎಂಬುದರಿಂದ ಕ್ತಿನ್ ಪ್ರತ್ಯಯ. ತಾದೌ ಚ ನಿತಿ (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ಅಭಿ) ನಿಘಾತಸ್ವರ ಬರುತ್ತದೆ.

ಇನ್ವತು—ಇವಿ ವ್ಯಾಪ್ತೌ ಧಾತು. ಲೋಟ್ ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೬ ॥

———

ಸಂಹಿತಾಪಾಠಃ

ಉಪ ಪ್ರಾಗಾತ್ಸುಮನ್ಮೇಽಧಾಯಿ ಮನ್ಮ ದೇವಾನಾಮಾಶಾ ಉಪ

ವೀತಪೃಷ್ಠಃ ।

ಅನ್ವೇನಂ ವಿಪ್ರಾ ಋಷಯೋ ಮದಂತಿ ದೇವಾನಾಂ ಪುಷ್ಟೇ ಚಕೃಮಾ

ಸುಬಂಧುಂ ॥ ೭ ॥

ಪದಪಾಠ

ಉಪ । ಪ್ರ । ಅಗಾತ್ । ಸುಽಮತ್ । ಮೇ । ಅಧಾಯಿ । ಮನ್ಮ । ದೇವಾನಾಂ । ಆಶಾಃ । ಉಪ ।

ವೀತಽಪೃಷ್ಠಃ ।

ಅನು । ಏನಂ । ವಿಪ್ರಾಃ । ಋಷಯಃ । ಮದಂತಿ । ದೇವಾನಾಂ।ಪುಷ್ಟೇ । ಚಕೃಮ । ಸುಽಬಂಧುಂ ॥ ೭ ॥

ಸಾಯಣಭಾಷ್ಯಂ

ಮನ್ಮ ಮನನೀಯಂ ಫಲಂ ಸುಮದುಪ ಪ್ರಾಗಾತ್ । ಉಪಪ್ರೈತು । ಸುಮತ್ಸ್ವಯಮಿತ್ಯರ್ಥಃ। ನಿ- ೬- ೨೨ । ಇತಿ ಯಾಸ್ಕಃ । ಯದ್ವಾ । ಸ್ವಯಮೇವ ಮಾದಯಿತೃತನೋ ಮಯ್ಯಧಾಯಿ । ಧೀಯತೇ । ಫಲಭೂತೋಽಶ್ವ ಆಗತಃ ಸ ಚ ಮಯಾ ಧೃತ ಇತ್ಯರ್ಥಃ । ಕಿಮರ್ಥಂ । ವೀತಪೃಷ್ಠಃ ಸಾಧುಪೋಷಣೇನ ಪ್ರಾಪ್ತಪಶ್ಚಾದ್ಭಾಗಃ ಕಾಂತಪೃಷ್ಠೋ ವಾ । ಅತ್ಯಂತಂ ದೃಪ್ತ ಇತ್ಯರ್ಥಃ। ತಾದೃಶೋಽಯಂ ದೇವಾನಾಮಾಶಾಃ ಪೂರಯಿತುಮುಪ ಗಚ್ಛತು । ಯಾಗಾರ್ಥಮಾಗತಮೇನಂ ಸುಬಂಧುಂ ಶೋಭನಬಂಧನಮಶ್ವಂ ದೇವಾನಾಮಾಶಾಸ್ಯಮಾನಾನಾಂ ಪುಷ್ಟೇ ಪೋಷಣಾಯ ಚಕೃಮ । ಕುರ್ಮಃ । ತಂ ಚ ವಿಪ್ರಾ ಮೇಧಾವಿನ ಋತ್ವಿಜ ಋಷಯೋಽತೀಂದ್ರಿಯದ್ರಷ್ಟಾರೋಽನ್ಯೇ ವಾ ವಿಪ್ರಾ ಋಷಯಶ್ಚಾನು ಮದಂತಿ । ಅನುಮೋದಂತಾಂ । ಸಮ್ಯಕ್ ಕೃತಮಿತಿ ಪರಿತುಷ್ಯಂತು ॥

ಪ್ರತಿಪದಾರ್ಥ

ಮನ್ಮ—ಮನನೀಯವಾದ ಎಂದರೆ ಪೂಜ್ಯವಾದುದೂ ಯಜ್ಞಫಲಭೂತವಾದುದೂ ಆದ ಅಶ್ವವು । ಸುಮತ್—ತಾನಾಗಿಯೇ । ಉಪ ಪ್ರಾಗಾತ್—ಸಮೀಪಿಸಲಿ ! ಅಧಾಯಿ—ಅನಂತರ (ನನ್ನಿಂದ) ಧೃತವಾಗಲಿ. । ವೀತಪೃಷ್ಠಃ—(ಆದುದರಿಂದ)ಪುಷ್ಟವಾದ ಪೃಷ್ಠಭಾಗವುಳ್ಳ ಈ ಅಶ್ವವು । ದೇವಾನಾಂ—ದೇವತೆಗಳ ।

ಆಶಾಃ--ಇಷ್ಟಾರ್ಥಗಳನ್ನು । ಉಪ—(ಪೂರೈಸಲು) ಸಮೀಪಿಸಲಿ । ಏನಂ—ಯಜ್ಞಾರ್ಥವಾಗಿ ಬಂದುದೂ, । ಸುಬಂಧುಂ—ಶ್ರೇಷ್ಠವಾದ ಬಂಧನವುಳ್ಳದ್ದೂ, ಆದ ಅಶ್ವವನ್ನು । ದೇವಾನಾಂ—(ಇದನ್ನು ಅಪೇಕ್ಷಿಸುತ್ತಿದ್ದ, ದೇವತೆಗಳ । ಪುಷ್ಟೇ—ಪೋಷಣಕ್ಕಾಗಿ, । ಚಕೃಮ—ಸಿದ್ಧಮಾಡುವೆವು । ವಿಪ್ರಾಃ—ಮೇಧಾವಿಗಳಾದ ಋತ್ವಿಕ್ಕುಗಳೂ । ಋಷಯಃ—ಅತೀಂದ್ರಿಯಜ್ಞಾನವುಳ್ಳ ಋಷಿಗಳೂ । ಅನುಮದಂತಿ--(ನಮ್ಮ ಕರ್ಮವು ಶ್ರೇಷ್ಠವಾಗಿದೆಯೆಂದು) ಅನುಮೋದಿಸಿ ತೃಪ್ತಿಯನ್ನು ಸೂಚಿಸಲಿ ।

### ಭಾವಾರ್ಥ

ಯಜ್ಞಫಲಭೂತವಾದ ಈ ಅಶ್ವವು ತಾನಾಗಿಯೇ ಸಮೀಪಿಸಿ ನನ್ನಿಂದ ಧೃತವಾಗಿದೆ. ಆದ್ದರಿಂದ ಇದು ದೇವತೆಗಳ ಇಷ್ಟಾರ್ಥಗಳನ್ನು ನೆರವೇರಿಸಲು ಸಮೀಪಿಸಲಿ. ಯಜ್ಞಾರ್ಥವಾಗಿ ಬಂದುದೂ ಪುಷ್ಟವಾದ ಪೃಷ್ಠವುಳ್ಳದ್ದೂ, ಶ್ರೇಷ್ಠವಾದ ಬಂಧನವುಳ್ಳದ್ದೂ ಆದ ಅಶ್ವವನ್ನು ಇದನ್ನು ಅಪೇಕ್ಷಿಸುತ್ತಿದ್ದ ದೇವತೆಗಳ ಪೋಷಣಕ್ಕಾಗಿ ನಾವು ಸಿದ್ಧಮಾಡುವೆವು. ಮೇಧಾವಿಗಳಾದ ಋತ್ವಿಕ್ಕುಗಳೂ ಅತೀಂದ್ರಿಯಜ್ಞಾನವುಳ್ಳ ಋಷಿಗಳೂ ಸಹ ನಮ್ಮ ಕರ್ಮವು ಶ್ರೇಷ್ಠವಾಗಿದೆಯೆಂದು ಅನುಮೋದಿಸಿ ತೃಪ್ತಿಯನ್ನು ಸೂಚಿಸಲಿ.

### English Translation

May my desire be of itself accomplished, such as it has been entertained, that the smooth-backed steed should come to (gratify) the expectations of the gods: we have made him well-secured for the nutriment of the gods; let the wise saints now rejoice.

### ವಿಶೇಷವಿಷಯಗಳು

ಸುಮತ್—ಸುಮತ್ಸ್ವಯಮಿತ್ಯರ್ಥಃ (ನಿ- ೬- ೨೨) ಎಂಬ ನಿರುಕ್ತಕಾರರ ವಾಕ್ಯವನ್ನುದಹರಿಸಿ ಸಾಯಣರು ಈ ಪದಕ್ಕೆ ತಾನಾಗಿಯೇ ಎಂಬರ್ಥವನ್ನು ಮಾಡಿದ್ದಾರೆ. ಫಲವು ತಾನಾಗಿಯೇ ಒದಗಿ ಬರಲಿ ಎಂಬುದರಲ್ಲಿ ತಾತ್ಪರ್ಯ. ಸುಮತ್ ಶಬ್ದಕ್ಕೆ ಸ್ವಯಂ ಎಂದರೆ ತನ್ನಷ್ಟಕ್ಕೆ ತಾನಾಗಿಯೇ ಎಂಬ ಅರ್ಥಮಾತ್ರವಲ್ಲದೆ ಕಲ್ಯಾಣ; ಶೋಭನ ಅಥವಾ ಭದ್ರ ಎಂಬರ್ಥಗಳೂ ಇವೆ. ಇದನ್ನು ಉದಾಹರಣೆಗಳೊಡನೆ ಹಿಂದೆ ವಿವರಿಸಿದೆ

ಮನ್ಮ—ಮನನೀಯ ಎಂದರೆ ಧ್ಯಾನಾರ್ಹವಾದುದು ಎಂದರ್ಥ. ಮನ್ಮಶಬ್ದಕ್ಕೆ ಮನಸ್ಸಿನ ಇಚ್ಛೆಯೆಂದು ಅವಯವಾರ್ಥವಾದರೂ ಋಕ್ಸಂಹಿತಾವಾಕ್ಯಗಳಲ್ಲಿ ಈ ಪದಪ್ರಯೋಗವು ಶ್ರೇಷ್ಠವಾದ ಅಭಿಲಾಷೆಯನ್ನು ತೋರಿಸುವ ವಸ್ತುವನ್ನು ನಿರ್ದೇಶಿಸುವುದಾಗಿದೆ. ನಿರುಕ್ತಕಾರರು ಇದೇ ಋಕ್ಕನ್ನುದಹರಿಸಿ ಈ ಪದದ ಅರ್ಥವನ್ನು ಮೇಲ್ಕಂಡಂತೆ ವಿವರಿಸಿದ್ದಾರೆ. (ನಿ. ೬. ೨೨) ಈ ಸಂದರ್ಭದಲ್ಲಿ ದುರ್ಗಾಚಾರ್ಯರು ಈ ಪದವನ್ನು ವಿವರಿಸುತ್ತಾ ಮನ್ಮ-ಮನನೀಯಮರ್ಥಜಾತಂ । ಆದೃತವಾದ ವಸ್ತುವೆಂದು ಅರ್ಥಮಾಡಿದ್ದಾರೆ. ಆದೃತವಾದ ವಸ್ತುವು ಯಜ್ಞಫಲವಾಗಬಹುದು; ಸ್ತುತಿಯಾಗಬಹುದು, ಹವಿಸ್ಸಾಗಬಹುದು. ಪ್ರಕೃತವಾದ ಋಕ್ಕಿನಲ್ಲಿ ಪೂಜ್ಯವಾದುದೂ ಧ್ಯಾನಾರ್ಹವಾದುದೂ ಆದ ಫಲವೆಂದರ್ಥವಾಗುತ್ತದೆ. ಅಗ್ನಿಃ ಪ್ರತ್ನೇನ ಮನ್ಮನಾ (ಐ. ಬ್ರಾ. ೧. ೪) ಇತ್ಯಾದಿ ವಾಕ್ಯಗಳಲ್ಲೂ ಸಹ ಈ ಪದದ ಅತಿಶಯವಾದ ಅರ್ಥವನ್ನು ಗಮನಿಸಬಹುದು.

ವಿಪ್ರಾಃ ಋಷಯಃ—ಎಂಬುದಕ್ಕೆ ಎರಡುವಿಧವಾದ ಅನ್ವಯವನ್ನು ಮಾಡಿದೆ. ಮೊದಲು ವಿಪ್ರಾಃ ಎನ್ನುವುದಕ್ಕೆ ಮೇಧಾವಿಗಳಾದ ಋತ್ವಿಕ್ಕುಗಳೆಂಬ ಪ್ರತ್ಯೇಕವಾದ ಅರ್ಥವನ್ನು ಹೇಳಿ ಅನಂತರ, ಋಷಯಃ ಎನ್ನು ವುದಕ್ಕೆ ವಿಶೇಷಣವನ್ನಾಗಿ ಮಾಡಿ ಇನ್ನೊಂದರ್ಥವನ್ನು ಮಾಡಿದೆ. ಅಲೌಕಿಕವಾದ ಜ್ಞಾನಚಕ್ಷುಸ್ಸುಳ್ಳ ಮೇಧಾವಿಗಳೆಂದರ್ಥ.

### ವ್ಯಾಕರಣಪ್ರಕಿಯಾ

ಅಗಾತ್—ಇಣ್ ಗತೌ ಧಾತು. ಛಂದಸಿ ಲುಙ್‌ಲಙ್‌ಲಿಟಃ ಎಂಬುದರಿಂದ ಲೋಡರ್ಥದಲ್ಲಿ ಲುಙ್. ಇಣೋಽಗಾಲುಙಿ (ಪಾ. ಸೂ. ೨-೪-೪೫) ಧಾತುವಿಗೆ ಗಾದೇಶ. ಗಾತಿಸ್ಥಾಘು—(ಪಾ. ಸೂ. ೨-೪-೭೭) ಎಂಬುವುದರಿಂದ ಸಿಚಿಗೆ ಲುಕ್. ತಿಙಂತನಿಘಾತಸ್ವರ ಬರುತ್ತದೆ.

ಅಧಾಯಿ—ಡುಧಾಞ್ ಧಾರಣಪೋಷಣಯೋಃ ಧಾತು. ಹಿಂದಿನಂತೆ ಛಾಂದಸವಾಗಿ ಕರ್ಮಣಿಯಲ್ಲಿ ಲುಙ್. ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ವೀತಪೃಷ್ಠಃ— ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್ (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

ಮದಂತಿ—ಮದೀ ಹರ್ಷೇ ಧಾತು. ಲೇಟ್ ಪ್ರಥಮಪುರುಷಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಸುಬಂಧುಮ್—ಆದ್ಯುದಾತ್ತಂ ದ್ವ್ಯಚ್ ಛಂದಸಿ (ಪಾ. ಸೂ. ೬-೨-೧೧೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ. ॥ ೭ ॥



### ಸಂಹಿತಾಪಾಠಃ

ಯದ್ವಾಜಿನೋ ದಾಮ ಸಂದಾನಮರ್ವತೋ ಯಾ ಶೀರ್ಷಣ್ಯಾ ರಶನಾ ರಜ್ಜುರಸ್ಯ ।
ಯದ್ವಾ ಘಾಸ್ಯ ಪ್ರಭೃತಮಾಸ್ಯೇ೩ ತೃಣಂ ಸರ್ವಾ ತಾ ತೇ ಅಪಿ ದೇವೇಷ್ವಸ್ತು ॥ ೮ ॥

ಪದಪಾಠಃ

ಯತ್ । ವಾಜಿನಃ । ದಾಮ । ಸಮ್ಽದಾನಂ । ಅರ್ವತಃ । ಯಾ । ಶೀರ್ಷಣ್ಯಾ । ರಶನಾ । ರಜ್ಜುಃ । ಅಸ್ಯ ।

ಯತ್ । ವಾ । ಘ । ಅಸ್ಯ । ಪ್ರಽಭೃತಂ । ಆಸ್ಯೇ । ತೃಣಂ । ಸರ್ವಾ । ತಾ । ತೇ । ಅಪಿ । ದೇವೇಷು । ಅಸ್ತು ॥ ೮ ॥

ಸಾಯಣಭಾಷ್ಯಂ

ವಾಜಿನೋ ಗಮನವತೋಽಶ್ವಸ್ಯ ಯದ್ದಾಮ ಗ್ರೀವಾಬದ್ಧಾ ರಜ್ಜುಃ । ಯಚ್ಚ ಸಂದಾನಂ ಸಮ್ಯಗವಚ್ಛೇದಕಂ ಬಂಧಕಂ ಪಾದಬಂಧನಂ ದಾಮಾಸ್ತಿ । ಯಾ ಚಾಸ್ಯ ಶೀರ್ಷಣ್ಯಾ ಶಿರಸಿ ಬದ್ಧಾ ಖಲೀನರಜ್ಜುರಸ್ತಿ ॥ ಶಿರಃ ಶಬ್ದಾದ್ಭವೇ ಛಂದಸೀತಿ ಯತ್ । ಯೇ ಚ ತದ್ಧಿತೇ । ಪಾ. ೬-೧-೬೧ । ಇತಿ ಶೀರ್ಷನ್ನಾದೇಶಃ। ತಿತ್ಸ್ವರಿತಃ ॥ ಯದ್ವಾ । ಘಾಸ್ಯಾಶ್ವಸ್ಯಾಸ್ಯೇ ಮುಖೇ ಪ್ರಭೃತಂ ಪ್ರಹೃತಂ ಪ್ರಕ್ಷಿಪ್ತಂ ತೃಣಮಸ್ತಿ । ಘ ಶಬ್ದೋ ಹಾರ್ಥೇ ಸ ಚ ಪ್ರಸಿದ್ಧ್ಯರ್ಥಃ । ಸರ್ವಾ ಸರ್ವಾಣಿ ತಾ ತಾನಿ ಸರ್ವಾಣ್ಯಪಿ ಹೇ ಅಶ್ವ ತೇ ತವ ಸಂಬಂಧೀನಿ ದೇವೇಷ್ವಸ್ತು । ಸಂತು । ದೇವೇಷು ಮಧ್ಯೇ ಭವಂತು । ದೇವತ್ವಂ ಪ್ರಾಪ್ನುವಂತು ವಾ ॥ ವಚನವ್ಯತ್ಯಯಃ ॥ ಅತ್ರೋಪಯುಕ್ತಾನಾಂ ಸರ್ವೇಷಾಂ ದೇವತ್ವಂ ಕಿಲ ಅಶ್ವಸ್ಯ ತತ್ಪ್ರಾಪ್ತಿರ್ನಾಶಾಸನೀಯಾ ॥

ಪ್ರತಿಪದಾರ್ಥ

ವಾಜಿನಃ — ಸಂಚಾರಸ್ವಭಾವವುಳ್ಳ । ಅಸ್ಯ ಅರ್ವತಃ — ಈ ಅಶ್ವದ । ಯತ್ — ಯಾವ । ದಾಮ—ಕತ್ತಿಗೆ ಕಟ್ಟತಕ್ಕದ್ದೂ, । ಸಂದಾನಂ—ಕಾಲಿಗೆ ಕಟ್ಟತಕ್ಕದ್ದೂ, । ಯಾ—ಯಾವ । ಶೀರ್ಷಣ್ಯಾ—ಕುತ್ತಿಗೆಗೆ ಕಟ್ಟತಕ್ಕದ್ದೂ । ರಶನಾ— ನಡುಕಟ್ಟಿನರೂಪದ್ದೂ ಆದ । ರಜ್ಜುಃ — ಹಗ್ಗವೇ ಮೊದಲಾದ ಬಂಧಕ ಸಾಧನವು । (ಅಸ್ತಿ— ಇದೆಯೋ) । ಯದ್ವಾ ಘ—ಅಥವಾ ಒಂದುವೇಳೆ, । ಅಸ್ಯ—ಈ ಅಶ್ವದ । ಆಸ್ಯೇ—ಮುಖದಲ್ಲಿ (ಬಾಯಿಯಲ್ಲಿ) । ಪ್ರಭೃತಂ—ಇಡಲ್ಪಟ್ಟ । ಯತ್ । ತೃಣಂ—ಯಾವ ಹುಲ್ಲಿದೆಯೋ ತಾ. ಸರ್ವಾ—ಅವೆಲ್ಲವೂ ಸಹ ।ತೇ—ನಿನ್ನೊಡನೆ । ದೇವೇಷ್ವಪಿ—ನೀನು ದೇವತೆಗಳ ನಡುವೆ ಇರುವಾಗಲೂ ಸಹ । ಅಸ್ತು—ಇರಲಿ ।

ಭಾವಾರ್ಥ

ಸಂಚಾರಸ್ವಭಾವವುಳ್ಳ ಈ ಅಶ್ವದ ಕತ್ತಿಗೆ ಕಟ್ಟತಕ್ಕದ್ದೂ, ಕಾಲಿಗೆ ಕಟ್ಟತಕ್ಕದ್ದೂ, ಕುತ್ತಿಗೆಗೆ ಕಟ್ಟತಕ್ಕದ್ದೂ, ನಡುಕಟ್ಟಿನ ರೂಪದ್ದೂ ಆದ ಹಗ್ಗಗಳೇ ಮೊದಲಾದ ಯಾವ ಬಂಧಕಸಾಧನಗಳಿವೆಯೋ ಅವೂ ಮತ್ತು ಈ ಅಶ್ವದ ಬಾಯಿಯಲ್ಲಿ ಇಡಲ್ಪಟ್ಟ ಯಾವ ಹುಲ್ಲು ಇದೆಯೋ ಅದೂ ಸಹ ಎಲ್ಲವೂ ಒಟ್ಟಿಗೆ ಈ ಅಶ್ವದೊಡನೆ ದೇವತೆಗಳ ನಡುವೆ ಇರಲಿ.—

## English Translation

May the halter and the heel-ropes of the fleet courser, and the head-ropes, the girths, and any other (part of the harness); and the grass that has been put into the mouth; may all these be with you, (horse), amongst the gods.

### ವಿಶೇಷವಿಷಯಗಳು

ಅಶ್ವವನ್ನು ಆಹುತಿಯನ್ನಾಗಿ ಅರ್ಪಿಸಿ ಯಾಗಮಾಡಿ ಸಂಪತ್ತನ್ನೂ, ವೀರ್ಯವನ್ನೂ ಸದ್ಗತಿಯನ್ನೂ ಪಡೆಯಲಾಶಿಸಿದ ಯಜಮಾನನು ತನ್ನ ಸುಖಕ್ಕೆ ಸಾಧನವಾದ ಅಶ್ವಕ್ಕೂ ಸಹ ಸದ್ಗತಿಯೂ ಸೌಖ್ಯವೂ ದೊರೆಯಲೆಂದು ಆಶಿಸುತ್ತಾನೆ.

ವಾಜಿನಃ ಅರ್ವತಃ ಎಂಬ ವಿಶೇಷಣಗಳಿಂದ ಅಶ್ವದ ಸ್ವತಂತ್ರವಾದ ಗಮನವೂ, ಗಮನದ ವೇಗವೂ ಸೂಚಿತವಾಗಿದೆ ಆದರೆ ದಾಮ ; ಶೀರ್ಷಣೀ, ರಶನಾ ಇತ್ಯಾದಿಗಳು ಬಂಧಕವಾದ ಅವಸ್ಥೆಯನ್ನು ಸೂಚಿಸುತ್ತವೆ. ಆದರೆ ಅಶ್ವಮೇಧಕ್ಕೆ ಸಿದ್ಧವಾಗಿ ದೇವತೆಗಳಿಗೆ ಅರ್ಪಿತವಾದ ಕುದುರೆಗೆ ಈ ಲೌಕಿಕವಾದ ಬಂಧಕಗಳಿದ್ದರೂ ಸಹ ಅವು ಅಲಂಕಾರಪ್ರಾಯವಾಗಿಯೇ ಇದ್ದು ಅಶ್ವವನ್ನು ದೇವತೆಗಳ ನಡುವೆ ಕರೆದೊಯ್ಯುತ್ತವೆ ಎಂದು ತಾತ್ಪರ್ಯವು. ಇಲ್ಲಿ ತೃಣವನ್ನು ಮೇಯುವುದರಿಂದ ಯಾವ ಸೌಖ್ಯವುಂಟೋ ಅದೇ ಸೌಖ್ಯವು ಅನುಸ್ಯೂತವಾಗಿರಲಿ ಎಂದೂ ಸಹ ಪ್ರಾರ್ಥಿಸಿದೆ.

### ವ್ಯಾಕರಣಪ್ರಕ್ರಿಯಾ

ಸಂದಾನಮ್—ಡುದಾಞ್ ದಾನೇ ಧಾತು. ಲ್ಯುಟ್ ಪ್ರತ್ಯಯ. ಅದಕ್ಕೆ ಅನಾದೇಶ. ಆದ್ಯುದಾತ್ತಸ್ವರ ಬಂದಾಗ ಪ್ರಾದಿಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

ಶೀರ್ಷಣ್ಯಾ—ಶಿರಸಿ ಭವಾ ಶೀರ್ಷಣ್ಯಾ. ಭವೇಛಂದಸಿ (ಪಾ. ಸೂ. ೪-೪-೧೧೦) ಎಂಬುದರಿಂದ ಶಿರಃ ಶಬ್ದಕ್ಕೆ ಯತ್ ಪ್ರತ್ಯಯ ಯೇ ಚ ತದ್ಧಿತೇ (ಪಾ. ಸೂ. ೬-೧-೬೧) ಎಂಬುದರಿಂದ ಶೀರ್ಷನ್ ಭಾವ. ತಿತ್ಸ್ವರಿತಮ್ (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

ರಶನಾ—ಅಶೂ ವ್ಯಾಪ್ತೌ ಧಾತು. ಅಶೇ ರಶ ಚ(ಉ- ಸೂ. ೨೩೩) ಎಂಬುದರಿಂದ ಯುಚ್ ಪ್ರತ್ಯಯ. ಪ್ರಕೃತಿಗೆ ರಶಾದೇಶ. ಯುವೋರನಾಕೌ (ಪಾ. ಸೂ. ೭-೧-೧) ಎಂಬುದರಿಂದ ಪ್ರತ್ಯಯಕ್ಕೆ ಅನಾದೇಶ. ಚಿತಃ (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ಪ್ರಭೃತಮ್—ಹೃಞ್ ಹರಣೇ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ ಹೃಗ್ರಹೋರ್ಭಶ್ಛಂದಸಿ ಎಂಬುದರಿಂದ ಹಕಾರಕ್ಕೆ ಭಕಾರಾದೇಶ. ಗತಿರನಂತರಃ (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಪ್ರ) ಉದಾತ್ತಸ್ವರ ಬರುತ್ತದೆ.

ಅಸ್ತು—ಅಸ ಭುವಿ ಧಾತು. ವ್ಯತ್ಯಯೋ ಬಹುಲಮ್ ಎಂಬುದರಿಂದ ಬಹುವಚನಕ್ಕೆ ಏಕವಚನ ಪ್ರತ್ಯಯ ಲೋಟನಲ್ಲಿ ಬಂದಿದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೮ ॥

———— :o: ————

॥ ಸಂಹಿತಾಪಾಠಃ ॥

ಯದಶ್ವಸ್ಯ ಕ್ರವಿಷೋ ಮಕ್ಷಿಕಾಶ ಯದ್ವಾ ಸ್ವರೌ ಸ್ವಧಿತೌ ರಿಪ್ತಮಸ್ತಿ ।

ಯದ್ಧಸ್ತಯೋಃ ಶಮಿತುರ್ಯನ್ನಖೇಷು ಸರ್ವಾ ತಾ ತೇ ಅಪಿ ದೇವೇ

ಷ್ವಸ್ತು ॥ ೯ ॥

ಪದಪಾಠಃ

ಯತ್ । ಅಶ್ವಸ್ಯ । ಕ್ರವಿಷಃ । ಮಕ್ಷಿಕಾ । ಆಶ । ಯತ್ । ವಾ । ಸ್ವರೌ । ಸ್ವಧಿತೌ । ರಿಪ್ತಂ । ಅಸ್ತಿ ।

ಯತ್ । ಹಸ್ತಯೋಃ । ಶಮಿತುಃ । ಯತ್ । ನಖೇಷು । ಸರ್ವಾ । ತಾ । ತೇ । ಅಪಿ । ದೇವೇಷು । ಅಸ್ತು

ಸಾಯಣಭಾಷ್ಯಂ

ಅಶ್ವಸ್ಯ ತದವಯವಭೂತಸ್ಯ ಕ್ರವಿಷ ಆಮಮಾಂಸಸ್ಯ ಯತ್ ಯದಂಗಂ ಮಕ್ಷಿಕಾಶ ಅಭಕ್ಷಯತ್ ॥ ಅಶ ಭೋಜನೇ ॥ ಯದ್ವಾ ॥ ಕರ್ಮಣಿ ಷಷ್ಠೀ ॥ ಅಶ್ವಸ್ಯ ಯನ್ಮಾಂಸಂ ಭಕ್ಷಯತಿ । ವಾಥವಾ ಸ್ವರೌ ಪಶ್ವಂಜನಕಾಲೇ ಯದ್ರಿಪ್ತಂ ಲಿಪ್ತಮಸ್ತಿ । ಸ್ವರುಣಾ ಪಶುಮನಕ್ತೀತಿ ಶ್ರುತೇಃ । ಅಥವಾ ಸ್ವಧಿತೌ ಛೇದನಕಾಲೇ ಚಾವದಾನಕಾಲೇ ಯದ್ರಿಪ್ತಮಸ್ತಿ ಶಮಿತುರ್ಹಸ್ತಯೋರ್ಲಿಪ್ತಮಸ್ತಿ । ವಿಶಸನಕಾಲೇ ಯಚ್ಚ ನಖೇಷು ಲಿಪ್ತಂ । ತಾ ಸರ್ವಾ ತಾನಿ ಸರ್ವಾಣಿ ಹೇ ಅಶ್ವ ತೇ ತವ ಸಂಬಂಧೀನಿ ದೇವೇಷ್ವಸ್ತು । ದೇವೇಷು ಸಂತೋಷಾರ್ಥಾಯ ಭವಂತು ॥

ಪ್ರತಿಪದಾರ್ಥ

ಅಶ್ವಸ್ಯ—ಈ ಯಜ್ಞಾಶ್ವದ । ಕ್ರವಿಷಃ—ಮಾಂಸಪೂರಿತವಾದ । ಯತ್—ಯಾವ ಅಂಗವನ್ನು । ಮಕ್ಷಿಕಾ—ನೊಣವು । ಆಶ—ತಿನ್ನುತ್ತಿತ್ತೋ, । ವಾ—ಅಥವಾ । ಸ್ವರೌ—ವಧಸ್ತಂಭದಲ್ಲಾಗಲಿ । ಸ್ವಧಿತೌ—ಛೇದನಸಾಧನವಾದ ಕತ್ತಿಯಲ್ಲಾಗಲಿ । (ಯತ್) ರಿಪ್ತಂ ಅಸ್ತಿ—ಯಾವ ಭಾಗವು ಅಂಟಿಕೊಂಡಿರುವುದೋ ಶಮಿತುಃ—ಛೇದಕಾರನ । ಹಸ್ತಯೋಃ—ಕೈಗಳಲ್ಲೂ । ನಖೇಷು—ಉಗುರುಗಳಲ್ಲಿಯೂ ಸಹ । ಯತ್—ಯಾವಲೇಪನವಿದೆಯೋ, । (ಅಶ್ವ—ಎಲೈ, ಅಶ್ವವೇ) । ತೇ—ನಿನಗೆ ಸಂಬಂಧಿಸಿದ । ತಾ ಸರ್ವಾ—ಅವೆಲ್ಲವೂ ದೇವೇಷು ಅಸ್ತು—ದೇವತೆಗಳಿಗೆ ಸೇರುವಂತಾಗಲಿ.

ಭಾವಾರ್ಥ

ಎಲೈ ಅಶ್ವವೇ, ಯಜ್ಞಾಶ್ವವಾದ ನಿನ್ನ ಮಾಂಸಪೂರಿತವಾದ ಯಾವ ಅಂಗವನ್ನು ನೊಣವು ಇಲ್ಲಿ ತಿನ್ನುತ್ತಿತ್ತೋ, ವಧಸ್ತಂಬದಲ್ಲಾಗಲಿ ಅಥವಾ ವಧಸಾಧನವಾದ ಕತ್ತಿಯಲ್ಲಾಗಲಿ ಯಾವ ಅಂಶವು ಅಂಟಿಕೊಂಡಿದ್ದಿತೋ

ಮತ್ತು ಛೇದಕನ ಕೈಗಳಲ್ಲೂ ಉಗುರುಗಳಲ್ಲೂ ಯಾವ ಅಂಶವು ಸೇರಿರುವುದೋ ಅವೆಲ್ಲವೂ ದೇವತೆಗಳಿಗೆ ಅರ್ಪಿತವಾಗಲಿ.

### English Translation

Whatever the flies may eat of the raw flesh of the horse; whatever (grease) is smeared upon the brush or upon the axe; (what is smeared) upon the hands or the nails of the immolator, may all this be with thee, (horse), among the gods.

### ವಿಶೇಷವಿಷಯಗಳು

ಯಜ್ಞಾಶ್ವವನ್ನು ಕಟ್ಟತಕ್ಕ ಯೂಪಸ್ತಂಭ ಮತ್ತು ಛೇದಿಸತಕ್ಕ ಕತ್ತಿ ಇವುಗಳಿಗೆ ಅಂಜನವನ್ನು ಲೇಪಮಾಡುವುದು ಪದ್ಧತಿ. ಅಂತಹ ಅಂಜನದ ಲೇಪವೂ ಸಹ ಅಶ್ವದ ಅಲಂಕಾರಕ್ಕಾಗಿ ದೇವತೆಗಳಿಗೆ ಸೇರಲಿ ಎಂದು ಪ್ರಾರ್ಥಿಸಿದೆ.

ಸ್ವರೌ—ಸಾಧಾರಣವಾಗಿ ಸ್ವರುವೆಂದರೆ ಯೂಪಸ್ತಂಭವೆಂದರ್ಥ. ಕಣ್ಣಿಗೆ ಅಂಜನವನ್ನು ಬಳಿಯುವಂತೆ ಯೂಪಸ್ತಂಭಕ್ಕೂ ಅಂಜನವನ್ನು ಲೇಪಮಾಡುವುದು ವಿಧ್ಯುಕ್ತವಾದ ಕರ್ಮವಾಗಿದೆ. ಸ್ವರುವನ್ನು ಯೂಪಶಕಲವೆಂದೂ ಹೇಳುವ ಪದ್ಧತಿಯಿದೆ. ಉದಾಹರಣೆಗೆ,

ಅಥ ಯೇ ತೇಭ್ಯೋಽವರ ಆಸಂಸ್ತ ಏತಂ ಸ್ವರುಮಪಶ್ಯನ್ಯೂಪಶಕಲಂ ।

(ಐ. ಬ್ರಾ. ೨-೩)

ಎಂಬಲ್ಲೂ, ಮತ್ತು ತೈತ್ತಿರೀಯ ಸಂಹಿತೆಯಲ್ಲಿ ಅಗ್ರೇಗಾ ನೇತೄಣಾಂ ವನಸ್ಪತಿಃ (೧-೩-೬) ಎಂಬಲ್ಲೂ ಸಹ ಯೂಪಸ್ಯ ಪ್ರಥಮಶಕಲಃ ಎಂದರ್ಥ ಮಾಡಿದೆ. ಆದರೆ ಸಾಯಣರು ತೈತ್ತಿರೀಯಸಂಹಿತಾವಾಕ್ಯಕ್ಕೆ ಅರ್ಥವನ್ನು ವಿವರಿಸುತ್ತಾ ಪ್ರಥಮಶಕಲಃ; ಸ್ವರುಃ; ಚಷಾಲಂ ಎಂಬ ಯೂಪಸ್ತಂಭದ ಮೂರು ಬೇರೆ ಬೇರೆ ಅವಯವಗಳೆಂದು ವಿವರಿಸಿದ್ದಾರೆ. ಭಟ್ಟಭಾಸ್ಕರ ಭಾಷ್ಯದಲ್ಲೂ ಇದೇ ವಿಭಾಗಗಳಿವೆ. ಆದರೆ ಸಾಯಣರು,

ಅಪಶ್ಯಂಥ್ಸ್ವರುಂ ಯೂಪಸ್ಯ ಸಂಸ್ಥಿತೇ ಸೋಮೇ ।

(ತೈ. ಸಂ. ೬-೩-೪)

ಎಂಬ ತೈತ್ತಿರೀಯ ಸಂಹಿತಾವಾಕ್ಯದಲ್ಲಿ ಮಾತ್ರ ಸ್ವರು ವೆಂದರೆ ಪ್ರಥಮ ಶಕಲವೆಂದೇ ಅರ್ಥಮಾಡಿದ್ದಾರೆ. ಅವರ ಹಿಂದಿನ ವಿವರಣೆಗೂ, ಈ ವಾಕ್ಯದ ವಿವರಣೆಗೂ ಪರಸ್ಪರವಾದ ವಿರೋಧವಿದೆ. ಪ್ರಕೃತವಾದ ಋಕ್ಕಿನಲ್ಲಿ ಸಾಯಣರು ಸ್ವರೌ ಎಂಬ ಪದಕ್ಕೆ ಪಶ್ವಂಜನಕಾಲೇ ಎಂದು ಅರ್ಥಮಾಡಿದ್ದಾರೆ.

ಸ್ವಧಿತೌ—ಸ್ವಧಿತಿ ಶಬ್ದವು ವಜ್ರ ನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೧) ಪಶುಹನನಸಾಧನವಾದ ಮಚ್ಚು ಎಂದರ್ಥವಾಗುತ್ತದೆ.

ಬ್ರಹ್ಮಾ ದೇವಾನಾಂ ಪದವೀಃ ಕವೀನಾಮೃಷಿರ್ವಿಪ್ರಾಣಾಂ ಮಹಿಷೋ ಮೃಗಾಣಾಂ ।
ಶ್ಯೇನೋ ಗೃಧ್ರಾಣಾಂ ಸ್ವಧಿತಿರ್ವನಾನಾಂ ಸೋಮಃ ಪವಿತ್ರಮತ್ಯೇತಿ ರೇಭನ್ ॥

(ಋ. ಸಂ. ೯-೯೬-೬)

ಎಂಬಲ್ಲಿ ವನಾನಾಂ ಎಂಬ ಪದಕ್ಕೆ ಹಿಂಸಕಾನಾಂ ಛೇದಕಾನಾಂ ಮಧ್ಯೇ ಸ್ವಧಿತಿಃ ಏತನ್ನಾಮಕಶ್ಛೇದಕೋಽಸಿ ಎಂದು ವಿವರಿಸಿ ಈ ಪದಕ್ಕೆ ಛೇದಕಸಾಧನವೆಂದರ್ಥ ಮಾಡಿರುವಂತೆ ಇಲ್ಲಿಯೂ ಸಹ ಅದೇ ಅರ್ಥವಾಗುತ್ತದೆ. ಆದರೆ ಸಾಯಣರು ಪ್ರಕೃತವಾದ ಋಕ್ಕಿನಲ್ಲಿ ಈ ಪದಕ್ಕೆ ಛೇದನಕಾಲೇ ಛೇದಿಸತಕ್ಕಕಾಲದಲ್ಲಿ ಎಂದರ್ಥ ಮಾಡಿದ್ದಾರೆ.

ಶಮಿತುಃ—ಈ ಪದಕ್ಕೆ ಸಾಯಣರು ಅರ್ಥವನ್ನು ಹೇಳಿಲ್ಲ. ಯಜ್ಞಪಶುವನ್ನು ವಧೆಮಾಡುವವನಿಗೆ ಶಮಿತೃವೆಂದು ಹೆಸರು. ಈ ವಿಷಯವನ್ನು ಮುಂದಿನ ಋಕ್ಕಿನ ವಿವರಣೆಯಲ್ಲಿ ಚರ್ಚಿಸಲಾಗುತ್ತದೆ.

## ವ್ಯಾಕರಣಪ್ರಕ್ರಿಯಾ

ಮಕ್ಷಿಕಾ—ಮಶ ಶಬ್ದೇ ಧಾತು. ಹನಿಮಶಿಭ್ಯಾಂಸಿಕನ್ (ಉ. ಸೂ. ೪-೫೫) ಎಂಬುದರಿಂದ ಸಿಕನ್ ಪ್ರತ್ಯಯ. ವ್ರಶ್ಚಭ್ರಸ್ಜ—ಸೂತ್ರದಿಂದ ಶಕಾರಕ್ಕೆ ಷತ್ವ ಬಂದಾಗ ಷಢೋಃಕಃಸಿ ಎಂಬುದರಿಂದ ಅದಕ್ಕೆ ಕತ್ವ. ಸಕಾರಕ್ಕೆ ಅದನ್ನು ನಿಮಿತ್ತೀಕರಿಸಿ ಷತ್ವ. ಸ್ತ್ರೀತ್ವದಲ್ಲಿ ಟಾಪ್. ಪ್ರತ್ಯಯನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಆಶ—ಅಶ ಭೋಜನೇ ಧಾತು. ಲಿಟ್ ಪ್ರಥಮಪುರುಷಏಕವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಲ್ ಪ್ರತ್ಯಯ ಲಿತ್ತಾದುದರಿಂದ ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಕ್ರವಿಷಃ ಎಂಬಲ್ಲಿ ಕರ್ಮಾರ್ಥದಲ್ಲಿ ಷಷ್ಠೀ ಬಂದಿದೆ.

ಸ್ವರೌ—ಸ್ವೃ ಶಬ್ದೋಪತಾಪಯೋಃ ಧಾತು. ಶೃಸ್ವೃಸ್ನಿಹಿ-(ಉ. ಸೂ. ೧-೧೦) ಎಂಬುದರಿಂದ ಉನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ರ ಪರವಾಗಿ ಬರುತ್ತದೆ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಪ್ತಮೀಏಕವಚನಾಂತರೂಪ.

ರಿಪ್ತಮ್—ಲಿಪ ಉಪದೇಹೇ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ವರ್ಣವ್ಯತ್ಯಯದಿಂದ ಆದಿಗೆ ರೇಫ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಅಸ್ತಿ—ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ತಿಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

ಶಮಿತುಃ—ಶಮು ಉಪಶಮೇ ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಅದಕ್ಕೆ ಇಡಾಗಮ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ. ॥ ೯ ॥

---

## ಸಂಹಿತಾಪಾಠಃ

ಯದೂವಧ್ಯಮುದರಸ್ಯಾಪವಾತಿ ಯ ಆಮಸ್ಯ ಕ್ರವಿಷೋ ಗಂಧೋ ಅಸ್ತಿ ।

ಸು॒ಕೃ॒ತಾ ತಚ್ಛ॑ಮಿ॒ತಾರಃ॑ ಕೃಣ್ವಂತೂ॒ತ ಮೇಧಂ॑ ಶೃತ॒ಪಾಕಂ॑ ಪಚಂತು॥೧೦॥

ಪದಪಾಠಃ

ಯತ್ । ಊವ॑ಧ್ಯಂ । ಉ॒ದರ॑ಸ್ಯ । ಅ॒ಪ॒ಽವಾತಿ॑ । ಯಃ । ಆ॒ಮಸ್ಯ॑ । ಕ್ರ॒ವಿಷಃ॑ । ಗ॒ಂಧಃ । ಅಸ್ತಿ॑ ।

ಸು॒ಽಕೃ॒ತಾ । ತತ್ । ಶ॒ಮಿ॒ತಾರಃ॑ । ಕೃ॒ಣ್ವ॒ಂತು॒ । ಉ॒ತ । ಮೇಧಂ॑ । ಶೃ॒ತ॒ಽಪಾಕಂ॑ । ಪ॒ಚ॒ಂತು॒ ॥ ೧೦ ॥

ಸಾಯಣಭಾಷ್ಯಂ

ಉದರಸ್ಯ ಸಂಬಂಧಿ ಯದೂವಧ್ಯಮೀಷಜ್ಜೀರ್ಣಂ ತೃಣಂ ಪುರೀಷಮಪವಾತಿ ಅಪಗಚ್ಛತಿ। ಯಶ್ಚಾಮಸ್ಯಾಪಕ್ವಸ್ಯ ಕ್ರವಿಷೋ ಮಾಂಸಸ್ಯ ಗಂಧೋಽಸ್ತಿ ಲೇಶೋಽಸ್ತಿ। ಪಾಕಸ್ಯ ಸಮಯೇ ಯತ್ಕಿಂಚಿ-ದೂವಧ್ಯಮಪಕ್ವಸ್ಯ ಚ ಲೇಶೋಽಸ್ತಿ ಆಮಗಂಧೋಽಸ್ತಿ । ತತ್ಸರ್ವಂ ಶಮಿತಾರೋ ವಿಶಸನಕರ್ತಾರಃ ಸುಕೃತಾ ಕೃಣ್ವಂತು । ಸುಕೃತಮುಕ್ತದೋಷರಹಿತಂ ಕುರ್ವಂತು । ಉತಾಪಿ ಚ ಮೇಧಂ ಮೇಧ್ಯಂ ಯಜ್ಞಾರ್ಹಂ ಪಶ್ವವಯವಂ ಶೃತಪಾಕಂ ದೇವಯೋಗ್ಯಪಾಕೋಪೇತಂ ಯಥಾ ಭವತಿ ತಥಾ ಪಚಂತು । ಪಿತೃಮನುಷ್ಯಾದಿಯೋಗ್ಯಮತಿಪಕ್ವಮೀಷತ್ಪಕ್ವಂ ಚ ಮಾ ಕುರ್ವಂತ್ವಿತ್ಯರ್ಥಃ ॥

। ಪ್ರತಿಪದಾರ್ಥ ।

ಉದರಸ್ಯ—(ಈ ಅಶ್ವದ) ಉದರದಲ್ಲಿರತಕ್ಕ । ಯತ್—ಯಾವ । ಊವಧ್ಯಂ—ಪೂರ್ಣವಾಗಿ ಜೀರ್ಣವಾಗದಿರತಕ್ಕ ಆಹಾರವು । ಅಪವಾತಿ—(ಹನನಕಾಲದಲ್ಲಿ) ಹೊರಕ್ಕೆ ಬರುತ್ತದೆಯೋ, । ಯಃ—ಯಾವ। ಆಮಸ್ಯ—ಹಸಿಯಾಗಿರತಕ್ಕ । ಕ್ರವಿಷಃ—ಮಾಂಸದ । ಗಂಧಃ—ವಾಸನೆಯು । ಅಸ್ತಿ—ಇದೆಯೋ । ತತ್—ಅದೆಲ್ಲವನ್ನೂ । ಶಮಿತಾರಃ—ವಧಕಾರರು । ಸುಕೃತಾಃ—ದೋಷರಹಿತವೂ ಶುದ್ಧವೂ ಆದುದನ್ನಾಗಿ । ಕೃಣ್ವಂತು-ಮಾಡಲಿ । ಉತ—ಮತ್ತು । ಮೇಧಂ—ಯಜ್ಞಾರ್ಹವಾದ ಇದರ ಅವಯುವವನ್ನು । ಶೃತಪಾಕಂ—ದೇವತೆಗಳಿಗೆ ಯೋಗ್ಯವಾದ ಪಾಕವುಳ್ಳದ್ದನ್ನಾಗಿ । ಪಚಂತು—ಪಕ್ವಮಾಡಲಿ ।

ಭಾವಾರ್ಥ

ಈ ಯಜ್ಞಾಶ್ವದ ಉದರದಿಂದ ಪೂರ್ಣವಾಗಿ ಜೀರ್ಣವಾಗದಿರತಕ್ಕ ಯಾವ ಆಹಾರವು ಹನನಕಾಲದಲ್ಲಿ ಹೊರಕ್ಕೆ ಬರುತ್ತದೆಯೋ, ಮತ್ತು ಯಾವ ಹಸಿಯಾಗಿರತಕ್ಕ ಮಾಂಸದ ದುರ್ಗಂಧವಿದೆಯೋ ಅದೆಲ್ಲವನ್ನೂ ವಧಕಾರರು ದೋಷರಹಿತವೂ ಶುದ್ಧವೂ ಆದುದನ್ನಾಗಿ ಮಾಡಲಿ. ಮತ್ತು ಯಜ್ಞಾರ್ಹವಾದ ಇದರ ಅವಯುವವನ್ನು ದೇವತೆಗಳಿಗೆ ಯೋಗ್ಯವಾಗುವಂತೆ ಪಕ್ವಮಾಡಲಿ.

## English Translation

Whatever undigested grass fall from his belly; whatever particle of raw flesh may remain; let the immolators make the whole free from defect, and so cook the pure (offering) that it may be perfectly dressed.

### ವಿಶೇಷವಿಷಯಗಳು

ಊವಧ್ಯಂ—ಪೂರ್ಣವಾಗಿ ಜೀರ್ಣವಾಗದಿರುವ ಅನ್ನಕ್ಕೆ ಊವಧ್ಯ ವೆಂದು ಹೆಸರು.

ಊವಧ್ಯಗೋಹಂ ಪಾರ್ಥಿವಂ ಖನತ ।

(ಐ. ಬ್ರಾ. ೨-೬)

ಎಂಬಲ್ಲಿ ಪುರೀಷ ವೆಂದು ಅರ್ಥಮಾಡಿದೆ. ಜೀರ್ಣೋಚ್ಛಿಷ್ಟವಾದ ಆಹಾರವೆಂದಾಗುತ್ತದೆ. ಬೃಹದಾರಣ್ಯಕೋಪ ನಿಷತ್ತಿನಲ್ಲಿ ಇದೇ ಮೇಧ್ಯಾಶ್ವದ ವರ್ಣನೆಯಕಾಲದಲ್ಲಿ.

ಊವಧ್ಯಂ ಸಿಕತಾಃ ಸಿಂಧವೋ ಗುದಾ ।

(ಬೃ. ಉ. ೧-೧-೧)

ಸಿಕತವು ಈ ಮೇಧಾಶ್ವದ ಊವಧ್ಯ ಎಂದರೆ ಉದರಸ್ಥಮರ್ಧಜೀರ್ಣಮಶನಂ ಉದರಸ್ಥವಾದ ಅರ್ಧಜೀರ್ಣವಾದ ಅಹಾರವೆಂದು ಶಂಕರಾಚಾರ್ಯರು ವಿವರಿಸಿದ್ದಾರೆ.

ಶಮಿತಾರಃ—ಶಮಿತೃವು ಯಜ್ಞಪಶುವನ್ನು ವಧಮಾಡುವವನು. ಇವನು ಋತ್ವಿಕ್ಕುಗಳಲ್ಲಿ ಒಬ್ಬನೇ ಅಥವಾ ಬೇರೆಯವನೇ ಎಂಬುದರಲ್ಲಿ ಕೆಲವು ವಿಪ್ರತಿಪತ್ತಿಗಳಿವೆ. ಇದು ಅಧ್ವರ್ಯುವಿನ ಕರ್ತವ್ಯವೆಂದು ಕಂಡುಬಂದರೂ ಸಹ ಅಧ್ವರ್ಯುವು ಇದಕ್ಕೆ ಸಹಾಯಕ್ಕಾಗಿ ಬೇರೆಯವರನ್ನು ಇಟ್ಟಿರುತ್ತಿದ್ದನು. ಅವನು ಋತ್ವಿಕ್ಕುಗಳಲ್ಲೊಬ್ಬನಲ್ಲ ಅಥವಾ ಬ್ರಾಹ್ಮಣನಾಗಿಯೂ ಆಗಿರಬೇಕಾಗಿಲ್ಲ ಎಂದು ಕೆಲವರ ಮತ.

ಅಧ್ರಿಗೋ ಶಮೀಧ್ವಂ ಸುಶಮಿ ಶಮೀಧ್ವಂ ಶಮೀಧ್ವಮಧ್ರಿಗಾ ೩ ಉ ಇತಿ ತ್ರಿರ್ಬ್ರೂಯಾದಪಾಪೇತಿ ಚಾಧ್ರಿಗುರ್ವೈ ದೇವಾನಾಂ ಶಮಿತಾಪಾಪೋ ನಿಗ್ರಭೀತಾ ಶಮಿತೃಭ್ಯಶ್ಚೈವೈನಂ ತನ್ನಿಗ್ರಭೀತೃಭ್ಯಶ್ಚ ಸಂಪ್ರಯಚ್ಛತಿ ॥

(ಐ. ಬ್ರಾ. ೨-೬)

" ಎಲೈ ಅಧ್ರಿಗುವೇ, ಈ ಪಶುವನ್ನು ಹನನಮಾಡು ; ಪೂರ್ಣವಾಗಿ ಕೊಲ್ಲು. ದೇವತೆಗಳಿಗೆಲ್ಲಾ ಅಧ್ರಿಗುವೇ ಶಮಿತೃವಾದುದರಿಂದ ಅವನ ಹೆಸರನ್ನುಚ್ಚರಿಸಿದರೆ ಪಾಪರಹಿತರಾಗುವರು " ಎಂಬುದಾಗಿ ಹೋತೃವು ಹೇಳಿ ಪಶುವನ್ನು ಶಮಿತೃವಿನ ಕೈಯಲ್ಲಿ ಕೊಡುತ್ತಾನೆ.

ನೈಷ ಯಜಮಾನೇನಾನ್ವಾರಭ್ಯೋ ಮೃತ್ಯವೇ ಹ್ಯೇತಂ ನಯಂತಿ .... .... .... ವಪಾಶ್ರಪಣೀಭ್ಯಾಂ ಪ್ರತಿಪ್ರಸ್ಥಾತಾ ಪ್ರತಿಪ್ರಸ್ಥಾತಾರಮಧ್ವರ್ಯುರಧ್ವರ್ಯುಂ ಯಜಮಾನ ಏತೆದು ಪರೋಕ್ಷಮನ್ವಾರಬ್ಧಂ ಭವತಿ ।

(ಶ. ಬ್ರಾ ೩-೮-೧-೧೦)

ಇತ್ಯಾದಿ ವಾಕ್ಯಗಳಿಂದ ಹಂತೃವು ಬೇರೆಯೆಂದೂ ಅಧ್ವರ್ಯ್ವಾದಿಗಳು ಹನನಕಾಲದಲ್ಲಿ ಒಂದು ವಿಚಿತ್ರವಾದ ರೀತಿಯಲ್ಲಿ ಪಶುವನ್ನು ಹಿಡಿದುಕೊಳ್ಳುತ್ತಾರೆಂದೂ ವರ್ಣಿಸಿದೆ. ಆ ಕಾಲದಲ್ಲಿ ಪಶುವನ್ನು ಛೇದಿಸತಕ್ಕ ಶಮಿತೃವನ್ನು ಕುರಿತು ದೇವತೆಗಳಿಗೆ ಯೋಗ್ಯವಾದ ರೀತಿಯಲ್ಲಿ ಪಕ್ವವಾಗುವಂತೆ ಸಿದ್ಧಮಾಡಬೇಕೆಂದು ತಿಳಿಸಿದೆ

### ವ್ಯಾಕರಣಪ್ರಕ್ರಿಯಾ

ಉದರಸ್ಯ—ದೄ ವಿದಾರಣೇ ಧಾತು. ಉದ್ ಉಪಸರ್ಗ. ಉಪಪದವಾಗಿರುವಾಗ ಉದಿ ದೃಣಾತೇರ-ಜಲೌ-(ಉ. ಸೂ. ೬-೬೪೭) ಎಂಬುದರಿಂದ ಅಲ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. ಲಿತ್ತಾದುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

ಅಪವಾತಿ—ವಾ ಗತಿ ಗಂಧನಯೋಃ ಧಾತು. ಲಟ್ ಪ್ರಥಮಪುರುಷಏಕವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ. ತಿಙಿಚೋದಾತ್ತವತಿ (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಅಪ) ಅನುದಾತ್ತಸ್ವರ ಬರುತ್ತದೆ.

ಸುಕೃತಾ—ಡುಕೃಙ್ ಕರಣೇ ಧಾತು. ಕ್ತ ಪ್ರತ್ಯಯ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಸುಪಾಂ ಸುಲುಕ್—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ ಬರುತ್ತದೆ.

ಕೃಣ್ವಂತು—ಕೃವೀ ಹಿಂಸಾಕರಣಯೋಶ್ಚ ಧಾತು. ಲೋಟ್ ಪ್ರಥಮಪುರುಷಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಶೃತಪಾಕಮ್—ಪರಾದಿಶ್ಛಂದಸಿ ಬಹುಲಮ್ (ಪಾ. ಸೂ. ೬-೧-೧೯೯) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

ಪಚಂತು—ಡುಪಚಿಷ್ ಪಾಕೇ ಧಾತು. ಲೋಟ್ ಪ್ರಥಮಪುರುಷಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೧೦ ॥



### ಸಂಹಿತಾಪಾಠಃ

ಯತ್ತೇ ಗಾತ್ರಾದಗ್ನಿನಾ ಪಚ್ಯಮಾನಾದಭಿ ಶೂಲಂ ನಿಹತಸ್ಯಾವಧಾವತಿ ।
ಮಾ ತದ್ಭೂಮ್ಯಾಮಾ ಶ್ರಿಷನ್ಮಾ ತೃಣೇಷು ದೇವೇಭ್ಯಸ್ತದುಶದ್ಭ್ಯೋ ರಾತಮಸ್ತು ॥ ೧೧ ॥

ಪದಪಾಠಃ

ಯತ್ । ತೇ । ಗಾತ್ರಾತ್ । ಅಗ್ನಿನಾ । ಪಚ್ಯಮಾನಾತ್ । ಅಭಿ । ಶೂಲಂ।ನಿऽಹತಸ್ಯ । ಅವऽಧಾವತಿ ।

ಮಾ । ತತ್ । ಭೂಮ್ಯಾಂ।ಆ । ಶ್ರಿಷತ್ । ಮಾ । ತೃಣೇಷು । ದೇವೇಭ್ಯಃ । ತತ್ । ಉಶತ್ऽಭ್ಯಃ ।

ರಾತಂ । ಅಸ್ತು ॥ ೧೧ ॥

ಸಾಯಣಭಾಷ್ಯಂ

ಹೇ ಅಶ್ವ ತೇ ತವಾಗ್ನಿನಾ ಪಚ್ಯಮಾನಾದ್ಗಾತ್ರಾದ್ಯದೂಷ್ಮರೂಪಂ ರಸೋ ವಾ ಯತ್ಕಿಂಚಿದವಧಾವತಿ । ತಥಾ ನಿಹತಸ್ಯ ನಿಃಶೇಷೇಣ ಹತಸ್ಯ ತವ ಯದಂಗಂ ರಸರೂಪಂ ಶೂಲಮಭಿಲಕ್ಷ್ಯಾವಧಾವತಿ ನಿರ್ಗಚ್ಛತಿ । ತತ್ ತದಂಗಂ ಭೂಮ್ಯಾಂ ಮಾ ಶ್ರಿಷತ್ । ಆಶ್ಲಿಷ್ಟಂ ಮಾ ಭೂತ್ ॥ ಶ್ರಿಷೇಃ ಪುಷಾದಿತ್ವಾದಙ್ ॥ ಪಾಕಸಮಯೇ ತಥಾ ಮಾ ತೃಣೇಷು ವಿಶಸನಸಮಯೇ ದರ್ಭೇಷು ಮಾಪಗಚ್ಛತು । ತರ್ಹಿ ತತ್ಪತಿತಂ ಕುತ್ರ ಗಚ್ಛತ್ವಿತಿ ಚೇತ್ ಉಚ್ಯತೇ । ತತ್ತಾದೃಶಮುಶದ್ಭ್ಯಃ ಕೃತ್ಸ್ನಂ ಹವಿಃ ಕಾಮಯಮಾನೇಭ್ಯೋ ದೇವೇಭ್ಯೋ ರಾತಂ ದತ್ತಮಸ್ತು ॥

ಪ್ರತಿಪದಾರ್ಥ

ಹೇ ಅಶ್ವ—(ಎಲೈ ಅಶ್ವವೇ)। ಅಗ್ನಿನಾ—ಬೆಂಕಿಯಿಂದ । ಪಚ್ಯಮಾನಾತ್-ಬೇಯಿಸಲ್ಪಡುವ । ತೇ—ನಿನ್ನ । ಗಾತ್ರಾತ್-ಶರೀರದಿಂದ । ಯತ್-ಯಾವಭಾಗವು ಅಥವಾ ದ್ರವರೂಪದಲ್ಲಿರುವ ರಸವು। ಅವಧಾವತಿ-ಕೆಳಗೆ ಚೆಲ್ಲಿ ಹರಿದುಹೋಗುವುದೋ (ಮತ್ತು) । ನಿಹತಸ್ಯ-ನಿನ್ನ ಮೃತಶರೀರದ ಯಾವ ಭಾಗವು । ಶೂಲಮಭಿ-(ಮಾಂಸವನ್ನು ಚುಚ್ಚಿ ಬೇಯಿಸುವ) ಸಲಾಕೆಯಿಂದ ಕೆಳಗೆ ಜಾರಿಬಿದ್ದುಹೋಗುವುದೋ । ಭೂಮ್ಯಾಂ ತತ್—ನೆಲದಮೇಲೆ ಬಿದ್ದ ಆಭಾಗವು । ಮಾ ಆಶ್ರಿತ್— ಭೂಮಿಗೆ ಅಂಟಕೊಳ್ಳದಿರಲಿ (ಹಾಗೆಯೇ ಹಾಸಿರುವ ದರ್ಭೆಗಳ ಮೇಲೆ ಬಿದ್ದ ಭಾಗವೂ) । ಮಾ (ಶ್ರಿಷತ್)—ಅಂಟಕೊಳ್ಳದಿರಲಿ (ಆದರೆ) । ತತ್—ಈ ರೀತಿ ಚೆಲ್ಲಿಹೋದ ಭಾಗವು । ಉಶದ್ಭ್ಯಃ— ಹವಿಸ್ಸೆಲ್ಲವನ್ನೂ ಅಪೇಕ್ಷಿಸುವ । ದೇವೇಭ್ಯಃ—ದೇವತೆಗಳಿಗೆ । ರಾತಂ ಅಸ್ತು—ಅರ್ಪಿಸಿದಂತೆ ಆಗಲಿ ।

ಭಾವಾರ್ಥ

ಎಲೈ ಅಶ್ವವೇ, ನಿನ್ನ ಮೃತಶರೀರವು ಅಗ್ನಿಯಲ್ಲಿ ಬೇಯಿಸಲ್ಪಡುತ್ತಿರುವಾಗ ಬೇಯಿಸುವ ಪಾತ್ರೆಯಿಂದ ಕೆಳಕ್ಕೆ ಬಿದ್ದು ಚೆಲ್ಲಿಹೋಗುವ ರಸಾದಿಭಾಗವೂ ಸಲಾಕಿಯಿಂದ ಚುಚ್ಚಿ ಮಾಂಸವನ್ನು ಸುಡುತ್ತಿರುವಾಗ ಆ ಸಲಾಕಿಯಿಂದ ಜಾರಿಬಿದ್ದುಹೋಗುವ ಭಾಗವೂ (ತುಂಡು ಅಥವಾ ಚೂರು) (ಅವು) ನೆಲದ ಮೇಲೆ ಬಿದ್ದರೂ ಅಥವಾ ಹರಡಿರುವ ದರ್ಭೆಯ ಮೇಲೆ ಬಿದ್ದರೂ ಅವು ವ್ಯರ್ಥವಾಗದೆ ಹವಿಃಪ್ರಿಯರಾದ ದೇವತೆಗಳಿಗೇ ಅರ್ಪಿತವಾಗಲಿ.

## English Translation

whatever (portion) of your slaughtered (body) fall from your carcase when it is being roasted by the fire, (escaping) from the spit: let it not be left on the ground, nor on the (sacred) grass, but let it (all) be given to the longing gods.

॥ ವಿಶೇಷಃ ಪಯಗಳು ॥

ಮುಖ್ಯಾಭಿಪ್ರಾಯವು—ಯಜ್ಞಪಶುವಾದ ಅಶ್ವದ ಮಾಂಸವನ್ನು ಹೋಮಮಾಡುವುದಕ್ಕಾಗಿ ದೊಡ್ಡ ಹಂಡೆಯಂತಿರುವ ಉಖಾ ಎಂಬ ಪಾತ್ರೆಯಲ್ಲಿ ಹಾಕಿ ಬೇಯಿಸುತ್ತಿರುವಾಗ ಕುದಿಹತ್ತಿ ಪಾತ್ರೆಯಿಂದ ಸ್ವಲ್ಪಭಾಗವು ಚೆಲ್ಲಿಹೋಗಬಹುದು. ಅಥವಾ ಸೌಟು ಮೊದಲಾದ ಉಪಕರಣಗಳಿಂದ ಕೆದುಕುತ್ತಿರುವಾಗ ನೆಲದ ಮೇಲೆ ಕೆಲವು ಭಾಗವು ಬೀಳಬಹುದು. ಮತ್ತು ಮಾಂಸವನ್ನು ಬೇಯಿಸುವ ವಿಧಾನವಲ್ಲದೆ ಮಾಂಸದ ತುಂಡಿಗೆ ಒಂದು ಉದ್ದವಾದ ಸಲಾಕಿಯನ್ನು (ಶೂಲ spit) ಚುಚ್ಚಿ ಬೆಂಕಿಯ ಮೇಲೆ ಹಿಡಿದು ಸುಡುವುದೂ ಉಂಟು. ಈ ರೀತಿ ಸುಡುವಾಗ ಆ ಸಲಾಕಿಯಿಂದ ಒಂದೆರಡು ಸಣ್ಣ ಚೂರುಗಳು ಜಾರಿಬೀಳುವುದೂ ಉಂಟು. ಕೆಳಗೆ ಬಿದ್ದ ಇಂತಹ ಮಾಂಸದ ಚೂರುಗಳು ಭೂಮಿಗೆ ಅಂಟಿಕೊಂಡು ವ್ಯರ್ಥವಾಗದೆ ದೇವತೆಗಳಿಗೆ ಅರ್ಪಿತವಾಗಲಿ ಎಂದು ಋಷಿಯು ಪ್ರಾರ್ಥಿಸಿರುವನು.

ಯತ್ತೇ ಗಾತ್ರಾತ್—ಋಕ್ಕಿನಲ್ಲಿ ತೇ-ನಿನ್ನ ಎಂದು ಅಶ್ವವನ್ನು ಸಂಬೋಧಿಸಿರುವ ಶಬ್ದಗಳ ಪ್ರಯೋಗವು ಮೃತವಾದ ಅಶ್ವಕ್ಕೆ ಸಂಬಂಧಿಸಿ ಇರುವುದರಿಂದ ಈ ರೀತಿ ಪ್ರಯೋಗವು ವಿರುದ್ಧವಲ್ಲವೇ ಎಂದರೆ, ಹಾಗಲ್ಲ. ಅಶ್ವವನ್ನು ವಧಿಸಿ ಅದರ ಮಾಂಸವನ್ನು ಬೇಯಿಸುತ್ತಿರುವಾಗ ಈ ಮಂತ್ರವನ್ನು ಋಷಿಯು ಪಠಿಸಿರುವನೆಂದು ಹೇಳಬೇಕಾಗಿಲ್ಲ. ಅಶ್ವವನ್ನು ವಧಿಸುವುದಕ್ಕೆ ಮುಂಚೆಯೇ ಮುಂದೆ ನಡೆಯಬಹುದಾದ ಕರ್ಮವನ್ನು ಸೂಚಿಸಿ ಅಶ್ವವನ್ನು ಸಂಬೋಧಿಸುತ್ತಿರುವನೆಂದು ತಿಳಿಯಬೇಕು.

ಶೂಲಂ—ಉದ್ದವಾದ ಸಲಾಕಿ, (spit) ಮಾಂಸವನ್ನು ಸುಡುವಾಗ ಅದಕ್ಕೆ ಸಲಾಕಿಯಿಂದ ಚುಚ್ಚಿ ಬೆಂಕಿಯ ಮೇಲೆ ಹಿಡಿದು ಸುಡುವುದು ಈಗಲೂ ರೂಢಿಯಾಗಿರುವುದು. ಅಥವಾ ದೊಡ್ಡ ಪಾತ್ರೆಯಲ್ಲಿ ಮಾಂಸವನ್ನು ಬೇಯಿಸುತ್ತಿರುವಾಗ ಅದನ್ನು ಆಗಾಗ ಕೆದಕುವುದಕ್ಕಾಗಿ ಉದ್ದವಾದ ಸಲಾಕಿಯನ್ನು (ಅಥವಾ ಸೌಟು) ಉಪಯೋಗಿಸುವರು. ಈ ಎರಡು ಸಂದರ್ಭಗಳಲ್ಲಿಯೂ ಮಾಂಸದ ಕೆಲವು ಭಾಗವು ಭೂಮಿಯ ಮೇಲೆ ಬೀಳುವ ಸಂಭವವಿರುವುದು. ಹಾಗೆ ಬಿದ್ದ ಭಾಗವು ವ್ಯರ್ಥವಾಗದೆ ದೇವತೆಗಳಿಗೇ ಅರ್ಪಿತವಾಗಲಿ ಎಂದು ಋಷಿಯ ಆಶಯವು. ಶೂಲಂ ಎಂಬ ಶಬ್ದವು ಋಗ್ವೇದದಲ್ಲಿ ಈ ಋಕ್ಕಿನಲ್ಲಿ ಮಾತ್ರವಿರುವುದು. ಮತ್ತೆಲ್ಲಿಯೂ ಇರುವುದಿಲ್ಲ.

ತೃಣೇಷು—ವಿಶಸನಸಮಯೇ ದರ್ಭೇಷು ಮಾಪಗಚ್ಛತು । ಅಶ್ವಶರೀರವನ್ನು ಕತ್ತರಿಸುವಾಗ ದರ್ಭೆಗಳಮೇಲೆ ಬೀಳುವ ಭಾಗವು ವ್ಯರ್ಥವಾಗದಿರಲಿ. ಯಜ್ಞಾದಿಗಳನ್ನು ಮಾಡುವಾಗ ದೇವತೆಗಳನ್ನು ಆಹ್ವಾನಮಾಡಿ ಅವರು ಒಂದು ಕುಳಿತುಕೊಳ್ಳುವುದಕ್ಕಾಗಿ ಬರ್ಹಿಃ ಎಂಬ ದರ್ಭೆಗಳನ್ನು ಭೂಮಿಯಮೇಲೆ ಹರಡಿ ಆಸನವನ್ನು ಸಿದ್ಧಪಡಿಸುವುದು ರೂಢಿಯು. ಇದರಂತೆ ಯಜ್ಞಸಾಮಗ್ರಿಗಳಾದ ಯಜ್ಞಪಾತ್ರೆ (ಆಜ್ಯಪಾತ್ರೆ ಇತ್ಯಾದಿ), ಹವಿಸ್ಸು,

ಅನ್ನ, ಪುರೋಡಾಶ ಮೊದಲಾದ ವಸ್ತುಗಳನ್ನೂ ಸಹ ನೆಲದಮೇಲೆ ದರ್ಭೆಗಳನ್ನು ಹರಡಿ ಅದರಮೇಲೆ ಇಡುವುದು ವಾಡಿಕೆ. ಆದುದರಿಂದ ಅಶ್ವದ ಮೃತಶರೀರವನ್ನು ಕತ್ತರಿಸುವಾಗ ಆ ಶರೀರವು ಆ ಕಾಲದಲ್ಲಿ ದರ್ಭೆಯಮೇಲೆ ಇರುವುದರಿಂದ ಕೆಳಗೆ ಬೀಳುವ ರಕ್ತಮಾಂಸಾದಿಗಳು ದರ್ಭೆಯಮೇಲೆಯೇ ಬೀಳುವುವು. ಅಥವಾ ಇಲ್ಲಿ ಬರ್ಹಿಃ ಮೊದಲಾದ ದರ್ಭೆಯನ್ನು ಸೂಚಿಸುವ ಶಬ್ದಪ್ರಯೋಗವಿಲ್ಲದೆ ತೃಣೇಷು—ಹುಲ್ಲಿನಮೇಲೆ ಎಂದು ಇರುವುದರಿಂದಲೂ ಭೂಮಿಯಮೇಲೆ ಸಾಧಾರಣವಾಗಿ ಹುಲ್ಲು ಬೆಳೆದಿರುವುದರಿಂದಲೂ, ಹುಲ್ಲಿನಮೇಲೆ ಬೀಳಬಹುದಾದ ರಕ್ತಮಾಂಸಗಳು ಎಂದಾದರೂ ಅರ್ಥವಾಗಬಹುದು.

ರಾತಂ—ರಾ ದಾನೇ ಕೊಡು, ದಾನಮಾಡು ಎಂಬ ಅರ್ಥವುಳ್ಳ ಧಾತುವಿನಿಂದ ನಿಷ್ಪನ್ನವಾದ ರಾತಂ ಎಂಬ ಶಬ್ದಕ್ಕೆ ಕೊಡುವುದು, ದಾನಮಾಡುವುದು ಅಥವಾ ಅರ್ಪಿಸುವುದು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

ಗಾತ್ರಾತ್—ಗಮ್ಲೃ ಗತೌ ಧಾತು. ಗಮೇರಾಚ (ಉ. ಸೂ. ೪-೬೦೮) ಎಂಬುದರಿಂದ ತ್ರನ್ ಪ್ರತ್ಯಯ. ಧಾತುವಿಗೆ ಆತ್ವ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪಂಚಮ್ಯಂತರೂಪ.

ಪಚ್ಯಮಾನಾತ್—ಡುಪಚಷ್ ಪಾಕೇ ಧಾತು. ಕರ್ಮಣಿಯಲ್ಲಿ ಲಟಿಗೆ ಶಾನಚಾದೇಶ. ಸಾರ್ವಧಾತುಕೇಯಕ್ (ಪಾ. ಸೂ. ೩-೧-೬೭) ಎಂಬುದರಿಂದ ಯಕ್. ಆನೇಮುಕ್ (ಪಾ. ಸೂ. ೭-೨-೮೨) ಎಂಬುದರಿಂದ ಮುಕಾಗಮ. ತಾಸ್ಯನುದಾತ್ತೇತ್—(ಪಾ ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಯಕ್‌ಸ್ವರ ಉಳಿಯುತ್ತದೆ.

ನಿಹತಸ್ಯ—ಹನ ಹಿಂಸಾಗತ್ಯೋಃ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಅನುದಾತ್ತೋಪದೇಶ—(ಪಾ. ಸೂ. ೬-೪-೩೭) ಎಂಬುದರಿಂದ ಧಾತು ನಕಾರ ಲೋಪ. ಗತಿರನಂತರಃ (ಪಾ ಸೂ. ೬-೨-೪೯) ಎಂಬುದರಿಂದ ಗತಿಗೆ (ನಿ) ಉದಾತ್ತಸ್ವರ ಬರುತ್ತದೆ.

ಅವಧಾವತಿ—ಧಾವು ಗತಿಶುದ್ಧ್ಯೋಃ ಧಾತು. ಲಡಂತರೂಪ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ. ತಿಙಿಚೋದಾತ್ತವತಿ (ಪಾ ಸೂ. ೮-೧-೭೧) ಎಂಬುದರಿಂದ ಗತಿಗೆ (ಅವ) ನಿಘಾತಸ್ವರ ಬರುತ್ತದೆ.

ಶ್ರಿಷತ್—ಶ್ರಿಷ ಆಲಿಂಗನೇ ಧಾತು. ದಾಹಾರ್ಥದಲ್ಲಿ ಭ್ವಾದಿಯಲ್ಲಿ ಪಠಿತವಾಗಿದೆ. ಮಾಙಿಲುಙ್ (ಪಾ. ಸೂ. ೩-೩-೧೭೫) ಎಂಬುದರಿಂದ ಲುಙ್. ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. ಇಕಾರ ಲೋಪ. ಪುಷಾದಿಯಲ್ಲಿ ಸೇರಿರುವುದರಿಂದ ಪುಷಾದಿದ್ಯುತಾದಿ-(ಪಾ. ಸೂ. ೩-೧-೫೫) ಎಂಬುದರಿಂದ ಚ್ಲಿಗೆ ಅಙಾದೇಶ. ಙಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ನ ಮಾಙ್‌ಯೋಗೇ (ಪಾ. ಸೂ. ೬-೪-೭೪) ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

ಉಶದ್ಭ್ಯಃ—ವಶ ಕಾಂತೌ ಧಾತು ಲಟಿಗೆ ಶತ್ರಾದೇಶ. ಶಪಿಗೆ ಲುಕ್. ಗ್ರಹಿಜ್ಯಾವಯಿ (ಪಾ. ಸೂ. ೬-೧-೧೬) ಎಂಬುದರಿಂದ ಧಾತುವಿನ ವಕಾರಕ್ಕೆ ಸಂಪ್ರಸಾರಣ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ರಾತಮ್—ರಾ ಆದಾನೇ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥೧೧॥

———:o:———

ಸಂಹಿತಾಪಾಠಃ

ಯೇ ವಾಜಿನಂ ಪರಿಪಶ್ಯಂತಿ ಪಕ್ವಂ ಯ ಈಮಾಹುಃ ಸುರಭಿರ್ನಿರ್ಹರೇತಿ।
ಯೇ ಚಾರ್ವತೋ ಮಾಂಸಭಿಕ್ಷಾಮುಪಾಸತ ಉತೋ ತೇಷಾಮಭಿ-
ಗೂರ್ತಿರ್ನ ಇನ್ವತು ॥ ೧೨ ॥

। ಪದಪಾಠಃ ।

ಯೇ । ವಾಜಿನಂ । ಪರಿऽಪಶ್ಯಂತಿ । ಪಕ್ವಂ । ಯೇ । ಈಂ । ಆಹುಃ । ಸುರಭಿಃ । ನಿಃ । ಹರ । ಇತಿ ।
ಯೇ । ಚ । ಅರ್ವತಃ । ಮಾಂಸऽಭಿಕ್ಷಾಂ । ಉಪऽಆಸತೇ । ಉತೋ ಇತಿ । ತೇಷಾಂ । ಅಭಿऽಗೂರ್ತಿಃ ।
ನಃ । ಇನ್ವತು ॥ ೧೨ ॥

॥ ಸಾಯಣಭಾಷ್ಯಂ ॥

ಯೇ ಪಕ್ವಂ ವಾಜಿನಮಶ್ವಮಶ್ವಾವಯವಂ ಪರಿಪಶ್ಯಂತಿ ಪರಿತಃ ಪಾವನಬುದ್ಧ್ಯೇಕ್ಷಂತೇ । ಯ ಈಂ ಯೇ ಚೈನಂ ಸುರಭಿಃ ಶೋಭನಗಂಧೋಽತೋ ನಿರ್ಹರ ಕಿಂಚಿದಪ್ಯಸ್ಮಭ್ಯಂ ದೇಹೀತ್ಯಾಹುಃ । ಯದ್ವಾ । ನಿಃಶೇಷೇಣ ದೇವೇಭ್ಯೋ ಹರೇತ್ಯಾಹುಃ । ಯತಃ ಸುರಭಿಃ ಅತೋ ದೇವಯೋಗ್ಯಮಿತಿ । ಕಿಂಚ ಯೇ ಚಾರ್ವತೋ ಮಾಂಸಭಿಕ್ಷಾಮುಪಾಸತೇ ಯೇ ನರಾ ಅಸ್ಯಾರ್ವತೋಽಶ್ವಸ್ಯ ಹುತಶಿಷ್ಟ-ಮಾಂಸಯಾಚನಾಮುಪಾಸತೇ ಕಾಂಕ್ಷಂತೇ । ಉತೋ ಅಪಿ ಚ ತೇಷಾಮುಕ್ತವಿಧಾನಾಮಭಿಗೂ-ರ್ತಿರಭಿತ ಉದ್ಯಮನಂ ನೋಽಸ್ಮಾನಿನ್ವತು । ವ್ಯಾಪ್ನೋತು । ಯಥಾಸ್ಮಾಭಿರಶ್ವ ಉಪಾಲಬ್ಧ ಏವಂ ಸ್ಪೃಹಯಂತಿ ತಥಾ ಯಜ್ಞೋ ನಿರ್ವಾಹಯತ್ವಿತ್ಯರ್ಥಃ ॥ ಯದ್ವಾ । ಮಂತ್ರೋ ದೇವಪರೋ ವ್ಯಾಖ್ಯೇಯಃ । ಯೇ ದೇವಾ ವಾಜಿನಂ ಪಕ್ವಂ ಪರಿಪಶ್ಯಂತಿ ಕದಾ ಹೋಷ್ಯತೀತಿ ವಿಲಂಬಂ ದೃಷ್ಟ್ವಾ ಯೇ ಚ ಸುರಭಿರೀ ಮೇನಂ ನಿರ್ಹರ ನಿಃಶೇಷೇಣಾಸ್ಮಭ್ಯಂ ದೇಹೀತ್ಯಾಹುಃ ಯೇ ಚಾರ್ವತೋಽಶ್ವಸ್ಯ ಮಾಂಸಭಿಕ್ಷಾಮುಪಾಸತೇ ತೇಷಾಮಭಿಗೂರ್ತಿರ್ನ ಇನ್ವತು । ತೇಷಾಮುದ್ಯಮಃ ಸಫಲೋ ಭವತ್ವಿತ್ಯರ್ಥಃ॥

ಪ್ರತಿಪದಾರ್ಥ

ಯೇ—ಯಾರು । ಪಕ್ವಂ—ಬೇಯುತ್ತಿರುವ । ವಾಜಿನಂ—ಅಶ್ವಾವಯವಗಳನ್ನು (ಮಾಂಸವನ್ನು) । ಪರಿಪಶ್ಯಂತಿ—ಆಸಕ್ತಿಯಿಂದ ನೋಡುತ್ತಿರುವರೋ । ಯೇ—ಯಾರು । ಈಂ—ಈ ಬೇಯಿಸುತ್ತಿರುವ ಅಶ್ವ ಮಾಂಸವನ್ನು । ಸುರಭಿಃ—ಸುವಾಸನೆಯಿಂದ ಘಮಘಮಿಸುತ್ತಿರುವುದೆಂದೂ (ಆದ್ದರಿಂದ) । ನಿಃ ಹರ ಇತಿ—(ನಮಗೂ) ಕೊಡಬೇಕೆಂದು ಅಥವಾ ಚೆನ್ನಾಗಿ ಬೆಂದು ಘಮಘಮಿಸುತ್ತಿರುವುದರಿಂದ ದೇವತೆಗಳಿಗೆ ಅರ್ಪಿಸಬೇಕೆಂದು ಆಹುಃ—ಹೇಳುವರೋ । ಯೇ ಚ—ಮತ್ತು ಯಾರು । ಅರ್ವತಃ—ಪಕ್ವವಾಗುತ್ತಿರುವ ಅಶ್ವದ । ಮಾಂಸ ಭಿಕ್ಷಾಂ— (ಹುತಶಿಷ್ಟವಾದ) ಮಾಂಸದ ಸ್ವಲ್ಪಭಾಗವನ್ನು । ಉಪಾಸತೇ—ಅಪೇಕ್ಷಿಸುವರೋ । ಉತೋ—ಮತ್ತು । ತೇಷಾಂ—ಈ ಜನರ (ಅಥವಾ ಋತ್ವಿಕ್ಕುಗಳ) । ಅಭಿಗೂರ್ತಿಃ—ಶ್ರದ್ಧಾಯುತವಾದ ಬುದ್ಧಿಯು ಅಥವಾ ಕೋರಿಕೆಯು । ನಃ—ನಮ್ಮ (ಇಷ್ಟಾರ್ಥಗಳನ್ನು) । ಇನ್ವತು—ಕೈಗೂಡುವಂತೆ ಮಾಡಲಿ.

ಭಾವಾರ್ಥ

ಅಶ್ವದ ಅವಯವಗಳೂ ಮಾಂಸವೂ ಬೇಯುತ್ತಿರುವುದನ್ನು ಬಹಳ ಆಸಕ್ತಿಯಿಂದ ಯಾರು ನೋಡುತ್ತಿರುವರೋ, ಮಾಂಸವು ಚೆನ್ನಾಗಿ ಬೆಂದು ಸುವಾಸನೆಯನ್ನು ಬೀರುತ್ತಿದೆಯಾದ್ದರಿಂದ ಅದನ್ನು ಬೆಂಕಿಯಿಂದ ಕೆಳಗಿಳಿಸಿ ದೇವತೆಗಳಿಗೆ ಅರ್ಪಿಸಿ ತಮಗೂ ಕೊಡಬೇಕೆಂದು ಯಾರು ಅಪೇಕ್ಷಿಸುವರೋ ಅವರ ಕೋರಿಕೆಗಳೆಲ್ಲಾ ನೆರವೇರಲಿ.

## English Translation

Let their exertions be for our good who watch the cooking of the horse : who say, It is fragrant : therefore give us some : who solicit the flesh of the horse as alms.

ವಿಶೇಷವಿಷಯಗಳು

ಯೇ ವಾಜಿನಂ ಪರಿಪಶ್ಯಂತಿ ಪಕ್ವಂ—ಅಶ್ವಾವಯವಂ ಪರಿಪಶ್ಯಂತಿ ಪರಿತಃ ಪಾವನಬುದ್ಧ್ಯೇಕ್ಷಂತೇ । ಭಾಂಡದಲ್ಲಿ ಅಶ್ವಮಾಂಸವು ಬೇಯುತ್ತಿರುವುದನ್ನು ದೇವತೆಗಳಿಗೆ ಅರ್ಪಿತವಾಗಲಿ ಎಂಬ ಒಳ್ಳೆಯ ಬುದ್ಧಿಯಿಂದ ನೋಡುತ್ತಿರುವವರು. ಇಲ್ಲಿ ವಾಜಿನಂ ಎಂದೆ ಭಾಂಡದಲ್ಲಿ ಬೇಯುತ್ತಿರುವ ಅಶ್ವಾವಯವಗಳು ಅಥವಾ ಅಶ್ವದ ಮಾಂಸವು. ಏಕೆಂದರೆ ಅಶ್ವವನ್ನೇ ಪೂರ್ತಿಯಾಗಿ ಬೇಯಿಸದೆ ಅದನ್ನು ಕತ್ತರಿಸಿ ಭಾಂಡದಲ್ಲಿಹಾಕಿ ಬೇಯಿಸುವರು. ಈ ವಿಷಯದ ವರ್ಣನೆಯು ಮುಂದಿನ ಋಕ್ಕುಗಳಲ್ಲಿ ಉಕ್ತವಾಗಿರುವುದು. ಪರಿಪಶ್ಯಂತಿ—ಎಂದರೆ ಬೆಂಕಿಯ ಸುತ್ತಲೂ ನೆರೆದುನಿಂತು ಎಷ್ಟುಹೊತ್ತಿಗೆ ಬೇಯುವುದೆಂದು ಬಹಳ ಕುತೂಹಲದಿಂದ ನೋಡುತ್ತಿರುವರೆಂದಭಿಪ್ರಾಯವು.

ಸುರಭಿಃ—ಅಶ್ವಮಾಂಸವು ಚೆನ್ನಾಗಿ ಬೆಂದಮೇಲೆ ಬೆಂದಿರುವುದೆಂದು ಸೂಚಿಸುವ ಒಳ್ಳೆಯ ವಾಸನೆಯು ಬರುತ್ತಿದೆಯೆಂದೂ ಆದುದರಿಂದ ಇನ್ನು ಬೇಯಿಸುವುದು ಸಾಕೆಂದೂ ಬೆಂಕಿಯಿಂದ ಕೆಳಗಿಳಿಸಬೇಕೆಂದೂ ಅರ್ಥವು.

ನಿಃ ಹರ ಇತಿ—ಈ ಶಬ್ದಗಳಿಗೆ ಭಾಷ್ಯಕಾರರು—ನಿರ್ಹರ ಕಿಂಚಿದಸ್ಮಭ್ಯಂ ದೇಹೀತ್ಯಾಹುಃ । ಯದ್ವಾ ಯತಃ ಸುರಭಿಃ ಅತೋ ದೇವಯೋಗ್ಯಮಿತಿ ನಿಶ್ಶೇಷೇಣ ದೇವೇಭ್ಯೋ ಹರೇತ್ಯಾಹುಃ । ಎಂದು ಎರಡು

ವಿಧವಾದ ಅರ್ಥವನ್ನು ಹೇಳಿರುವರು. ಬೆಂದಿರುವ ಮಾಂಸವನ್ನು ತಮಗೂ ಸ್ವಲ್ಪಕೊಡಬೇಕೆಂದು ಕೆಲವರು ಹೇಳುವರು ಎಂದು ಒಂದುವಿಧವಾದ ಅರ್ಥವನ್ನೂ, ಚೆನ್ನಾಗಿ ಬೆಂದು ಸುವಾಸನೆ ಬರುತ್ತಿರುವುದರಿಂದ ಅದನ್ನು ಪೂರ್ತಿಯಾಗಿ ದೇವತೆಗಳಿಗೆ ಅರ್ಪಿಸಬೇಕೆಂದು ಮತ್ತೊಂದು ವಿಧವಾದ ಅರ್ಥವನ್ನೂ ಹೇಳಿರುವರು. ಈ ಎರಡುವಿಧವಾದ ಅರ್ಥಗಳಲ್ಲಿ ತಮಗೂ ಸ್ವಲ್ಪಕೊಡಬೇಕೆಂದು ಹೇಳುವರು ಎಂಬ ಅರ್ಥವು ಅಷ್ಟುಸಮಂಜಸವಾಗಿ ಕಾಣುವುದಿಲ್ಲ. ಏಕೆಂದರೆ ಈ ಋಕ್ಕಿನ ಉತ್ತರಾರ್ಧದಲ್ಲಿಯೇ ಈ ಅಭಿಪ್ರಾಯವನ್ನೇ ಸೂಚಿಸುವ **ಯೇ ಚಾರ್ವತೋ ಮಾಂಸಭಿಕ್ಷಾಮುಪಾಸತೇ**—ಮತ್ತೆ ಕೆಲವರು ಬೇಯಿಸಿದ ಅಶ್ವಮಾಂಸವನ್ನು ತಮಗೂ ಬೇಕೆಂದು ಅಪೇಕ್ಷಿಸುವರು ಎಂದಿರುವುದರಿಂದ ಎರಡನೆಯ ಅರ್ಥವಾದ ದೇವತೆಗಳಿಗೆ ಸಮರ್ಪಿಸು ಎಂಬ ಅರ್ಥವೇ ಸರಿಯಾಗಿ ಹೊಂದುವುದು ಅಥವಾ **ಸುರಭಿಃ ನಿರ್ಹರ** ಎಂದಿರುವುದು—ಸಾಕು. ಇನ್ನು ಹೆಚ್ಚಾಗಿ ಬೇಯಿಸಬೇಕಾಗಿಲ್ಲ. ಆದುದರಿಂದ ಭಾಂಡವನ್ನು ಬೆಂಕಿಯಿಂದ ಕೆಳಕ್ಕೆ ಇಳಿಸು ಎಂಬ ಮತ್ತೊಂದು ವಿಧವಾದ ಅರ್ಥವನ್ನಾದರೂ ಹೇಳಬಹುದು. ಈ ಕೊನೆಯ ಅಭಿಪ್ರಾಯವನ್ನು ಮಹೀಧರ ಎಂಬ ಯಜುರ್ವೇದ ಭಾಷ್ಯಕಾರರು ಈ ಮಂತ್ರಾರ್ಥವನ್ನು ವಿವರಿಸುವಾಗ ಹೇಳಿರುವರು (ಯಜುರ್ವೇದ ಸಂಹಿತೆಯಲ್ಲಿಯೂ ತೈ. ಸಂ. ಕಾಂ. ೪ ಈ ಸೂಕ್ತದ ಮಂತ್ರಗಳಿರುವುವು).

**ಮಾಂಸಭಿಕ್ಷಾಂ ಉಪಾಸತೇ**—ಬೆಂದಮಾಂಸವನ್ನು ದೇವತೆಗಳಿಗೆ ಅಗ್ನಿಯಲ್ಲಿ ಹೋಮಮಾಡಿ ಅರ್ಪಿಸಿದ ಬಳಿಕ ಉಳಿದ ಮಾಂಸದ ಸ್ವಲ್ಪಭಾಗವನ್ನು ತಮಗೂ ಕೊಡಬೇಕೆಂದು ಅಪೇಕ್ಷಿಸುವರು. ಹೀಗೆ ಅಪೇಕ್ಷಿಸುವವರು ಯಜ್ಞದಲ್ಲಿ ಭಾಗವಹಿಸುವ ಋತ್ವಿಕ್ಕುಗಳಾಗಲಿ ಇತರರಾಗಲಿ ಆಗಿರಬಹುದು.

**ಶೇಷಾಮಭಿಗೂರ್ತಿರ್ನ ಇನ್ವತು**—ಈ ವಾಕ್ಯವನ್ನು ಈ ಸೂಕ್ತದ ಆರನೆಯ ಋಕ್ಕಿನಲ್ಲಿ ವಿವರಿಸಿದೆ.

### ವ್ಯಾಕರಣಪ್ರಕ್ರಿಯಾ

**ಪರಿಪಶ್ಯಂತಿ**—ದೃಶಿರ್ ಪ್ರೇಕ್ಷಣೇ ಧಾತು. ಲಟ್‌ಪ್ರಥಮಪುರುಷ ಬಹುವಚನಾಂತರೂಪ. **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ. **ತಿಙಿಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಪರಿ) ನಿಘಾತಸ್ವರಬರುತ್ತದೆ.

**ಪಕ್ವಮ್**—ಡುಪಚಿಷ್ ಪಾಕೇ. ಧಾತು. ಕರ್ಮಣಿಯಲ್ಲಿ ನಿಷ್ಠಾ (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ ಬಂದಾಗ **ಪಚೋವಃ** (ಪಾ. ಸೂ. ೮-೨-೫೨) ಎಂಬುದರಿಂದ ಅದಕ್ಕೆ ವತ್ವ. ಚಕಾರಕ್ಕೆ ಕುತ್ವ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಆಹುಃ**—ಬ್ರೂಞ್ ವ್ಯಕ್ತಾಯಾಂ ವಾಚಿ. ಧಾತು. ಲಿಟ್ ಪ್ರಥಮಪುರುಷ ಬಹುವಚನದಲ್ಲಿ ಝಿಗೆ ಉಸಾದೇಶ. **ಬ್ರುವಃಪಂಚಾನಾಮಾದಿ**—(ಪಾ. ಸೂ. ೩-೪-೮೪) ಎಂಬುದರಿಂದ ಧಾತುವಿಗೆ ಆಹಾದೇಶ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಹರ**—ಹೃಞ್ ಹರಣೇ. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಮಾಂಸಭಿಕ್ಷಾಮ್**—ಮಾಂಸಸ್ಯ ಭಿಕ್ಷಾ-ತಾಮ್. ಸಮಾಸಸ್ವರದಿಂದ ಅಂತೋದಾತ್ತವಾಗುತ್ತದೆ.

ಉಪಾಸತೇ—ಆಸ ಉಪವೇಶನೇ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ, ಯದ್ಯೋಗ ವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುವು ಅನುದಾತ್ತೇತ್ತಾದುದರಿಂದ ತಾಸ್ಯನುದಾತ್ತೇತ್— (ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯು ತ್ತದೆ. ತಿಙಿಚೋದಾತ್ತವತಿ (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಉಪ) ಅನುದಾತ್ತಸ್ವರ ಬರುತ್ತದೆ.



ಸಂಹಿತಾಪಾಠಃ

ಯನ್ನೀಕ್ಷಣಂ ಮಾಂಸ್ಪಚನ್ಯಾ ಉಖಾಯಾ ಯಾ ಪಾತ್ರಾಣಿ ಯೂಷ್ಣ ಆಸೇಚನಾನಿ ।

ಊಷ್ಮಣ್ಯಾಪಿಧಾನಾ ಚರೂಣಾಮಂಕಾಃ ಸೂನಾಃ ಪರಿ ಭೂಷಂತ್ಯಶ್ವಂ ॥

॥ಪದಪಾಠಃ॥

ಯತ್ । ನಿಽಈಕ್ಷಣಂ । ಮಾಂಸ್ಪಚನ್ಯಾಃ । ಉಖಾಯಾಃ । ಯಾ । ಪಾತ್ರಾಣಿ । ಯೂಷ್ಣಃ । ಆಽಸೇಚನಾನಿ ।

ಊಷ್ಮಣ್ಯಾ । ಅಪಿಽಧಾನಾ । ಚರೂಣಾಂ । ಅಂಕಾಃ । ಸೂನಾಃ । ಪರಿ । ಭೂಷಂತಿ । ಅಶ್ವಂ ॥ ೧೩ ॥

ಸಾಯಣಭಾಷ್ಯಂ

ಮಾಂಸ್ಪಚನ್ಯಾ ಮಾಂಸಪಚನ್ಯಾಃ ॥ ಪಚತೇರಧಿಕರಣೇ ಲ್ಯುಟ್ । ಮಾಂಸಸ್ಯ ಪಚಿ ಯುಡ್ಘಞೋಃ । ಕಾ. ೬-೧-೧೪೪ । ಇತ್ಯಂತಲೋಪಃ ॥ ಉಖಾಯಾಃ ಸ್ಥಾಲ್ಯಾನೀಕ್ಷಣಂ ಪಾಕಪರೀಕ್ಷಾ ಸಾಧನಂ ಕಾಷ್ಠಂ ತಥಾ ಯಾ ಯಾನಿ ಪಾತ್ರಾಣಿ ಯೂಷ್ಣೋ ರಸಸ್ಯ ಕ್ವಥಿತಸ್ಯಾಸೇಚನಾನ್ಯಾಸೇಚನಸಾಧನಾನಿ ತಥೋಷ್ಮಣ್ಯೋಷ್ಮನಿವಾರಣಾರ್ಹಾಣಿ ಪಾತ್ರಾಣಿ ತಥಾ ಚರೂಣಾಂ ಪಾತ್ರಾಣಾಂ ಮಾಂಸಪೂರ್ಣಾನಾಮಪಿ- ಧಾನಾಪಿಧಾನಾನಿ ತತ್ಸಾಧನಾನಿ ತಥಾಂಕಾ ಹೃದಯಾದ್ಯವಯವಾಂಕನಸಾಧನಾ ವೇತಸಶಾಖಾಃ ಸೂನಾ ಅವದಾನಸಾಧನಾಃ ಸ್ವಧಿತ್ಯಾದಯ ಏತಮಶ್ವಮಶ್ವಾವಯವಂ ಪರಿಭೂಷಂತಿ । ಪರಿತೋ ಭೂಷಯಂತಿ । ಸ್ವಸ್ವವ್ಯಾಪಾರೇಣ ಸಾಧಯಂತೀತ್ಯರ್ಥಃ ॥ ಭೂಷ ಅಲಂಕಾರೇ । ಭೌವಾದಿಕಃ ॥

ಪ್ರತಿಪದಾರ್ಥ

ಮಾಂಸ್ಪಚನ್ಯಾ—ಮಾಂಸವನ್ನು ಹಾಕಿ ಬೇಯಿಸುತ್ತಿರುವ । ಉಖಾಯಾ—ಪಾತ್ರೆಯ । ಯೆತ್ ನೀಕ್ಷಣಂ—ಪಾಕಪರೀಕ್ಷಾಸಾಧನವಾದ ಮರದಸೌಟು ಅಥವಾ ಕೋಲು (ಮತ್ತು) । ಯೊಷ್ಣಃ ಆಸೇಚನಾನಿ—ಬೆಂದ ಮಾಂಸರಸವನ್ನು ಹಾಕಿಡುವ । ಯಾ ಪಾತ್ರಾಣಿ—ಯಾವ ಪಾತ್ರೆಗಳುಂಟೋ ಅವೂ । (ತಥಾ—ಹಾಗೆಯೇ) । ಊಷ್ಮಣ್ಯಾ—(ಪಕ್ವಮಾಂಸದ) ಬಿಸಿಯು ಆರಿಹೋಗದಂತೆ ಮುಚ್ಚುವ ತಟ್ಟೆಗಳು । (ತಥಾ—ಹಾಗೆಯೇ) । ಚರೂಣಾಂ ಅಪಿಧಾನಾ— ಬೆಂದಮಾಂಸವನ್ನು ಹಾಕಿಡುವ ಪಾತ್ರೆಗಳೂ (ತಥಾ—ಹಾಗೆಯೇ) । ಅಂಕಾಃ—ಹೃದಯಾದಿ ಅಶ್ವಾವಯವಗಳನ್ನು ಗುರುತಿಸುವುದಕ್ಕಾಗಿ ಬೇಯಿಸುವುದಕ್ಕೆಮೊದಲೆ ಅವುಗಳಿಗೆ ಚುಚ್ಚಿರುವ ವೇತಸವೃಕ್ಷದ ಕಡ್ಡಿಗಳೂ । ಸೂನಾ—ಮಾಂಸವನ್ನು ಕತ್ತರಿಸುವ ಚಾಕು, ಕತ್ತಿ ಮೊದಲಾದ ಸಾಧನಗಳೂ । ಅಶ್ವಂ ಪರಿ—ಅಶ್ವದ ಸುತ್ತಲೂ ಹರಡಿ । ಭೂಷಂತಿ—ಅಲಂಕರಿಸಿರುವಂತೆ ಕಾಣುವುದು.

ಭಾವಾರ್ಥ

ಅಶ್ವದ ಮಾಂಸವನ್ನು ದೊಡ್ಡ ಪಾತ್ರೆಯಲ್ಲಿ ಹಾಕಿ ಬೇಯಿಸುವಾಗ ಅದು ಚೆನ್ನಾಗಿ ಬೆಂದಿರುವುದೇ ಎಂದು ನೋಡುವುದಕ್ಕಾಗಿ ಉಪಯೋಗಿಸುವ ಮರದ ಕೋಲು ; ಬೆಂದ ಮಾಂಸರಸವನ್ನು ಹಾಕಿಡುವ ಪಾತ್ರೆಗಳು ; ಬೆಂದ ಮಾಂಸವು ಆರಿಹೋಗದಂತೆ ಪಾತ್ರೆಗಳ ಮೇಲೆ ಮುಚ್ಚುವ ತಟ್ಟೆಗಳು ; ಮಾಂಸವನ್ನು ಹಾಕಿಡುವ ಪಾತ್ರೆಗಳು ; ಅಶ್ವದ ಹೃದಯಾದಿ ವಿವಿಧ ಅವಯುವಗಳನ್ನು ಬೆಂದಮೇಲೆ ಗುರ್ತಿಸುವುದಕ್ಕಾಗಿ ಮಾಂಸದ ತುಂಡುಗಳಿಗೆ ಚುಚ್ಚುವ ವೇತಸವೃಕ್ಷದ ಕಡ್ಡಿಗಳು ; ಮಾಂಸವನ್ನು ಕತ್ತರಿಸುವ ಚಾಕು, ಕತ್ತಿ ಇತ್ಯಾದ್ಯಾಯುಧಗಳು ಇವೆಲ್ಲವೂ ಯಜ್ಞಭೂಮಿಯಲ್ಲಿ ಅಶ್ವದ ಸುತ್ತಲೂ ಇಟ್ಟಿರುವುದು, ಅಶ್ವವನ್ನು ಅಲಂಕರಿಸಿದಂತೆ ಕಾಣುತ್ತಿರುವುದು.

English Translation

The stick that is dipped into the caldron in which the flesh is boiled ; the vessels that distribute the broth ; the covers of the dishes, the skewers, the knives, all do honour (to the horse).

ವಿಶೇಷವಿಷಯಗಳು

ಯನ್ನೀಕ್ಷಣಂ—ಪಾಕಪರೀಕ್ಷಣಸಾಧನಂ ಕಾಷ್ಠಂ । ಪಾತ್ರೆಯಲ್ಲಿ ಬೇಯುತ್ತಿರುವ ಮಾಂಸವು ಚೆನ್ನಾಗಿ ಬೆಂದಿದೆಯೇ ಇಲ್ಲವೇ ಎಂಬುದನ್ನು ಪರೀಕ್ಷಿಸುವುದಕ್ಕಾಗಿ ಉಪಯೋಗಿಸುವ ಉದ್ದವಾಗಿರುವ ಮರದ ಕೋಲು. ಇದು ಸೌಟಿನ ಆಕಾರದಲ್ಲಿಯಾಗಲಿ ಅಥವಾ ಕೋಲಿನಂತೆಯಾಗಲಿ ಇರಬಹುದು. ಇದರಿಂದ ಪಾತ್ರೆಯಲ್ಲಿ ಬೇಯುತ್ತಿರುವ ಬಿಸಿಯಾದ ಮಾಂಸವನ್ನು ಎತ್ತಿನೋಡಿ ಅದು ಸಾಕಾದಷ್ಟು ಬೆಂದಿರುವುದೇ ಅಥವಾ ಇನ್ನು ಬೇಯಬೇಕಾಗಿರುವುದೇ ಎಂಬುದನ್ನು ಆಗಾಗ ಪರೀಕ್ಷಿಸಿ ನೋಡುವರು. ಇದಕ್ಕಾಗಿ ಉಪಯೋಗಿಸುವ ಮರದ ಕಾಷ್ಠವೆಂದು ಭಾಷ್ಯಕಾರರು ವಿವರಿಸಿರುವರು.

ಮಾಂಸ್ಪಚನ್ಯಾ ಉಖಾಯಾಃ—ಮಾಂಸವನ್ನು ಬೇಯಿಸುವ ದೊಡ್ಡ ಪಾತ್ರೆಯು. ಈ ಪಾತ್ರೆಗೆ ಉಖಾ ಎಂದು ಹೆಸರು. ಈ ಪಾತ್ರೆಯು ಮಣ್ಣಿನಿಂದ ಮಾಡಿದ ದೊಡ್ಡ ಮಡಕೆಯು. (Coldron) ಇದನ್ನು ಸ್ಥಾಲೀ

ಎಂದೂ ಕರೆಯುವ ರೂಢಿ ಇರುವುದು. ಈ ಶಬ್ದಪ್ರಯೋಗವು ಋ. ಸಂ. ೧-೧೬೨-೧೩ ; ೧-೧೬೨-೧೫ ; ೩-೫೩-೨೨ ; ಅ. ವೇ. ೭-೩-೨೩ ; ತೈ. ಸಂ. ೫-೧-೬-೩ ; ವಾ. ಸಂ. ೧೧-೫೯ ; ತೈ. ಸಂ. ೪-೧-೫-೪ ಇತ್ಯಾದಿ ಸ್ಥಳಗಳಲ್ಲಿರುವುದು. ಈ ಉಖಾ ಎಂಬ ಪಾತ್ರೆಯ ನಿರ್ಮಾಣಕ್ರಮವು ತೈ. ಸಂ. ೫-೧-೭ ರಲ್ಲಿಯೂ ಇದರ ಸಂಸ್ಕಾರಾವಪನಾದಿಗಳು ತೈ. ಸಂ. ೫-೧-೭ ರಲ್ಲಿಯೂ, ಉಖಾಹೋಮವು ತೈ. ಸಂ. ೫-೫-೩ರಲ್ಲಿಯೂ ಹೇಳಲ್ಪಟ್ಟಿರುವುದು.

ಆಸೇಚನಾನಿ ಪಾತ್ರಾಣಿ ಯೂಷ್ಣಃ—ಸೇಚನವೆಂದರೆ ನೀರನ್ನು ಚುಮುಕಿಸುವುದು ಇಲ್ಲಿ ರಸರೂಪದಲ್ಲಿರುವ ಮಾಂಸಸಾರವನ್ನು ಹಾಕಿಡುವ ಅಥವಾ ಎಲ್ಲರಿಗೂ ಹಂಚುವ (ಬಡಿಸುವ) ಪಾತ್ರೆಗಳೆಂದು ಹೆಸರು.

ಊಷ್ಮಣ್ಯಾ ಅಪಿಧಾನಾ—ಪಾತ್ರೆಗಳಲ್ಲಿರುವ ಬಿಸಿಯಾದ ಮಾಂಸವು ಆರಿಹೋಗದಂತೆ ಮುಚ್ಚುವ ತಟ್ಟೆಗಳು.

ಅಂಕಾಃ—ಹೃದಯೋವಯವಾಂಕನಸಾಧನಾ ವೇತಸಶಾಖಾಃ । ಅಶ್ವಮಾಂಸದ ಹೃದಯಾದ್ಯವಯವ ಭಾಗಗಳನ್ನು ಗುರುತಿಸುವುದಕ್ಕಾಗಿ ವೇತಸ ವೃಕ್ಷದ ಕಡ್ಡಿಗಳನ್ನು ಉಪಯೋಗಿಸುವರು. ಈ ಕಡ್ಡಿಗಳನ್ನು ಆಯಾ ಮಾಂಸದ ತುಂಡುಗಳಿಗೆ ಚುಚ್ಚಿರುವುದರಿಂದ ಅಶ್ವಮಾಂಸವು ಯಾವ ಅವಯವಕ್ಕೆ ಸೇರಿದ್ದೆಂಬುದನ್ನು ಸುಲಭವಾಗಿ ತಿಳಿಯಬಹುದು. ಕಾಲಾನುಕ್ರಮದಲ್ಲಿ ವೇತಸ ಕಾಷ್ಠಗಳಿಗೆ ಬದಲಾಗಿ ಚಿನ್ನ, ಬೆಳ್ಳಿ, ಸೀಸ ಇವುಗಳಿಂದ ಮಾಡಿದ ಸೂಜಿಗಳನ್ನು ಉಪಯೋಗಿಸುವುದು ರೂಢಿಗೆ ಬಂದಂತೆ ಕಾಣುವುದು. ಅಶ್ವಾವಯವಗಳ ಮಾಂಸವನ್ನು ಗುರುತಿಸುವುದಕ್ಕೆ ಈ ಸೂಜಿಗಳನ್ನು ಚುಚ್ಚುವ ಕೆಲಸವು ಸಾಧಾರಣವಾಗಿ ಸ್ತ್ರೀಯರಿಂದ, ಅದರಲ್ಲೂ ಯಜಮಾನನ ಪತ್ನಿಯೇ ಮೊದಲಾದವರಿಂದ ಮಾಡಲ್ಪಡುವುದು. ಈ ಕಾರ್ಯವನ್ನು ಮಾಡುವಾಗ ಪಠಿಸುವ ಮಂತ್ರಗಳಲ್ಲಿಯೇ ಈ ವಿಷಯವು ಉಕ್ತವಾಗಿದೆ—

ಗಾಯತ್ರೀ ತ್ರಿಷ್ಟುಬ್ಜಗತ್ಯನುಷ್ಟುಪ್ಪಂಕ್ತ್ಯಾ ಸಹ ।
ಬೃಹತ್ಯುಷ್ಣಿಹಾ ಕಕುತ್ಸೂಚೀಭಿಃ ಶಿಮ್ಯಂತು ತ್ವಾ ॥
ದ್ವಿಪದಾ ಯಾ ಚತುಷ್ಪದಾ ತ್ರಿಪದಾ ಯಾ ಚ ಷಟ್ಪದಾ ।
ಸಛಂದಾ ಯಾ ಚ ವಿಚ್ಛಂದಾಸ್ಸೂಚೀಭಿಃ ಶಿಮ್ಯಂತು ತ್ವಾ ॥
ಮಹಾನಾಮ್ನೀ ರೇವತಯೋ ವಿಶ್ವಾ ಆಶಾಃ ಪ್ರಸೂವರೀಃ ।
ಮೇಘ್ಯಾ ವಿದ್ಯುತೋ ವಾಚಃ ಸೂಚೀಭಿಃ ಶಿಮ್ಯಂತು ತ್ವಾ ॥
ರಜತಾ ಹರಿಣೀಸ್ಸೀಸಾ ಯುಜೋ ಯುಜ್ಯಂತೇ ಕರ್ಮಭಿಃ ।
ಅಶ್ವಸ್ಯ ವಾಜಿನಸ್ತ್ವಚಿ ಸೂಚೀಭಿಃ ಶಿಮ್ಯಂತು ತ್ವಾ ॥
ನಾರೀಸ್ತೇ ಪತ್ನಯೋ ಲೋಮ ವಿಚಿನ್ವಂತು ಮನೀಷಯಾ ।
ದೇವಾನಾಂ ಪತ್ನೀರ್ದಿಶಃಸೂಚೀಭಿಃ ಶಿಮ್ಯಂತು ತ್ವಾ ॥
ಕುವಿದಂಗ ಯವಮಂತೋ ಯವಂ ಚಿದ್ಯಥಾ ದಾಂತ್ಯನುಪೂರ್ವಂ ವಿಯೂಯ ।
ಇಹೇಹೈಷಾಂ ಕೃಣುತ ಭೋಜನಾನಿ ಯೇ ಬರ್ಹಿಷೋ ನಮೋವೃಕ್ತಿಂ ನ ಜಗ್ಮುಃ ॥

(ತೈ. ಸಂ. ೫-೨-೧೧)

ಕುವಿದಂಗ—ಎಂಬ ಕೊನೆಯಮಂತ್ರವು. ಋ. ಸಂ. ೧೦-೧೩೧-೨ ; ಅಥರ್ವವೇದ. ೨೦-೧೨೫-೨ ; ವಾಜಸನೇಯಸಂಹಿತೆ ೧೦-೩೨ ; ೧೯-೧೬ ; ೨೩-೩೮ ; ತೈತ್ತಿರೀಯಸಂಹಿತೆ. ೧-೮-೨೧-೧ ; ೫-೨-೧೧-೨ ;

ತೈತ್ತಿರೀಯ ಬ್ರಾಹ್ಮಣ. ೨-೬-೧-೩ ಎಂಬ ಸ್ಥಳಗಳಲ್ಲಿಯೂ ಪಠಿತವಾಗಿರುವುದು. ಅಶ್ವಮಾಂಸವನ್ನು ಉಖಾ ಎಂಬ ದೊಡ್ಡ ಮಣ್ಣಿನ ಗಡಿಗೆಗಳಲ್ಲಿ ಹಾಕಿ ಬೇಯಿಸಿ ಅನಂತರ ಅಶ್ವದ ನಾನಾ ಅವಯವಗಳನ್ನುಆಯಾ ಮಂತ್ರಪುರಸ್ಸರವಾಗಿ ಅಗ್ನಿಯಲ್ಲಿ ಹೋಮಮಾಡುವರು. ಮಾಂಸವನ್ನು ಬೇಯಿಸಿದನಂತರ ಯಾವ ಮಾಂಸವು ಯಾವ ಅಂಗದ್ದು ಎಂದು ಹೇಳುವುದು ಕಷ್ಟವಾದ್ದರಿಂದ ಮಾಂಸವನ್ನು ಬೇಯಿಸುವುದಕ್ಕೆ ಪೂರ್ವದಲ್ಲಿಯೇ ಎಂದರೆ ಮಾಂಸವನ್ನು (ಅಶ್ವ ಶರೀರವನ್ನು) ಕತ್ತರಿಸುವಾಗ ಆಯಾ ಅವಯವಗಳನ್ನು ಚೆನ್ನಾಗಿ ಗುರ್ತಿಸಲು ಅನುಕೂಲವಾಗುವಂತೆ ಸುವರ್ಣಾದಿ ಲೋಹಗಳಿಂದ ನಿರ್ಮಿತವಾದ ಸೂಜಿಗಳನ್ನು ಅಥವಾ ವೇತಸವೃಕ್ಷದ ಚೂಪಾದ ಕಡ್ಡಿಗಳನ್ನು ಮಾಂಸದ ತುಂಡುಗಳಿಗೆ ಚುಚ್ಚಿ ಬೇಯಿಸುವುದರಿಂದ, ಬೆಂದ ಮಾಂಸವು ಯಾವ ಅಂಗಕ್ಕೆ ಸೇರಿದ್ದು ಎಂಬುದನ್ನು ಸುಲಭವಾಗಿ ಗುರ್ತಿಸಬಹುದು. ಈ ಕಾರಣಕ್ಕಾಗಿಯೇ ಯಜಮಾನಪತ್ನಿಯೇ ಮೊದಲಾದ ಸ್ತ್ರೀಯರು ಈ ಕಾರ್ಯವನ್ನು ಮಾಡುವರು.

**ಸೂನಾಃ**—ಅವದಾನಸಾಧನಾಃ ಸ್ವಧಿತ್ಯಾದಯಃ । ಮಾಂಸವನ್ನು ಕತ್ತರಿಸುವ ಮಚ್ಚುಕತ್ತಿ ಅಥವಾ ಇತರ ಆಯುಧಗಳು. ಭಾಷ್ಯಕಾರರು ಋ ಸಂ. ೧-೧೬೧-೧೦ನೇ ಋಕ್ಕಿನಲ್ಲಿ ಇರುವ ಸೂನಯಾ ಎಂಬ ಶಬ್ದಕ್ಕೆ, ಛೇದನಸಾಧನೇನ-ಮಾಂಸವನ್ನು ಕತ್ತರಿಸುವ ಸಾಧನವಾದ ಮಚ್ಚುಕತ್ತಿಯಂತಿರುವ ಆಯುಧದಿಂದ ಎಂದೇ ಅರ್ಥ ಮಾಡಿರುವರು. Implements of dissection, the Swadhiti and others. ಕೆಲವು ಪಾಶ್ಚಾತ್ಯ ಪಂಡಿತರು (Macdonell and Keith) ಈ ಶಬ್ದಕ್ಕೆ Woven wickerwork basket for holding flesh ಮಾಂಸವನ್ನು ಇಡುವ ಹೆಣೆದ ಬುಟ್ಟಿ ಎಂದರ್ಥವೆಂದು ಅಭಿಪ್ರಾಯಪಡುವರು. ಆದರೆ ಇದಕ್ಕೆ ಸರಿಯಾದ ಆಧಾರವಿಲ್ಲ. ಈ ಶಬ್ದವು ಋ. ಸಂ. ೧-೧೬೧-೧೦ ; ೧-೧೬೨-೧೩ ; ೧೦-೮೬-೧೮ ; ಅ. ವೇ. ೫-೧೭-೧೪ ಎಂಬ ಮಂತ್ರಗಳಲ್ಲಿ ಪಠಿತವಾಗಿರುವುದು.

**ಪರಿ ಭೂಷಂತಿ ಅಶ್ವಂ**—ಯಜ್ಞಯಾಗಾದಿಕರ್ಮಗಳಲ್ಲಿ ಉಪಯೋಗಿಸುವ ಪಾತ್ರಾದಿಗಳನ್ನು, ದೇವತೆಗಳಿಗೆ ಅರ್ಪಿಸಬೇಕಾದ ಹವಿಸ್ಸು, ಅನ್ನ, ಪಶು ಮೊದಲಾದವನ್ನು ಯಜ್ಞಕರ್ಮ ನಡೆಯುತ್ತಿರುವಾಗ ಅವುಗಳನ್ನು ಮಂತ್ರಗಳಿಂದ ಸಂಸ್ಕಾರಮಾಡುವುದಕ್ಕಾಗಿ ಯಜ್ಞವೇದಿಕೆಯಲ್ಲಿ ಅಥವಾ ಅಗ್ನಿಯ ಸಮೀಪದಲ್ಲಿ ಇಟ್ಟು ನಾನಾವಿಧವಾದ ಸಂಸ್ಕಾರಗಳಿಂದ ಮಂತ್ರಪುರಸ್ಸರವಾಗಿ ಶುದ್ಧಿಮಾಡಿ ಅನಂತರ ಅವುಗಳನ್ನು ಆಯಾಕಾರ್ಯಗಳಲ್ಲಿ ಉಪಯೋಗಿಸುವರು. ಗೃಹ್ಯಕರ್ಮಗಳಲ್ಲಿಯೂ ಅಗ್ನಿಮುಖವೆಂಬ ಅಗ್ನಿಯನ್ನು ಮಂತ್ರಪುರಸ್ಸರವಾಗಿ ಪ್ರತಿಷ್ಠಿಸುವ ಕರ್ಮದಲ್ಲಿ ಈ ವಿಧವಾದ ಪಾತ್ರಾಸಾದನಾದಿಗಳನ್ನು ನೆರವೇರಿಸುವುದು ಈಗಲೂ ರೂಢಿಯಲ್ಲಿದೆ. ಈ ಕ್ರಮವು ಯಜ್ಞಯಾಗಾದಿಗಳ ಕ್ರಮವನ್ನನುಸರಿಸಿಯೇ ನಡೆದುಬಂದಿರುವುದು. ಆದುದರಿಂದ ಅಶ್ವಮೇಧಯಜ್ಞದಲ್ಲಿ ಅಶ್ವವನ್ನು ವಧಿಸಿದನಂತರ ಉಪಯೋಗಿಸಬೇಕಾದ ಆಯುಧಗಳು, ಮಾಂಸಬೇಯಿಸುವ ಉಖಾಪಾತ್ರೆ, ಸಲಾಕಿ, ಮಾಂಸ ತುಂಬಿಡುವ ಬುಟ್ಟಿ ಮತ್ತು ಆಕಾಲದಲ್ಲಿ ಉಪಯೋಗಿಸಬಹುದಾದ ವಿವಿಧ ವಸ್ತುಗಳನ್ನು ಮಂತ್ರಪುರಸ್ಸರ ಸಂಸ್ಕಾರ ಮಾಡುವುದಕ್ಕಾಗಿ ಯಜ್ಞವೇದಿಯಲ್ಲಿ ಅಶ್ವದ ಸುತ್ತಲೂ ಇಟ್ಟಿರುವುದು ಅಲಂಕಾರವಾಗಿ ಕಾಣುತ್ತದೆಯೆಂದೂ, ಅಶ್ವವನ್ನು ಅಲಂಕರಿಸಿದಂತೆ ಇದೆಯೆಂದೂ ಋಷಿಯು ವರ್ಣಿಸಿರುವನು.

### ವ್ಯಾಕರಣಪ್ರಕ್ರಿಯಾ

**ನೀಕ್ಷಣಂ**—ನಿ ಉಪಸರ್ಗ. ಈಕ್ಷ ದರ್ಶನಾಂಕನಯೋಃ. ಧಾತು. ಕರಣಾರ್ಥದಲ್ಲಿ ಲ್ಯುಟ್‌ಪ್ರತ್ಯಯ ಯುವೋರನಾಕೌ (ಪಾ. ಸೂ. ೭-೧-೧) ಎಂಬುದರಿಂದ ಅನಾದೇಶ. ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

ಮಾಂಸ್ಪಚನ್ಯಾಃ — ಡುಪಚಿಷ್ ಪಾಕೇ. ಧಾತು. ಕರಣಾಧಿಕರಣಯೋಶ್ಚ- (ಪಾ. ಸೂ. ೩-೩-೧೧೭) ಎಂಬುದರಿಂದ ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ. ಹಿಂದಿನಂತೆ ಅನಾದೇಶ. ಲ್ಯುಡಂತಪಚ್ ಧಾತುವು ಪರವಾದುದರಿಂದ ಮಾಂಸಶಬ್ದದ ಅಂತ್ಯಕ್ಕೆ ಮಾಂಸಸ್ಯ ಪಚಿಯುಟ್‌ಘಞೋಃ (ಕಾ. ೬-೧-೧೪೪) ಎಂಬುದರಿಂದ ಲೋಪ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

ಆಸೇಚನಾನಿ—ಷಿಚಿರ್ ಕ್ಷರಣೇ. ಧಾತು. ಕರಣಾಣರ್ಥದಲ್ಲಿ ಲ್ಯುಟ್‌ಪ್ರತ್ಯಯ. ಪ್ರಾದಿಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರಬರುತ್ತದೆ.

ಊಷ್ಮಣ್ಯಾ—ಅರ್ಹಾರ್ಥದಲ್ಲಿ ಯತ್ ಪ್ರತ್ಯಯ. ತಿತ್‌ಸ್ವರಿತಮ್ (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ. ನಪುಂಸಕದಲ್ಲಿ ಶೇಶ್ಛಂದಸಿ ಬಹುಲಮ್ (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. ಅಪಿಧಾನಾ ಎಂಬಲ್ಲಿಯೂ ಹೀಗೆಯೇ ಶಿ ಲೋಪ ಬರುತ್ತದೆ.

ಭೂಷಂತಿ—ಭೂಷ ಅಲಂಕಾರೇ. ಧಾತು. ಭ್ವಾದಿ. ಲಟ್. ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೩ ॥



ಸಂಹಿತಾಪಾಠಃ

ನಿಕ್ರಮಣಂ ನಿಷದನಂ ವಿವರ್ತನಂ ಯಚ್ಚ ಪಡ್ಬೀಶಮರ್ವತಃ ।
ಯಚ್ಚ ಪಪೌ ಯಚ್ಚ ಘಾಸಿಂ ಜಘಾಸ ಸರ್ವಾ ತಾ ತೇ ಅಪಿ ದೇವೇಷ್ವಸ್ತು ॥ ೧೪ ॥

ಪದಪಾಠಃ

ನಿऽಕ್ರಮಣಂ । ನಿऽಸದನಂ । ವಿऽವರ್ತನಂ । ಯತ್ । ಚ । ಪಡ್ಬೀಶಂ । ಅರ್ವತಃ ।
ಯತ್ । ಚ । ಪಪೌ । ಯತ್ । ಚ । ಘಾಸಿಂ । ಜಘಾಸ । ಸರ್ವಾ । ತಾ । ತೇ । ಅಪಿ । ದೇವೇಷು । ಅಸ್ತು ॥

ಸಾಯಣಭಾಷ್ಯಂ

ಯನ್ನಿಕ್ರಮಣಂ ನಿತರಾಂ ಕ್ರಮತೇ ಯತ್ರ ತನ್ನಿಕ್ರಮಣಂ ಸ್ಥಾನಂ । ನಿತರಾಂ ಸೀದತ್ಯತ್ರೇತಿ । ನಿಷದನಂ । ವಿವರ್ತನಂ ವಿವಿಧವರ್ತನಮಿತಸ್ತತೋ ಲುಂಠನಂ ಯತ್ರ ತತ್ ॥ ಯಚ್ಚಾರ್ವತೋಽಶ್ವಸ್ಯ

ಪಡ್ವೀಶಂ ಪಾದಬಂಧನಂ । ಯದ್ವಾ । ಬಂಧನಂ ಪಟ್ ತದ್ವಾನ್ಪ್ರದೇಶಃ । ಅತ್ರ ಸರ್ವತ್ರ ದೇವಾರ್ಥ-ಸ್ಯಾಶ್ವಸ್ಯ ರೋಮಾದೀನಾಮಪಿ ನಿರರ್ಥಕತ್ವಾಭಾವಾಯ ತತ್ಸ್ಥಾನಮಪಿ ಸ್ವೀಕ್ರಿಯತೇ । ಯದ್ವಾ । ಕ್ರಿಯಾಪರಾವಗಂತವ್ಯಾ । ಆಲಂಭಸಮಯೇ ನಿಗ್ರಹೇಣ ಯಾ ನಿಕ್ರಮಣಾದಯಶ್ಚೇಷ್ಟಾಃ ಸಂತಿ ತಾ ಇತ್ಯರ್ಥಃ । ಯಚ್ಚ ಪಪೌ ಯದುದಕಮಪಿಬತ್ । ಯಚ್ಚ ಘಾಸಿಮದನೀಯಂ ತೃಣಾದಿಕಂ ಜಘಾಸ ಅಭಕ್ಷಯತ್ । ಹೇ ಅಶ್ವ ತೇ ತವ ತಾ ತಾನಿ ಸರ್ವಾಣಿ ನಿಕ್ರಮಣಾದೀನಿ ದೇವೇಷ್ವಸ್ತು । ಸಂತು । ದೇವೇಷು ವ್ಯಾಪ್ನೋತು । ತಾನ್ಯಪಿ ನಿರರ್ಥಕಾನಿ ಮಾ ಭೂವನ್ನಿತ್ಯರ್ಥಃ ॥

### ಪ್ರತಿಪದಾರ್ಥ

(ಹೇ ಅಶ್ವ—ಎಲೈ ಯಜ್ಞಾಶ್ವವೇ) । ಅರ್ವತಃ—ಈ ಯಜ್ಞಾಶ್ವದ (ನಿನ್ನ) । ನಿಕ್ರಮಣಂ—ಸಂಚಾರ ಪ್ರದೇಶವೂ । ನಿಷದನಂ—ನಿಲ್ಲುವ ಪ್ರದೇಶವೂ । ವಿವರ್ತನಂ—ನೆಲದಮೇಲೆ ಹೊರಳಾಡುವ ಪ್ರದೇಶವೂ । ಯಚ್ಚ ಪಡ್ವೀಶಂ—ಮತ್ತು ಕುದುರೆಯ ಕಾಲುಗಳನ್ನು ಕಟ್ಟುವ ಹಗ್ಗವೂ । ಯಚ್ಚ ಪಪೌ—ಅಶ್ವವು ಕುಡಿದ ನೀರೂ । ಯಚ್ಚ ಘಾಸಿಂ ಜಘಾಸ—ಅಶ್ವವು ಭಕ್ಷಿಸಿದ (ಮೇದ) ತೃಣಾದಿ ಆಹಾರವೂ ಸಹ । ತೇ—ನಿನ್ನ । ತಾ ಅಪಿ—ಈ ವಿಧವಾದ ಕಾರ್ಯಗಳೆಲ್ಲವೂ ಸಹ । ದೇವೇಷು—ದೇವತೆಗಳಲ್ಲಿ (ದೇವತೆಗಳಿಗೆ) । ಅಸ್ತು—ಅರ್ಪಿತ ವಾಗಲಿ (ಸೇರಲಿ) ॥

### ಭಾವಾರ್ಥ

ಎಲೈ ಯಜ್ಞಾಶ್ವವೇ, ನೀನು ಹುಲ್ಲನ್ನು ಮೇಯುವಾಗ ಸಂಚರಿಸುತ್ತಿದ್ದ, ಅಲ್ಲಲ್ಲಿ ನಿಲ್ಲುತ್ತಿದ್ದ, ನೆಲದಮೇಲೆ ವಿಶ್ರಾಂತಿಗಾಗಿ ಹೊರಳಾಡುತ್ತಿದ್ದ, ಪ್ರದೇಶಗಳೂ, ನಿನ್ನ ಕಾಲುಗಳನ್ನು ಕಟ್ಟುವುದಕ್ಕೆ ಉಪಯೋಗಿಸುತ್ತಿದ್ದ ಹಗ್ಗವೂ, ನೀನು ಕುಡಿದ ನೀರು, ತಿಂದ ಹುಲ್ಲು ಇವೆಲ್ಲವೂ ವ್ಯರ್ಥವಾಗದೆ ದೇವತೆಗಳಿಗೇ ಅರ್ಪಿತವಾಗಲಿ.

### English Translation

May the place of going forth, of tarrying, of rolling on the ground; the foot-fastening of the horse, (the water) that he has drunk, the grass that he has eaten; may all these be yours among the gods.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಋಷಿಯು ಅಶ್ವವನ್ನು ಪ್ರಾರ್ಥಿಸುವಾಗ ಅದರ ರೋಮಾದಿಗಳೂ ಅದು ಭಕ್ಷಿಸಿದ ಹುಲ್ಲು, ಕುಡಿದ ನೀರು ವ್ಯರ್ಥವಾಗದೆ ದೇವತೆಗಳಿಗೇ ಸೇರಲಿ ಎಂದು ತನ್ನ ಆಶಯವನ್ನು ಸೂಚಿಸಿರುವನು. ಅಶ್ವದ ಅವಯವ ಗಳೂ, ಮಾಂಸವೂ ಪಚನಾದಿಗಳಿಂದ ಸಂಸ್ಕರಿಸಲ್ಪಟ್ಟು ದೇವತೆಗಳ ಪ್ರೀತ್ಯರ್ಥವಾಗಿ ಅಗ್ನಿಯಲ್ಲಿ ಹೋಮಮಾಡುವುದ ರಿಂದ ಅವೆಲ್ಲವೂ ದೇವತೆಗಳಿಗೆ ಸೇರಿ ಸಾರ್ಥಕವಾಗುವುದೆಂದೂ, ಅಗ್ನಿಯಲ್ಲಿ ಹೋಮಮಾಡಲು ಸಾಧ್ಯವಿಲ್ಲದಿರುವ ಅಶ್ವದ ಉದರಸ್ಥವಾದ, ನೀರು, ಜೀರ್ಣವಾಗದಿರುವ ಹುಲ್ಲು ಮೊದಲಾದವುಗಳೂ ಸಹ ವ್ಯರ್ಥವಾಗದೆ ದೇವತೆಗಳಿಗೇ ಸೇರಲಿ ಎಂಬ ಪ್ರಾರ್ಥನೆಯು ಈ ಋಕ್ಕಿನಲ್ಲಿ ವರ್ಣಿತವಾಗಿದೆ.

**ನಿಕ್ರಮಣಂ, ನಿಷದನಂ, ವಿವರ್ತನಂ**—ಅಶ್ವದ ಜೀವಿತಕಾಲದಲ್ಲಿ ಅದು ಸಂಚರಿಸುತ್ತಿದ್ದ, ಮಲಗುತ್ತಿದ್ದ ವಿಶ್ರಾಂತಿ ಪಡೆಯುತ್ತಿದ್ದ ಇವೇ ಮೊದಲಾದ ಪ್ರದೇಶಗಳೂ ದೇವತೆಗಳಿಗೇ ಸೇರಿ ಪ್ರೀತಿಯನ್ನುಂಟುಮಾಡಲಿ ಎಂಬ ವರ್ಣನೆಯಿಂದ ಅಶ್ವದ ನಿತ್ಯಜೀವನದ ಕ್ರಮವು ವರ್ಣಿಸಲ್ಪಟ್ಟು ಅದು ದೇವತೆಗಳ ಸಂತೋಷಕ್ಕೆ ಕಾರಣವಾಗಲಿ ಎಂದು ಪ್ರಾರ್ಥಿಸಿದೆ.

**ಪಡ್ಬೀಶಂ**—ಈ ಶಬ್ದಕ್ಕೆ ಭಾಷ್ಯಕಾರರು ಎರಡುವಿಧವಾಗಿ ಅರ್ಥಮಾಡಿರುವರು. **ಪಡ್ಬೀಶಂ ಪಾದಬಂಧನಂ ಯದ್ವಾ ತದ್ವಾನ್ ಪ್ರದೇಶಃ** ಅಶ್ವದ ಪಾದಗಳನ್ನು ಕಟ್ಟುವ ಹಗ್ಗ ಅಥವಾ ಅಶ್ವವನ್ನು ಕಟ್ಟುವ ಸ್ಥಳ ಎಂಬ ಎರಡರ್ಥವನ್ನು ಹೇಳಿರುವರು. ಈ ಋಕ್ಕಿನಲ್ಲಿ ಹೇಳಿರುವ ಅರ್ಥದ ಕೆಲವಂಶಗಳನ್ನೇ ಪ್ರಕಾರಾಂತರವಾಗಿ ಈ ಸೂಕ್ತದ **ಯದ್ವಾಜಿನೋ ದಾಮ** ಎಂಬ ಋಕ್ಕಿನಲ್ಲಿಯೂ ಉಕ್ತವಾಗಿರುವುದು.

**ಯಚ್ಚ ಪಪೌ ಯಚ್ಚ ಘಾಸಿಂ ಜಘಾಸ**—ಕುದುರೆಯು ಕುಡಿದನೀರೂ ತಿಂದಹುಲ್ಲೂ ದೇವತೆಗಳಿಗೆ ಸೇರಬೇಕೆಂದು ಋಷಿಯು ಪ್ರಾರ್ಥಿಸಿರುವನು. ಏಕೆಂದರೆ ಈ ಸೂಕ್ತದ **ಯದೂವಧ್ಯಮುದರಸ್ಯಾಪವಾತಿ** (ಋ. ಸಂ. ೧-೧೬೨-೧೦) ಹೇಳಿರುವಂತೆ ಅಶ್ವದ ಉದರದಲ್ಲಿ ಜೀರ್ಣವಾಗದೆ ಇರುವ ತೃಣರೂಪವಾದ ಆಹಾರವನ್ನು ತೆಗೆದು ಶುದ್ಧವಾದ ಮಾಂಸವನ್ನು ಮಾತ್ರ ಪಾಕಮಾಡಬೇಕೆಂಬ ವಿಷಯವು ಉಕ್ತವಾಗಿರುವುದು. ಆದುದರಿಂದ ಕುದುರೆಯು ತಿಂದ ಹುಲ್ಲು ಕುಡಿದ ನೀರೂ ಸಹ ( ಹೋಮದಲ್ಲಿ ದೇವತೆಗಳಿಗೆ ಅರ್ಪಿಸಲು ಸಾಧ್ಯವಿಲ್ಲದ್ದರಿಂದ ) ನನ್ನ ಪ್ರಾರ್ಥನೆಯಂತೆ ದೇವತೆಗಳಿಗೇ ಸೇರಲಿ ಎಂದು ಋಷಿಯ ಆಶಯವು ವರ್ಣಿತವಾಗಿರುವುದು.

ಅಶ್ವಾಂಗಹೋಮವಿಧಿಯು ಎಂದರೆ ಅಶ್ವದ ಬೇರೆಬೇರೆ ಅವಯವಗಳನ್ನು ಮಂತ್ರಪೂರ್ವಕವಾಗಿ ಹೋಮ ಮಾಡುವ ವಿಧಿಯು ತೈತ್ತಿರೀಯ ಸಂಹಿತೆಯ ಐದನೆಯ ಕಾಂಡದ **ಸ್ತೇಗಾನ್ದಂಷ್ಟ್ರಾಭ್ಯಾಂ** ಎಂದು ಮೊದಲಾಗುವ ೧೧-೩೩ರವರೆಗಿನ ೧೪ ಅನುವಾಕಗಳಲ್ಲಿ ವಿಶದವಾಗಿ ಹೇಳಿರುವುದು. ಗ್ರಂಥವಿಸ್ತರಭಯದಿಂದ ಅವುಗಳನ್ನು ಇಲ್ಲಿ ವಿವರಿಸಿಲ್ಲ.

ಇತರ ಪಶುಯಾಗಗಳಲ್ಲಿ ಪಶುಹೋಮಕ್ಕಾಗಿ ಆಪ್ರೀ ಸೂಕ್ತಗಳಿರುವಂತೆ ಅಶ್ವಮೇಧಯಜ್ಞದಲ್ಲಿ ಉಪಯೋಗಿಸುವ ಅಶ್ವಸಂಬಂಧವಾದ ಆಪ್ರೀಸೂಕ್ತವು ತೈತ್ತಿರೀಯ ಸಂಹಿತೆಯಲ್ಲಿರುವುದು. ಇದರಲ್ಲಿ ಹನ್ನೊಂದು ಮಂತ್ರಗಳಿರುವವು ಈ ಸೂಕ್ತವು ಋಗ್ವೇದದಲ್ಲಿಲ್ಲವಾದ್ದರಿಂದ ಅದನ್ನು ಇಲ್ಲಿ ಕೊಟ್ಟಿದೆ—

(೧) ಸಮಿದ್ಧೋ ಅಂಜನ್ಕೃದರಂ ಮತೀನಾಂ ಘೃತಮಗ್ನೇ ಮಧುಮತ್ಪಿನ್ವಮಾನಃ ।
ವಾಜೀ ವಹನ್ವಾಜಿನಂ ಜಾತವೇದೋ ದೇವಾನಾಂ ವಕ್ಷಿ ಪ್ರಿಯಮಾ ಸಧಸ್ಥಂ ॥

(೨) ಘೃತೇನಾಂಜನ್ತ್ಸಂ ಪಥೋ ದೇವಯಾನಾನ್ಪ್ರಜಾನನ್ವಾಜ್ಯಪ್ಯೇತು ದೇವಾನ್ ।
ಅನು ತ್ವಾ ಸಪ್ತೇ ಪ್ರದಿಶಸ್ಸಚಂತಾಗ್ ಸ್ವಧಾಮಸ್ಮೈ ಯಜಮಾನಾಯ ಧೇಹಿ ॥

(೩) ಈಡ್ಯಶ್ಚಾಸಿ ವಂದ್ಯಶ್ಚ ವಾಜಿನ್ನಾಶುಶ್ಚಾಸಿ ಮೇಧ್ಯಶ್ಚ ಸಪ್ತೇ ।
ಅಗ್ನಿಷ್ಟ್ವಾ ದೇವೈರ್ವಸುಭಿಸ್ಸಜೋಷಾಃ ಪ್ರೀತಂ ವಹ್ನಿಂ ವಹತು ಜಾತವೇದಾಃ ॥

(೪) ಸ್ತೀರ್ಣಂ ಬರ್ಹಿಸ್ಸುಷ್ಟರೀಮಾ ಜುಷಾಣೋರು ಪೃಥು ಪ್ರಥಮಾನಂ ಪೃಥಿವ್ಯಾಂ ।
ದೇವೇಭಿರ್ಯುಕ್ತಮದಿತಿಸ್ಸಜೋಷಾಃ ಸ್ಯೋನಂ ಕೃಣ್ವಾನಾ ಸುವಿತೇ ದಧಾತು ॥

(೫) ಏತಾ ಉ ವಸ್ಸುಭಗಾ ವಿಶ್ವರೂಪಾ ವಿ ಪಕ್ಷೋಭಿಃ ಶ್ರಯಮಾಣಾ ಉದಾತ್ಯೈಃ ।
ಋಷ್ವಾಸ್ಸತೀಃ ಕವಷಶ್ಶುಂಭಮಾನಾ ದ್ವಾರೋ ದೇವೀಃ ಸುಪ್ರಾಯಣಾ ಭವಂತು ॥

(೬) ಅಂತರಾ ಮಿತ್ರಾವರುಣಾ ಚರಂತೀ ಮುಖಂ ಯಜ್ಞಾನಾಮಭಿ ಸಂವಿದಾನೇ ।
ಉಷಾಸಾ ವಾಂ ಸುಹಿರಣ್ಯೇ ಸುಶಿಲ್ಪೇ ಋತಸ್ಯ ಯೋನಾವಿಹ ಸಾದಯಾಮಿ ॥

(೭) ಪ್ರಥಮಾ ವಾಗ್ಂ ಸರಥಿನಾ ಸುವರ್ಣಾ ದೇವೌ ಪಶ್ಯಂತೌ ಭುವನಾನಿ ವಿಶ್ವಾ ।
ಅಪಿಪ್ರಯಂ ಚೋದನಾ ವಾಂ ಮಿಮಾನಾ ಹೋತಾರಾ ಜ್ಯೋತಿಃ ಪ್ರದಿಶಾ ದಿಶಂತಾ ॥

(೮) ಆದಿತ್ಯೈರ್ನೋ ಭಾರತೀ ವಷ್ಟು ಯಜ್ಞಗ್ಂ ಸರಸ್ವತೀ ಸಹ ರುದ್ರೈರ್ನ ಆವೀತ್ ।
ಇಡೋಪಹೂತಾ ವಸುಭಿಃ ಸಜೋಷಾ ಯಜ್ಞಂ ನೋ ದೇವೀರಮೃತೇಷು ಧತ್ತ ॥

(೯) ತ್ವಷ್ಟಾ ವೀರಂ ದೇವಕಾಮಂ ಜಜಾನ ತ್ವಷ್ಟುರರ್ವಾ ಜಾಯತ ಆಶುರಶ್ವಃ ।
ತ್ವಷ್ಟೇದಂ ವಿಶ್ವಂ ಭುವನಂ ಜಜಾನ ಬಹೋಃ ಕರ್ತಾರಮಿಹ ಯಕ್ಷಿ ಹೋತಃ ॥

(೧೦) ಅಶ್ವೋ ಘೃತೇನ ತ್ಮನ್ಯಾ ಸಮಕ್ತ ಉಪ ದೇವಾಗ್ಂ ಋತುಶಃ ಪಾಥ ಏತು ।
ವನಸ್ಪತಿರ್ದೇವಲೋಕಂ ಪ್ರಜಾನನ್ನಗ್ನಿನಾ ಹವ್ಯಾ ಸ್ವದಿತಾನಿ ವಕ್ಷತ್ ॥

(೧೧) ಪ್ರಜಾಪತೇಸ್ತಪಸಾ ವಾವೃಧಾನಸ್ಸದ್ಯೋ ಜಾತೋ ದಧಿಷೇ ಯಜ್ಞಮಗ್ನೇ ।
ಸ್ವಾಹಾಕೃತೇನ ಹವಿಷಾ ಪುರೋಗಾ ಯಾಹಿ ಸಾಧ್ಯಾ ಹವಿರದಂತು ದೇವಾಃ ॥

(ತೈ. ಸಂ. ೫-೧-೧೧)

ಈ ಹನ್ನೊಂದು ಮಂತ್ರಗಳನ್ನು ಅಶ್ವಮೇಧಯಜ್ಞದಲ್ಲಿ ಯಾಜ್ಯಾಮಂತ್ರಗಳನ್ನಾಗಿ ಉಪಯೋಗಿಸುವರು. ಈ ಹನ್ನೊಂದು ಮಂತ್ರಗಳೂ ತ್ರಿಷ್ಟುಪ್ ಛಂದಸ್ಸಿನವು.

### ವ್ಯಾಕರಣಪ್ರಕ್ರಿಯಾ

ನಿಕ್ರಮಣಮ್—ನಿತರಾಂ ಕ್ರಮತೇ ಯತ್ರ. ಕ್ರಮು ಪಾದವಿಕ್ಷೇಪೇ, ಧಾತು. ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ. ಅದಕ್ಕೆ ಅನಾದೇಶ. ಲಿತ್ತಾದುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಪ್ರಾದಿಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

ನಿಷದನಮ್— ಷದಲೃ ವಿಶರಣಾಗತ್ಯವಸಾದನೇಷು. ಧಾತು. ಹಿಂದಿನಂತೆ ಪ್ರತ್ಯಯಸ್ವರಗಳು ಬರುತ್ತವೆ. ಉಪಸರ್ಗನಿಮಿತ್ತವಾಗಿ ಧಾತುಸಕಾರಕ್ಕೆ ಷತ್ವ.

ನಿವರ್ತನಮ್—ವೃತು ವರ್ತನೇ. ಧಾತು. ಹಿಂದಿನಂತೆ ಪ್ರಕ್ರಿಯೆ ಬರುತ್ತದೆ.

ಪಪೌ—ಪಾ. ಪಾನೇ. ಧಾತು. ಲಿಟ್ ಪ್ರಥಮಪುರುಷ ಏಕವಚನದಲ್ಲಿ ಣಲ್ ಆದೇಶ ಆತ ಔಣಲಃ (ಪಾ. ಸೂ. ೭-೧-೩೪) ಎಂಬುದರಿಂದ ಅದಕ್ಕೆ ಔಕಾರಾದೇಶ. ಧಾತುವಿಗೆ ದ್ವಿತ್ವಾದಿ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

ಘಾಸಿಮ್—ಘಸ್ಲೃ ಭಕ್ಷಣೇ. ಧಾತು. ಜನಿಘಸಿಭ್ಯಾಮಿಣ್ (ಉ. ಸೂ. ೪-೫೪೯) ಎಂಬುದರಿಂದ ಇಣ್ ಪ್ರತ್ಯಯ. ಅತಉಪಧಾಯಾಃ (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಜಘಾಸ—ಘಸ್ಲೃ ಭಕ್ಷಣೇ. ಧಾತು. ಲಿಟ್ ಪ್ರಥಮಪುರುಷ ಏಕವಚನಾಂತರೂಪ. ಯದ್ಯೋಗ ವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಲ್ ಲಿತ್ತಾದುದರಿಂದ ಲಿತಿ (ಪಾ. ಸೂ ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.॥ ೧೪ ॥

---

ಸಂಹಿತಾಪಾಠಃ

ಮಾ ತ್ವಾಗ್ನಿರ್ಧ್ವನಯೀದ್ಧೂಮಗಂಧಿರ್ಮೋಖಾ ಭ್ರಾಜಂತ್ಯಭಿ ವಿಕ್ತ-
　　ಜಘ್ರಿಃ ।
ಇಷ್ಟಂ ವೀತಮಭಿಗೂರ್ತಂ ವಷಟ್ಕೃತಂ ತಂ ದೇವಾಸಃ ಪ್ರತಿ ಗೃಭ್ಣಂ-
　　ತ್ಯಶ್ವಂ ॥ ೧೫ ॥

ಪದಪಾಠಃ

ಮಾ । ತ್ವಾ । ಅಗ್ನಿಃ । ಧ್ವನಯೀತ್ । ಧೂಮಽಗಂಧಿಃ । ಮಾ । ಉಖಾ । ಭ್ರಾಜಂತೀ । ಅಭಿ । ವಿಕ್ತ । ಜಘ್ರಿಃ ।
ಇಷ್ಟಂ । ವೀತಂ । ಅಭಿಽಗೂರ್ತಂ । ವಷಟ್ಽಕೃತಂ । ತಂ । ದೇವಾಸಃ । ಪ್ರತಿ । ಗೃಭ್ಣಂತಿ । ಅಶ್ವಂ॥೧೫॥

ಸಾಯಣಭಾಷ್ಯಂ

ಹೇ ಅಶ್ವ ತ್ವಾ ತ್ವಾಂ ಧೂಮಗಂಧಿರ್ಧೂಮೇನ ವ್ಯಾಪ್ತೋಽಗ್ನಿರ್ಮಾ ಧ್ವನಯೀತ್ । ಮಾ ಧ್ವನಯತ್ । ಧೂಮಂ ದೃಷ್ಟ್ವಾ ಶಬ್ದಂ ಮಾ ಕುರ್ವಿತ್ಯರ್ಥಃ । ಅಶ್ವಸ್ಯ ಶಬ್ದನೇ ಪ್ರಾಯಶ್ಚಿತ್ತವಿಧಾನಾತ್। ಯದ್ವಾ । ಹೇ ಪಚ್ಯಮಾನಾಶ್ವಾವಯವ ತ್ವಾ ತ್ವಾಂ ಧೂಮಗಂಧಿರಗ್ನಿರ್ಮಾ ಧ್ವನಯೀತ್ । ಧ್ವನೌ ಸತಿ ಭಾಂಡಭಂಗಃ ಸ್ಯಾತ್॥ ನೋನಯತೀತ್ಯಾದಿನಾ ಚಙ್ಪ್ರತಿಷೇಧಃ । ಪಾ. ೩.೧.೫೧ । ಹ್ಮ್ಯಂತಕ್ಷಣೇತಿ

ವೃದ್ಧ್ಯಭಾವಃ ॥ ಕಿಂಚ ಭ್ರಾಜಂತ್ಯತ್ಯಂತಾಗ್ನಿಸಂಯೋಗೇನ ದೀಪ್ತೋಖಾ ಸ್ಥಾಲೀ ಮಾಭಿ ವಿಕ್ತ । ಅಭಿತೋ ಮಾ ಚೀಚಲತ್ । ತಾಪಾತಿಶಯೇನ ಮಾ ನೀನಶದಿತ್ಯರ್ಥಃ ॥ ಓವಿಜೀ ಭಯಚಲನಯೋಃ । ಛಾಂದಸೋ ವಿಕರಣಸ್ಯ ಲುಕ್ । ಲುಙಿ ವಾ ಝಲೋ ಝಲೀತಿ ಸಲೋಪಃ ॥ ಸ್ಥಾಲೀ ವಿಶೇಷ್ಯತೇ । ಜಘ್ರಿರ್ಜಿಘ್ರತೀ ತಾಪೇನ ॥ ಘ್ರಾ ಗಂಧೋಪಾದಾನೇ । ಆದೃಗಮಹನೇತಿ ಕಿನ್ಪ್ರತ್ಯಯಃ ॥ ತಂ ಶಾಧ್ಯಶ್ವಮಶ್ವಮಿಷ್ಟಂ ಹೋತುಮಿಷಿತಂ ವೀತಂ ಹೋಮಾಯಾನೀತಮಭಿಗೂರ್ತಮಾಭಿಮುಖ್ಯೇನ ಪ್ರದಾನಾಯೋದ್ಯತಂ । ಯದ್ವಾ । ಇಷ್ಟಂ ಪ್ರಯಾಜೈರಾಪ್ರೀತಂ ವೀತಂ ಪರ್ಯಗ್ನಿಕೃತಮಭಿಗೂರ್ತಂ ಯೇ ಯಜಾಮಹ ಇತ್ಯಾಗೂರ್ಯುಕ್ತಂ । ವಷಟ್ಕೃತಂ ವಷಟ್ಕಾರೇಣ ದೇವಸಂಸ್ಕೃತಂ ಏವಂಭೂತಂ ತಂ ದೇವಾಸೋ ದೇವಾಃ ಪ್ರತಿ ಗೃಭ್ಣಂತಿ । ಪ್ರತಿಗೃಹ್ಣಂತಿ ॥

ಪ್ರತಿಪದಾರ್ಥ

(ಹೇ ಅಶ್ವ—ಎಲೈ ಅಶ್ವವೇ) । ತ್ವಾ—ನಿನ್ನನ್ನು । ಧೂಮಗಂಧಿಃ—ಹೊಗೆಯಿಂದ ಕೂಡಿದ ಅಗ್ನಿಯು । ಮಾ ಧ್ವನಯೀತ್—ಕೆನೆಯುವಂತೆ ಮಾಡದಿರಲಿ । [ (ಅಥವಾ) ತ್ವಾ—ಭಾಂಡದಲ್ಲಿ ಮಾಂಸರೂಪದಿಂದ ಬೇಯುತ್ತಿರುವ ನಿನ್ನನ್ನು (ಭಾಂಡವನ್ನು) । ಧೂಮಗಂಧಿಃ—ಹೊಗೆಯಿಂದ ಕೂಡಿದ ಅಗ್ನಿಯು । ಮಾ ಧ್ವನಯೀತ್—ಛಟ್ಪಯಾಗಿ ಶಬ್ದಮಾಡದಂತಾಗಲಿ (ಮಾಂಸ ಸಹಿತವಾದ ಭಾಂಡವು ಒಡೆಯದಿರಲಿ) ।] ಭ್ರಾಜಂತೇ ಜಘ್ರಿಃ—ಬೆಂಕಿಯ ಉರಿಯಿಂದ ಕಾದು ವಾಸನೆಬರುತ್ತಿರುವ । ಉಖಾ—(ಮಾಂಸಪೂರ್ಣವಾದ) ಪಾತ್ರೆಯು । ಮಾ ಅಭಿ ವಿಕ್ತ—ಜಾರಿಬೀಳದಿರಲಿ । ಇಷ್ಟಂ—ದೇವತೆಗಳಿಗೆ ಹೋಮಮಾಡುವುದಕ್ಕಾಗಿ ಆರಿಸಲ್ಪಟ್ಟದ್ದೂ । ವೀತಂ—ಹೋಮಾರ್ಥವಾಗಿ ಅಗ್ನಿಯ ಸಮೀಪಕ್ಕೆ ಕರೆತಂದುದೂ । ಅಭಿಗೂರ್ತಂ—ಆಹುತಿಗಾಗಿಯೇ ಮುಖ್ಯವಾಗಿ ಸಿದ್ಧಮಾಡಲ್ಪಟ್ಟಿರುವುದೂ । [ (ಅಥವಾ) ಇಷ್ಟಂ—ಪ್ರಯಾಜಹೋಮಗಳಿಂದ ಹೋಮಮಾಡಲ್ಪಡುವುದೂ । ವೀತಂ—ಪರ್ಯಗ್ನಿಕರಣವಿಧಾನದಿಂದ ಅಗ್ನಿಯ ಸುತ್ತಲೂ ಮೂರಾವರ್ತಿ ಪ್ರದಕ್ಷಿಣಾಕಾರವಾಗಿ ಕರೆತಂದುದೂ । ಅಭಿಗೂರ್ತಂ—ಆಹುತಿಪ್ರದಾನಕ್ಕಾಗಿ ಸಿದ್ಧವಾಗಿರುವುದೂ । ] ವಷಟ್ಕೃತಂ—ವಷಟ್ಕಾರದಿಂದ (ವಷಟ್ ಎಂಬ ಮಂತ್ರವನ್ನು ಉಚ್ಚರಿಸುವುದರಿಂದ) ದೇವತೆಗಳಿಗೆ ಯೋಗ್ಯವಾಗುವಂತೆ ಸಂಸ್ಕೃತವಾದುದೂ ಆದ । ತಂ ಅಶ್ವಂ—ಆ ಅಶ್ವವನ್ನು । ದೇವಾಸಃ—ದೇವತೆಗಳು । ಪ್ರತಿ ಗೃಭ್ಣಂತಿ—ಸ್ವೀಕರಿಸುತ್ತಾರೆ. ಸ್ವೀಕರಿಸುತ್ತಾರೆ. ।

ಭಾವಾರ್ಥ

ಹೊಗೆ ವಾಸನೆ ಬರುತ್ತಿರುವ ಎಂದರೆ ಹೊಗೆಯಾಡುತ್ತಿರುವ ಅಗ್ನಿಯನ್ನು ನೋಡಿ ಯಜ್ಞಾಶ್ವವು ಕೆನೆಯದಿರಲಿ. (ಶಬ್ದಮಾಡದಿರಲಿ)- ಬಹಳವಾದ ಉರಿಯಿಂದ ಕಾದು ವಾಸನೆಬರುತ್ತಿರುವ ಮಾಂಸಭಾಂಡವು ಉರುಳಿಬೀಳದಿರಲಿ. ಈ ಅಶ್ವವು ಪರ್ಯಗ್ನಿಕರಣವಿಧಾನದಿಂದ ಅಗ್ನಿಯನ್ನು ಪ್ರದಕ್ಷಿಣೆ ಮಾಡಿ ವಷಟ್ಕಾರಪೂರ್ವಕವಾದ ದೇವತೆಗಳ ಆಹುತಿಗಾಗಿ ಸಿದ್ಧಪಡಿಸಲ್ಪಟ್ಟಿರುವುದು. ಇಂತಹ ಸಂಸ್ಕಾರಪೂರ್ವಕವಾದ ಅಶ್ವವನ್ನು ದೇವತೆಗಳು ಸ್ವೀಕರಿಸುತ್ತಾರೆ.

## English Translation

Let not smoke-smelling Agni cause you, (horse), to utter sound; let not the glowing caldron, odoriferous (with its contents), be overturned: the

gods accept a horse that has been selected (for sacrifice); that has been led (round the fire): that has been devoutly offered, and has been consecrated by (the exclamation), Vashat.

ವಿಶೇಷವಿಷಯಗಳು

**ಮಾ ತ್ವಾ ಅಗ್ನಿಃ ಧ್ವನಯೀತ್ ಧೂಮಗಂಧಿಃ**—ಧೂಮಗಂಧಿಃ ಎಂದರೆ ಹೊಗೆಯವಾಸನೆಯುಳ್ಳ ಎಂದರೆ ತುಂಬಾ ಹೊಗೆಯಿಂದ ಕೂಡಿರುವ ಎಂದರ್ಥವು. ಇಂತಹ ಹೊಗೆಯಾಡುತ್ತಿರುವ ಅಗ್ನಿಯ ಸಮೀಪಕ್ಕೆ ಅಶ್ವವನ್ನು ಪರ್ಯಗ್ನಿಕರಣಕ್ಕಾಗಿ ಕರೆತಂದಾಗ ಅದು ಶಬ್ದಮಾಡದಿರಲಿ ಎಂದು ಪ್ರಾರ್ಥನೆಯು. ಒಂದು ವೇಳೆ ಅಶ್ವವು ಬೆದರಿ ಶಬ್ದ ಮಾಡಿದರೆ ಆಗ ಪ್ರಾಯಶ್ಚಿತ್ತವಿಧಿಯನ್ನು ಆಚರಿಸಬೇಕಾಗುವುದು. ಆ ರೀತಿ ಪ್ರಾಯಶ್ಚಿತ್ತಕ್ಕೆ ಅವಕಾಶವಿಲ್ಲದಂತೆ ಅಶ್ವವು ಹೊಗೆಯ ತೊಂದರೆಯಿಂದ ಶಬ್ದಮಾಡದಿರಲಿ ಎಂದು ಋಷಿಯ ಆಶಯವು.

**ಮಾ ಉಖಾ ಭ್ರಾಜಂತೀ ಅಭಿ ವಿಕ್ತ ಜಘ್ರಿಃ**—ಬೆಂಕಿಯ ಮೇಲಿರುವ ಮಾಂಸ ಪಾತ್ರೆಯು ಹೆಚ್ಚಾದ ಉರಿಯಿಂದ ಕೆಂಪಗೆ ಕಾದು ಬೇಯುತ್ತಿರುವ ಮಾಂಸದ ವಾಸನೆಯಿಂದ ಕೂಡಿರುವುದು. ಇಂತಹ ಭಾಂಡವು ಕಾರಣಾಂತರದಿಂದ ಕೆಳಗೆ ಬೀಳದಿರಲಿ ಅಥವಾ ಒಡೆಯದಿರಲಿ ಎಂದಭಿಪ್ರಾಯವು.

**ಇಷ್ಟಂ**—ಹೋತುಮಿಷಿತಂ । ಯದ್ವಾ ಪ್ರಯೋಜೈರಾಪ್ರೀತಂ । ಹೋಮ ಮಾಡುವುದಕ್ಕಾಗಿ ಆರಿಸಲ್ಪಟ್ಟಿರುವ ಅಶ್ವವು ಅಥವಾ ಪ್ರಯಾಜಮಂತ್ರಗಳಿಂದ ಹೋಮಮಾಡಲ್ಪಡುವ ಅಶ್ವವನ್ನು ಎಂದರ್ಥವು.

**ವೀತಂ**—ಅಗ್ನಿಯ ಸಮೀಪಕ್ಕೆ ಕರೆತರಲ್ಪಟ್ಟ ಅಥವಾ ಪರ್ಯಗ್ನಿಕರಣವಿಧಾನದಿಂದ ಅಗ್ನಿಯ ಸುತ್ತಲೂ ಬಳಸಿ ಬಂದಿರುವ

**ಅಭಿಗೂರ್ತಂ**—ಅಭಿಮುಖ್ಯೇನ ಪ್ರದಾನಾಯೋದ್ಯತಂ । ಮುಖ್ಯ ಆಹುತಿಯಾಗಿ ಸಮರ್ಪಿಸುವುದಕ್ಕೆ ಸಿದ್ಧಮಾಡಲ್ಪಟ್ಟ ಅಥವಾ ಯೇ ಯಜಾಮಹೇ ಎಂದು ಪ್ರಾರಂಭಿಸಿ ಘಟ್ಟಿಯಾಗಿ ಮಂತ್ರೋಚ್ಚಾರಣಪೂರ್ವಕವಾಗಿ ಹೋಮ ಮಾಡಲು ಸಿದ್ಧವಾಗಿರುವ ಎಂದಭಿಪ್ರಾಯವು.

**ವಷಟ್ಕೃತಂ**—ಅಗ್ನಿಯಲ್ಲಿ ಹೋಮ ಮಾಡುವಾಗ ಪ್ರಯಾಜಮಂತ್ರಗಳ ಕೊನೆಯಲ್ಲಿ ವೌಷಟ್ ಎಂಬ ಶಬ್ದವನ್ನುಚ್ಚರಿಸುತ್ತಾ ಹೋಮ ಮಾಡುವರು. ಈ ರೀತಿ ವೌಷಡಂಗವಾಗಿ ಹೋಮಮಾಡುವುದಕ್ಕೆ ವಷಟ್ಕಾರವೆಂದು ಹೆಸರು. ಇಂತಹ ಮಂತ್ರಪೂತವಾದ ಅಶ್ವ ಅಥವಾ ಅಶ್ವಮಾಂಸವನ್ನು ದೇವತೆಗಳು ಸ್ವೀಕರಿಸುತ್ತಾರೆಂದು ಅಭಿಪ್ರಾಯವು.

ವ್ಯಾಕರಣಪ್ರಕ್ರಿಯಾ

**ಧ್ವನಯೀತ್**—ಧ್ವನ ಶಬ್ದೇ. ಧಾತು. ಹೇತುಮತಿ ಚ (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಘಟಾದಿಯಲ್ಲಿ ಸೇರಿರುವುದರಿಂದ ಮಿತ್ ಸಂಜ್ಞಾ ಬರುತ್ತದೆ. ಉಪಧಾವೃದ್ಧಿ ಬಂದಾಗ ಮಿತಾಂ ಹ್ರಸ್ವಃ (ಪಾ. ಸೂ. ೬-೪-೯೨) ಎಂಬುದರಿಂದ ಧಾತುವಿನ ಉಪಧೆಗೆ ಹ್ರಸ್ವ. ಮಾಙ್ ಉಪಪದವಾಗಿರುವಾಗ ಮಾಙಿ ಲುಙ್ (ಪಾ. ಸೂ. ೩-೩-೧೭೫) ಎಂಬುದರಿಂದ ಲುಙ್. ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. ಇತಶ್ಚ ಎಂಬುದರಿಂದ ಇಕಾರಲೋಪ. ನೋನಯತಿ ಧ್ವನ—(ಪಾ. ಸೂ. ೩-೧-೫೧) ಎಂಬುದರಿಂದ ಚ್ಲಿಗೆ ಚಙ್ ಪ್ರತಿಷೇಧ

ಬರುತ್ತದೆ. ಸಿಚಾದೇಶ. ಅದಕ್ಕೆ ಇಡಾಗಮ. ಅಸ್ತಿಸಿಚೋಽಪೃಕ್ತೇ (ಪಾ. ಸೂ. ೭-೩-೯೩) ಎಂಬುದರಿಂದ ಈಡಾಗಮ. ಇಟಈಟಿ (ಪಾ. ಸೂ. ೮-೨-೨೮) ಎಂಬುದರಿಂದ ಸಿಚಿಗೆ ಲೋಪ. ಹ್ಮ್ಯಂತಕ್ಷಣಶ್ವಸ—(ಪಾ. ಸೂ. ೭-೨-೫) ಎಂಬುದರಿಂದ ವೃದ್ಧಿನಿಷೇಧ ಬರುತ್ತದೆ. ಣಿಚಿಗೆ ಗುಣ. ಅಯಾದೇಶ. ನಮಾಙ್‌ಯೋಗೇ (ಪಾ. ಸೂ. ೬-೪-೭೪) ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಧೂಮಗಂಧಿಃ—ಧೂಮಸ್ಯ ಗಂಧಃ ಯಸ್ಮಿನ್ ಸಃ ಧೂಮಗಂಧಿಃ ಅಲ್ಪಾಖ್ಯಾಯಾಂ (ಪಾ. ಸೂ. ೫-೪-೧೩೬) ಎಂಬುದರಿಂದ ಇಕಾರ ಸಮಾಸಂತವಾಗಿ ಬರುತ್ತದೆ. ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್ ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

ಭ್ರಾಜಂತೀ—ಭ್ರಾಜೃ ದೀಪ್ತೌ ಧಾತು. ವ್ಯತ್ಯಯದಿಂದ ಲಟಿಗೆ ಶತ್ರಾದೇಶ. ಸ್ತ್ರೀತ್ವದಲ್ಲಿ ಙೀಪ್. ಧಾತು ಸ್ವರ ಉಳಿಯುತ್ತದೆ.

ವಿಕ್ತ—ಓವಿಜೀ ಭಯಚಲನಯೋಃ ಧಾತು. ಲಙ್ ಪ್ರಥಮಪುರುಷಏಕವಚನದಲ್ಲಿ ತ ಪ್ರತ್ಯಯ. ಬಹುಲಂ ಛಂದಸಿ ಎಂಬುದರಿಂದ ವಿಕರಣಕ್ಕೆ ಲುಕ್. ಅಥವಾ ಮಾಙ್‌ಯೋಗವಿರುವುದರಿಂದ ಲುಙ್. ಚ್ಲಿಗೆ ಸಿಚಾದೇಶ. ಝಲೋ ಝಲಿ (ಪಾ. ಸೂ. ೮-೨-೨೬) ಎಂಬುದರಿಂದ ಸಿಚಿಗೆ ಲೋಪ. ಚೋಃಕುಃ ಎಂಬುದ ರಿಂದ ಜಕಾರಕ್ಕೆ ಕುತ್ವ, ಚರ್ತ್ವ. ಪ್ರತ್ಯಯಕ್ಕೆ ಙಿತ್ವಾದೇಶವಿರುವುದರಿಂದ ಲಘೂಪಧಗುಣ ಬರುವುದಿಲ್ಲ. ತಿಙಂತ ನಿಘಾತಸ್ವರ ಬರುತ್ತದೆ

ಜಘ್ರಿಃ—ಘ್ರಾ ಗಂಧೋಪಾದಾನೇ ಧಾತು. ಆದಂತವಾದುದರಿಂದ ಆದೃಗಮಹನ-(ಪಾ. ಸೂ. ೩-೨-೧೭೧) ಎಂಬುದರಿಂದ ಕಿನ್ ಪ್ರತ್ಯಯ. ಲಿಡ್ವದ್ಭಾವ ಅತಿದೇಶಮಾಡಿರುವುದರಿಂದ ಧಾತುವಿನಿಗೆ ದ್ವಿತ್ವ. ಆತೋಲೋಪ ಇಟಿ ಚ (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ಞ್ನಿತ್ಯಾದಿರ್ನಿತ್ಯಮ್ (ಪಾ.ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಅಭಿಗೂರ್ತಮ್—ಗೂರೀ ಉದ್ಯಮನೇ. ಧಾತು. ಕ್ತಪ್ರತ್ಯಯ. ಗತಿರನಂತರಃ ( ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಅಭಿ) ಪ್ರಕೃತಿಸ್ವರಬರುತ್ತದೆ.

ಗೃಭ್ಣಂತಿ—ಗ್ರಹ ಉಪಾದಾನೇ- ಧಾತು. ಕ್ರ್ಯಾದಿ. ಲಟ್. ಪ್ರಥಮಪುರುಷ ಬಹುವಚನಾಂತ ರೂಪ. ಶ್ನಾಭ್ಯಸ್ತಯೋರಾತಃ (ಪಾ. ಸೂ. ೬-೪-೧೧೨) ಎಂಬುದರಿಂದ ವಿಕರಣದ ಆಕಾರಕ್ಕೆ ಲೋಪ. ಹೃಗ್ರಹೋರ್ಭಶ್ಛಂದಸಿ ಎಂಬ ವಚನದಿಂದ ಧಾತುಹಕಾರಕ್ಕೆ ಭತ್ವ. ತಿಙಂತನಿಘಾತಸ್ವರ ಬರುತ್ತದೆ. ॥ ೧೫ ॥

———:0:———

ಸಂಹಿತಾಪಾಠಃ

ಯದಶ್ವಾ॑ಯ ವಾಸ॑ ಉಪಸ್ತೃ॒ಣಂತ್ಯ॑ಧೀವಾ॒ಸಂ ಯಾ ಹಿರ॑ಣ್ಯಾನ್ಯಸ್ಮೈ ।

ಸಂ॒ದಾನ॒ಮರ್ವ॑ಂತಂ॒ ಪಡ್ಬೀ॑ಶಂ ಪ್ರಿ॒ಯಾ ದೇ॒ವೇಷ್ವಾ ಯಾ॑ಮಯಂತಿ॥೧೬॥

### ಪದಪಾಠ

ಯತ್ । ಅಶ್ವಾಯ । ವಾಸಃ । ಉಪऽಸ್ತೃಣಂತಿ । ಅಧೀಽವಾಸಂ । ಯಾ । ಹಿರಣ್ಯಾನಿ । ಅಸ್ಮೈ ।

ಸಂऽದಾನಂ । ಅರ್ವಂತಂ । ಪಡ್ಬೀಶಂ। ಪ್ರಿಯಾ । ದೇವೇಷು । ಆ । ಯಮಯಂತಿ ॥ ೧೬ ॥

### ಸಾಯಣಭಾಷ್ಯಂ

ಅಶ್ವಾಯ ಸಂಜ್ಞಪ್ಯಮಾನಾಯಾಧೀವಾಸಮುಪರ್ಯಾಚ್ಛಾದನಯೋಗ್ಯಂ ಯದ್ವಾಸ ಉಪಸ್ತೃಣಂತಿ ಸರ್ವತ ಆಚ್ಛಾದಯಂತಿ ॥ ಸ್ತೃಞ್ ಆಚ್ಛಾದನೇ ಕ್ರ್ಯಾದಿಕಃ ॥ ತಥಾಸ್ಮಾ ಅಶ್ವಾಯ ಯಾ ಯಾನಿ ಹಿರಣ್ಯಾನಿ ಸೌವರ್ಣರಾಜತಕಾಂಸ್ಯಾನಿ ಕಲ್ಪಯಂತಿ । ತಥಾರ್ವಂತಂ ॥ ಷಷ್ಠ್ಯರ್ಥೇ ದ್ವಿತೀಯಾ ॥ ಅರ್ವತೋಽಶ್ವಸ್ಯ ಸಂದಾನಂ ಶಿರೋಬಂಧನಂ ಪಡ್ಬೀಶಂ ಪಾದೇಷು ಪ್ರವಿಷ್ಟಂ ಪಾದಬಂಧನಂ । ಏತಾನಿ ಪ್ರಿಯಾ ದೇವಾನಾಂ ಪ್ರಿಯತರಾಣಿ ಚಾತ್ವಾಲೇ ಬದ್ಧ್ವಾ ಸ್ಥಾಪಿತಾನಿ ದೇವೇಷ್ವಾ ಯಾಮಯಂತಿ । ಪ್ರಾಪಯಂತಿ ॥

### । ಪ್ರತಿಪದಾರ್ಥ ।

ಅಶ್ವಾಯ—ಯಜ್ಞಾಶ್ವಕ್ಕೆ । ಅಧೀವಾಸಂ—ಆಚ್ಛಾದನರೂಪವಾಗಿರುವ । ಯತ್ ವಾಸಃ—ಯಾವ ವಸ್ತ್ರವನ್ನು । ಉಪಸ್ತೃಣಂತಿ—ಚೆನ್ನಾಗಿ ಮುಚ್ಚುವಂತೆ ಹೊದಿಸುವರೋ (ಮತ್ತು) । ಅಸ್ಮೈ—ಈ ಕುದುರೆಯ । ಯಾ—ಯಾವ । ಹಿರಣ್ಯಾನಿ—ಅಲಂಕಾರಮಾಡಿರುವ ಸುವರ್ಣಾದ್ಯಾಭರಣಗಳುಂಟೋ ಅವುಗಳೂ (ಹಾಗೆಯೇ) । ಅರ್ವಂತಂ—ಅಶ್ವದ । ಸಂದಾನಂ—ಕತ್ತನ್ನು ಕಟ್ಟತಕ್ಕ ಹಗ್ಗವೂ । ಪಡ್ಬೀಶಂ—ಕಾಲುಗಳನ್ನು ಕಟ್ಟತಕ್ಕ ಹಗ್ಗವೂ (ಇವುಗಳೆಲ್ಲವೂ) । ಪ್ರಿಯಾ—ದೇವತೆಗಳಿಗೆ ಪ್ರೀತಿಯನ್ನುಂಟುಮಾಡುವವುಗಳಾಗಿ । ದೇವೇಷು—ದೇವತೆಗಳಲ್ಲಿ । (ದೇವತೆಗಳನ್ನು) । ಆ ಯಾಮಯಂತಿ—ಹೋಗಿ ಸೇರುತ್ತವೆ ।

### । ಭಾವಾರ್ಥ ।

ಯಜ್ಞಾಶ್ವದ ಮೇಲೆ ಹೊದಿಕೆಯಂತೆ ಹೊದ್ದಿಸಿರುವ ವಿಸ್ತಾರವಾದ ವಸ್ತ್ರವೂ, ಕುದುರೆಯನ್ನು ಅಲಂಕರಿಸಿರುವ ಚಿನ್ನ ಬೆಳ್ಳಿಯ ಆಭರಣಗಳೂ, ಕುದುರೆಯ ಕತ್ತಿನಲ್ಲಿಯೂ, ಕಾಲುಗಳನ್ನು ಕಟ್ಟುವುದಕ್ಕೆ ಉಪಯೋಗಿಸುವ ಹಗ್ಗಗಳೂ ದೇವತೆಗಳಿಗೆ ತುಂಬಾ ಪ್ರೀತಿಕರಗಳಾಗಿ ದೇವತೆಗಳಿಗೇ ಸೇರಲಿ.

### English Translation

The cloth which they spread as a covering for the horse; the golden (trappings with which they decorate him), the head-ropes,–all these they offer as acceptable to the gods.

### ವಿಶೇಷವಿಷಯಗಳು

ವಾಸಂ ಅಧೀವಾಸಂ—ಈ ಶಬ್ದಗಳಿಗೆ ಸಾಯಣರು ಉಪರ್ಯಾಚ್ಛಾದನಯೋಗ್ಯಂ ವಾಸ ಉಪಸ್ತೃಣಂತಿ—ಕುದುರೆಯ ಮೇಲೆ ಹೊದಿಸುವುದಕ್ಕೆ ಯೋಗ್ಯವಾದ ವಸ್ತ್ರವನ್ನು ಹೊದಿಕೆಯಾಗಿ ಆಚ್ಛಾದನಮಾಡುತ್ತಾರೆ ಎಂದು ಅರ್ಥವಿವರಣೆಮಾಡಿರುವರು. ಇಲ್ಲಿ ಅಧೀವಾಸಂ ಎಂಬ ಶಬ್ದವನ್ನು ವಾಸಃ ಎಂಬ ಶಬ್ದಕ್ಕೆ ವಿಶೇಷಣವನ್ನಾಗಿ ಹೇಳಿರುವರು. ಅಥವಾ ಕಾತ್ಯಾಯನರು ಹೇಳಿರುವಂತೆ ಅಧೀವಾಸವೆಂದರೆ ತೆರೆಗಾಗಿ (curtain)ಉಪಯೋಗಿಸುವ ವಸ್ತ್ರವೆಂದಾದರೂ ಆಗಬಹುದು. ಯಜ್ಞಾಶ್ವವನ್ನು ವಧಿಸುವುದಕ್ಕೆ ಹಿಂದಿನ ದಿನ ಯಜಮಾನನ ಪತ್ನಿಯು 'ರಾಣಿಯು' ಅಶ್ವದ ಜೊತೆಯಲ್ಲಿಯೇ ರಾತ್ರಿಯನ್ನು ಕಳೆಯಬೇಕಾಗಿರುವುದರಿಂದ ಅಶ್ವವಿರುವ ಪ್ರದೇಶವನ್ನು ಪ್ರತ್ಯೇಕಿಸುವುದಕ್ಕಾಗಿ ಒಂದು ತೆರೆಯನ್ನು ಹಾಕುವರು. ಈ ತೆರೆಗೆ ಅಧಿವಾಸವೆಂದು ಹೆಸರು. ಈ ಅರ್ಥವೂ ಇಲ್ಲಿ ಹೊಂದಿಕೊಳ್ಳುವುದು.

ಹಿರಣ್ಯಾನಿ—ಕುದುರೆಯನ್ನು ಅಲಂಕರಿಸುವುದಕ್ಕಾಗಿ ಉಪಯೋಗಿಸುವ ಚಿನ್ನದ ಹಾರ, ಬೆಳ್ಳಿಯ ಕಾಲುಗೊರಸು ಮೊದಲಾದ ವಿಧವಿಧವಾದ ಆಭರಣಗಳು. Trappings used to decorate the horse.

ಅರ್ವಂತಂ—ಇಲ್ಲಿ ಅರ್ವತಃ ಎಂದು ಷಷ್ಠೀವಿಭಕ್ತಿಗೆ ಬದಲಾಗಿ ದ್ವಿತೀಯಾವಿಭಕ್ತಿಯ ಪ್ರಯೋಗವಿರುವುದೆಂದು ಭಾಷ್ಯಕಾರರು ವಿವರಿಸಿದ್ದಾರೆ.

ಪಡ್ಬೀಶಂ—ಈ ಸೂಕ್ತದ ೧೪ನೇ ಋಕ್ಕಿನಲ್ಲಿ ಈ ಶಬ್ದಾರ್ಥವನ್ನು ವಿವರಿಸಿದೆ.

ಕುದುರೆಯನ್ನು ಅಲಂಕರಿಸುವ ವಸ್ತ್ರಾದ್ಯಾಭರಣಗಳೂ, ಕುದುರೆಯನ್ನು ಕಟ್ಟಲು ಉಪಯೋಗಿಸುತ್ತಿದ್ದ ಹಗ್ಗಗಳೂ (ಅಶ್ವವಧಾನಂತರ) ದೇವತೆಗಳಿಗೆ ಅರ್ಪಿತವಾಗಿ ಸಂತೋಷವನ್ನುಂಟುಮಾಡಲಿ ಎಂದು ಋಷಿಯು ಪ್ರಾರ್ಥಿಸಿರುವನು.

### ವ್ಯಾಕರಣಪ್ರಕ್ರಿಯಾ

ಉಪಸ್ತೃಣಂತಿ—ಸ್ತೃಞ್ ಆಚ್ಛಾದನೇ. ಧಾತು. ಕ್ರ್ಯಾದಿ. ಲಟ್ ಪ್ರಥಮ ಪುರುಷ ಬಹುವಚನಕ್ಕೆ ಅಂತಾದೇಶ. ಕ್ರ್ಯಾದಿಭ್ಯಃ ಶ್ನಾ ಎಂಬುದರಿಂದ ಶ್ನಾವಿಕರಣ. ಪ್ವಾದೀನಾಂ ಹ್ರಸ್ವಃ (ಪಾ. ಸೂ. ೭-೩-೮೦)ಎಂಬುದರಿಂದ ಧಾತುವಿಗೆ ಹ್ರಸ್ವ. ಪ್ರತ್ಯಯಕ್ಕೆ ಙಿತ್ವಾತಿದೇಶ ವಿರುವುದರಿಂದ ಶ್ನಾಭ್ಯಸ್ತಯೋರಾತಃ (ಪಾ. ಸೂ. ೬-೪-೧೧೨) ಎಂಬುದರಿಂದ ವಿಕರಣದ ಆಕಾರಕ್ಕೆ ಲೋಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ತಿಙಿಚೋದಾತ್ತವತಿ (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಉಪ) ಸರ್ವಾನುದಾತ್ತಸ್ವರ ಬರುತ್ತದೆ.

ಅಧೀವಾಸಮ್—ವಸ ಆಚ್ಛಾದನೇ ಧಾತು. ಘಞ್ ಪ್ರತ್ಯಯ. ಅತ ಉಪಧಾಯಾಃ ಎಂಬುದರಿಂದ ಆದಿವೃದ್ಧಿ. ಕರ್ಷಾತ್ವತಃ-(ಪಾ. ಸೂ. ೬-೧-೧೫೯) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಅನ್ಯೇಷಾಮಪಿ ದೃಶ್ಯತೇ (ಪಾ. ಸೂ. ೬-೩-೧೩೭) ಎಂಬುದರಿಂದ ಪೂರ್ವಪದಕ್ಕೆ (ಅಧಿ) ದೀರ್ಘ ಬರುತ್ತದೆ.

ಪ್ರಿಯಾ—ಪ್ರಿಯಾಣಿ ಎಂದು ರೂಪವಾದಾಗ ನಪುಂಸಕದಲ್ಲಿ ಶೇಶ್ಛಂದಸಿ ಬಹುಲಮ್ (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ ಬರುತ್ತದೆ.

ಯೋಮಯಂತಿ—ಯಮು ಉಪರಮೇ ಧಾತು. ಹೇತುಮತಿ ಚ (ಪಾ ಸೂ. ೩-೧-೨೬) ಎಂಬುದರಿಂದ ಣಿಚ್. ಣಿಜಂತದ ಮೇಲೆ ಲಟ್. ಪ್ರಥಮಪುರುಷಬಹುವಚನದಲ್ಲಿ ಝಿಗೆ ಅಂತಾದೇಶ. ಶಪ್ ವಿಕರಣ ನಿಮಿತ್ತವಾಗಿ ಣಿಚಿಗೆ ಗುಣ. ಅಯಾದೇಶ. ಸಂಜ್ಞಾಪೂರ್ವಕೋವಿಧಿರನಿತ್ಯಃ ಎಂಬ ವಚನದಿಂದ ಸಂಹಿತಾದಲ್ಲಿ ಮಿತ್ ಸಂಜ್ಞಾನಿಮಿತ್ತವಾಗಿ ಹ್ರಸ್ವ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೬ ॥

———:೦:———

ಸಂಹಿತಾಪಾಠಃ

ಯತ್ತೇ ಸಾದೇ ಮಹಸಾ ಶೂಕೃತಸ್ಯ ಪಾರ್ಷ್ಣ್ಯಾ ವಾ ಕಶಯಾ ವಾ ತುತೋದ ।

ಸ್ರುಚೇವ ತಾ ಹವಿಷೋ ಅಧ್ವರೇಷು ಸರ್ವಾ ತಾ ತೇ ಬ್ರಹ್ಮಣಾ ಸೂದಯಾಮಿ ॥ ೧೭ ॥

ಪದಪಾಠಃ

ಯತ್ । ತೇ । ಸಾದೇ । ಮಹಸಾ । ಶೂಕೃತಸ್ಯ । ಪಾರ್ಷ್ಣ್ಯಾ । ವಾ । ಕಶಯಾ । ವಾ । ತುತೋದ ।

ಸ್ರುಚಾಽಇವ । ತಾ । ಹವಿಷಃ । ಅಧ್ವರೇಷು । ಸರ್ವಾ । ತಾ । ತೇ । ಬ್ರಹ್ಮಣಾ । ಸೂದಯಾಮಿ ॥ ೧೭ ॥

ಸಾಯಣಭಾಷ್ಯಂ

ಮಹಸಾ ಬಲೇನ ಶೂ ಕೃತಸ್ಯ । ಶಬ್ದಾನುಕರಣಮೇತತ್ । ಶೂತ್ಕಾರಂ ಕುರ್ವತಸ್ತೇ ತವ ಸಾದೇ ಸದನೇಽಗಮನೇ ನಿಮಿತ್ತಭೂತೇ ಸತಿ ॥ ಸದೇರ್ಭಾವೇ ಘಞ್ । ಕರ್ಷಾತ್ವತ ಇತ್ಯಂತೋದಾತ್ತತ್ವಂ ॥ ಅರ್ಥತೋ ಗಮನಂ ಕುರ್ವಞ್ಛೂತ್ಕಾರಂ ಕುರ್ವತಸ್ತೇ ತ್ವಾಂ ಪಾರ್ಷ್ಣ್ಯಾ ವಾ ಕಶಯಾ ವಾ ತುತೋದ ವ್ಯಥಯತಿ ಯದ್ಯಸ್ಮಾತ್ ತಸ್ಮಾತ್ತೇ ತವ ತಾ ತಾನಿ ಸರ್ವಾ ಸರ್ವಾಣ್ಯಧ್ವರೇಷು ಯಾಗೇಷು ಬ್ರಹ್ಮಣಾ ಮಂತ್ರೇಣ ಸೂದಯಾಮಿ । ಕ್ಷರಾಮಿ । ಆಹುತಿತ್ವೇನ ಕಲ್ಪಯಾಮೀತ್ಯರ್ಥಃ । ತತ್ರ ದೃಷ್ಟಾಂತಃ । ಅಧ್ವರೇಷು ಯಾಗೇಷು ಹವಿಷೋ ಹವಿರಾಜ್ಯಾದಿಕಂ ಸ್ರುಚೇವ ಸ್ರುಚಾ ಯಥಾ ಸೂದಯಂತಿ ತದ್ವತ್ ॥

ಪ್ರತಿಪದಾರ್ಥ

(ಹೇ ಅಶ್ವ—ಎಲೈ ಯಜ್ಞಾಶ್ವವೇ) । ಮಹಸಾ—ಬಲಯುತವಾಗಿ (ಎಂದರೆ ಘಟ್ಟಿಯಾಗಿ) । ಶೂಕೃತಸ್ಯ—(ಆಯಾಸದಿಂದ) ಶೂತ್ಕಾರವನ್ನು ಮಾಡುತ್ತಿರುವ । ತೇ—ನಿನ್ನ । ಸಾದೇ—ಗಮನವು ಮುಂದುವರಿಯದಿರಲು (ಶೂತ್ಕಾರವನ್ನು ಮಾಡುತ್ತಾ ನಡೆಯುತ್ತಾ ಆಗಾಗ ನಿಂತಾಗ) । (ತ್ವಾಂ—ನಿನ್ನನ್ನು) । ಪಾರ್ಷ್ಣ್ಯಾ-

ವಾ—ಪಾದಾಘಾತದಿಂದಲಾಗಲಿ । ಕಶಯಾ ವಾ—ಚಾವಟಿಯಿಂದಲಾಗಲಿ । ಯತ್—ಯಾವ ಪ್ರಕಾರವಾಗಿ । ತುತೋದ—ಹಿಂಸೆಪಡಿಸಲಾಯಿತೋ । ತೇ—ನಿನ್ನ (ನಿನಗುಂಟಾದ) । ತಾ ಸರ್ವಾ—ಅಂತಹ ಸಮಸ್ತವಾದ ಹಿಂಸಾರೂಪವಾದ ಕರ್ಮಗಳನ್ನು । ಅಧ್ವರೇಷು—ಯಜ್ಞಗಳಲ್ಲಿ । ಹವಿಷಃ—ಹವಿರಾಜ್ಯಾದಿಗಳನ್ನು । ಸ್ರುಚಾ-ಇವ—ಸ್ರುಕ್ ಎಂಬ ಹೋಮಸಾಧನವಾದ ಸೌಟಿನಿಂದ ಅಗ್ನಿಯಲ್ಲಿ ಹೋಮಮಾಡಿ ದೇವತೆಗಳನ್ನು ಸಂತೋಷ ಪಡಿಸುವಂತೆ । ತಾಃ—ಆ ನಿನ್ನ ದುಃಖಾದಿಗಳನ್ನು । ಬ್ರಹ್ಮಣಾ—ಮಂತ್ರಾದಿಗಳಿಂದ । ಸೂದಯಾಮಿ—ಶಮನಮಾಡುತ್ತೇನೆ.

ಭಾವಾರ್ಥ

ಎಲೈ ಯಜ್ಞಾಶ್ವವೇ, ನೀನು ಸಂಚಾರಮಾಡುತ್ತಿದ್ದ ಕಾಲದಲ್ಲಿ ಆಯಾಸದಿಂದ ಬಲವಾಗಿ ಶೂತ್ಕಾರ ಮಾಡುತ್ತಾ ಆಗಾಗ ನಿಂತಾಗ ನಿನ್ನನ್ನು (ವೇಗವಾಗಿ ಓಡುವಂತೆ ಮಾಡಲು) ಪಾದಾಘಾತಗಳಿಂದಲಾಗಲಿ, ಚಾವಟಿಗಳಿಂದಲಾಗಲಿ ಹಿಂಸೆಪಡಿಸುತ್ತಿದ್ದರೋ, ಆ ಹಿಂಸಾರೂಪಕರ್ಮಗಳನ್ನೆಲ್ಲಾ ಯಜ್ಞಗಳಲ್ಲಿ ಸ್ರುಕ್ ಎಂಬ ಮರದ ಸೌಟಿನಿಂದ ಘೃತವನ್ನು ಹೋಮಮಾಡಿ ದೇವತೆಗಳನ್ನು ಸಂತೋಷಪಡಿಸುವ ಹಾಗೆ ಮಂತ್ರಾದಿಗಳ ಪಠನದಿಂದ ಆ ನಿನ್ನ ದುಃಖಗಳನ್ನು ಶಮನಮಾಡುತ್ತೇನೆ.

## English Translation

Whoever has goaded you in your paces, either with heel or with whip whilst snorting in your strength,—all these (vexations) I pour out with holy prayer, as oblations with the ladle.

ವಿಶೇಷವಿಷಯಗಳು

ಸಾದೇ—ಸದನೇಽಗಮನೇ ನಿಮಿತ್ತಭೂತೇ ಸತಿ । ತುಂಬಾ ಬಳಲಿದಾಗ ಹೋಗಲು ಶಕ್ತಿಯಿಲ್ಲದೆ ಆಗಾಗ ನಿಲ್ಲುವಾಗ ಎಂದಭಿಪ್ರಾಯವು.

ಮಹಸಾ ಶೂಕೃತಸ್ಯ—ಬಲವಾಗಿ ಎಂದರೆ ಘಟ್ಟಿಯಾಗಿ ಶೂಶೂ ಎಂಬ ಶಬ್ದವನ್ನು ಮಾಡುತ್ತಾ ಎಂದರ್ಥವು. ಕುದುರೆಯು ಆಯಾಸದಿಂದ ಬಳಲಿ ಮುಂದೆ ಬೇಗಬೇಗನೆ ಹೋಗಲು ಶಕ್ತಿಯಿಲ್ಲದೆ ಶೂಶೂ ಎಂದು ಧ್ವನಿ ಮಾಡುತ್ತಿರುವಾಗ ಎಂದಭಿಪ್ರಾಯವು. (Snorting with great effort).

ಪಾರ್ಷ್ಣ್ಯಾ ವಾ ಕಶಯಾ ವಾ—ಕುದುರೆಯು ನಡೆಯದೆ ಹಿಮ್ಮೆಟ್ಟುತ್ತಿರುವಾಗ ಸವಾರಿಮಾಡುವವರು ತಮ್ಮ ಹಿಮ್ಮಡಿಯಿಂದ ಅದುಮುತ್ತಲೂ, ಚಾವಟಿಯಿಂದ ಹೊಡೆಯುತ್ತಲೂ, ಕುದುರೆಯನ್ನು ವೇಗವಾಗಿ ಹೋಗುವಂತೆ ಪ್ರೇರಿಸುವುದು ರೂಢಿಯು—Goading with the stirrups (heels) or with the whip

ಸ್ರುಚೇವ ತಾ ಹವಿಷೋ ಅಧ್ವರೇಷು, ಸರ್ವಾ ತಾ ತೇ ಬ್ರಹ್ಮಣಾ ಸೂದಯಾಮಿ—ಇಲ್ಲಿ ಋಷಿಯು ಒಂದು ದೃಷ್ಟಾಂತವನ್ನು ಹೇಳಿರುವನು. ಯಜ್ಞಗಳಲ್ಲಿ ದೇವತೆಗಳನ್ನು ತೃಪ್ತಿಪಡಿಸುವುದಕ್ಕಾಗಿ ಸ್ರುಕ್ಕೆಂಬ ಹೋಮಮಾಡುವ ಮರದ ಸೌಟಿನಿಂದ ಆಜ್ಯಾದಿಗಳನ್ನು ಅಗ್ನಿಯಲ್ಲಿ ಹೋಮಮಾಡುವಂತೆ ನಿನ್ನ ದುಃಖಗಳನ್ನು ಎಂದರೆ ನೀನು ಹಿಂದೆ ವಿವರಿಸಿದಂತೆ ಪಟ್ಟಕಷ್ಟಗಳನ್ನೆಲ್ಲಾ ಮಂತ್ರಪಠನದಿಂದ ಶಮನಮಾಡುತ್ತೇನೆ ಎಂದು ಹೇಳಿರುವನು.

ವ್ಯಾಕರಣಪ್ರಕ್ರಿಯಾ

ಸಾದೇ—ಷದಲೃ ವಿಶಕರಣಗತ್ಯವಸಾದನೇಷು ಧಾತು. ಭಾವಾರ್ಥದಲ್ಲಿ ಘಞ್ ಪ್ರತ್ಯಯ. ಅತಉಪಧಾಯಾಃ (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ. ಕರ್ಷಾತ್ವತಃ—(ಪಾ ಸೂ. ೬-೧-೧೫೯) ಅಂತೋದಾತ್ತಸ್ವರ ಬರುತ್ತದೆ. ಸಪ್ತಮ್ಯಂತರೂಪ.

ಪಾರ್ಷ್ಣ್ಯಾ—ಪೃಷು ಸೇಚನೇ ಧಾತು. ಘೃಣಿಪೃಶ್ನಿಪಾರ್ಷ್ಣಿ-(ಉ. ಸೂ. ೪-೫೨-೨) ಎಂಬುದರಿಂದ ಎಂಬುದರಿಂದ ಪಾರ್ಷ್ಣಿ ಎಂದು ನಿಪಾತಿತವಾಗಿದೆ. ತೃತೀಯಾಂತರೂಪ.

ತುತೋದ—ತುದ ವ್ಯಥನೇ ಧಾತು. ಛಂದಸಿ ಲುಙ್‌ಲಙ್‌ಲಿಟಃ (ಪಾ. ಸೂ. ೩-೪-೬) ಎಂಬುವದರಿಂದ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷಏಕವಚನಾಂತರೂಪ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಲ್ ಲಿತ್ತಾದುದರಿಂದ ಲಿತಿ(ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತ ಸ್ವರ ಬರುತ್ತದೆ.

ಸರ್ವಾ—ಶೇಶ್ಛಂದಸಿ ಬಹುಲಮ್ (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

ಸೂದಯಾಮಿ—ಷೂದ ಕ್ಷರಣೇ ಧಾತು. ಧಾತ್ವಾದೇಃಷಃಸಃ (ಪಾ.ಸೂ. ೬-೧೬೪) ಎಂಬುದರಿಂದ ಆದಿಗೆ ಸತ್ವ. ಸತ್ಯಾಪಪಾಶ-(ಪಾ. ಸೂ. ೩-೧-೨೫) ಎಂಬುದರಿಂದ ಣಿಚ್. ಲಟ್ ಉತ್ತಮಪುರುಷಏಕವಚನದಲ್ಲಿ ಮಿಪ್ ಪ್ರತ್ಯಯ. ಶಪ್ ವಿಕರಣ ನಿಮಿತ್ತವಾಗಿ ಣಿಚಿಗೆ ಗುಣ. ಅಯಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ. ॥ ೧೭ ॥



ಸಂಹಿತಾಪಾಠಃ

ಚತುಸ್ತ್ರಿಂಶದ್ವಾಜಿನೋ ದೇವಬಂಧೋರ್ವಂಕ್ರೀರಶ್ವಸ್ಯ ಸ್ವಧಿತಿಃ ಸಮೇತಿ ।
ಅಚ್ಛಿದ್ರಾ ಗಾತ್ರಾ ವಯುನಾ ಕೃಣೋತ ಪರುಷ್ಪರುರನುಘುಷ್ಯಾ ವಿಶಸ್ತ ॥ ॥೧೮॥

ಪದಪಾಠಃ

ಚತುಃಽತ್ರಿಂಶತ್ । ವಾಜಿನಃ । ದೇವಽಬಂಧೋಃ । ವಂಕ್ರೀಃ । ಅಶ್ವಸ್ಯ । ಸ್ವಧಿತಿಃ । ಸಂ । ಏತಿ ।
ಅಚ್ಛಿದ್ರಾ । ಗಾತ್ರಾ । ವಯುನಾ । ಕೃಣೋತ । ಪರುಃಽಪರುಃ । ಅನುಽಘುಷ್ಯ । ವಿ । ಶಸ್ತ ॥ ೧೮ ॥

ಸಾಯಣಭಾಷ್ಯಂ

ವಾಜಿನೋಽಶ್ವಸ್ಯ ದೇವಬಂಧೋರ್ದೇವಾನಾಂ ಪ್ರಿಯಸ್ಯ ಚತುಸ್ತ್ರಿಂಶದ್ವಂಕ್ರೀರೇತತ್ಸಂಖ್ಯಾನ್ಯುಭಯಪಾರ್ಶ್ವಾಸ್ಥೀನಿ ಸ್ವಧಿತಿಶ್ಛೇದನಸಾಧನೋಽಸಿಃ ಸಮೇತಿ । ಸಮ್ಯಗ್ಗಚ್ಛತಿ ಛೇದನಾಯ । ಇತರೇಷಾ-

ಮಜಾದೀನಾಂ ಷಡ್ವಿಂಶತಿರೇವ ಷಡ್ವಿಂಶತಿರಸ್ಯ ವಂಕ್ರಯಃ । ಐ. ಬ್ರಾ. ೨-೬ । ಇತಿ ಪ್ರೈಷಾತ್ । ಹೇ ವಿಶಸನಸ್ಯ ಕರ್ತಾರಃ ಅಸ್ಯಾಶ್ವಸ್ಯ ಗಾತ್ರಾಣಿ ಶರೀರಾವಯವಾನಚ್ಛಿದ್ರಾಚ್ಛಿದ್ರಾಣಿ ಯಥಾ ಭವಂತಿ ತಥಾ ವಯುನಾ ವಯುನಾನಿ ಪ್ರಜ್ಞಾನಾನಿ । ವಯುನಮಿತಿ ಪ್ರಜ್ಞಾನಾಮ ವಯುನಮಭಿಖ್ಯೇತಿ ತನ್ನಾಮ-ಸೂಕ್ತತ್ವಾತ್ ಕೃಣೋತ । ಕುರುತ ॥ ತಪ್ತನಪ್ತನಥನಾಶ್ಚೇತಿ ತಬಾದೇಶಃ ॥ ಹೃದಯಜಿಹ್ವಾವಕ್ಷಃ-ಪ್ರಭೃತೀನಿ ಪ್ರಜ್ಞಾಯ ಮಧ್ಯೇ ಛಿನ್ನಾನಿ ಮಾ ಕುರುತೇತ್ಯರ್ಥಃ । ತದರ್ಥಂ ಪರುಃಪರುಃ ಪ್ರತಿಪರ್ವ ಪ್ರತಿಹೃದಯಾದ್ಯವಯವಮನುಘುಷ್ಯೇದಮವದ್ಯಮಿತಿ ಸಂಶಬ್ದೈ್ಯವ ವಿ ಶಸ್ತ । ವಿಶಿಸನಂ ಕುರುತ ॥ ಶಸ್ ಹಿಂಸಾಯಾಂ । ಛಾಂದಸಃ ಶಪೋ ಲುಕ್ ॥ ಗಾತ್ರಂಗಾತ್ರಮಸ್ಯಾನೂನಂ ಕೃಣುತಾತ್ । ಐ. ಬ್ರಾ. ೨-೬ । ಇತಿ ಪ್ರೈಷಾತ್ ॥

### ಪ್ರತಿಪದಾರ್ಥ

ದೇವಬಂಧೋಃ—ದೇವತೆಗಳ ಸಂಬಂಧಿಯಾದುದೂ । ವಾಜಿನಃ—ವೇಗಗಾಮಿಯಾದುದೂ ಆದ । ಅಶ್ವಸ್ಯ—ಈ ಮೇಧ್ಯಾಶ್ವದ । ಚತುಸ್ತ್ರಿಂಶತ್—ಮುವತ್ತುನಾಲ್ಕು ಸಂಖ್ಯಾಕವಾದ । ವಂಕ್ರೀಃ—ಪಕ್ಕದ ಎಲುಬುಗಳನ್ನು । ಸ್ವಧಿತಿಃ—ಛೇದನಸಾಧನವಾದ ಈ ಕತ್ತಿಯು । ಸಮೇತಿ—ಸಮೀಪಿಸುತ್ತದೆ । ವಯುನಾ—(ಈ ಅಶ್ವದ) ದೇಹದ ಸ್ವರೂಪವನ್ನು ಸೂಕ್ಷ್ಮವಾಗಿ ತಿಳಿಯುವ ಪ್ರಜ್ಞೆಯಿಂದ ಕೂಡಿ । ಗಾತ್ರಾ—ಇದರ ಅವಯವಗಳನ್ನು । ಅಚ್ಛಿದ್ರಾ—ಚೂರುಚೂರುಗಳಾಗದಿರುವಂತೆ । ಕೃಣೋತ—ಮಾಡಿರಿ । ಪರುಷ್ಪರುಃ—ಪ್ರತಿಯೊಂದು ಸಂಧಿಸ್ಥಳಗಳಲ್ಲಿಯೂ ! ಅನು ಘುಷ್ಯ—(ನಿಮ್ಮ ಛೇದನಕರ್ಮದ ವಿಷಯದಲ್ಲಿ) ನಿರ್ದುಷ್ಟವಾದುದೆಂದು ಪದೇ ಪದೇ ಪ್ರಕಟಿಸುತ್ತಾ । ವಿಶಸ್ತ—ಛೇದನಮಾಡಿರಿ ॥

### ಭಾವಾರ್ಥ

ದೇವಸಂಬಂಧಿಯಾದುದೂ, ವೇಗಗಾಮಿಯಾದುದೂ ಆದ ಈ ಮೇಧ್ಯಾಶ್ವದ ಮೂವತ್ತುನಾಲ್ಕುಸಂಖ್ಯಾಕವಾದ ಪಕ್ಕದ ಎಲುಬುಗಳನ್ನು ಛೇದನಸಾಧನವಾದ ಈ ಕತ್ತಿಯು ಪ್ರವೇಶಿಸುತ್ತದೆ. ಎಲೈ ಶಮಿತೃಗಳೇ, ಈ ಅಶ್ವದ ದೇಹದ ಸ್ವರೂಪವನ್ನು ಸೂಕ್ಷ್ಮವಾಗಿ ತಿಳಿಯುವ ಪ್ರಜ್ಞೆಯಿಂದ ಕೂಡಿದವರಾಗಿ ಇದರ ಅವಯವಗಳನ್ನು ಚೂರು ಚೂರುಗಳಾಗದಿರುವಂತೆ ಮಾಡಿರಿ. ಪ್ರತಿಯೊಂದು ಸಂಧಿಸ್ಥಳಗಳಲ್ಲಿಯೂ ನಿಮ್ಮ ಛೇದನಕರ್ಮದ ವಿಷಯದಲ್ಲಿ ನಿರ್ದುಷ್ಟವಾದುದೆಂದು ಪ್ರಕಟಿಸುತ್ತಾ ಛೇದನಮಾಡಿರಿ.

### English Translation

The axe penetrates the thirty-four ribs of the swift horse: the beloved of the gods, (the immolators), cut up (the horse) with skill, so that the limbs may be unperforated, and recapitulating joint by joint.

### ವಿಶೇಷವಿಷಯಗಳು

ಚತುಸ್ತ್ರಿಂಶದ್ವಂಕ್ರೀಃ—ವಂಕ್ರಿಯೆಂದರೆ ಪಕ್ಕದ ಎಲುಬುಗಳೆಂದರ್ಥ. ಮೇಧ್ಯಾಶ್ವಕ್ಕೆ ಇಂತಹ ಎಲುಬುಗಳು ಮೂವತ್ತುನಾಲ್ಕು ಇವೆಯೆಂದು ಇದರಿಂದ ತಿಳಿಯುತ್ತದೆ. ಆದರೆ ಇತರ ಅಜಾದಿ ಪ್ರಾಣಿಗಳಿಗೆ

ಇಪ್ಪತ್ತಾರಿವೆಯೆಂದು ಐತರೇಯ ಬ್ರಾಹ್ಮಣದಿಂದ ತಿಳಿಯುತ್ತದೆ. ಆದರೆ ಛೇದನಕಾಲದಲ್ಲಿ ಅಲ್ಲಿಯೂ ಸಹ ಹೋತೃವು ಈ ಋಕ್ಕಿನಲ್ಲಿ ಎಚ್ಚರವನ್ನು ಕೊಡುವಂತೆಯೇ ದೇವತೃಪ್ತಿಗಾಗಿ ವಧಮಾಡುತ್ತಿರುವ ಆ ಯಜ್ಞಪಶುವಿನ ವಿಷಯದಲ್ಲಿ ಬಹಳ ಜಾಗರೂಕನಾಗಿರಬೇಕೆಂದು ಶಮಿತೃವಿಗೆ ಹೇಳುತ್ತಾನೆ.

> ಶ್ಯೇನಮಸ್ಯ ವಕ್ಷಃ ಕೃಣುತಾತ್ಪ್ರಶಸಾ ಬಾಹೂ ಶಲಾ ದೋಷಣೀ ಕಶ್ಯಪೇವಾಂಸಾಚ್ಛಿದ್ರೇ ಶ್ರೋಣೀ ಕವಷೋರೂ ಸ್ರೇಕಪರ್ಣಾಷ್ಠೀವಂತಾ ಷಡ್ವಿಂಶತಿರಸ್ಯ ವಂಕ್ರಯಸ್ತಾ ಅನು- ಷ್ಠ್ಯೋಚ್ಚ್ಯಾವಯತಾದ್ಗಾತ್ರಂ ಗಾತ್ರಮಸ್ಯಾನೂನಂ ಕೃಣುತಾದಿತ್ಯಂಗಾನ್ಯೇವಾಸ್ಯ ತದ್ಗಾ- ತ್ರಾಣಿ ಪ್ರೀಣಾತಿ ॥
>
> (ಐ. ಬ್ರಾ. ೨-೬)

ಯಜ್ಞಪಶುವಿನ ವಕ್ಷಸ್ಸನ್ನು ಶ್ಯೇನಾಕಾರವನ್ನಾಗಿ ಮಾಡಬೇಕೆಂದೂ ಎರಡು ತೋಳುಗಳನ್ನೂ ಚೂಪಾಗಿಯೂ, ಪ್ರಕೋಷ್ಠಗಳನ್ನು ಈಟಿಯಂತೆ ಸೂಕ್ಷ್ಮವಾಗಿಯೂ, ಅಂಸಗಳನ್ನು ಕಶ್ಯಪಾಕಾರವಾಗಿಯೂ ಟೊಂಕವನ್ನು ಛೇದವಾ ಗದಿರುವಂತೆಯೂ ಮತ್ತು ಇಪ್ಪತ್ತಾರು ಪಕ್ಕೆಲಬುಗಳನ್ನೂ ಅವುಗಳ ವಿನ್ಯಾಸಗಳಿಗೆ ವಿರೋಧವಿಲ್ಲದಂತೆಯೂ, ಪ್ರತಿ ಯೊಂದು ಅವಯವವನ್ನೂ ನ್ಯೂನವಿಲ್ಲದಿರುವಂತೆಯೂ ಮಾಡುತ್ತಾ ಛೇದನಮಾಡಿರೆಂದು ಹೋತೃವು ಅವರಿಗೆ ತಿಳಿವಳಿಕೆಯನ್ನು ಕೊಡುತ್ತಾ,

> ದೈವ್ಯಾಃ ಶಮಿತಾರ ಆರಭಧ್ವಮುತ ಮನುಷ್ಯಾ ಇತ್ಯಾಹ ।
>
> (ಐ. ಬ್ರಾ. ೨-೬)

ಎಲೈ ಶಮಿತೃಗಳೇ, ನಿಮ್ಮ ಕಾರ್ಯವನ್ನು ಆರಂಭಿಸಿ ಎಂದು ಪ್ರಾರ್ಥಿಸಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಶಮಿತೃವಿಗೆ ನಿರ್ದೇಶನವನ್ನು ಕೊಟ್ಟಿದೆ. ಈ ಅಶ್ವದ ಗಾತ್ರವನ್ನು ಅಚ್ಛಿದ್ರವಾದುದನ್ನಾಗಿ ಮಾಡಿ ಎಂದರೆ ಛೇದನಾ ರ್ಹವಲ್ಲದ ಅವಯವಗಳನ್ನು ಹಿಂಸಿಸದೇ, ಛೇದನಾರ್ಹವಾದ ಅವಯವಗಳನ್ನೂ ಸಹ ಅವುಗಳ ವಿನ್ಯಾಸದ ಕ್ರಮವ ನ್ನರಿತು ನಿಮ್ಮ ಪ್ರಜ್ಞೆಯಿಂದ ನಿಮ್ಮ ಕರ್ಮವನ್ನು ಶುದ್ಧವಾದುದನ್ನಾಗಿ ಮಾಡಿರಿ ಎಂದು ತಿಳಿಸಿದೆ.

ವಯುನಾ—ಕೇತಃ, ಕೇತುಃ (ನಿ. ೩-೧೩) ಇತ್ಯಾದಿಪ್ರಜ್ಞಾನಾಮಗಳಲ್ಲಿ ಪಠಿತವಾಗಿದೆ. ಪ್ರಕಾಶವ ನ್ನುಂಟುಮಾಡುವುದರಿಂದ ಈ ಅರ್ಥವೆಂದು ವಿವರಿಸಿದೆ. ವಯುನಂ ವೇತೇಃ ಕಾಂತಿರ್ವಾ ಪ್ರಜ್ಞಾ ವಾ (ನಿ. ೫-೧೫) ಹೆಣೆದುಹಾಕು ಎಂಬರ್ಥವನ್ನು ಕೊಡತಕ್ಕ ವೀ ಧಾತುವಿನಿಂದ ನಿಷ್ಪನ್ನವಾಗಿ ಅಪೇಕ್ಷೆ ಅಥವಾ ಪ್ರಜ್ಞೆ ಯೆಂಬರ್ಥವನ್ನು ಕೊಡುತ್ತದೆ ಎಂದು ನಿರುಕ್ತಕಾರರು ತೋರಿಸಿ,

> ಸ ಇತ್ತಮೋಽವಯುನಂ ತತನ್ವತ್ಸೂರ್ಯೇಣ ವಯುನವಚ್ಚಕಾರ ।
> ಕದಾ ತೇ ಮರ್ತಾ ಅಮೃತಸ್ಯ ಧಾಮೇ ಯಕ್ಷಂತೋ ನ ಮಿನಂತಿ ಸ್ವಧಾವಃ ॥
>
> (ಋ. ಸಂ. ೬-೨೧-೩)

ಎಂಬ ಋಕ್ಕನ್ನುದಹರಿಸಿ ಸ ತಮೋಽಪ್ರಜ್ಞಾನಂ ತತನ್ವತ್ಸೂತಂ ಸೂರ್ಯೇಣ ಪ್ರಜ್ಞಾನವಚ್ಚಕಾರ (ನಿ. ೫-೧೫) ಕತ್ತಲಿನ ರೂಪದಲ್ಲಿದ್ದು ಗೋಚರಾತೀತವಾದುದನ್ನು ಪ್ರಜ್ಞಾವಿಷಯವನ್ನಾಗಿ ಮಾಡಿದನು ಎಂಬರ್ಥವನ್ನು ಕೊಡುವು ದೆಂದು ತಿಳಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ವಧ್ಯಪಶುವಿನ ಅವಯವಗಳ ಸೂಕ್ಷ್ಮಜ್ಞಾನವೂ, ಛೇದನಕರ್ಮದಲ್ಲಿ ಸೂಕ್ಷ್ಮವಾದ ತಿಳಿವಳಿಕೆಯೂ ಎಂದರ್ಥವಾಗುತ್ತದೆ.

ದೇವಬಂಧೋಃ ಅಶ್ವಸ್ಯ—ದೇವತೆಗಳ ಸಂಬಂಧಿಯಾದ ಅಶ್ವದ ಎಂದು ಹೇಳಿರುವುದರಲ್ಲಿ ಎರಡರ್ಥಗಳಿವೆ. ಮೊದಲನೆಯದಾಗಿ ಪ್ರಜಾಪತಿ, ವರುಣ ಈ ದೇವತೆಗಳಿಗೆ ಯಜ್ಞಾಶ್ವದ ಸೃಷ್ಟಿಸಂಬಂಧವಿದೆಯೆಂದೂ, ಅಥವಾ ಎರಡನೆಯದಾಗಿ, ಹೋಮದಲ್ಲಿ ಅರ್ಪಿತವಾದನಂತರ ದೇವತೆಗಳಿಗೆ ಈ ಅಶ್ವವು ಹೋಗಿ ಸೇರುವುದರಿಂದ ಅವರಿಗೆ ಸಂಬಂಧವಿದೆಯೆಂದೂ ಸಹ ತಾತ್ಪರ್ಯವಾಗುತ್ತದೆ. ಮುಂದಿನ ಋಕ್ಕಿನಲ್ಲಿ ಈ ಅಂಶವು ಪುನಃ ಉಕ್ತವಾಗಿರುವುದರಿಂದ ಇದನ್ನು ಮುಂದಿನ ಋಕ್ಕಿನ ವಿವರಣೆಯಲ್ಲಿ ವಿಶದವಾಗಿ ತಿಳಿಸಲಾಗುತ್ತದೆ.

ವ್ಯಾಕರಣಪ್ರಕ್ರಿಯಾ

ವಂಕ್ರೀಃ—ವಕಿ ಕೌಟಿಲ್ಯೇ. ಧಾತು. ವಂಕ್ರ್ಯಾದಯಶ್ಚ. (ಉ.ಸೂ. ೪-೫೦೬) ಎಂಬುದರಿಂದ ಕ್ರಿನ್ನಂತ ವಾಗಿ ನಿಪಾತಿತವಾಗಿದೆ ಇದಿತ್ತಾದುದರಿಂದ ನುಮಾಗಮ. ಞ್ನಿತ್ಯಾದಿರ್ನಿತ್ಯಮ್ (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

ಅಚ್ಛಿದ್ರಾ—ನ ಛಿದ್ರಾಣಿ ಅಚ್ಛಿದ್ರಾಣಿ. ಶೇಶ್ಛಂದಸಿ ಬಹುಲಮ್ (ಪಾ.ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. ತತ್ಪುರುಷೇ ತು—(ಪಾ.ಸೂ. ೬-೨-೨) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಗಾತ್ರಾ ಎಂಬಲ್ಲಿಯೂ ಶಿಗೆ ಲೋಪ ಬಂದಿದೆ.

ಕೃಣೋತ—ಕೃವಿ ಹಿಂಸಾಕರಣಯೋಶ್ಚ ಧಾತು. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ತಪ್ತನಪ್ತ-ನಥನಾಶ್ಚ. (ಪಾ. ಸೂ. ೭-೧-೪೫) ಎಂಬುದರಿಂದ ತನಬಾದೇಶ. ಧಿನ್ವಿಕೃಣ್ವ್ಯೋರಚ (ಪಾ. ಸೂ. ೩-೧-೮೦) ಎಂಬುದರಿಂದ ಉ ವಿಕರಣ. ಧಾತುವಿಗೆ ಅಕಾರಾಂತಾದೇಶ. ಅತೋಲೋಪಃ ಎಂಬುದರಿಂದ ಅಕಾರಕ್ಕೆ ಲೋಪ. ಇದಿತ್ತಾದುದರಿಂದ ಧಾತುವಿಗೆ ನುಮಾಗಮ. ಪ್ರತ್ಯಯ ಪಿತ್ತಾದುದರಿಂದ ವಿಕರಣವಾದ ಉ ಪ್ರತ್ಯಯಕ್ಕೆ ಗುಣ. ಋಕಾರನಿಮಿತ್ತವಾಗಿ ನಕಾರಕ್ಕೆ ಣತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಪರುಃ ಪರುಃ—ಪೄ ಪಾಲನಪೂರಣಯೋಃ ಧಾತು. ಅರ್ತಿಪೄವಪಿಯಜಿ—(ಉ. ಸೂ. ೩೭೪) ಎಂಬುದರಿಂದ ಉಸಿ ಪ್ರತ್ಯಯ. ಅದು ನಿತ್ತಾಗುತ್ತದೆ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ನಿತ್ತ್ವ ವಿಧಾನಮಾಡಿರುವುದರಿಂದ ಆದ್ಯುದಾತ್ತಸ್ವರ ಬರುತ್ತದೆ. ವೀಪ್ಸಾ ತೋರುವಾಗ ನಿತ್ಯವೀಪ್ಸಯೋಃ (ಪಾ. ಸೂ. ೮-೧-೪) ಎಂಬುದರಿಂದ ದ್ವಿರ್ವಚನಬರುತ್ತದೆ. ಅನುದಾತ್ತಂ ಚ (ಪಾ ಸೂ. ೮-೧-೩) ಎಂಬುದರಿಂದ ಪರದ ಆಮ್ರೇಡಿತವು ಸರ್ವಾನುದಾತ್ತವಾಗುತ್ತದೆ.

ಅನುಘುಷ್ಯ—ಘುಷಿರ್ ವಿಶಬ್ದನೇ. ಧಾತು. ಸಮಾಸೇ ನಞ್‌ಪೂರ್ವೇಕ್ತ್ವೋಲ್ಯಪ್ (ಪಾ. ಸೂ. ೭-೧-೩೭) ಎಂಬುದರಿಂದ ಕ್ತ್ವಾಪ್ರತ್ಯಯಕ್ಕೆ ಲ್ಯಬಾದೇಶ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

ಶಸ್ತ—ಶಸ್ ಹಿಂಸಾಯಾಮ್. ಧಾತು. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ಲಙ್ವದ್ಭಾವವಿರುವುದರಿಂದ ತಾದೇಶ. ಬಹುಲಂ ಛಂದಸಿ ಎಂಬುದರಿಂದ ವಿಕರಣಕ್ಕೆ ಲುಕ್. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೮ ॥

—:o:—

ಸಂಹಿತಾಪಾಠಃ

ಏಕಸ್ತ್ವಷ್ಟುರಶ್ವಸ್ಯಾ ವಿಶಸ್ತಾ ದ್ವಾ ಯಂತಾರಾ ಭವತಸ್ತಥ ಋತುಃ ।

ಯಾ ತೇ ಗಾತ್ರಾಣಾಮೃತುಥಾ ಕೃಣೋಮಿ ತಾತಾ ಪಿಂಡಾನಾಂ ಪ್ರ-

ಜುಹೋಮ್ಯಗ್ನೌ ॥ ೧೯ ॥

ಪದಪಾಠಃ

ಏಕಃ । ತ್ವಷ್ಟುಃ । ಅಶ್ವಸ್ಯ । ವಿಽಶಸ್ತಾ । ದ್ವಾ । ಯಂತಾರಾ । ಭವತಃ । ತಥಾ । ಋತುಃ ।

ಯಾ । ತೇ । ಗಾತ್ರಾಣಾಂ । ಋತುಽಥಾ । ಕೃಣೋಮಿ । ತಾಽತಾ । ಪಿಂಡಾನಾಂ । ಪ್ರ । ಜುಹೋಮಿ । ಅಗ್ನೌ ॥ ೧೯ ॥

ಸಾಯಣಭಾಷ್ಯಂ

ತ್ವಷ್ಟುರಸ್ಯ ದೀಪ್ತಸ್ಯಾಶ್ವಸ್ಯ ವಿಶಸ್ತಾ ವಿಶಸನಸ್ಯ ಕರ್ತೈಕಃ । ಏಕ ಏವ । ಸ ಕಃ । ಋತುರೇತ-ದುಪಲಕ್ಷಿತಃ ಕಾಲಾತ್ಮಾ ತಸ್ಯೈವ ಸರ್ವೇಷಾಮಪಿ ಪರ್ಯವಸಿತೃತ್ವಾತ್ । ಯದ್ವಾ । ಋತುರ್ನಿಃ-ಶಂಕವಿಶಸನಾಯ ಗಂತಾ ಶಮಿತಾ । ತಥಾ ದ್ವಾ ಯಂತಾರಾ ನಿಯಮಯಿತಾರಾವಹೋರಾತ್ರೇ ದೇವೌ ದ್ಯಾವಾಪೃಥಿವ್ಯೌ ವಾ ಋತ್ವಿಜೌ ಭವತಃ ॥ ತಥ ಋತುರಿತ್ಯತ್ರ ಋತ್ಯಕ ಇತಿ ಪ್ರಕೃತಿಭಾವೋ ಹ್ರಸ್ವತ್ವಂ ಚ ॥ ಹೇ ಅಶ್ವ ತೇ ತವ ಗಾತ್ರಾಣಾಂ ಮಧ್ಯೇ ಯಾ ಯಾನಿ ಹೃದಯಾದ್ಯವಯವಾನ್ಯೃತುಥಾ ಕಾಲೇ ಕೃಣೋಮಿ ಛಿನದ್ಮಿ ಸಂಪಾದಯಾಮಿ ಪಿಂಡಾನಾಂ ಮಧ್ಯೇ ತಾತಾ ತಾನಿ ತಾನಿ ಪ್ರಜ್ಞಾನಾನುರೋಧೇ-ನಾಗ್ನೌ ಪ್ರ ಜುಹೋಮಿ । ಪ್ರಕರ್ಷೇಣ ಹುತಂ ಕರೋಮಿ ॥

ಪ್ರತಿಪದಾರ್ಥ

ತ್ವಷ್ಟುಃ — ಪ್ರಕಾಶಮಾನವಾದ । ಅಸ್ಯ ಅಶ್ವಸ್ಯ — ಈ ಅಶ್ವದ । ವಿಶಸ್ತಾ — ಛೇದನಕಾರನು । ಏಕಃ—ಒಬ್ಬನು. (ಅದಾರೆಂದರೆ) । ಋತುಃ—(ಸರ್ವವನ್ನೂ ಕೊನೆಗಾಣಿಸತಕ್ಕ) ಋತ್ವಾತ್ಮಕವಾದ ಕಾಲವು । ಯಂತಾರಾ—ಇದನ್ನು ನಿಯಮಿಸತಕ್ಕವರು । ದ್ವಾ—ಅಹೋರಾತ್ರರೂಪರಾದ ಅಥವಾ ದ್ಯಾವಾಪೃಥಿವೀರೂಪ ರಾದ ಇಬ್ಬರು । ಭವತಃ—ಇರುತ್ತಾರೆ । (ಹೇ ಅಶ್ವ—ಎಲೈ ಅಶ್ವವೇ) । ತೇ—ನಿನ್ನ । ಗಾತ್ರಾಣಾಂ—ಅವಯವಗಳಲ್ಲಿ । ಯಾ—ಯಾವುದನ್ನು । ಋತುಥಾ—ಯಜ್ಞಕಾಲಾನುರೋಧವಾಗಿ । ಕೃಣೋಮಿ—ಸಿದ್ಧ ಮಾಡುತ್ತೇನೆಯೋ । ತಾತಾ—ಅವುಗಳೆಲ್ಲವನ್ನೂ । ಪಿಂಡಾನಾಂ—ಪಿಂಡಗಳ ರೂಪದಲ್ಲಿ । ಅಗ್ನೌ—ಅಗ್ನಿ ಯಲ್ಲಿ । ಪ್ರ ಜುಹೋಮಿ—ಶ್ರೇಷ್ಠವಾದ ಆಹುತಿರೂಪದಿಂದ ಅರ್ಪಿಸುತ್ತೇನೆ ।

ಭಾವಾರ್ಥ

ಪ್ರಕಾಶಮಾನವಾದ ಈ ಅಶ್ವದ ಛೇದನಕಾರನು ಒಬ್ಬನು. ಅದಾರೆಂದರೆ ಸರ್ವವನ್ನೂ ಕೊನೆಗಾಣಿಸತಕ್ಕ ಋತ್ವಾತ್ಮಕನಾದ ಕಾಲವು. ಇದನ್ನು ನಿಯಮಿಸತಕ್ಕವರು ಅಹೋರಾತ್ರರೂಪರಾದ ಅಥವಾ ದ್ಯಾವಾಪೃಥಿವೀರೂಪ ರಾದ ಇಬ್ಬರು ಇರುತ್ತಾರೆ. ಎಲೈ ಅಶ್ವವೇ, ನಿನ್ನ ಅವಯವಗಳಲ್ಲಿ ಯಾವುದನ್ನು ಯಜ್ಞಕಾಲಾನುರೋಧವಾಗಿ ಸಿದ್ಧಮಾಡುತ್ತೇನೆಯೋ ಅವುಗಳೆಲ್ಲವನ್ನೂ ಸಹ ಪಿಂಡಗಳ ರೂಪದಲ್ಲಿ ಅಗ್ನಿಯಲ್ಲಿ ಶ್ರೇಷ್ಠವಾದ ಆಹುತಿಯ ರೂಪದಿಂದ ಅರ್ಪಿಸುತ್ತೇನೆ.

English Translation

There is one immolator of the radiant horse, which is Time: there are two that hold him fast: such of your limbs as I cut up in due season, I offer them, made into balls (of meat), upon the fire.

ವಿಶೇಷವಿಷಯಗಳು

ಈ ಋಕ್ಕಿನ ವರ್ಣನೆಯು ಸುಲಭವಾಗಿ ಅರ್ಥವಾಗತಕ್ಕದ್ದಲ್ಲ. ಇದರಲ್ಲಿ ಆಧ್ಯಾತ್ಮಿಕವಾದ ತತ್ತ್ವವು ಅಡಗಿದೆ. ಈ ವರ್ಣನೆಯು ಮೇಧ್ಯಾಶ್ವದ ಸ್ವರೂಪವನ್ನೂ ಸಂಬಂಧವನ್ನೂ ಎರಡುವಿಧವಾಗಿ ತಿಳಿಸಿದೆ. ರೂಢ ವಾದ ಛೇದನಕರ್ಮದಲ್ಲಿ ನಿರತನಾದ ಶಮಿತೃವಿನ ಕಾರ್ಯವೆಂದು ಒಂದು ವಿಧವಾಗಿಯೂ, ವಿಶ್ವವನ್ನೆಲ್ಲಾ ತನ್ನ ನಿಯ ಮನದಲ್ಲಿಟ್ಟುಕೊಂಡು ಸರ್ವಕ್ಕೂ ಅಂತಕವಾಗಿರತಕ್ಕ ಕಾಲದ ಕಾರ್ಯವೆಂದು ಇನ್ನೊಂದು ವಿಧವಾಗಿಯೂ ಅರ್ಥ ಮಾಡಿದೆ. ಋತುಃ ಏತದುಪಲಕ್ಷಿತಃ ಕಾಲಾತ್ಮಾ ತಸ್ಯೈವ ಸರ್ವೇಷಾಮಪಿ ಪರ್ಯವಸಿತೃತ್ವಾತ್ । ಯದ್ವಾ ಋತುಃ, ನಿಃಶಂಕವಿಶಸನಾಯ ಗಂತಾ ಶಮಿತಾ । ಎಂದು ಮೇಲೆ ವಿವರಿಸಿದಂತೆ ಎರಡು ವಿಧವಾಗಿಯೂ ಸಾಯಣರು ನಿರ್ವಚನವನ್ನು ತೋರಿಸಿದ್ದಾರೆ.

ತ್ವಷ್ಟುಃ—ಈ ಪದಕ್ಕೆ ಸಾಯಣರು ದೀಪ್ತಸ್ಯ—ಪ್ರಕಾಶಮಾನವಾದ ಎಂದರ್ಥಮಾಡಿದ್ದಾರೆ. ಆದರೆ ಮೇಲಿನ ಋಕ್ಕಿನಲ್ಲಿ ದೇವಬಂಧೋಃ ಎಂದಿರುವುದರಿಂದಲೂ, ಅನೇಕಕಡೆಗಳಲ್ಲಿ ಮೇಧ್ಯಾಶ್ವಕ್ಕೂ ತ್ವಷ್ಟೃವಿಗೂ ಜನ್ಯಜನಕಸಂಬಂಧವನ್ನು ಹೇಳಿರುವುದರಿಂದಲೂ ಸಹ ಇಲ್ಲಿ ತ್ವಷ್ಟೃವಿಗೆ ಸಂಬಂಧಿಸಿದ ಎಂಬ ಅರ್ಥವನ್ನು ಹೇಳದರೆ ತಪ್ಪಾಗಲಾರದು.

ತ್ವಷ್ಟಾ ವೀರಂ ದೇವಕಾಮಂ ಜಜಾನ ತ್ವಷ್ಟುರರ್ವಾ ಜಾಯತ ಆಶುರಶ್ವಃ ॥

(ತೈ. ಸಂ. ೫-೧-೧೧)

ಎಂಬ ಅಶ್ವಮೇಧದ ಆಪ್ರೀ ಸೂಕ್ತದಲ್ಲಿ ತ್ವಷ್ಟೃವಿನಿಂದ ಮೇಧ್ಯಾಶ್ವವು ಉತ್ಪನ್ನವಾಯಿತೆಂದು ಸ್ಪಷ್ಟವಾಗಿ ಹೇಳಿದೆ. ಅಲ್ಲದೆ,

ಪ್ರಜಾಪತೇರಕ್ಷ್ಯಶ್ವಯತ್ । ತತ್ಪರಾಪತತ್ತತೋಽಶ್ವಃ ಸಮಭವದ್ಯದಶ್ವಯತ್ತದಶ್ವಸ್ಯಾಶ್ವತ್ವಂ ತದ್ದೇವಾ ಅಶ್ವಮೇಧೇನೈವ ಪ್ರತ್ಯದಧುರೇಷ ಹ ವೈ ಪ್ರಜಾಪತಿಗ್ಂ ಸರ್ವಂ ಕರೋತಿ ಯೋಽ ಶ್ವಮೇಧೇನ ಯಜತೇ ॥

(ಶ. ಬ್ರಾ. ೧೩-೩-೧-೧)

ಒಂದು ಸಲ ಪ್ರಜಾಪತಿಯ ನೇತ್ರವು ಬಾತುಕೊಂಡು ಬಿದ್ದುಹೋಯಿತು. ಅದರಿಂದ ಅಶ್ವವು ಉತ್ಪನ್ನವಾಯಿತು. ಆದುದರಿಂದಲೇ ಅಶ್ವಕ್ಕೆ ಈ ಹೆಸರು ಪ್ರಸಿದ್ಧವಾಯಿತು. ಅನಂತರ ದೇವತೆಗಳು ಅಶ್ವಮೇಧವನ್ನು ನೆರವೇರಿಸಿ ಅದನ್ನು ಪುನಃ ಅದರ ಸ್ವಸ್ಥಾನಕ್ಕೇ ಸೇರಿಸಿದರು. ಅಶ್ವಮೇಧವನ್ನು ನೆರವೇರಿಸುವವನು ಪ್ರಜಾಪತಿಯನ್ನು ಪೂರ್ಣ ನಾಗುವಂತೆ ಮಾಡುತ್ತಾನೆ ತಾನೂ ಸಹ ಪೂರ್ಣನಾಗುತ್ತಾನೆ ಎಂದಿರುವುದರಿಂದ ಇಲ್ಲಿ ತ್ವಷ್ಟೃಶಬ್ದಕ್ಕೆ ಪ್ರಜಾಪತಿಗೆ ಸಂಬಂಧಿಸಿದ ಎಂದು ಹೇಳಿದರೆ ತಪ್ಪಾಗಲಾರದು. ಇಂತಹ ದೇವಸಂಬಂಧಿಯಾದ ಅಶ್ವಕ್ಕೆ, ವಿಶಸ್ತಾ ಏಕಃ। ವಿಶಸನಕರ್ತಾ ಏಕಃ । ಛೇದಿಸತಕ್ಕವನೊಬ್ಬನೇ ಎಂದಿದೆ. ಇದಾವುದೆಂದರೆ ಋತುಃ ಎಂದು ನಿರ್ದೇಶಿದೆ. ಇದೇ ವಿಷಯವನ್ನು ತೈತ್ತಿರೀಯಸಂಹಿತೆಯಲ್ಲಿ,

> ಕಸ್ತ್ವಾ ಛ್ಯತಿ ಕಸ್ತ್ವಾ ವಿ ಶಾಸ್ತಿ ಕಸ್ತೇ ಗಾತ್ರಾಣಿ ಶಿಮ್ಯತಿ । ಕ ಉ ತೇ ಶಮಿತಾ ಕವಿಃ। ಋತವಸ್ತ ಋತುಧಾ ಪರುಶ್ಶಮಿತಾರೋ ವಿ ಶಾಸತು । ಸಂವತ್ಸರಸ್ಯ ಧಾಯಸಾ ಶಿಮೀಭಿಶ್ಶಿ-ಮ್ಯಂತು ತ್ವಾ । ದೈವ್ಯಾ ಅಧ್ವರ್ಯವಸ್ತ್ವಾ ಛ್ಯಂತು ವಿ ಚ ಶಾಸತು । ಗಾತ್ರಾಣಿ ಪರ್ವಶಸ್ತೇ ಶಿಮಾಃ ಕೃಣ್ವಂತು ಶಿಮ್ಯಂತಃ ॥

(ತೈ. ಸಂ. ೫-೨-೧೨)

ಎಲೈ ಮೇಧ್ಯಾಶ್ವವೇ, ನಿನ್ನನ್ನು ಛೇದಿಸುವವರು ಯಾರು ? ನಿನ್ನ ಅಂಗಾಂಗಗಳಲ್ಲಿ ಛೇದನ ಸಾಧನವನ್ನು ಹಾಕಿ ಅವುಗಳನ್ನು ಬೇರೆಬೇರೆಯಾಗಿ ಬಿಡಿಸುವವರು ಯಾರು ? ಎಂದು ಪ್ರಶ್ನರೂಪದಲ್ಲಿ ಕೇಳಿ, ಅನಂತರ, ವಸಂತಾದಿ ಋತುಗಳು ಆಯಾ ನಿಯಮಿತಕಾಲಗಳಲ್ಲಿ ನಿನ್ನ ಛೇದನವನ್ನು ಮಾಡಿ ನಿನ್ನ ಅಂಗಾಂಗಗಳನ್ನು ಬಿಡಿಸಲಿ. ಸಂವತ್ಸರದ ಪ್ರಭಾವದೊಡನೆ ಅವು ನಿನ್ನನ್ನು ಛೇದಿಸಲಿ. ಎಂಬ ವಾಕ್ಯವು ಸಾಯಣರ ಮೊದಲನೆಯ ವಿವರಣೆಗೆ ಆಧಾರವಾಗಿದೆ. ಎರಡನೆಯದಾಗಿ, ದೇವಲೋಕದ ಅಧ್ವರ್ಯುವು ನಿನ್ನನ್ನು ಛೇದಿಸಿ ನಿನ್ನ ಅವಯುವಗಳನ್ನು ಬಿಡಿಸಲಿ ಎಂದು ಹೇಳಿರು ವುದು ಸಾಯಣರ ಎರಡನೆಯ ವಿವರಣೆಗೆ ಅನುಕೂಲವಾಗಿದೆ. ಯಷ್ವಾ । ಋತುಃ ನಿಶ್ಶಂಕವಿಶಸನಾಯ ಗಂತಾ ಶಮಿತಾ । ದೃಢಮನಸ್ಕನಾಗಿ ಛೇದಿಸಲು ಹೋಗುವ ಶಮಿತೃವೆಂದು ವಿವರಿಸಿದ್ದಾರೆ.

ದ್ವಾ ಯಂತಾರಾ—ನಿಯಮಿತಾರೌ ಅಹೋರಾತ್ರೇ ದೇವೌ ದ್ಯಾವಾಪೃಥಿವ್ಯೌ ವಾ । ಅಹೋರಾತ್ರ ಗಳಾಗಲಿ ಅಥವಾ ದ್ಯಾವಾಪೃಥಿವಿಗಳಾಗಲಿ ಎಂದು ವಿವರಿಸಿದೆ.

> ಅಹರ್ವಾ ಅಶ್ವಂ ಪುರಸ್ತಾನ್ಮಹಿಮಾನ್ವಜಾಯತ ತಸ್ಯ ಪೂರ್ವೇ ಸಮುದ್ರೇ ಯೋನೌ ರಾತ್ರಿರೇನಂ ಪಶ್ಚಾನ್ಮಹಿಮಾನ್ವಜಾಯತ ತಸ್ಯಾಪರೇ ಸಮುದ್ರೇ ಯೋನಿರೇತೌ ವಾ ಅಶ್ವಂ ಮಹಿಮಾನಾ-ವಭಿತಃ ಸಂಬಭೂವತುಃ ।

(ಬೃ. ಉ. ೧-೧)

ಅಹಸ್ಸು ಈ ಅಶ್ವದ ಮುಂಭಾಗದಲ್ಲಿದ್ದು ಇದರ ಮಹತ್ತ್ವವನ್ನು ಪ್ರಕಟಿಸುತ್ತದೆ. ರಾತ್ರಿಯು ಹಿಂಭಾಗದಲ್ಲಿದ್ದು ಇದರ ಮಹತ್ತ್ವವನ್ನು ಪ್ರಕಟಿಸುತ್ತದೆ. ಎಂಬ ಈ ವಾಕ್ಯವು ವೈಯಕ್ತಿಕವಾದ ಅಶ್ವಮೇಧವನ್ನೂ, ಮತ್ತು ಅಶ್ವಮೇಧವೆಂದು ಪ್ರಸಿದ್ಧವಾದ ಪ್ರಜಾಪತಿಯ ವಿಶ್ವಯಜ್ಞವನ್ನೂ ವರ್ಣಿಸುತ್ತದೆ. ವೈಯಕ್ತಿಕವಾದ ಯಜ್ಞವನ್ನು ಪರಿಶೀಲಿ ಸಿದರೆ, ಯಜ್ಞಪಶುವಿನ ಮುಂಭಾಗದಲ್ಲಿ ಸುವರ್ಣದಿಂದ ಮಾಡಿದ ಗ್ರಹವನ್ನೂ ಹಿಂಭಾಗದಲ್ಲಿ ರಜತದಿಂದ ಮಾಡಿದ ಗ್ರಹವನ್ನೂ ಇಟ್ಟಿರುತ್ತಾರೆ. ಇವೆರಡೂ ಅಹೋರಾತ್ರಗಳನ್ನು ತಮ್ಮ ವರ್ಣಗಳಿಂದ ಪ್ರತಿಬಿಂಬಿಸುತ್ತವೆ ಯೆಂದರ್ಥ. ಆಧ್ಯಾತ್ಮಿಕವಾದ ದೃಷ್ಟಿಯಿಂದ ಈ ವಾಕ್ಯಕ್ಕೆ ಶಂಕರಾಚಾರ್ಯರು ಅರ್ಥವನ್ನು ವಿವರಿಸುತ್ತಾ,

ಅಹರಶ್ವಂ ಪುರಸ್ತಾನ್ಮಹಿಮಾನ್ವಜಾಯತೇತಿ ಕಥಂ ? ಅಶ್ವಸ್ಯ ಪ್ರಜಾಪತಿತ್ವಾತ್ ಪ್ರಜಾಪ-ತಿರ್ಹ್ಯಾದಿತ್ಯಾದಿ ಲಕ್ಷಣೋಽಹ್ನಾ ಲಕ್ಷ್ಯತೇ ।

(ಶ. ಭಾ. ೧-೧)

ಅಶ್ವವು ಪ್ರಜಾಪತಿಗೆ ಸಂಬಂಧಿಸಿದುದು. ಪ್ರಜಾಪತಿಯು ಆದಿತ್ಯಾದಿಲಕ್ಷಣಗಳುಳ್ಳವನಾಗಿ ಅಹಸ್ಸಿನಿಂದ ನಿರ್ದೇಶಿಸಲ್ಪಡುತ್ತಾನೆ ಇತ್ಯಾದಿಯಾಗಿ ವಿವರಿಸಿ ಅಹೋರಾತ್ರಗಳೆರಡೂ ಅಶ್ವದ ಮಹತ್ತ್ವವನ್ನು ಪ್ರಕಟಿಸುತ್ತವೆ ಎಂದರ್ಥವೆಂದು ತಿಳಿಸಿದ್ದಾರೆ. ಸಾಯಣರ ವಿವರಣೆಯಲ್ಲಿಯೂ ಇದೇ ಅರ್ಥವು ಬರುತ್ತದೆ.

ಋತುಥಾ ಕೃಣೋಮಿ—ಋತುಥಾ ಎಂಬ ಶಬ್ದಕ್ಕೆ ಕೇವಲ ಕಾಲೇ ಎಂಬರ್ಥವನ್ನು ಮಾಡಿದ್ದಾರೆ. ಇದರ ಅಭಿಪ್ರಾಯವು ತೈತ್ತಿರೀಯಸಂಹಿತಾವಾಕ್ಯದಲ್ಲಿ ವಿಶದವಾಗಿದೆ.

ಅರ್ಧಮಾಸಾಃ ಪರೂಗ್‌ಂಷಿ ತೇ ಮಾಸಾಶ್ಛ್ಯಂತು ಶಿಮ್ಯಂತಃ ।
ಅಹೋರಾತ್ರಾಣಿ ಮರುತೋ ವಿಲಿಷ್ಟಂ ಸೂದಯಂತು ತೇ ॥

(ತೈ. ಸಂ ೫-೨-೧೨)

ಎಂದು ನಿರ್ದೇಶಿಸಿದೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಕೃಣೋಮಿ ಎಂದು ಯಜಮಾನನು ತನ್ನನ್ನೇ ಛೇದನಕಾರಣನನ್ನಾಗಿ ಮಾಡಿ ಹೇಳಿಕೊಂಡಿದ್ದಾನೆ.

॥ ವ್ಯಾಕರಣಪ್ರಕ್ರಿಯಾ ॥

ವಿಶಸ್ತಾ—ಶಸ್ ಹಿಂಸಾಯಾಮ್. ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಚಿತ್ತಾದುದರಿಂದ ಅಂತೋದಾತ್ತವಾಗುತ್ತದೆ.

ಯಂತಾರಾ—ಯಮು ಉಪರಮೇ ಧಾತು. ಹಿಂದಿನಂತೇ ತೃಚ್‌ಪ್ರತ್ಯಯ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ. ಧಾತುಮಕಾರಕ್ಕೆ ಅನುಸ್ವಾರ ಪರಸವರ್ಣ. ಸುಪಾಂ ಸುಲುಕ್—(ಪಾ. ಸೂ. ೭-೧-೩೯) ಎಂಬುದರಿಂದ ದ್ವಿವಚನಕ್ಕೆ ಆಕಾರಾದೇಶ. ದ್ವಾ ಎಂಬಲ್ಲಿಯೂ ಹೀಗೆಯೇ ಆಕಾರಾದೇಶ.

ತಥ ಋತುಃ—ತಥಾ+ಋತುಃ ಎಂದಿರುವಾಗ ಋತ್ಯಕಃ (ಪಾ. ಸೂ. ೬-೧-೧೨೮) ಎಂಬುದರಿಂದ ಪ್ರಕೃತಿಭಾವವೂ ಹ್ರಸ್ವವೂ ಬರುತ್ತವೆ.

ಯಾ—ಶೇಶ್ಛಂದಸಿ ಬಹುಲಮ್—(ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

ಋತುಥಾ—ಥಾ ಹೇತೌ ಚ ಛಂದಸಿ ( ಪಾ. ಸೂ. ೫-೩-೨೬ ) ಎಂಬುದರಿಂದ ವಿಧಿಸಲ್ಪಡುವ ಥಾ ಪ್ರತ್ಯಯವು ವ್ಯತ್ಯಯದಿಂದ ಋತುಶಬ್ದಕ್ಕೂ ಬರುತ್ತದೆ.

ಕೃಣೋಮಿ—ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರದಿಂದ ಮಧ್ಯೋದಾತ್ತವಾಗುತ್ತದೆ.

ತಾತಾ—ತಾನಿತಾನಿ ಎಂದಿರುವಾಗ ಶೇಶ್ಛಂದಸಿ ಬಹುಲಮ್ ಎಂಬುದರಿಂದ ಶಿಗೆ ಲೋಪ. ವೀಪ್ಸಾರ್ಥದಲ್ಲಿ ದ್ವಿರ್ವಚನ ಬರುತ್ತದೆ. ಪರದ ಆಮ್ರೇಡಿತಕ್ಕೆ ಅನುದಾತ್ತಸ್ವರ ಬರುತ್ತದೆ.

ಜುಹೋಮಿ—ಹು ದಾನಾದನಯೋಃ ಧಾತು. ಶ್ಲುವಿಕರಣ ಧಾತುವಿಗೆ ದ್ವಿತ್ವಾದಿ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೯ ॥

———

ಸಂಹಿತಾಪಾಠಃ

ಮಾ ತ್ವಾ ತಪತ್ಪ್ರಿಯ ಆತ್ಮಾಪಿಯಂತಂ ಮಾ ಸ್ವಧಿತಿಸ್ತನ್ವ೧ ಆ ತಿಷ್ಠಿಪತ್ತೇ ।
ಮಾ ತೇ ಗೃಧ್ನುರವಿಶಸ್ತಾತಿಹಾಯ ಛಿದ್ರಾ ಗಾತ್ರಾಣ್ಯಸಿನಾ ಮಿಥೂ ಕಃ ॥೨೦॥

ಪದಪಾಠಃ

ಮಾ । ತ್ವಾ । ತಪತ್ । ಪ್ರಿಯಃ । ಆತ್ಮಾ । ಅಪಿಽಯಂತಂ । ಮಾ । ಸ್ವಽಧಿತಿಃ । ತನ್ವಃ । ಆ । ತಿಸ್ತಿಪತ್ । ತೇ ।
ಮಾ । ತೇ । ಗೃಧ್ನುಃ । ಅವಿಽಶಸ್ತಾ । ಅತಿಽಹಾಯ । ಛಿದ್ರಾ । ಗಾತ್ರಾಣಿ । ಅಸಿನಾ । ಮಿಥು । ಕರಿತಿ ಕಃ ॥ ೨೦ ॥

ಸಾಯಣಭಾಷ್ಯಂ

ಹೇ ಅಶ್ವ ತ್ವಾ ತ್ವಾಮುಪಿಯಂತಂ ದೇವಾನ್ಪ್ರತಿ ಗಚ್ಛಂತಂ ಪ್ರಿಯ ಆತ್ಮಾ ಭೋಗಾಯತನತ್ವಾತ್ತ್ರವ ಪ್ರಿಯತರೋ ದೇಹೋ ಮಾ ತಪತ್ । ತಪ್ತಂ ಮಾ ಕಾರ್ಷೀತ್ । ವಿಯೋಗಜನಿತಾ ವ್ಯಥಾ ಮಾ ಭೂದಿತ್ಯರ್ಥಃ । ಸ್ವಧಿತಿಃ ಶಸ್ತ್ರಂ ತೇ ತವ ತನ್ವಸ್ತನೂರಂಗಾನಿ ಮಾ ತಿಷ್ಠಿಪತ್ । ತ್ವಯಿ ಚಿರಮಾಸ್ಥಿತಾನಿ ಮಾ ಕಾರ್ಷೀತ್ ॥ ಸ್ಥಾಪಯತೇರ್ಲುಙಿ ತಿಷ್ಠತೇ ರಿತ್ । ಪಾ. ೭-೪-೫. । ಇತೀತ್ತ್ವಂ ॥ ತಥಾ ತೇ ತವ ಗಾತ್ರಾಣಿ ಗೃಧ್ನುಃ ಕೇವಲಮಾಂಸಗ್ರಹಣೇಪ್ಸುರವಿಶಸ್ತಾ ವಿಶಸನೇಽಕುಶಲಃ ಶಮಿತಾತಿಹಾಯ ನ್ಯೂನಾತಿರೇಕಭಾವೇನ ತತ್ರತ್ಯಂಗಮತಿಕ್ರಮ್ಯ ಮಧ್ಯೇ ಮಿಥು ಮಿಥ್ಯಾ ವ್ಯರ್ಥಮಸಿನಾ ಛಿದ್ರಾ ಛಿದ್ರಾಣಿ ತಿರ್ಯಕ್ಛಿನ್ನಾನಿ ಮಾ ಕಃ । ಮಾ ಕಾರ್ಷೀತ್ ॥ ಕರೋತೇರ್ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ । ಗುಣಃ । ಹಲ್ಙ್ಯಾಬ್ಭ್ಯ ಇತಿ ತಲೋಪಃ ॥

ಪ್ರತಿಪದಾರ್ಥ

(ಹೇ ಅಶ್ವ—ಎಲೈ ಅಶ್ವವೇ) । ಅಪಿಯಂತಂ—ದೇವತೆಗಳನ್ನು ಉದ್ದೇಶಿಸಿ ಅವರಲ್ಲಿಗೆ ಹೋಗುತ್ತಿರುವ। ತ್ವಾ—ನಿನ್ನನ್ನು । ಪ್ರಿಯಃ—ನಿನ್ನ ಪ್ರೀತಿಪಾತ್ರವಾದ । ಆತ್ಮಾ—ದೇಹವು । ಮಾ ತಪತ್—ತಪಿಸುವಂತೆ ಮಾಡದಿರಲಿ । ಸ್ವಧಿತಿಃ—ಛೇದನಸಾಧನವಾದ ಕತ್ತಿಯು । ತೇ—ನಿನ್ನ । ತನ್ವಃ—ಅಂಗಗಳನ್ನು (ಅಂಗಗಳಲ್ಲಿ) । ಮಾ ಆ ಅತಿಷ್ಠಪತ್—ದೀರ್ಘಕಾಲ ನಿಲ್ಲದಿರಲಿ । ಗೃಧ್ನುಃ—ಕೇವಲ ಮಾಂಸವಲ್ಲಿಯೇ ಆಸೆಯುಳ್ಳವನೂ । ಅವಿಶಸ್ತಾ—ಛೇದನದಲ್ಲಿ ಸೂಕ್ಷ್ಮವಾದ ಅನುಭವವಿಲ್ಲದಿರುವವನೂ ಆದ ಶಮಿತೃವು । ಅತಿಹಾಯ—ಸರಿಯಾದ ಸ್ಥಾನಗಳನ್ನು ಬಿಟ್ಟು ಒರಟೊರಟಾಗಿ । ತೇ—ನಿನ್ನ । ಗಾತ್ರಾಣಿ—ಅವಯವಗಳನ್ನು । ಅಸಿನಾ—ತನ್ನ ಕತ್ತಿಯಿಂದ । ಮಿಥು—ವ್ಯರ್ಥವಾದ । ಛಿದ್ರಾ—ತುಂಡುಗಳುಳ್ಳದ್ದನ್ನಾಗಿ । ಮಾಕಃ—ಮಾಡದಿರಲಿ-

ಭಾವಾರ್ಥ

ಎಲೈ ಅಶ್ವವೇ, ದೇವತೆಗಳನ್ನುದ್ದೇಶಿಸಿ ಅವರಲ್ಲಿಗೆ ಹೋಗುತ್ತಿರುವ ನಿನ್ನನ್ನು ನಿನ್ನ ಪ್ರೀತಿಪಾತ್ರವಾದ ದೇಹವು ತಪಿಸುವಂತೆ ಮಾಡದಿರಲಿ ಛೇದನಸಾಧನವಾದ ಕತ್ತಿಯು ನಿನ್ನ ಅಂಗಗಳಲ್ಲಿ ದೀರ್ಘಕಾಲ ನಿಲ್ಲದಿರಲಿ. ಕೇವಲ ಮಾಂಸದಲ್ಲಿಯೇ ಆಸೆಯುಳ್ಳವನೂ, ಛೇದನದಲ್ಲಿ ಸೂಕ್ಷ್ಮವಾದ ಅನುಭವವಿಲ್ಲದಿರುವವನೂ ಆದ ಶಮಿತೃವು ನಿನ್ನ ದೇಹದಲ್ಲಿ ಸರಿಯಾದ ಸ್ಥಾನಗಳನ್ನು ಬಿಟ್ಟು ಒರಟೊರಟಾಗಿ ನಿನ್ನ ಅವಯವಗಳನ್ನು ತನ್ನ ಕತ್ತಿಯಿಂದ ವ್ಯರ್ಥವಾದ ತುಂಡುಗಳುಳ್ಳದ್ದನ್ನಾಗಿ ಮಾಡದಿರಲಿ.

English Translation

Let not your precious body grieve you, who are going verily (to the gods): let not the axe linger in your body: let not the greedy and unskilful (immolator), missing the members, mangle your limbs needlessly with his knife.

। ವಿಶೇಷವಿಷಯಗಳು ।

ದೇವತೆಗಳಲ್ಲಿಗೆ ಹೋಗಿ ಸೇರತಕ್ಕದ್ದಾದ್ದರಿಂದಲೂ ಪೃಥ್ವಿಗಿಂತಲೂ ಉತ್ತಮವಾದ ಸ್ಥಾನವು ಲಭಿಸುವುದರಿಂದಲೂ ಸಹ ಅಶ್ವವು ಪ್ರಕೃತವಾದ ದೇಹವನ್ನು ಬಿಟ್ಟುಹೋಗುವುದಕ್ಕಾಗಿ ದುಃಖಪಡಬೇಕಾದುದಿಲ್ಲವೆಂದು ಅದಕ್ಕೆ ಸೂಚನೆಯನ್ನು ಕೊಡುತ್ತಾರೆ. ಅಲ್ಲದೇ ಅಸಿಯಿಂದ ಛೇದನವಾಗತಕ್ಕ ಕಾಲದಲ್ಲಿ ದೇಹಕ್ಕೆ ಯಾತನೆಯು ಸಂಭವಿಸಬಹುದಾದುದರಿಂದ ಶಮಿತೃವಿನ ಅಜಾಗರೂಕತೆಯಿಂದಾಗಲಿ, ಅವನ ಮಾಂಸೇಚ್ಛೆಯಿಂದಾಗಲಿ, ಅಥವಾ ತಿಳುವಳಿಕೆ ಇಲ್ಲದೆ ಒರಟೊರಟಾಗಿ ಅಸಿಪ್ರಯೋಗವನ್ನು ಮಾಡುವುದರಿಂದಾಗಲೀ ಯಾವ ವಿಧವಾದ ಹಿಂಸೆಯೂ ಸಂಭವಿಸದಿರಲೆಂದೂ ಸಹ ಪ್ರಾರ್ಥಿಸಿದೆ ಇದನ್ನೇ ಶತಪಥಬ್ರಾಹ್ಮಣದಲ್ಲಿಯೂ ಸಹ ;

> ನ ವಾ ಉ ಏತನ್ಮ್ರಿಯಸೇ ನ ರಿಷ್ಯಸೀತಿ । ಪ್ರಶ್ವಾಸಯತ್ಯೇವೈನಂ ತದ್ದೇವಾಗ್ಂ ಇದೇಷಿ ಪಥಿಭಿಃ ಸುಗೇಭಿರಿತಿ ದೇವಯಾನಾನೇವೈನಂ ಪಥೋ ದರ್ಶಯತಿ ಯತ್ರಾಸತೇ ಸುಕೃತೋ ಯತ್ರ ತೇ ಯಯುರಿತಿ ಸುಕೃದ್ಭಿರೇವೈನಗ್ಂ ಸಲೋಕಂ ಕರೋತಿ ತತ್ರ ತ್ವಾ ದೇವಃ ಸವಿತಾ ದಧಾತ್ವಿತಿ ಸವಿತೈವೈನಗ್ಂ ಸ್ವರ್ಗೇ ಲೋಕೇ ದಧಾತಿ ಪ್ರಜಾಪತಯೇ ತ್ವಾ ಜುಷ್ಟಂ ಪ್ರೋಕ್ಷಾಮೀತ್ಯುಪಾಗ್ಂ ಶ್ವಥೋಪಗೃಹ್ಣಾತಿ ॥
>
> (ಶ. ಬ್ರಾ. ೧೩-೨-೭-೧೨)

"ಎಲೈ ಅಶ್ವವೇ, ನಿನಗೆ (ನಿನ್ನ ಆತ್ಮಕ್ಕೆ) ಮೃತಿಯಿಲ್ಲ. ನಿನಗೆ ಹಿಂಸೆಯಾಗದಿರಲಿ" ಎಂಬುದಾಗಿ (೧-೧೬೨-೨೧)ನೇ ಋಕ್ಸಂಹಿತಾವಾಕ್ಯವನ್ನುದಹರಿಸಿ ಅಶ್ವಕ್ಕೆ ಉತ್ತೇಜನವನ್ನು ಕೊಡುತ್ತಲೂ "ಸುಗಮವಾದ ಮಾರ್ಗದಲ್ಲಿ ನೀನು ದೇವಲೋಕಕ್ಕೆ ಹೋಗುತ್ತೀಯೆ" ಎಂದು ದೇವಲೋಕದ ಸುಲಭವಾದ ಮಾರ್ಗವನ್ನು ತೋರಿಸುತ್ತಲೂ "ಸುಕೃತಿಗಳು ಎಲ್ಲಿ ವಾಸವಾಗಿದ್ದಾರೋ, ಎಲ್ಲಿ ಸುಕೃತಿಗಳೆಲ್ಲರೂ ಹೋಗುತ್ತಾರೋ" ಎಂದು ಸುಕೃತಿಗಳ ಲೋಕವು ಅಶ್ವಕ್ಕೂ ಲಭಿಸುವುದೆಂದು ಹೇಳುತ್ತಲೂ, "ಸವಿತೃವು ನಿನ್ನನ್ನು ಒಯ್ಯುವ ಲೋಕಕ್ಕೆ ಹೋಗುವೆ" ಎಂದು ಉಚ್ಚರಿಸುತ್ತಲೂ ಪ್ರೋಕ್ಷಿಸುತ್ತಾನೆ ಎಂದು ಮೇಲೆ ಹೇಳಿರುವ ಕ್ರಮವನ್ನು ತಿಳಿಸಿದೆ. ಅಗ್ನಿಯೂ,

ವಾಯುವೂ ಸೂರ್ಯನೂ ಯಜ್ಞಪಶುಗಳಾಗಿದ್ದು ಅವರೆಲ್ಲರೂ ಉತ್ತಮಲೋಕವನ್ನು ಪಡೆದರೆಂದು ಶತಪಥಬ್ರಾಹ್ಮಣದಲ್ಲಿ ಉದಾಹರಣೆಯನ್ನು ಸಹ ತೋರಿಸಿದ್ದಾರೆ.

ಅಗ್ನಿಃ ಪಶುರಾಸೀತ್ । ತೇನಾಯಜಂತ । ಸ ಏತಂ ಲೋಕಮಜಯದ್ಯಸ್ಮಿನ್ನಗ್ನಿಃ ಸ ತೇ ಲೋಕೋ ಭವಿಷ್ಯತಿ ತಂ ಜೇಷ್ಯಸಿ ಪಿಬೈತಾ ಅಪ ಇತಿ ಯಾವಾನಗ್ನೇರ್ವಿಜಯೋ ಯಾವಾಂಲ್ಲೋಕೋ ಯಾವದೈಶ್ವರ್ಯಂ ತಾವಾಂಸ್ತೇ ವಿಜಯಸ್ತಾವಾಂ ಲೋಕಸ್ತಾವದೈಶ್ವರ್ಯಂ ಭವಿಷ್ಯತೀತ್ಯೇವೈನಂ ತದಾಹ ॥

(ಶ. ಬ್ರಾ. ೧೩-೭-೨-೧೩)

ಅಗ್ನಿಯು ಯಜ್ಞಪಶುವಾಗಿದ್ದು ಅವನನ್ನು ಆಹುತಿಯಾಗಿ ಕೊಟ್ಟಮೇಲೆ, ಈಗ ಅಗ್ನಿಯು ಪ್ರಭುತ್ವವನ್ನು ಮಾಡುತ್ತಿರುವ ಲೋಕಗಳನ್ನೆಲ್ಲಾ ಪಡೆದನು. ಎಲೈ ಅಶ್ವವೇ, ನಿನಗೂ ಅದೇ ಲೋಕವು ಲಭಿಸುವುದು. ಅಗ್ನಿಯ ಜಯವು ಎಷ್ಟು ಮಹತ್ವವುಳ್ಳದ್ದೋ, ಅವನ ಪ್ರಭುತ್ವವು ಎಷ್ಟು ಅಧಿಕವಾದುದೋ, ನಿನ್ನ ಜಯವೂ, ಪ್ರಭುತ್ವವೂ ಅಷ್ಟೇ ಅಧಿಕವಾಗಿರುವುದು " ಎಂದೂ,

ವಾಯುಃ ಪಶುರಾಸೀತ್ । ತೇನಾಯಜಂತ ಸ ಏತಂ ಲೋಕಮಜಯದ್ಯಸ್ಮಿನ್ವಾಯುಃ ಸ ತೇ ಲೋಕೋ ಭವಿಷ್ಯತಿ ತಂ ಜೇಷ್ಯಸಿ ಪಿಬೈತಾ ಅಪ ಇತಿ ಯಾವಾನ್ವಾಯೋರ್ವಿಜಯೋ.... .... .... .... .... .... ॥

(ಶ. ಬ್ರಾ. ೧೩-೨-೭-೧೪)

ವಾಯುವೂ ಯಜ್ಞಪಶುವಾಗಿದ್ದನು. ಆ ಪಶುವನ್ನು ಯಜ್ಞದಲ್ಲಿ ಆಹುತಿ ರೂಪದಲ್ಲಿ ಅರ್ಪಿಸಿದನಂತರ ಈಗ ವಾಯುವು ಪ್ರಭುತ್ವಮಾಡುತ್ತಿರುವ ಲೋಕವನ್ನು ಪಡೆದನು. ಅಶ್ವವೇ ನಿನಗೂ ಅದೇ ಜಯವೂ, ಅದೇ ಪ್ರಭುತ್ವವೂ ಲಭಿಸುವುದು

ಸೂರ್ಯಃ ಪಶುರಾಸೀತ್ । ತೇನಾಯಜಂತ ...................... ।

(ಶ. ಬ್ರಾ. ೧೩-೨-೭-೧೫)

ಇದೇ ರೀತಿಯಲ್ಲಿ ಸೂರ್ಯನೂ ಪಶುವಾಗಿದ್ದನು. ಅವನಿಗೂ ಸಹ ಈಗ ಸರ್ವಲೋಕಕ್ಕೂ ಅಧಿಪತಿಯಾಗಿರುವ ಸ್ಥಾನವು ಲಭಿಸಿದೆ. ಆದುದರಿಂದ ನೀನೂ ಯಜ್ಞದಲ್ಲಿ ಆಹುತಿಯಾಗಿ ಅರ್ಪಿಸಲ್ಪಟ್ಟು ಅದೇ ಲೋಕವನ್ನೂ ಮಹತ್ವವನ್ನೂ ಪಡೆ ಎಂದು ಅಶ್ವಕ್ಕೆ ಉತ್ತೇಜನವನ್ನು ಕೊಡುವ ವಾಕ್ಯವನ್ನು ಋಕ್ಸಂಹಿತೆಯು ಇದೇ ಭಾಗದ (೧-೧೬೨-೨೧) ಮಂತ್ರವನ್ನು ಪಠಿಸಿ ಪಶುವಿಗೆ ಹಿಂಸೆಯಾಗದಿರಲೆಂದೂ, ಸದ್ಗತಿಯು ಲಭಿಸಲೆಂದೂ ಪ್ರಾರ್ಥಿಸಿದೆ.

ಆತ್ಮಾ—ಈ ಪದವನ್ನು ಇಲ್ಲಿ ದೇಹಕ್ಕೆ ಪರ್ಯಾಯ ಪದವಾಗಿ ಉಪಯೋಗಿಸಿದೆ. ಆತ್ಮದಂತೆ ಪ್ರಿಯವಾದ ದೇಹವೆಂದರ್ಥ.

ಗೃಧ್ನುಃ—ಶಮಿತೃವಿಗೆ ವಿಶೇಷಣವಾಗಿದೆ. ಯಜ್ಞದ ಮಹತ್ತ್ವವನ್ನರಿಯದೆ ಕೇವಲ ಅಶ್ವದ ಮಾಂಸಕ್ಕಾಗಿ ಆಸೆಪಟ್ಟು ಛೇದನಮಾಡತಕ್ಕ ವಧಕಾರನಿಗೆ ಎಚ್ಚರವನ್ನು ಕೊಟ್ಟು ಅವನು ನಿನ್ನನ್ನು ಒರಟೊರಟಾಗಿ ಛೇದನ ಮಾಡದಿರಲಿ ಎಂದು ಪ್ರಾರ್ಥಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

ತಪತ್—ತಪ ಸಂತಾಪೇ. ಧಾತು. ಸ್ಮೋತ್ತರೇಲಙ್ಚ (ಪಾ. ಸೂ. ೩-೩-೧೭೬) ಎಂಬುದರಿಂದ ವಿಧಿಸಲ್ಪಡುವ ಲಙ್ ಸ್ಮಯೋಗವಿಲ್ಲದಿದ್ದರೂ ಬರುತ್ತದೆ. ಪ್ರಥಮಪುರುಷ ಏಕವಚನಾಂತರೂಪ. ಮಾಙ್‌ಯೋಗ ವಿರುವುದರಿಂದ ಅಡಾಗಮ ಬರುವುದಿಲ್ಲ. ತಿಙಂತ ನಿಘಾತಸ್ವರ ಬರುತ್ತದೆ.

ಅಪಿಯಂತಮ್—ಇಣ್ ಗತೌ. ಧಾತು. ಲಟಿಗೆ ಶತ್ರಾದೇಶ. ಇಣೋ ಯಣ್ (ಪಾ. ಸೂ. ೬-೪-೮೧) ಎಂಬುದರಿಂದ ಧಾತುವಿಗೆ ಯಣಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

ತನ್ವಃ—ತನು ಶಬ್ದ. ದ್ವಿತೀಯಾ ಬಹುವಚನ ಶಸ್ ಪರವಾದಾಗ ತನ್ವಾದೀನಾಂ ಛಂದಸ್ಯುಪಸಂಖ್ಯಾನಮ್ ಎಂಬುದರಿಂದ ಯಣಾದೇಶ. ಉದಾತ್ತಸ್ವರಿತಯೋರ್ಯಣಃ—(ಪಾ. ಸೂ. ೮-೨-೪) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

ತಿಷ್ಠಿಪತ್—ಷ್ಠಾ ಗತಿನಿವೃತ್ತೌ. ಧಾತು. ಇದಕ್ಕೆ ಣಿಜಂತದಮೇಲೆ ಲುಙ್. ಪ್ರಥಮಪುರುಷ ಏಕವಚನ ದಲ್ಲಿ ತಿಪ್. ಇಕಾರಲೋಪ ಅರ್ತಿಹ್ರೀವ್ಲೀ—(ಪಾ. ಸೂ. ೭-೩-೩೬) ಎಂಬುದರಿಂದ ಪುಕಾಗಮ. ತಿಷ್ಠತೇರಿತ್ (ಪಾ. ಸೂ. ೭-೪-೫) ಎಂಬುದರಿಂದ ಉಪಧಾಕ್ಕೆ ಇತ್ವ. ಚ್ಲಿಗೆ ಚಙಾದೇಶ. ಚಙಿ ಎಂಬುದರಿಂದ ದ್ವಿತ್ವ. ಶರ್ಪೂರ್ವಾಃಖಯಃ (ಪಾ. ಸೂ. ೭-೪-೬೧) ಎಂಬುದರಿಂದ ಅಭ್ಯಾಸದಲ್ಲಿ ತಕಾರ ಉಳಿಯುತ್ತದೆ. ಮಾಙ್‌ಯೋಗ ವಿರುವುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

ಗೃಧ್ನುಃ—ಗೃಧು ಅಭಿಕಾಂಕ್ಷಾಯಾಮ್. ಧಾತು. ತ್ರಸಿಗೃಧಿಧೃಷಿಕ್ಷಿಪೇಃ ಕ್ನುಃ (ಪಾ.ಸೂ. ೩-೨-೧೪೦) ಎಂಬುದರಿಂದ ಕ್ನು ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋ ದಾತ್ತವಾಗುತ್ತದೆ.

ಅತಿಹಾಯ—ಓ ಹಾಕ್ ತ್ಯಾಗೇ. ಧಾತು ಸಮಾಸೇನಞ್—(ಪಾ ಸೂ. ೭-೧-೩೭) ಎಂಬುದರಿಂದ ಕ್ತ್ವಾ ಪ್ರತ್ಯಯಕ್ಕೆ ಲ್ಯಬಾದೇಶ. ಇದು ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. ಸಮಾಸದಲ್ಲಿ ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ.

ಛಿದ್ರಾ—ಛಿದಿರ್ ದ್ವೈಧೀಕರಣೇ. ಧಾತು. ಔಣಾದಿಕ ರಕ್‌ಪ್ರತಯ. ನಪುಂಸಕ ಬಹುವಚನದಲ್ಲಿ ಶೇಶ್ಛಂದಸಿ ಬಹುಲಮ್ (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆಲೋಪ.

ಕಃ—ಡುಕೃಞ್ ಕರಣೇ. ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಇತಶ್ಚ ಎಂಬುದರಿಂದ ಇಕಾರಲೋಪ. ಮಂತ್ರೇಘಸಹ್ವರಣ—(ಪಾ. ಸೂ. ೨-೪-೮೦) ಎಂಬುದರಿಂದ ಚ್ಲಿಗೆ ಲುಕ್. ತಿಪ್ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ಹಲ್‌ಙ್ಯಾಬ್ಭ್ಯೋ—ಎಂಬುದರಿಂದ ಅಪೃಕ್ತವಾದ ತಿಪಿಗೆ ಲೋಪ. ರೇಫಕ್ಕೆ ವಿಸರ್ಗ. ನಮಾಙ್‌ಯೋಗೇ—(ಪಾ. ಸೂ. ೬-೪-೭೪) ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತ ನಿಘಾತಸ್ವರ ಬರುತ್ತದೆ. ॥ ೨೦ ॥

---

ಸಂಹಿತಾಪಾಠಃ

ನ ವಾ ಉ ಏತನ್ಮ್ರಿಯಸೇ ನ ರಿಷ್ಯಸಿ ದೇವಾँ ಇದೇಷಿ ಪಥಿಭಿಃ ಸುಗೇಭಿಃ।
ಹರೀ ತೇ ಯುಂಜಾ ಪೃಷತೀ ಅಭೂತಾಮುಪಾಸ್ಥಾದ್ವಾಜೀ ಧುರಿ ರಾಸ-
ಭಸ್ಯ ॥ ೨೦ ॥

। ಪದಪಾಠಃ ।

ನ । ವೈ । ಊಂ ಇತಿ । ಏತತ್ । ಮ್ರಿಯಸೇ । ನ । ರಿಷ್ಯಸಿ । ದೇವಾನ್ । ಇತ್ । ಏಷಿ । ಪಥಿಽಭಿಃ ।
ಸುಽಗೇಭಿಃ ।
ಹರೀ ಇತಿ । ತೇ । ಯುಂಜಾ । ಪೃಷತೀ ಇತಿ । ಅಭೂತಾಂ । ಉಪ । ಅಸ್ಥಾತ್ । ವಾಜೀ । ಧುರಿ ।
ರಾಸಭಸ್ಯ ॥ ೨೧ ॥

॥ ಸಾಯಣಭಾಷ್ಯಂ ॥

ನ ವಾ ಉ ನೈವ ಖಲ್ವೇತನ್ಮ್ರಿಯಸೇ । ವೈಶಬ್ದ ಏವಕಾರಾರ್ಥಃ । ಉ ಇತ್ಯೈವಧಾರಣೇ । ನೈವೇ-ದಾನೀಮಿತರಾಶ್ವವನ್ಮೃತೋ ಭವಸಿ ದೇವತ್ವಪ್ರಾಪ್ತೇರ್ವಕ್ಷ್ಯಮಾಣತ್ವಾತ್ । ಅತ ಏವ ನ ರಿಷ್ಯಸಿ-। ನ ಹಿಂಸ್ಯಸೇ । ವ್ಯರ್ಥಹಿಂಸಾಯಾ ಅಭಾವಾತ್ । ನನು ಪ್ರತ್ಯಕ್ಷತೋ ಮೃತಿರವಯವನಾಶಶ್ಚ ದೃಶ್ಯತೇ ಕಥಮೇವಮುಚ್ಯತ ಇತಿ ಉಚ್ಯತೇ । ಸುಗೇಭಿಃ ಪಥಿಭಿಃ ಶೋಭನಗಮನಸಾಧನೈರ್ಮಾರ್ಗೈರ್ದೇವ-ಯಾನಲಕ್ಷಣೈರ್ದೇವಾನಿದೇಷಿ । ದೇವಾನೇವ ಪ್ರಾಪ್ನೋಷಿ । ಅತೋ ಯುಕ್ತೈಷೋಕ್ತಿಃ । ಕೈಃ ಸಾಧನೈರಿತಿ ತತ್ರಾಹ । ತೇ ತ್ವಾಂ ವೋಢುಂ ಹರೀ ಏತನ್ನಾಮಾನಾವಿಂದ್ರಸ್ಯಾಶ್ವೌ ತೇ ತವ ಯುಂಜಾ ರಥೇ ಯುಕ್ತಾವಭೂತಾಂ । ಭವಿಷ್ಯತಃ । ಆಶಂಸಾರೂಪತ್ವಾದ್ಭೂತಾರ್ಥನಿರ್ದೇಶಃ । ಹರೀ ಇಂದ್ರಸ್ಯೇತಿ ನಿರುಕ್ತಂ । ತಥಾ ಪೃಷತೀ ಪೃಷತ್ಯೌ ಮರುತಾಂ ವಾಹನಭೂತೌ ಯುಂಜಾಭೂತಾಂ । ಯುಕ್ತೌ ಭವಿ-ಷ್ಯತಃ । ಪೃಷತ್ಯೋ ಮರುತಾಮಿತಿ ಚ ನಿರುಕ್ತಂ ॥ ಯುಜೇರ್ಯುತ್ವಿಗಿತ್ಯಾದಿನಾ ಕ್ವಿನ್ । ಯುಜೇರ-ಸಮಾಸೇ । ಪಾ. ೭-೧-೭೧ । ಇತಿ ನುಮ್ । ಸುಪಾಂ ಸುಲುಗಿತ್ಯಾಕಾರಃ । ತಥಾ ರಾಸಭಸ್ಯಾಶ್ವಿವಾಹನ-ಸ್ಯೈತನ್ನಾಮಕಸ್ಯಾಶ್ವಸ್ಯ ಧುರಿ ಸ್ಥಾನೇ ವರ್ತಮಾನಃ ಕಶ್ಚಿದ್ವಾಜ್ಯುಪಾಸ್ಥಾತ್ । ಉಪಸ್ಥಾಸ್ಯತಿ । ವಹತೀ-ತ್ಯರ್ಥಃ । ಯದ್ವಾ । ರಾಸಭಸ್ಯ ಭಾನೋರ್ಧುರಿ ವರ್ತ್ಮನಿ ಯುಕ್ತೋ ವಾಜ್ಯಶ್ವ ಉಪಸ್ಥಾಸ್ಯತಿ । ದೇವತ್ವಂ ಗಚ್ಛತಸ್ತವ ಗಮನಾಯೇಂದ್ರಾದಯಃ ಸ್ವಸ್ವವಾಹನಾನಿ ಪ್ರೇಷಯಂತೀತ್ಯರ್ಥಃ । ಯದ್ವಾ । ತತ್ತದ್ದೇವ-ಭಾವಮಾಪನ್ನಂ ತ್ವಾಂ ತಾನಿ ತಾನಿ ವಾಹನಾನಿ ವಹಂತಿ ॥

ಪ್ರತಿಪದಾರ್ಥ

ಏತತ್—ಈ ಯಜ್ಞಕಾಲದಲ್ಲಿ | ನ ವಾ ಉ ಮ್ರಿಯಸೇ—(ಇತರ ಅಶ್ವಗಳು ಮೃತಿಯನ್ನು ಹೊಂದುವಂತೆ) ನೀನು ಖಂಡಿತವಾಗಿಯೂ ಮೃತಿಯನ್ನು ಹೊಂದುವುದೇ ಇಲ್ಲ | ನ ರಿಷ್ಯಸಿ—ಹಿಂಸಿಸಲ್ಪಡುವುದೂ ಇಲ್ಲ | ಸುಗೇಭಿಃ—ಸುಲಭವಾಗಿ ಸಂಚರಿಸಲು ಯೋಗ್ಯವಾದ | ಪಥಿಭಿಃ—ಮಾರ್ಗಗಳಿಂದ ಎಂದರೆ ದೇವಯಾನ ಲಕ್ಷಣಗಳುಳ್ಳ ಮಾರ್ಗಗಳಿಂದ | ದೇವಾँ ಇತ್—ದೇವತೆಗಳನ್ನೇ | ಏಷಿ—ಸೇರುತ್ತೀಯೆ | ತೇ— ನಿನ್ನನ್ನು (ಕರೆದುಕೊಂಡುಹೋಗಲು) | ಹರೀ—ಹರೀ ಎಂಬ ಹೆಸರುಗಳುಳ್ಳ ಇಂದ್ರನ ಕುದುರೆಗಳು | ಯುಂಜಾ—ರಥಕ್ಕೆ ಸೇರಿಸಿ ಕಟ್ಟಲ್ಪಟ್ಟವುಗಳಾಗಿ | ಅಭೂತಾಂ—ಆಗುತ್ತವೆ | ಪೃಷತೀ—ಮರುತ್ತುಗಳ ವಾಹನಗಳೂ ( ರಥಕ್ಕೆ ಕಟ್ಟಲ್ಪಡುತ್ತವೆ) | ರಾಸಭಸ್ಯ—ಅಶ್ವಿನೀದೇವತೆಗಳಿಗೆ ವಾಹನವಾದ ಈ ಹೆಸರಿನ ಕುದುರೆಯನ್ನು ಕಟ್ಟುವ | ಧುರಿ—ನೊಗದ ಪ್ರದೇಶದಲ್ಲಿ | ವಾಜೀ—ಬೇರೊಂದು ಅಶ್ವವು | ಉಪಾಸ್ಥಾತ್—ಕಟ್ಟಲ್ಪಟ್ಟು ( ನಿನ್ನನ್ನು ವಹಿಸುತ್ತದೆ) ||

ಭಾವಾರ್ಥ

ಎಲೈ ಅಶ್ವವೇ, ಈ ಯಜ್ಞಕಾಲದಲ್ಲಿ ಇತರ ಅಶ್ವಗಳು ಮೃತಿಯನ್ನು ಹೊಂದುವ ರೀತಿಯಲ್ಲಿ ನೀಚವಾದ ಮೃತಿಯನ್ನು ನೀನು ಹೊಂದುವುದೇ ಇಲ್ಲವು. ಮತ್ತು ಛೇದನದಿಂದ ನಿನಗೆ ಯಾವ ಹಿಂಸೆಯೂ ಆಗುವುದೇ ಇಲ್ಲವು. ಸುಖವಾಗಿ ಸಂಚರಿಸಲು ಯೋಗ್ಯವಾದ ದೇವಯಾನಮಾರ್ಗದಿಂದ ನೀನು ದೇವತೆಗಳನ್ನೇ ಸೇರುತ್ತೀಯೆ. ನಿನ್ನನ್ನು ಕರೆದುಕೊಂಡುಹೋಗಲು ಹರೀ ಎಂಬ ಹೆಸರುಗಳುಳ್ಳ ಇಂದ್ರನ ಕುದುರೆಗಳು ರಥಕ್ಕೆ ಸೇರಿಸಿ ಕಟ್ಟಲ್ಪಡುತ್ತವೆ. ಮರುತ್ತುಗಳ ವಾಹನವೂ ರಥಕ್ಕೆ ಸೇರಿಸಿ ಸಿದ್ಧವಾಗುತ್ತದೆ. ಅಶ್ವಿನೀದೇವತೆಗಳ ವಾಹನವಾದ ರಾಸಭವನ್ನು ಕಟ್ಟುವ ನೊಗದ ಪ್ರದೇಶದಲ್ಲಿ ಬೇರೊಂದು ಅಶ್ವವು ಕಟ್ಟಲ್ಪಟ್ಟು ನಿನ್ನನ್ನು ವಹಿಸಲು ಸಿದ್ಧವಾಗಿರುತ್ತದೆ.

English Translation

Verily at this moment you do not die; nor are you harmed; for you go by auspicious paths to the gods. The horses of Indra, the steeds of the Maruts shall be yoked (to their cars), and a courser shall be placed in the shaft of the ass of the Aswins (to bear you to heaven).

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಮುಖ್ಯವಾದ ಎರಡು ಅಂಶಗಳನ್ನು ಸೂಚಿಸಿದೆ. ಮೊದಲನೆಯದಾಗಿ ಮೇಧ್ಯಾಶ್ವವು ಆಹುತಿ ರೂಪದಲ್ಲಿ ಅರ್ಪಿತವಾದನಂತರ ಅದಕ್ಕೆ ಇತರ ಲೌಕಿಕಪಶುಗಳಿಗೆ ಸಂಭವಿಸತಕ್ಕ ಮೃತಿಯು ಸಂಭವಿಸದೇ, ಪ್ರತ್ಯೇಕವಾದುದೂ, ಅದನ್ನು ದೇವತೆಗಳೊಡನೆ ಅಮರವನ್ನಾಗಿ ಮಾಡತಕ್ಕದ್ದೂ ಆದ ಸ್ಥಿತಿಯು ಲಭಿಸುತ್ತದೆ. ಆಹುತ್ಯರ್ಪಣವಾದೊಡನೆಯೇ ಅದಕ್ಕೆ ದೇವತೆಗಳೊಡನೆ ಹೋಗಿ ಸೇರತಕ್ಕ ಮಾರ್ಗದಲ್ಲಿ ಅದರ ಸಂಚಾರವು ಲಭ್ಯವಾಗುತ್ತದೆ.

ಇಲ್ಲಿ ಸುಗೇಭಿಃ ಪಥಿಭಿಃ ಎನ್ನುವುದಕ್ಕೆ ಶೋಭನಗಮನಸಾಧನೈರ್ಮಾರ್ಗೈಃ ದೇವಯಾನಲಕ್ಷಣೈಃ | ಎಂದು ದೇವತೆಗಳ ಸಂಚಾರಕ್ಕೆ ಯೋಗ್ಯವಾದ ಮಾರ್ಗಗಳಿಂದ ಎಂದು ವಿವರಿಸಿದ್ದಾರೆ. ಈ ದೇವಯಾನದ ಮಾರ್ಗವು

ಎಲ್ಲಾ ಚೇತನಗಳಿಗೂ ಲಭ್ಯವಾಗತಕ್ಕದಲ್ಲ ಕೇವಲ ಸುಕೃತಿಗಳಿಗೆ ಮಾತ್ರ ಲಭ್ಯವಾಗತಕ್ಕದ್ದಾಗಿದೆ. ಆದುದರಿಂದಲೇ ಇಂದ್ರನ ಹರಿಗಳೂ, ಮರುತ್ತುಗಳ ಪೃಷತ್ತುಗಳೂ, ಅಶ್ವಿನಿಗಳ ರಾಸಭವೂ ಅಥವಾ ಅವರ ಪ್ರತಿನಿಧಿಯೂ ಈ ಅಶ್ವವನ್ನು ಕರೆದುಕೊಂಡು ಹೋಗುತ್ತವೆಯೆಂದೂ, ಅದು ಅತ್ಯುತ್ತಮವಾದ ಪದವಿಯನ್ನು ಹೊಂದಿಸಿಕೊಡುತ್ತದೆಯೆಂದೂ ವಿವರಿಸಿದೆ. ಸಾಯಣರು ರಾಸಭಸ್ಯ ಧುರಿ ಎನ್ನುವುದಕ್ಕೆ ಭಾನೋಃ ಧುರಿ ವರ್ತ್ಮನಿ ಯುಕ್ತಃ ವಾಜೀ ಅಶ್ವಃ ಭಾನುವಿನ ಸಂಚಾರಮಾರ್ಗದಲ್ಲಿ ಯುಕ್ತವಾದ ವಾಜಿಯೆಂದು ಅರ್ಥಮಾಡಿದ್ದಾರೆ. ಭಾನುವಿನ ಸಂಚಾರಮಾರ್ಗವಾವುದು ಎಂದು ಪರಿಶೀಲಿಸಿದರೆ—

ಆ ಕೃಷ್ಣೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂ ಚ ।
ಹಿರಣ್ಯಯೇನ ಸವಿತಾ ರಥೇನಾದೇವೋ ಯಾತಿ ಭುವನಾನಿ ಪಶ್ಯನ್ ॥

(ಋ. ಸಂ ೧-೩೫-೨)

ಯಾತಿ ದೇವಃ ಪ್ರವತಾ ಯಾತ್ಯುದ್ವತಾ ಯಾತಿ ಶುಭ್ರಾಭ್ಯಾಂ ಯಜತೋ ಹರಿಭ್ಯಾಂ ।
ಆ ದೇವೋ ಯಾತಿ ಸವಿತಾ ಪರಾವತೋಽಪ ವಿಶ್ವಾ ದುರಿತಾ ಬಾಧಮಾನಃ ॥

(ಋ. ಸಂ. ೧-೩೫-೩)

ಇತ್ಯಾದಿಋಕ್ಕುಗಳಲ್ಲಿ ವರ್ಣಿತವಾಗಿರುವ ಸೂರ್ಯನ ಶುಭ್ರವಾದುದೂ, ಶಾಶ್ವತವಾದುದೂ ಆದ ಸಂಚಾರದ ಸ್ವರೂಪವನ್ನು ಇಲ್ಲಿಯೂ ತಿಳಿಸಿದೆ. ಈ ಆದಿತ್ಯನ ಸಂಚಾರದ ಮಾರ್ಗವೇ ಸುಕೃತಿಗಳನ್ನು ಬ್ರಹ್ಮಲೋಕಕ್ಕೆ ಒಯ್ಯುವ ಮಾರ್ಗವು. ಇದನ್ನು ಉಪನಿಷದಾದಿಗಳಲ್ಲಿ ದೇವಯಾನವೆಂದು ಕರೆದಿದ್ದಾರೆ ಆದರೆ ಋಕ್ಸಂಹಿತೆಯಲ್ಲಿ ದೇವಯಾನವೆಂಬ ಪದಕ್ಕೆ ದೇವತೆಗಳು ಸಂಚರಿಸತಕ್ಕ ಮಾರ್ಗವೆಂದು ಸಾಧಾರಣವಾದ ಅರ್ಥವಿರುತ್ತದೆ. ಕೆಲವೆಡೆಗಳಲ್ಲಿ ಮಾತ್ರ ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ ಭಾವವೂ ಇದೆ.

ಪರಂ ಮೃತ್ಯೋ ಅನು ಪರೇಹಿ ಪಂಥಾಂ ಯಸ್ತೇ ಸ್ವ ಇತರೋ ದೇವಯಾನಾತ್ ।
ಚಕ್ಷುಷ್ಮತೇ ಶೃಣ್ವತೇ ತೇ ಬ್ರವೀಮಿ ಮಾ ನಃ ಪ್ರಜಾಂ ರೀರಿಷೋ ಮೋತ ವೀರಾನ್ ॥

(ಋ. ಸಂ. ೧೦-೧೮-೧)

ಇತ್ಯಾದಿಋಕ್ಕುಗಳಲ್ಲಿ ದೇವಯಾನವು ಮೃತ್ಯುರಹಿತವಾದ ಮಾರ್ಗವೆಂದು ಹೇಳಿದೆ. ಈ ಮಾರ್ಗದಲ್ಲಿ ಸವಿತೃವು ಸುಕೃತಿಗಳನ್ನು ಮರಣರಹಿತವಾದ ಪುಣ್ಯಲೋಕಕ್ಕೆ ಕರೆದುಕೊಂಡು ಹೋಗುವನು ಎಂದು ಋಕ್ಸಂಹಿತೆಯಲ್ಲಿಯೇ ಉಕ್ತವಾಗಿರುವುದರಿಂದ ಈ ಅರ್ಥವೂ ಅನುರೂಪವಾಗಿದೆ.

ಯೇ ತೇ ಪಂಥಾಃ ಸವಿತಃ ಪೂರ್ವ್ಯಾಸೋಽರೇಣವಃ ಸುಕೃತಾ ಅಂತರಿಕ್ಷೇ ।
ತೇಭಿರ್ನೋ ಅದ್ಯ ಪಥಿಭಿಃ ಸುಗೇಭಿ ರಕ್ಷಾ ಚ ನೋ ಅಧಿ ಚ ಬ್ರೂಹಿ ದೇವ ॥

(ಋ. ಸಂ. ೧-೩೫-೧೧)

ಯತ್ರಾಸತೇ ಸುಕೃತೋ ಯತ್ರ ತೇ ಯಯುಸ್ತತ್ರ ತ್ವಾ ದೇವಃ ಸವಿತಾ ದಧಾತು ।

(ಋ. ಸಂ. ೧೦-೧೭-೪)

ಇತ್ಯಾದಿಋಕ್ಕುಗಳಲ್ಲಿ ಸವಿತೃವು ಸತ್ಪಥದಲ್ಲಿ ಸುಕೃತಿಗಳನ್ನು ಕರೆದುಕೊಂಡುಹೋಗುವ ದೇವನಾದುದರಿಂದ ಯಜ್ಞ ಕರ್ತರಾದ ಯಜಮಾನರನ್ನೂ, ಯಜ್ಞಕಾರ್ಯದಲ್ಲಿ ಭಾಗವನ್ನು ವಹಿಸತಕ್ಕ ಪಶುಗಳನ್ನೂ, ಅದೇ ಶುದ್ಧವಾದುದೂ, ರಜೋರಹಿತವಾದುದೂ, ಮೃತ್ಯುರಹಿತವಾದುದೂ ಆದ ಮಾರ್ಗದಲ್ಲಿ ಕರೆದುಕೊಂಡುಹೋಗಬೇಕೆಂದು ಪ್ರಾರ್ಥಿಸಿದೆ. ಈ ಮಾರ್ಗವನ್ನೇ ಉಪನಿಷತ್ತುಗಳಲ್ಲಿ ಅರ್ಚಿರಾದಿಮಾರ್ಗವೆಂದು ಹೇಳಿದೆ. ಮರಣಾನಂತರ ಈ ಮಾರ್ಗದಲ್ಲಿ ಬ್ರಹ್ಮ ಲೋಕವನ್ನು ಸೇರತಕ್ಕ ದಿವ್ಯಾತ್ಮರುಗಳಿಗೆ ಪುನರಾವರ್ತಿಯಿಲ್ಲವೆಂದು ಈ ಮಾರ್ಗವನ್ನು ವರ್ಣಿಸಿದೆ.

**ತತ್ಪುರುಷೋಽಮಾನವಃ ಸ ಏನಾನ್ಬ್ರಹ್ಮ ಗಮಯತ್ಯೇಷ ದೇವಪಥೋ ಬ್ರಹ್ಮಪಥ ಏತೇನ ಪ್ರತಿ ಪದ್ಯಮಾನಾ ಇಮಂ ಮಾನವಮಾವರ್ತಂ ನಾವರ್ತಂತೇ ನಾವರ್ತಂತೇ ||**

**(ಛಾ. ಉ. ೪-೧೫-೫)**

ಇಂತಹ ಅಮಾನುಷವಾದ ಚೈತನ್ಯವನ್ನು ಪಡೆದ ದೇವಲೋಕಗಾಮಿಗಳಿಗೆ ಪುನರಾವರ್ತಿಯಿಲ್ಲ ಎಂದು ಉದ್ಘೋಷಿಸಿರುವಂತೆಯೇ ಇದೇ ಅಭಿಪ್ರಾಯವನ್ನು ಮುಂಡೂಕೋಪನಿಷತ್ತಿನಲ್ಲಿಯೂ ಸಹ

**ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾಂತಿ ಯತ್ರಾಮೃತಃ ಸ ಪುರುಷೋ ಹ್ಯವ್ಯಯಾತ್ಮಾ ||**

**(ಮುಂ. ಉ. ೨-೧೧)**

ಇತ್ಯಾದಿವಾಕ್ಯಗಳಲ್ಲಿಯೂ ಸಹ ಈ ಪಥದ ಮಹತ್ತ್ವವನ್ನು ಹೇಳಿದೆ. ಇಂತಹ ಉತ್ತಮವಾದ ಪಥದಲ್ಲಿ ಕರೆದ ಕೊಂಡುಹೋಗಿ ಅಶ್ವಕ್ಕೆ ಸದ್ಗತಿಯನ್ನುಂಟುಮಾಡುವುವು ಎಂದು ಹೇಳಿದೆ. ಅದನ್ನು ಇಲ್ಲಿ ಸುಗೇಭಿಃ ಪಥಿಭಿಃ ಎಂದು ತಿಳಿಸಿದೆ.

**ರಾಸಭಸ್ಯ—ಭಾನೋಃ** | ರಾಸಭಶಬ್ದಕ್ಕೆ ಭಾನುವೆಂಬರ್ಥವು ಯಾವ ಆಧಾರದಮೇಲೆ ಹೇಳಲ್ಪಟ್ಟಿದೆಯೆಂದು ಅದರ ನಿರ್ವಚನವನ್ನು ತೋರಿಸುವುದು ಶ್ರಮಸಾಧ್ಯವಾದುದು. ಸರಿಯಾದ ಆಧಾರವು ದೊರೆತರೆ ಈ ಶಬ್ದವನ್ನು ಮುಂದೆ ವಿವರಿಸಲಾಗುತ್ತದೆ.

ಆಹುತಿರೂಪದಲ್ಲಿ ಅರ್ಪಿತವಾಗಿ ದೇವಮಾರ್ಗದಲ್ಲಿ ಈ ಅಶ್ವದ ಸಂಚಾರದ ವೇಳೆಯಲ್ಲಿ ಇಂದ್ರನ ವಾಹನವೂ ಮರುತ್ತುಗಳ ವಾಹನವೂ ಅಶ್ವಿನೀದೇವತೆಗಳ ವಾಹನವೂ ಇದನ್ನು ಕರೆದುಕೊಂಡುಹೋಗಲು ಬರುವ ಕಾರಣವೇನೆಂದು ಆಕಾಂಕ್ಷೆಯು ಪ್ರಾಪ್ತವಾದರೆ ಅದಕ್ಕೆ ಸಮಾಧಾನವಾಗಿ ಸಾಯಣರು **ಯದ್ವಾ | ತತ್ತದ್ದೇವಭಾವಮಾಪನ್ನಂ ತ್ವಾಂ ತಾನಿ ತಾನಿ ವಾಹನಾನಿ ವಹಂತಿ |** ಆಯಾ ದೇವತೆಗಳ ಸ್ವರೂಪವನ್ನೇ ಹೊಂದತಕ್ಕ ನಿನ್ನನ್ನು ಆಯಾ ದೇವತೆಗಳ ವಾಹನವು ವಹಿಸುವುವು ಎಂದು ಹೇಳಿದಾರೆ.

**ಹರೀ ಇಂದ್ರಸ್ಯ ; ರಾಸಭಾವಶ್ವಿನೋಃ ; ಪೃಷತ್ಯೋ ಮರುತಾಂ |** (ನಿ. ೨-೨೮) ಎಂದು ಇಂದ್ರಾದಿಗಳ ವಾಹನಗಳು ಪ್ರಸಿದ್ಧವಾಗಿವೆ.

### ವ್ಯಾಕರಣಪ್ರಕ್ರಿಯಾ

**ಮ್ರಿಯಸೇ—**ಮೃಙ್ ಪ್ರಾಣತ್ಯಾಗೇ ಧಾತು. ತುದಾದಿ ಲಟ್ ಮಧ್ಯಮಪುರುಷ ಏಕವಚನದಲ್ಲಿ ಬರುವ ಥಾಸ್ ಬಂದಾಗ ಅದಕ್ಕೆ ಸೇ ಆದೇಶ. **ತುದಾದಿಭ್ಯಃ** (ಪಾ. ಸೂ. ೩-೧-೭೭) ಎಂಬುದರಿಂದ ಶ ವಿಕರಣ. ಇಸು

ಪರವಾದಾಗ ರಿಜ್‌ಶಯೆಗ್ಲಿಙ್ಸು (ಪಾ. ಸೂ. ೭-೪-೨೮) ಎಂಬುದರಿಂದ ಧಾತುವಿಗೆ ರಿಙಾದೇಶ. ಅಂತಾದೇಶವಾಗಿ ಬಂದಾಗ ಅಚಿಶ್ನುಧಾತುಭ್ರುವಾಂ—ಎಂಬುದರಿಂದ ಇಯಙಾದೇಶ. ತಿಙಂತನಿಘಾತಸ್ವರ ಬರುತ್ತದೆ.

ರಿಷ್ಯಸಿ—ರಿಷ ಹಿಂಸಾಯಾಂ ಧಾತು. ದಿವಾದಿ. ವ್ಯತ್ಯಯದಿಂದ ಕರ್ಮಣಿಯಲ್ಲಿ ಕರ್ತೃಪ್ರತ್ಯಯ. ಲಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಏಷಿ—ಇಣ್ ಗತೌ. ಧಾತು. ಲಟಿಗೆ ಸಿಪ್. ಅದಿಪ್ರಭೃತಿಭ್ಯಃಶಪಃ ಎಂಬುದರಿಂದ ವಿಕರಣಕ್ಕೆ ಲುಕ್. ಸಿಪ್ ನಿಮಿತ್ತವಾಗಿ ಧಾತುವಿಗೆ ಗುಣ. ಆದೇಶಪ್ರತ್ಯಯಯೋಃ ಎಂಬುದರಿಂದ ಷತ್ವ. ನಿಘಾತಸ್ವರ ಬರುತ್ತದೆ.

ಸುಗೇಭಿಃ—ಗಮ್ಲೃ ಗತೌ. ಧಾತು. ಸುದುರೋರಧಿಕರಣೇ (ಪಾ ಸೂ ೩-೨-೪೮-೩) ಎಂಬುದರಿಂದ ಡ ಪ್ರತ್ಯಯ. ಡಿತ್ವಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಭಿಸ್ ಪರವಾದಾಗ ಬಹುಲಂ ಛಂದಸಿ ಎಂಬುದರಿಂದ ಐಸ್ ಭಾವ ವಿಕಲ್ಪವಾದುದರಿಂದ ಬರುವುದಿಲ್ಲ. ಏತ್ವ.

ಯುಞ್ಜಾ—ಯುಜಿರ್ ಯೋಗೇ. ಧಾತು ಕೇವಲವಾಗಿರುವುದರಿಂದ ಋತ್ವಿಕ್ ದಧೃಕ್—(ಪಾ. ಸೂ. ೩-೨-೫೯) ಎಂಬುದರಿಂದ ಕ್ವಿನ್ ಪ್ರತ್ಯಯ. ಇದಕ್ಕೆ ಪರವಾದಾಗ ಯುಜೇರಸಮಾಸೇ (ಪಾ. ಸೂ ೭-೧-೭೧) ಎಂಬುದರಿಂದ ನುಮಾಗಮ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ ಅದಕ್ಕೆ ಅನುಸ್ವಾರ ಪರಸವರ್ಣ. ಸುಪಾಂ ಸುಲುಕ್—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ.

ಅಸ್ಥಾತ್—ಷ್ಠಾ ಗತಿನಿವೃತ್ತೌ. ಧಾತು. ಛಾಂದಸವಾಗಿ ಲುಙ್. ಪ್ರಥಮಪುರುಷ ಏಕವಚನದಲ್ಲಿ ತಿಪ್ ಇಕಾರಲೋಪ. ಚ್ಲಿಗೆ ಸಿಚ್ ಬಂದಾಗ ಗಾತಿಸ್ಥಾಘುಪಾ—(ಪಾ. ಸೂ. ೨-೪-೭೭) ಎಂಬುದರಿಂದ ಅದಕ್ಕೆ ಲುಕ್. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

ರಾಸಭಸ್ಯ—ರಾಸೃ ಶಬ್ದೇ. ಧಾತು. ರಾಸಿವಲ್ಲಿಭ್ಯಾಂ ಚ (ಉ ಸೂ. ೪-೮೦೫) ಎಂಬುದರಿಂದ ಅಭಚ್ ಪ್ರತ್ಯಯ ಚಿತಃ (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ ॥ ೨೧ ॥

———— :C: ————

। ಸಂಹಿತಾಪಾಠಃ ।

ಸುಗವ್ಯಂ ನೋ ವಾಜೀ ಸ್ವಶ್ವ್ಯಂ ಪುಂಸಃ ಪುತ್ರಾಁ ಉತ ವಿಶ್ವಾಪುಷಂ ರಯಿಂ ।

ಅನಾಗಾಸ್ತ್ವಂ ನೋ ಅದಿತಿಃ ಕೃಣೋತು ಕ್ಷತ್ರಂ ನೋ ಅಶ್ವೋ ವನತಾಂ ಹವಿಷ್ಮಾನ್ ॥ ೨೨ ॥

ಪದಪಾಠಃ

ಸು॒ಽಗವ್ಯಂ । ನಃ॒ । ವಾ॒ಜೀ । ಸು॒ಽಅಶ್ವ್ಯಂ । ಪು॒ಂಸಃ । ಪು॒ತ್ರಾನ್ । ಉ॒ತ । ವಿ॒ಶ್ವ॒ಽಪುಷಂ । ರ॒ಯಿಂ ।

ಅ॒ನಾ॒ಗಾ॒ಃಽತ್ವಂ । ನ॒ಃ । ಅದಿತಿಃ । ಕೃ॒ಣೋ॒ತು॒ । ಕ್ಷ॒ತ್ರಂ । ನ॒ಃ । ಅಶ್ವಃ । ವ॒ನ॒ತಾ॒ಂ । ಹ॒ವಿಷ್ಮಾನ್ ॥ ೨೨ ॥

ಸಾಯಣಭಾಷ್ಯಂ

ಉಪಾಕರಣಕಾಲೇಽವಘ್ರಾಣಾವರ್ತನೇ ಯದ್ಯಶ್ವೋ ನ ಕುರ್ಯಾತ್ ತದೈಷಾ ನೈಮಿತ್ತಿಕೀ ಯಜಮಾನವಾಚನಾರ್ಥಾ ಭವತಿ । ತಥಾ ಚ ಸೂತ್ರಿತಂ । ಸುಗವ್ಯಂ ನೋ ವಾಜೀ ಸ್ವಶ್ವ್ಯಮಿತಿ ಯಜಮಾನಂ ವಾಚಯೇತ್ । ಆ. ೧೦.೮ । ಇತಿ ॥

ವಾಜ್ಯಶ್ವ ಆಲಭ್ಯಮಾನೋ ನೋಽಸ್ಮಾಕಂ ಸುಗವ್ಯಂ ಶೋಭನೇನ ಗೋಸಮೂಹೇನ ಯುಕ್ತಂ ವಿಶ್ವಾಪುಷಂ ರಯಿಂ ವಿಶ್ವಸ್ಯ ಪೋಷಕಂ ಧನಂ ಕೃಣೋತು । ಕರೋತು ॥ ಖಲಗೋರಥಾತ್ । ಪಾ ೪-೨-೫೦ । ಇತಿ ಸಮೂಹಾರ್ಥೇ ಯತ್ । ಛಾಂದಸಮುತ್ತರಪದಾದ್ಯುದಾತ್ತತ್ವಂ । ಯದ್ವಾ । ಸಾಮೂಹಿಕಸ್ಯಾಣಃ ಪ್ರಸಂಗೇ ಸರ್ವತ್ರ ಗೋರಜಾದಿಪ್ರತ್ಯಯಪ್ರಸಂಗ ಇತಿ ಯತ್ । ಕಾ. ೪-೩-೧೬೦ । ತದಂತಸ್ಯಾದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ ॥ ತಥಾ ಸ್ವಶ್ವ್ಯಂ ಶೋಭನಾಶ್ವಸಮೂಹಯುಕ್ತಂ । ತಥಾ ಪುಂಸಃ ಪುತ್ರಾನ್ । ಪುತ್ರಶಬ್ದಃ ಸ್ತ್ರೀಪುಮಪತ್ಯಸಾಧಾರಣಃ । ಅತಃ ಪುಮಪತ್ಯಾನೀತ್ಯರ್ಥಃ । ಯದ್ವಾ । ಪುಂಸೋ ವಧ್ವಾದೀನ್ ಪುತ್ರಾನ್ ಪುರುರಕ್ಷಕಾನಾತ್ಮಜಾನ್ । ಸ್ತ್ರ್ಯಪತ್ಯಾನಿ ಪುಮಪತ್ಯಾನಿ ಚೇತ್ಯರ್ಥಃ । ಉತಾಪಿ ಚ ವಿಶ್ವಾಪುಷಂ ರಯಿಂ ವಿಶ್ವಪೋಷಣಸಮರ್ಥಂ ಧನಂ । ಕಿಂಚ ನೋಽಸ್ಮಾನದಿತಿರದೀನೋಽಶ್ವೋಽನಾಗಾಸ್ತ್ವಂ ಕೃಣೋತು । ಸರ್ವತೋ ನಿಷ್ಪಾಪತ್ವಂ ಕರೋತು - ಉಕ್ತಾನಾಂ ಫಲಾನಾಂ ನ್ಯೂನಾತಿರೇಕಜನಿತಪಾಪಕ್ಷಯಾಭಾವೇಽಸಂಭವಾದಪಾಪತ್ವಂ ಪ್ರಾರ್ಥ್ಯತೇ । ಕಿಂಚ ಹವಿಷ್ಮಾನ್ ಹವಿರ್ಭೂತಾವಯವೋಪೇತೋಽಶ್ವೋ ನೋಽಸ್ಮಾಕಂ ಕ್ಷತ್ರಂ ಬಲಂ ಕ್ಷಾತ್ರಂ ತೇಜೋ ವನತಾಂ । ಸಂಭಜತಾಂ । ಕುರುತಾಂ ॥

ಪ್ರತಿಪದಾರ್ಥ

ವಾಜೀ—ಈ ಮೇಧ್ಯಾಶ್ವವು । ನಃ—ನಮಗೆ । ಸುಗವ್ಯಂ—ಶ್ರೇಷ್ಠವಾದ ಗೋವುಗಳೊಡನೆ ಕೂಡಿದುದೂ, । ಸ್ವಶ್ವ್ಯಂ—ಶ್ರೇಷ್ಠವಾದ ಅಶ್ವಗಳೊಡನೆ ಕೂಡಿದುದೂ, । ಪುಂಸಃ—ಪುಂರೂಪವಾದುದೂ ಆದ । ಪುತ್ರಾನ್—ಪುತ್ರರನ್ನೂ । ಉತ—ಮತ್ತು । ವಿಶ್ವಾಪುಷಂ—ವಿಶ್ವಪೋಷಕವಾದ । ರಯಿಂ—ಧನವನ್ನು । ಕೃಣೋತು—ಸಂಪಾದಿಸಿ ಕೊಡಲಿ । ಅದಿತಿಃ—ಘನತೆಯನ್ನು ಹೊಂದಿದ । ಅಶ್ವಃ—ಅಶ್ವವು । ನಃ—ನಮಗೆ । ಅನಾಗಾಸ್ತ್ವಂ—ಪಾಪರಹಿತವಾದ ಸ್ಥಿತಿಯನ್ನು । (ಕೃಣೋತು—ಉಂಟುಮಾಡಲಿ) । ಹವಿಷ್ಮಾನ್—ಹವಿಸ್ಸಿನ ರೂಪದಲ್ಲಿ ಅರ್ಪಿತವಾಗುವ ಈ ಅಶ್ವವು । ನಃ—ನಮಗೆ । ಕ್ಷತ್ರಂ—ಬಲವನ್ನೂ । ವನತಾಂ—ಒದಗಿಸಿಕೊಡಲಿ ।

**ಭಾವಾರ್ಥ**

ಈ ಮೇಧ್ಯಾಶ್ವವು ನಮಗೆ ಶ್ರೇಷ್ಠವಾದ ಗೋವುಗಳೊಡನೆ ಕೂಡಿದುದೂ, ಶ್ರೇಷ್ಠವಾದ ಅಶ್ವಗಳೊಡನೆ ಕೂಡಿದುದೂ, ಪುಂರೂಪವಾದುದೂ ಆದ ಪುತ್ರರನ್ನೂ ಮತ್ತು ವಿಶ್ವಪೋಷಕವಾದ ಧನವನ್ನೂ ಸಂಪಾದಿಸಿಕೊಡಲಿ. ಘನತೆಯನ್ನು ಹೊಂದಿದ ಈ ಅಶ್ವವು ನಮಗೆ ಪಾಪರಹಿತವಾದ ಸ್ಥಿತಿಯನ್ನುಂಟುಮಾಡಲಿ. ಹವಿಸ್ಸಿನ ರೂಪದಲ್ಲಿ ಅರ್ಪಿತವಾಗುವ ಈ ಅಶ್ವವು ನಮಗೆ ಬಲವನ್ನೂ ಒದಗಿಸಿಕೊಡಲಿ.

**English Translation**

May this horse bring to us all-sustaining wealth, with abundance of cows, of excellent horses, and of male offspring: may the spirited steed bring us exemption from wickedness: may this horse, offered in oblation, procure for us bodily vigor.

**ವಿಶೇಷವಿಷಯಗಳು**

ಉಪಾಕರಣಕಾಲದಲ್ಲಿ ಯಜ್ಞಾಶ್ವವು ಅವಘ್ರಾಣವನ್ನು ಮಾಡದಿದ್ದಲ್ಲಿ ಆಗ ಸುಗವ್ಯಂ ನೋ ವಾಜೀ- ಸ್ವಶ್ವ್ಯಂ ಎಂಬ ಈ ಋಕ್ಕನ್ನು ಯಜಮಾನನಿಂದ ಹೇಳಿಸಬೇಕೆಂದು ಆಶ್ವಲಾಯನಶ್ರೌತಸೂತ್ರದಲ್ಲಿ ಸುಗವ್ಯಂ ನೋ ವಾಜೀ|ಸ್ವಶ್ವ್ಯಮಿತಿ ಯಜಮಾನಂ ವಾಚಯೇತ್ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೧೦-೮).

ಈ ಋಕ್ಕಿನಲ್ಲಿ ಎರಡು ಅಂಶಗಳು ಗಮನಾರ್ಹವಾದವು. ಮೊದಲನೆಯದು ಅಶ್ವಮೇಧದ ಫಲವು. ಎರಡ ನೆಯದು ಆ ಫಲವು ಸತ್ಕರ್ಮದೊಡನೆ ಕೂಡಿರಬೇಕು. ಕರ್ಮದಲ್ಲಿ ವ್ಯತ್ಯಾಸವಾದರೆ ಆಗ ಫಲವು ಕೈಗೂಡುವುದಿಲ್ಲ ಆದುದರಿಂದ ಮೊದಲು ಗವಾದಿಗಳಿಂದ ಕೂಡಿದ ಧನವನ್ನೂ ಪ್ರೀತಿಸಂಪತ್ತನ್ನೂ ಕ್ಷಾತ್ರಶಕ್ತಿಯನ್ನೂ ಪ್ರಾರ್ಥಿಸಿ ಅದರ ಜೊತೆಯಲ್ಲಿಯೇ, ಅನಾಗಾಸ್ತ್ವಂ ಕೃಣೋತು ಪಾಪರಹಿತರನ್ನಾಗಿ ಮಾಡಲಿ ಎಂದೂ ಸಹ ಪ್ರಾರ್ಥಿಸಿದೆ ಅಶ್ವಮೇಧವನ್ನು ನೆರವೇರಿಸುವುದರಿಂದ ಲಭಿಸತಕ್ಕ ಫಲವನ್ನು ಈ ರೀತಿ ವರ್ಣಿಸಿದೆ.

> ಆಸ್ಯ ಯಜಮಾನಸ್ಯ ವೀರೋ ಜಾಯತಾಮಿತಿ | ಯಜಮಾನಸ್ಯೈವ ಪ್ರಜಾಯಾಂ ವೀರ್ಯಂ ದಧಾತಿ ತಸ್ಮಾತ್ಪುರೇಜಾನಸ್ಯ ವೀರೋ ಜಜ್ಞೇ | ನಿಕಾಮೇ ನಿಕಾಮೇ ನಃ ಪರ್ಜನ್ಯೋ ವರ್ಷತ್ವಿತಿ | ನಿಕಾಮೇ ನಿಕಾಮೇ ವೈ ತತ್ರ ಪರ್ಜನ್ಯೋ ವರ್ಷತಿ ಯತ್ರೈತೇನ ಯಜ್ಞೇನ ಯಜಂತೇ ಫಲವತ್ಯೋ ನ ಓಷಧಯಃ ಪಚ್ಯಂತಾಮಿತಿ ಫಲವತ್ಯೋ ವೈ ತತ್ರೌಷಧಯಃ ಪಚ್ಯಂತೇ ಯತ್ರೈತೇನ ಯಜ್ಞೇನ ಯಜಂತೇ ಯೋಗಕ್ಷೇಮೋ ನಃ ಕಲ್ಪತಾಮಿತಿ ಯೋಗ ಕ್ಷೇಮೋ ವೈ ತತ್ರ ಕಲ್ಪತೇ ಯತ್ರೈತೇನ ಯಜ್ಞೇನ ಯಜಂತೇ ತಸ್ಮಾದ್ಯತ್ರೈತೇನ ಯಜ್ಞೇನ ಯಜಂತೇ ಕ್ಲೃಪ್ತಃ ಪ್ರಜಾನಾಂ ಯೋಗಕ್ಷೇಮೋ ಭವತಿ ||
>
> (ಶ. ಬ್ರಾ. ೧೩-೧-೯-೯ ರಿಂದ ೧೦)

ಇದೇ ಅಭಿಪ್ರಾಯವು ತೈ. ಬ್ರಾ. ೩-೮-೧೩-೩ ರಲ್ಲಿಯೂ ಉಕ್ತವಾಗಿರುವುದು ಅಶ್ವಮೇಧವನ್ನು ನೆರವೇರಿಸಿದವನಿಗೆ ವೀರ್ಯವಂತನಾದ ಪುತ್ರನು ಉತ್ಪನ್ನನಾಗುವುದು ಸಿದ್ಧವಾದುದರಿಂದ ಈ ಯಜಮಾನನಿಗೂ ಸಹ ವೀರ್ಯವಂತನಾದ

ಪುತ್ರನು ಉತ್ಪನ್ನನಾಗಲಿ. ಮತ್ತು ಇಂತಹ ಯಜಮಾನನಿಗೆ ಪರ್ಜನ್ಯನು ಮಳೆಯನ್ನು ಸುರಿಸಿ ವೃಕ್ಷಾದಿಗಳನ್ನು ಫಲಭರಿತವಾಗುವಂತೆ ಮಾಡುತ್ತಾನೆ. ಮತ್ತು ಯಜಮಾನನ ಐಶ್ವರ್ಯಕ್ಕೆ ಯಾವ ಚ್ಯುತಿಯೂ ಇಲ್ಲದೆ ಸಮಸ್ತ ಸಂಪತ್ತೂ ಸುರಕ್ಷಿತವಾಗಿರುತ್ತದೆ. ಆದುದರಿಂದ ಈ ಅಶ್ವಮೇಧವನ್ನು ನೆರವೇರಿಸಿ ದವರಿಗೆ ಪುತ್ರಸಂಪತ್ತೂ ಫಲ ಸಂಪತ್ತೂ ಲಭಿಸಿ ಸಕಲವಿಧವಾದ ಐಶ್ವರ್ಯಗಳೂ ಸುರಕ್ಷಿತವಾಗಿರುವುವು, ಎಂಬುದು ಸಿದ್ಧವಾದುದರಿಂದ ಅವೆಲ್ಲ ವನ್ನೂ ಇಲ್ಲಿಯೂ ಪ್ರಾರ್ಥಿಸಿದೆ.

ಕ್ಷತ್ರಂ—ಕ್ಷತ್ರಂ ಬಲಂ ಕ್ಷಾತ್ರಂ ತೇಜಃ । ಎಂದು ಈ ಪದಕ್ಕೆ ಮೊದಲು ಸಾಮಾನ್ಯವಾಗಿ ಬಲ.ವೆಂದರ್ಥ ಮಾಡಿ ಅನಂತರ ಕ್ಷಾತ್ರತೇಜಸ್ಸೆಂದು ಆ ಬಲದ ವೈಶಿಷ್ಟ್ಯವನ್ನು ತಿಳಿಸಿದೆ. ಅಶ್ವಮೇಧವನ್ನು ನೆರವೇರಿಸುವುದಕ್ಕೂ ಸಹ ಪೂರ್ಣವಾದ ಕ್ಷಾತ್ರತೇಜಸ್ಸಿರಬೇಕು ಮತ್ತು ಅಶ್ವಮೇಧದ ಫಲವೂ ಕ್ಷಾತ್ರತೇಜಸ್ಸೇ ಆಗುತ್ತದೆ. ಕ್ಷಾತ್ರ ತೇಜಸ್ಸಿಲ್ಲದವನಿಗೆ ಅಶ್ವಮೇಧದ ಅರ್ಹತೆಯೇ ಇರುವುದಿಲ್ಲ. ಅವನಿಗೆ ಮೊದಲಿದ್ದ ಸ್ಥಾನವೂ ಲುಪ್ತವಾಗುತ್ತದೆ.

> ರಾಷ್ಟ್ರಂ ವಾ ಅಶ್ವಮೇಧಃ । ರಾಷ್ಟ್ರೇ ಖಲು ವಾ ಏತೇ ವ್ಯಾಯಚ್ಛಂತೇ । ಯೇಽಶ್ವಂ ಮೇಧ್ಯಗ್ಂ ರಕ್ಷಂತಿ । ತೇಷಾಂ ಯ ಉದೃಚಂ ಗಚ್ಛಂತಿ । ರಾಷ್ಟ್ರಾದೇವ ತೇ ರಾಷ್ಟ್ರಂ ಗಚ್ಛಂತಿ । ಅಥ ಯ ಉದೃಚಂ ನ ಗಚ್ಛಂತಿ । ರಾಷ್ಟ್ರಾದೇವ ತೇ ವ್ಯವಚ್ಛಿದ್ಯಂತೇ । ಪರಾ ವಾ ಏಷ ಸಿಚ್ಯತೇ । ಯೋಽಬಲೋಽಶ್ವಮೇಧೇನ ಯಜತೇ ಯದಮಿತ್ರಾ ಅಶ್ವಂ ವಿಂದೇರನ್ । ಹನ್ಯೇತಾಸ್ಯ ಯಜ್ಞಃ ॥
>
> (ತೈ. ಬ್ರಾ. ೩-೮-೯-೪, ೫)

ಅಶ್ವಮೇಧವು ವೈಯಕ್ತಿಕವಾದ ಯಜ್ಞವಲ್ಲ. ಇದು ರಾಷ್ಟ್ರಶಕ್ತಿಯ ಚಿಹ್ನವು. ರಾಷ್ಟ್ರಶಕ್ತಿಯನ್ನು ಪ್ರಕಟಿಸ ತಕ್ಕದ್ದು. ರಾಷ್ಟ್ರವನ್ನು ರಕ್ಷಿಸಲು ಯಾವ ರಾಜನಿಗೆ ಶಕ್ತಿಯಿದೆಯೋ ಅವನು ಈ ಯಜ್ಞವನ್ನು ನೆರವೇರಿಸತಕ್ಕದ್ದು. ಯಜ್ಞಕಾಲದವರೆಗೂ ಈ ಅಶ್ವದ ರಕ್ಷಣೆಗೆ ಸಮರ್ಥರಾಗಿರತಕ್ಕ ಬಲವುಳ್ಳವನಾಗಿರಬೇಕು. ಒಂದು ವೇಳೆ ಕ್ಷತ್ರಿಯ ನಿಗೆ ಅಂತಹ ಬಲವಿಲ್ಲದೆ ಪರರಾಜರು ಅಶ್ವವನ್ನು ಹಿಡಿದ ಪಕ್ಷದಲ್ಲಿ ಅಂತಹ ಕ್ಷತ್ರಿಯನ ಯಜ್ಞವು ವಿಫಲವಾಗಿ ಅವನಿಗೆ ಪದಚ್ಯುತಿಯಾಗುವುದು ಖಂಡಿತ ಎಂದು ಕ್ಷತ್ರದ ಆವಶ್ಯಕತೆಯನ್ನು ಹೇಳಿದೆ. ಇದು ಪೂರ್ಣವಾಗಿ ಕ್ಷತ್ರಿಯನ ಬಲದೊಡನೆ ತಾದಾತ್ಮ್ಯವನ್ನೇ ಹೊಂದಿರುವುದರಿಂದ ಇದರ ಫಲವೂ ಸಹ ಕ್ಷಾತ್ರತೇಜಸ್ಸಿನಿಂದಲೇ ಕೂಡಿರುವುದು.

(ಶ. ಬ್ರಾ. ೧೩-೧-೬-೩)

> ಅಧಿಪತಿರಸ್ಯಧಿಪತಿಂ ಮಾ ಕುರ್ವಧಿಪತಿರಹಂ ಪ್ರಜಾನಾಂ ಭೂಯಾಸಮಿತ್ಯಾಹ । ಅಧಿಪತಿ-ಮೇವೈನಗ್ಂ ಸಮಾನಾನಾಂ ಕರೋತಿ ॥
>
> (ತೈ. ಬ್ರಾ. ೩-೯-೧೬-೨)

ಎಲೈ ಮೇಧ್ಯಾಶ್ವವೇ, ನೀನು ಯಜ್ಞಕರ್ತರಿಗೆಲ್ಲಾ ಅಧಿಪತಿಯಾಗಿದ್ದೀಯೆ. ನಿನ್ನ ಅನುಗ್ರಹದಿಂದ ನಾನೂ ಸಹ ನನ್ನ ಪ್ರಜೆಗಳಿಗೆಲ್ಲಾ ಅಧಿಪತಿಯಾಗುವಂತಾಗಲಿ ಎಂದು ಪ್ರಾರ್ಥಿಸಿರುವಂತೆ ಇಲ್ಲಿಯೂ ಸಹ ಕ್ಷತ್ರಂ ನೋ ವನತಾಂ ಎಂದು ಪ್ರಾರ್ಥಿಸಿದೆ.

ಅನಾಗಾಸ್ತ್ವಂ ಕರೋತು—ಪಾಪರಹಿತವಾಗಿರುವಂತೆ ಮಾಡಲಿ. ಅಶ್ವಮೇಧವು ಬಹಳದುಸ್ತರವಾದ ಕರ್ಮವಾದುದರಿಂದ ಆ ಕರ್ಮದಲ್ಲಿ ಲೋಪವು ಸುಲಭವಾಗಿ ಸಂಭವಿಸಬಹುದು.

ಪ್ರ ವಾ ಏಷ ಏಭ್ಯೋ ಲೋಕೇಭ್ಯಶ್ಚ್ಯವತೇ । ಯೋಽಶ್ವಮೇಧೇನ ಯಜತೇ ।

ಈ ಯಾಗದ ನಿರ್ವಹಣೆಯಲ್ಲಿ ಅನೇಕ ಅಪರಾಧಗಳು ಸಂಭವಿಸಬಹುದಾದುದರಿಂದ ಅದನ್ನು ತಪ್ಪಿಸುವುದಕ್ಕಾಗಿ ಅಗ್ನೀಯಾದಿ ಪಶುತ್ರಯಾಲಂಭನದಿಂದ ಪರಿಹಾರವನ್ನು ಪಡೆಯಬೇಕೆಂದಿದೆ. ಅದೂ ಅಲ್ಲದೇ ಮೃಗಾರೇಷ್ಟಿಯೆಂದು ಪ್ರಸಿದ್ಧವಾದ ಆಹುತಿಗಳಿಗೆ ಯಾಜ್ಯಾರೂಪವೂ ಪುರೋನುವಾಕ್ಯಾರೂಪವೂ ಆದ ಮಂತ್ರಗಳಲ್ಲಿ ಪಾಪಪ್ರಾಯಶ್ಚಿತ್ತವನ್ನೂ ಪ್ರಾರ್ಥಿಸಿದೆ.

ಅಗ್ನೇರ್ಮನ್ವೇ ಪ್ರಥಮಸ್ಯ ಪ್ರಚೇತಸೋ .... .... .... .... ಸ ನೋ ಮುಂಚತ್ವಂಹಸಃ ॥

ಇತ್ಯಾದಿಯಾಗಿ ಯಜಮಾನರನ್ನು ಪಾಪರಹಿತರನ್ನಾಗಿಮಾಡಬೇಕೆಂದು ಅಗ್ನ್ಯಾದಿಗಳನ್ನು ಪ್ರಾರ್ಥಿಸಿದೆ.

(ತೈ. ಸಂ. ೪-೭-೧೫)

ವ್ಯಾಕರಣಪ್ರಕ್ರಿಯಾ

**ಸುಗವ್ಯಮ್**—ಶೋಭನಾನಾಂ ಗವಾಂ ಸಮೂಹಃ ಸುಗವ್ಯಮ್. **ಖಲ ಗೋರಥಾತ್** (ಪಾ. ಸೂ ೪-೨-೫೦) ಎಂಬುದರಿಂದ ಸಮೂಹಾರ್ಥದಲ್ಲಿ ಯತ್ ಪ್ರತ್ಯಯ. **ವಾಂತೋಯಿಪ್ರತ್ಯಯೇ** ( ಪಾ. ಸೂ. ೬-೧-೭೯) ಎಂಬುದರಿಂದ ಅವಾದೇಶ. **ಯತೋಽನಾವಃ** (ಪಾ. ಸೂ ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಾದಿ ಸಮಾಸದಲ್ಲಿ ಉತ್ತರಪದ ಪ್ರಕೃತಿಸ್ವರ ಛಾಂದಸವಾಗಿ ಬರುತ್ತದೆ. ಅಥವಾ ಸಮೂಹಾರ್ಥದಲ್ಲಿ ಅಣ್ ಪ್ರಾಪ್ತವಾದರೆ **ಸರ್ವತ್ರ ಗೋರಜಾದಿಪ್ರತ್ಯಯಪ್ರಸಂಗೇ** (ಕಾ. ೪-೩-೧೬೦) ಎಂಬುದರಿಂದ ಯತ್ ಪ್ರತ್ಯಯ. ಯದಂತ ಉತ್ತರಪದವಿರುವಾಗ **ಆದ್ಯುದಾತ್ತಂದ್ವ್ಯಚ್ಛಂದಸಿ** (ಪಾ. ಸೂ. ೬-೨-೧೧೯) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ಸ್ವಶ್ವ್ಯಮ್**—ಹಿಂದಿನಂತೇ ಬಹುವ್ರೀಹಿಸಮಾಸವಾದಾಗ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಪುಂಸಃ**—ಷಷ್ಠೀಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** ( ಪಾ. ಸೂ. ೬-೧-೧೬೮ ) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವಿಶ್ವಾಪುಷಮ್**—ಪುಷ ಪುಷ್ಟೌ ಧಾತು. ಕ್ವಿಪ್‌ಪ್ರತ್ಯಯ **ಅನ್ಯೇಷಾಮಪಿದೃಶ್ಯತೇ** ( ಪಾ. ಸೂ. ೬-೩-೧೩೭) ಎಂಬುದರಿಂದ ಸಂಹಿತಾಕಾಲದಲ್ಲಿ ಪೂರ್ವಪದಕ್ಕೆ ದೀರ್ಘ ಬರುತ್ತದೆ. **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅನಾಗಾಸ್ತ್ವಮ್**—ನ ವಿದ್ಯತೇ ಆಗಃ ಯಸ್ಯ ಅನಾಗಃ ತಸ್ಯಭಾವಃ ಅನಾಗಾಸ್ತ್ವಮ್. **ತಸ್ಯಭಾವಸ್ತ್ವತಲೌ** (ಪಾ. ಸೂ. ೫-೧-೧೧೯) ಎಂಬುದರಿಂದ ತ್ವಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತಸ್ವರ ಬರುತ್ತದೆ.

**ವನತಾಮ್**—ವನ ಸಂಭಕ್ತೌ ಧಾತು. ಲೋಟ್. ಪ್ರಥಮಪುರುಷಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.



# ನೂರ ಅರವತ್ತಮೂರನೆಯ ಸೂಕ್ತವು

ಯದಕ್ರಂದ ಇತಿ ತ್ರಯೋದಶರ್ಚಂ ಸಪ್ತಮಂ ಸೂಕ್ತಂ ದೈರ್ಘತಮಸಂ ತ್ರೈಷ್ಟುಭಂ । ಅಶ್ವಸ್ಯ ಸ್ತೂಯಮಾನತ್ವಾತ್ತದ್ದೇವತ್ಯಂ । ಯದಕ್ರಂದಃ ಸಪ್ತೋನೇತ್ಯನುಕ್ರಮಣಿಕಾ ॥ ಆಶ್ವಮೇಧಿಕೇ ಮಧ್ಯ-ಮೇಽಹನ್ಯುಪಾಕರಣಾಯೋವಸ್ಥಿತಮಶ್ವಮಾದ್ಯಾಭಿರೇಕಾದಶಭಿಃ ಸ್ತೌತಿ । ತಥಾ ಚ ತ್ರೀಣಿ ಸುತ್ಯಾನೀತಿ ಖಂಡೇ ಸೂತ್ರಿತಂ । ತಮವಸ್ಥಿತಮುಪಾಕರಣಾಯ ಯದಕ್ರಂದ ಇತ್ಯೇಕಾದಶಭಿಃ ಸ್ತೌತ್ಯಪ್ರಣುವನ್ । ಆ. ೧೦-೮ । ಇತಿ ॥

ಅನುವಾದವು—ಯದಕ್ರಂದಃ ಎಂಬ ಈ ಸೂಕ್ತವು ಇಪ್ಪತ್ತೆರಡನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಹದಿಮೂರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಉಚಥ್ಯಪುತ್ರನಾದ ದೀರ್ಘತಮಸ್ಸೆಂಬುವನು ಋಷಿಯು. ತ್ರಿಷ್ಟುಪ್‌ಛಂದಸ್ಸು ಈ ಸೂಕ್ತದಲ್ಲಿ ಅಶ್ವವನ್ನು ಸ್ತುತಿಸಿರುವುದರಿಂದ ಅಶ್ವಸ್ತುತಿಯೇ ಈ ಸೂಕ್ತಕ್ಕೆ ದೇವತೆಯು. ಅನುಕ್ರಮಣಿಕೆಯಲ್ಲಿ ಯದಕ್ರಂದಃ ಸಪ್ತೋನೇತಿ ಎಂದು ಹೇಳಿರುವುದು. ಅಶ್ವಮೇಧ ಯಜ್ಞದಲ್ಲಿ ಮಧ್ಯದ ದಿವಸ ಮಾಡಬೇಕಾಗಿರುವ ಉಪಾಕರಣಕರ್ಮದಲ್ಲಿ ಅಲ್ಲಿಗೆ ತಂದು ನಿಲ್ಲಿಸಿರುವ ಅಶ್ವವನ್ನು ಈ ಸೂಕ್ತದ ಮೊದಲಿನ ಹನ್ನೊಂದು ಋಕ್ಕುಗಳಿಂದ ಸ್ತೋತ್ರಮಾಡಬೇಕೆಂದು ಆಶ್ವಲಾಯನಶ್ರೌತಸೂತ್ರದ—ತಥಾ ಚ ತ್ರೀಣಿ ಸುತ್ಯಾನಿ ಎಂಬ ಖಂಡದ ತಮವಸ್ಥಿತಮುಪಾಕರಣಾಯ ಯದಕ್ರಂದ ಇತ್ಯೇಕಾದಶಭಿಃ ಸ್ತೌತ್ಯಪ್ರಣುವನ್ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೧೦-೮).

॥ ಓಂ ॥

## ಸೂಕ್ತ—೧೬೩

॥ ಮಂಡಲ—೧ ॥ ಅನುವಾಕ—೨೨ ॥ ಸೂಕ್ತ—೧೬೩ ॥

॥ ಅಷ್ಟಕ—೨ ॥ ಅಧ್ಯಾಯ—೩ ॥ ವರ್ಗ—೧೧, ೧೨; ೧೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೩ ॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—ಅಶ್ವಸ್ತುತಿಃ ॥

॥ ಛಂದಃ—ತ್ರಿಷ್ಟುಪ್ ॥

ಸಾಯಣಭಾಷ್ಯಂ

ಯದಕ್ರಂದಃ ಪ್ರಥಮಂ ಜಾಯಮಾನ ಉದ್ಯನ್ತ್ಸಮುದ್ರಾದುತ ವಾ ಪುರೀಷಾತ್ ।
ಶ್ಯೇನಸ್ಯ ಪಕ್ಷಾ ಹರಿಣಸ್ಯ ಬಾಹೂ ಉಪಸ್ತುತ್ಯಂ ಮಹಿ ಜಾತಂ ತೇ ಅರ್ವನ್ ॥ ೧ ॥

ಪದಪಾಠ

ಯತ್ । ಅಕ್ರಂದಃ । ಪ್ರಥಮಂ । ಜಾಯಮಾನಃ । ಉತ್ಽಯನ್ । ಸಮುದ್ರಾತ್ । ಉತ । ವಾ । ಪುರೀಷಾತ್ ।
ಶ್ಯೇನಸ್ಯ । ಪಕ್ಷಾ । ಹರಿಣಸ್ಯ । ಬಾಹೂ ಇತಿ । ಉಪಽಸ್ತುತ್ಯಂ । ಮಹಿ । ಜಾತಂ । ತೇ । ಅರ್ವನ್ ॥೧॥

ಸಾಯಣಭಾಷ್ಯಂ

ಹೇ ಅರ್ವನ್ನರಣಕುಶಲಾಶ್ವ ತೇ ತವ ಜಾತಂ ಜನ್ಮ ಜನನಮುಪಸ್ತುತ್ಯಂ । ಉಪೇತ್ಯ ಸರ್ವೈಃ ಸ್ತೋತವ್ಯಂ ॥ ಸ್ತೌತೇರೇತಿಸ್ತುಶಾಸ್ವಿತಿ ಕ್ಯಪ್ । ತತಸ್ತುಕ್ ॥ ಕಥಂ ಸ್ತುತ್ಯತ್ವಮಿತಿ ಉಚ್ಯತೇ । ಯದ್ಯ-ಸ್ಮಾತ್ಸಮುದ್ರಾತ್ । ಅಂತರಿಕ್ಷನಾಮೈತತ್ । ಉದಕಸಮುಂದನಾಪಾದಾನಾದ್ಯಕ್ಷಗಂಧರ್ವಾದಿಸಂಮೋದ-ನಾಧಿಕರಣಾದ್ವಾಂತರಿಕ್ಷಾತ್ಪ್ರಥಮಂ ಪೂರ್ವಂ ಜಾಯಮಾನ ಉತ್ಪನ್ನಃ । ಯದ್ವಾ । ಸಮುದ್ರ ಆದಿತ್ಯಃ ಸಮುಂದನಾದ್ವೃಷ್ಟ್ಯಾ । ತಸ್ಮಾದ್ವಾ ಜಾಯಮಾನಃ । ಸೂರಾದಶ್ವಂ ವಸವೋ ನಿರತಷ್ಟೇತಿ ವಕ್ಷ್ಯಮಾಣ-ತ್ವಾತ್ । ಉತ ವಾಥವಾ ಪುರೀಷಾತ್ ಸರ್ವಕಾಮಾನಾಂ ಪೂರಕಾದುದಕಾತ್ಪ್ರಥಮಮುದ್ಯ ಙ್ಜಾಯ-ಮಾನಃ । ಸ ತಾದೃಶಸ್ತ್ವಂ ಯದ್ಯಸ್ಮಾದಕ್ರಂದಃ । ಮಹಾಶಬ್ದಮಕರೋರ್ಯಜಮಾನಮನುಗ್ರಹೀತುಂ । ಕಿಂಚ ತೇ ಪಕ್ಷಾ ಪತನಸಾಧನೌ ಪಕ್ಷೌ ಶ್ಯೇನಸ್ಯ ಪಕ್ಷಾವಿವ । ತೌ ಯಥಾ ಶೀಘ್ರಪತನಸಾಧನೌ ತಾದೃಶಾ-ವಿತ್ಯರ್ಥಃ । ತವ ಬಾಹೂ ಹರಿಣಸ್ಯ ಬಾಹೂ ಇವ । ತೌ ಯಥಾ ವೇಗವಂತೌ ತಾದೃಶಾವಿತ್ಯರ್ಥಃ । ಯಸ್ಮಾದೇವಂ ತಸ್ಮಾತ್ತೇ ಜನ್ಮ ಸ್ತುತ್ಯಮಿತ್ಯರ್ಥಃ ॥

ಪ್ರತಿಪದಾರ್ಥ

ಅರ್ವನ್—ಎಲೈ ಮೇಧ್ಯಾಶ್ವವೇ । ಯತ್—ಯಾವ ಕಾರಣದಿಂದ । (ತ್ವಂ—ನೀನು) । ಪ್ರಥಮಂ—ಪೂರ್ವದಲ್ಲಿ । ಸಮುದ್ರಾತ್—ಅಂತರಿಕ್ಷದಿಂದಾಗಲಿ ಅಥವಾ ಆದಿತ್ಯನಿಂದಾಗಲಿ । ಜಾಯಮಾನಃ--ಉತ್ಪನ್ನನಾಗಿ । ಉ ವಾ—ಅಥವಾ । ಪುರೀಷಾತ್—ಉದಕದಿಂದಾಗಲಿ । ಉದ್ಯನ್—ಉತ್ಪನ್ನನಾಗಿ । ಅಕ್ರಂದಃ—ಹೇಷಾರವವನ್ನುಂಟುಮಾಡಿದೆಯೋ ಆದರಿಂದಲೂ, ಮತ್ತು । (ಯತ್—ಯಾವ ಕಾರಣದಿಂದ) । ಪಕ್ಷಾ—ನಿನ್ನ ರೆಕ್ಕೆಗಳು ।

ಶ್ಯೇನಸ್ಯ—ಗಿಡುಗದ ರೆಕ್ಕೆಗಳಂತೆಯೂ । ಬಾಹೂ — ಅಂಗಗಳು (ಕಾಲುಗಳು) । ಹರಿಣಸ್ಯ—ಜಿಂಕೆಯ ಕಾಲುಗಳಂತೆಯೂ ಇವೆಯೋ (ಅದ್ದರಿಂದ) । ತೇ—ನಿನ್ನ । ಮಹಿ—ಮಹತ್ತಾದ । ಜಾತಂ—ಜನ್ಮವು । ಉಪಸ್ತುತ್ಯಂ—ಸ್ತೋತ್ರಾರ್ಹವಾದುದು ॥

### ಭಾವಾರ್ಥ

ಎಲೈ ಮೇಧ್ಯಾಶ್ವವೇ, ನೀನು ಪ್ರಥಮದಲ್ಲಿ ಅಂತರಿಕ್ಷಸ್ಥನಾದ ಆದಿತ್ಯನಿಂದಾಗಲಿ ಅಥವಾ ಉದಕದಿಂದಾಗಲಿ ಉತ್ಪನ್ನನಾಗಿ ನಿನ್ನ ಆಕರ್ಷಕವಾದ ಹೇಷಾರವವನ್ನುಂಟುಮಾಡಿದೆಯೋ ಅದರಿಂದದಲೂ ಮತ್ತು ನಿನ್ನ ರೆಕ್ಕೆಗಳು ಗಿಡುಗದ ರೆಕ್ಕೆಯಂತೆಯೂ ಕಾಲುಗಳು ಜಿಂಕೆಯ ಕಾಲುಗಳಂತೆಯೂ (ವೇಗವುಳ್ಳದ್ದಾಗಿ) ಇರುವುದರಿಂದಲೂ ಸಹ ನಿನ್ನ ಮಹತ್ತಾದ ಜನ್ಮವು ಸ್ತುತ್ಯರ್ಹವಾದುದು.

### English Translation

The great birth, O Horse, is to be glorified; whether first springing from the firmament or from the water, inasmuch as you have neighed (auspiciously), for you have the wings of the falcon and the limbs of the deer.

### ಪ್ರತಿಪದಾರ್ಥ

ಈ ಋಕ್ಕಿನಲ್ಲಿ ಯಜ್ಞಾಶ್ವದ ಉತ್ಪತ್ತಿಯನ್ನೂ ಸ್ವರೂಪವನ್ನೂ ವರ್ಣಿಸಿ ಅದರ ಜನ್ಮದ ಮಹತ್ತ್ವವನ್ನು ಪ್ರಶಂಸಿಸಿದೆ. ಸಮುದ್ರಾತ್ ಉತ ವಾ ಪುರೀಷಾತ್ ಎಂದು ಅಶ್ವದ ಪ್ರಭವವನ್ನು ಅಂತರಿಕ್ಷದಿಂದಾಗಲಿ ಅಥವಾ ಉದಕದಿಂದಾಗಲಿ ಎಂದು ಹೇಳಿರುವುದರಿಂದ ಶ್ರುತಿಯಲ್ಲಿ ಈ ಎರಡು ವಿಧವಾದ ಉತ್ಪತ್ತಿಯೂ ವರ್ಣಿತವಾಗಿರಬೇಕೆಂದು ಗೊತ್ತಾಗುತ್ತದೆ. ಶ್ರುತಿವಾಕ್ಯಗಳನ್ನು ಪರಿಶೀಲಿಸಿದರೆ ಈ ಎರಡು ವಿಧವಾದ ಅಭಿಪ್ರಾಯಗಳಿಗೂ ಆಧಾರವು ದೊರೆಯುತ್ತದೆ.

> ಅಥ ಯೋ ಗರ್ಭೋಽಂತರಾಸೀತ್ । ಸೋಽಗ್ನಿರಸೃಜ್ಯತ ಸ ಯದಸ್ಯ ಸರ್ವಸ್ಯಾಗ್ರಮಸೃಜ್ಯತ ತಸ್ಮಾದಗ್ರಿರಗ್ರಿರ್ಹ ವೈ ತಮಗ್ನಿರಿತ್ಯಾಚಕ್ಷತೇ ಪರೋಽಕ್ಷಂ ಪರೋಕ್ಷಕಾಮಾ ಹಿ ದೇವಾ ಅಥ ಯದಶ್ರು ಸಂಕ್ಷರಿತಮಾಸೀತ್ಸೋಽಶ್ರುರಭವದಶ್ರುರ್ಹ ವೈ ತಮಶ್ವ ಇತ್ಯಾಚಕ್ಷತೇ ಪರೋಽಕ್ಷಂ ಪರೋಕ್ಷಕಾಮಾ ಹಿ ದೇವಾ ಅಥ ಯದರಸದಿವ ಸ ರಾಸಭೋಽಭವದಥ ಯಃ ಕಪಾಲೇ ರಸೋ ಲಿಪ್ತ ಆಸೀತ್ಸೋಽಜೋಽಭವದಥ ಯತ್ಕಪಾಲಮಾಸೀತ್ಸಾ ಪೃಥಿವ್ಯಭವತ್ ॥
>
> (ಶ. ಬ್ರಾ. ೬-೧-೧-೧೧)

ಪ್ರಜಾಪತಿಯು ಜಗತ್ಸೃಷ್ಟಿರೂಪದಿಂದ ವೃದ್ಧನಾಗಬೇಕೆಂದಿಚ್ಛಿಸಿದಾಗ ಅಪ್ಪಿನಿಂದ ಅಂಡವೂ ಅದರಿಂದ ಬ್ರಹ್ಮವೂ ಉತ್ಪನ್ನವಾಗಿ ಜಗದಾದಿಗೆ ಈ ಬ್ರಹ್ಮವೇ ಮೂಲವಾಯಿತು. (೬-೧-೧-೧೦). ಅಪ್ಪಿನಿಂದ ಉದ್ಭವವಾದ ಅಂಡವು ಸೃಷ್ಟಿಗಳಲ್ಲೆಲ್ಲಾ ಪ್ರಥಮವಾದುದರಿಂದ ಅದು ಅಗ್ರಿಯೆಂದು ಪ್ರಸಿದ್ಧವಾಯಿತು.

ಈ ಅಗ್ನಿಯನ್ನೇ ಪರೋಕ್ಷಕಾಮರಾದ ದೇವತೆಗಳು ಅಗ್ನಿಯೆಂದು ಸಂಬೋಧಿಸಿದರು. ಅಂಡದ ಸುತ್ತಲೂ ವ್ಯಾಪಿಸಿದ್ದ ಅಶ್ರುವನ್ನೇ ಪರೋಕ್ಷಕಾಮರಾದ ದೇವತೆಗಳು ಅಶ್ವವೆಂದು ಕರೆದರು. ಅಂಡವು ಭಿನ್ನವಾಗುವ ಕಾಲದಲ್ಲಿ ಆದ ಶಬ್ದವು ರಾಸಭವೆಂದು ಪ್ರಸಿದ್ಧವಾಯಿತು. ಅಂಡದ ಕಪಾಲದಲ್ಲಿ ಲಿಪ್ತವಾಗಿದ್ದ ರಸವು ಅಜವಾಯಿತು. (ಜನ್ಮವಿಲ್ಲದ್ದು) ಆ ಕಪಾಲವು ಪೃಥ್ವೀರೂಪದಲ್ಲಿ ಪರಿಣಮಿಸಿತು. ಎಂಬ ಈ ವರ್ಣನೆಯಲ್ಲಿ ವಿಶ್ವವ್ಯಾಪಕವಾದ ಅಪ್ಪಿನಿಂದ ಪ್ರಜಾಪತಿಯು ಈ ಅಶ್ವವನ್ನು ಸೃಷ್ಟಿಸಿದ ವಿವರವಿದೆ. ಇನ್ನೊಂದು ವರ್ಣನೆಯ ಪ್ರಕಾರ,

ಪ್ರಜಾಪತಿರ್ವಾ ಇದಮಗ್ರ ಆಸೀತ್ ...................... ನಿರಮಿಮೀತ ಮನಸಃ ಪುರುಷಂ ಚಕ್ಷುಷೋಽಶ್ವಂ ।

(ಶ. ಬ್ರಾ. ೭-೫-೨-೬)

ಈ ಅಶ್ವವು ಪ್ರಜಾಪತಿಯ ಚಕ್ಷುಸ್ಸಿನಿಂದ ಸೃಷ್ಟವಾಯಿತೆಂದಿದೆ.

ಪ್ರಜಾಪತಿಗೂ ಅಶ್ವಕ್ಕೂ ಸಂಬಂಧವನ್ನು ಹೇಳಿರುವಂತೆ ವರುಣನಿಗೂ ಅಶ್ವಕ್ಕೂ ಸಹ ಅತ್ಯಂತ ನಿಕಟವಾದ ಸಂಬಂಧವನ್ನು ಅನೇಕಕಡೆಗಳಲ್ಲಿ ವರ್ಣಿಸಿದೆ.

ವಾರುಣೋ ವಾ ಅಶ್ವಃ । ತಂ ದೇವತಯಾ ವ್ಯರ್ಧಯತಿ । ಯತ್ಪ್ರಾಜಾಪತ್ಯಂ ಕರೋತಿ । ನಮೋ ರಾಜ್ಞೇ ನಮೋ ವರುಣಾಯೇತ್ಯಾಹ । ವಾರುಣೋ ವಾ ಅಶ್ವಃ ।

(ತೈ. ಬ್ರಾ. ೩-೯-೧೬-೧)

ಎಂಬ ವಾಕ್ಯಕ್ಕೆ ಸಾಯಣರು ಅಶ್ವಸ್ಯಾಬ್ಯೋನಿತ್ವಾದ್ವರುಣಸ್ಯ ಚಾಪಾಂ ಪತಿತ್ವಾದಯಮಶ್ವೋ ವಾರುಣಃ । ಅಶ್ವವು ವಿಶ್ವವ್ಯಾಪಕವಾದ ಅಪ್ಪಿನಿಂದ ಜನಿಸಿರುದರಿಂದಲೂ, ವರುಣನು ಅಪ್ಪಿಗೆ ಒಡೆಯನಾದುದರಿಂದಲೂ ಯಜ್ಞಾಶ್ವವು ವರುಣದೇವತೆಗೆ ಸಂಬಂಧಿಸಿದುದು ಎಂದು ವಿವರಣೆಯನ್ನು ಹೇಳಿದ್ದಾರೆ. ಈ ವಾರುಣಾಶ್ವದ ರಹಸ್ಯಾರ್ಥವೇನು ಎಂಬ ವಿಷಯನ್ನು ವಿಮರ್ಶಿಸುತ್ತಾ ಶತಪಥಬ್ರಾಹ್ಮಣವನ್ನು ಆಂಗ್ಲಭಾಷೆಗೆ ಪರಿವರ್ತಿಸಿರುವ Eggeling ಎಂಬ ಪಂಡಿತನು ಈರೀತಿ ಹೇಳಿದ್ದಾನೆ.

Varuna's horse is none other than the fiery races who Pursues his diurnal course across the all-encompassing arch of heaven, the sphere of Varuna, the all-ruler. It is in the form of the horse that the Sun is thus lauded in the hymn. Rigveda 1—163, receited by the Hotri on the second Soma day of the Aswamedha."

(Sacred Books of the East. Vol. XL1V—P. XIX-XX )

ದ್ಯಾವಾಪೃಥಿವಿಗಳಿಗೆಲ್ಲಾ ಪ್ರಭುವಾದ ವರುಣನ ಈ ಅಶ್ವವು ಯಾವುದೆಂದರೆ, ತನ್ನ ದೈನಂದಿನದ ಪರಿಭ್ರಮಣವನ್ನು ಹೊಂದುತ್ತಿರುವ ಸೂರ್ಯನಲ್ಲದೇ ಬೇರೆಯಲ್ಲ. ಈ ಅಂಶವನ್ನೇ ಹೋತೃವಾದವನು ಅಶ್ವಮೇಧದ ಎರಡನೆಯ ದಿನ ಋ. ಸಂ. ೧-೧೬೩ನೇ ಸೂಕ್ತವನ್ನು ಪಠಿಸುತ್ತಾ (ಪ್ರಕೃತವಾದ ಸೂಕ್ತವು) ಅಶ್ವರೂಪದ ಆದಿತ್ಯನನ್ನು ಸ್ತುತಿಸುತ್ತಾನೆ. (cf. ಶ. ಬ್ರಾ. ೧೩-೫-೧-೧೭ರಿಂದ ೧೮). ಸಾಯಣರೂ ಸಹ ಪ್ರಕೃತವಾದ ಋಕ್ಕಿನ ಮುಂದಿನ ಋಕ್ಕಿದ

ಗಂಧರ್ವೋ ಅಸ್ಯ ರಶನಾಮಗೃಭ್ಣಾತ್ಸೂರಾದಶ್ವಂ ವಸವೋ ನಿರತಷ್ಟ ||

(ಋ. ಸಂ. ೧-೧೬೩-೨)

ಎಂಬ ವಾಕ್ಯವನ್ನುಹರಿಸಿ ಈ ಅಶ್ವದ ಮೂಲವು ಆದಿತ್ಯನೆಂದು ತೋರಿಸಿದ್ದಾರೆ.

ವರುಣನಿಗೂ ಪ್ರಜಾಪತಿಗೂ ಈ ಅಶ್ವದೊಡನೆ ಒಟ್ಟಿಗೆ ಇರತಕ್ಕ ಸಂಬಂಧವು ತೈತ್ತಿರೀಯ ಸಂಹಿತೆಯಲ್ಲಿ ಈರೀತಿ ವರ್ಣಿತವಾಗಿದೆ.

ಪ್ರಜಾಪತಿರ್ವರುಣಾಯಾಶ್ವಮನಯಥ್ಸ ಸ್ವಾಂ ದೇವತಾಮಾರ್ಛತ್ಸ ಪರ್ಯದೀರ್ಯತ ಸ ಏತಂ ವಾರುಣಂ ಚತುಷ್ಕಪಾಲಮಪಶ್ಯತ್ತಂ ನಿರವಪತ್ತತೋ ವೈ ಸ ವರುಣಪಾಶಾದಮುಚ್ಯತ ವರುಣೋ ವಾ ಏತಂ ಗೃಹ್ಣಾತಿ ಯೋಽಶ್ವಂ ಪ್ರತಿಗೃಹ್ಣಾತಿ ............................. ||

(ತೈ. ಸಂ. ೨-೩-೧೨-೧)

ಪ್ರಜಾಪತಿಯು ಈ ಅಶ್ವವನ್ನು ವರುಣನಲ್ಲಿಗೆ ಕರೆದುಕೊಂಡುಹೋದನು. ಆದರೆ ಆ ಅಶ್ವವು ತನ್ನ ಸ್ವಂತ ದೇವತೆಯಲ್ಲಿಗೇ (ಪ್ರಜಾಪತಿಯಲ್ಲಿಗೇ) ಹೋಯಿತು. ಆಗ ವರುಣನಿಗೆ ಖೇದವುಂಟಾದುದರಿಂದ ಪ್ರಜಾಪತಿಯು ವರುಣನನ್ನು ಉದ್ದೇಶಿಸಿ ಚತುಷ್ಕಪಾಲವನ್ನರ್ಪಿಸಿದನು. ಆಗ ಪ್ರಜಾಪತಿಯು ವರುಣನ ಪಾಶದಿಂದ ಮುಕ್ತನಾದನು. ಎಂಬುದಾಗಿ ವಿವರಿಸಿದೆ.

ಯದಕ್ರಂದಃ—ಮಹಾಶಬ್ದಮಕರೋಃ ದೊಡ್ಡ ಶಬ್ದವನ್ನು ಮಾಡಿದೆ. "ಅಥ ಯದರಸದಿವ ಸ ರಾಸಭೋಽಭವತ್" (ಶ. ಬ್ರಾ. ೬-೧-೭-೧೧) ಇತ್ಯಾದಿಯಾಗಿ ವರ್ಣಿತವಾಗಿರುವ ಅಂಶವನ್ನು ಹೇಳಿದೆ. ಇದನ್ನು ಮೇಲೆ ವಿವರಿಸಿದೆ.

ಪುರೀಷಾತ್—ಸರ್ವಕಾಮಾನಾಂ ಪೂರಕಾತ್ ಉದಕಾತ್। ಎಲ್ಲಾ ಇಷ್ಟಾರ್ಥಗಳನ್ನೂ ಪೂರೈಸತಕ್ಕ ಉದಕದಿಂದ ಎಂದರ್ಥ. ನಿರುಕ್ತಕಾರರು

ದೇವಾನಾಂ ಮಾನೇ ಪ್ರಥಮಾ ಅತಿಷ್ಠನ್ ಕೃಂತತ್ರಾದೇಷಾಮುಪರಾ ಉದಾಯನ್ ।
ತ್ರಯಸ್ತಪಂತಿ ಪೃಥಿವೀಮನೂಪಾ ದ್ವಾ ಬೃಬೂಕಂ ವಹತಃ ಪುರೀಷಂ ||

(ಋ. ಸಂ ೧೦-೨೭-೨೩)

ಎಂಬ ಋಕ್ಕನ್ನುದಹರಿಸಿ ಅಲ್ಲಿ ಪುರೀಷ ಶಬ್ದಕ್ಕೆ ಪುರೀಷಂ ಪೃಣಾತೇಃ ಪೂರಯತೇರ್ವಾ ತುಂಬು ಅಥವಾ ತೃಪ್ತಿಪಡಿಸು ಎಂಬರ್ಥವನ್ನು ಕೊಡತಕ್ಕ ಪೃ ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ತೋರಿಸಿದ್ದಾರೆ. (ನಿ. ೨-೨೨)

ಸಮುದ್ರಾತ್—ಅಂತರಿಕ್ಷದಿಂದ ಅಥವಾ ಆದಿತ್ಯನಿಂದ ಎಂದು ಈ ಶಬ್ದಕ್ಕೆ ಎರಡು ವಿಧವಾದ ಅರ್ಥವನ್ನು ಮಾಡಿದೆ. ಸಮುದ್ರಶಬ್ದಕ್ಕೆ ಅಂತರಿಕ್ಷವೆಂಬರ್ಥವು ಹೇಗೆ ಸಾಧ್ಯವೆಂಬುದನ್ನು ನಿರುಕ್ತಕಾರರ ವಾಕ್ಯಗಳನ್ನುದಹರಿಸಿ ಇದೇ ಭಾಗದ ಋ ಸಂ. ೧-೧೪೯-೪ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ವಿವರಿಸಿದೆ.

ಅಥವಾ, ಸಮುದ್ರಃ ಆದಿತ್ಯಃ ಸಮುಂದನಾತ್ ವೃಷ್ಟ್ಯಾ ವೃಷ್ಟಿಯಿಂದ ಎಲ್ಲವನ್ನೂ ತೋಯುವಂತೆ ಮಾಡುವುದರಿಂದ ಆದಿತ್ಯನಿಗೂ ಸಮುದ್ರವೆಂದು ಹೆಸರೆಂದು ಸಾಯಣರು ವಿವರಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

ಅಕ್ರಂದಃ—ಕ್ರದಿ ಆಹ್ವಾನೇ ರೋದನೇ ಚ. ಧಾತು. ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಇತಶ್ಚ. ಎಂಬುದರಿಂದ ಇಕಾರಲೋಪ. ಶಪ್ವಿಕರಣ. ಇದಿತೋ ನುಮ್ ಧಾತೋಃ (ಪಾ. ಸೂ. ೭-೧-೫೮) ಎಂಬುದರಿಂದ ಧಾತುವಿಗೆ ನುಮಾಗಮ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತ ವಾದುದರಿಂದ ಆದ್ಯುದಾತ್ತವಾಗುತ್ತದೆ.

ಜಾಯಮಾನಃ—ಜನೀ ಪ್ರಾದುರ್ಭಾವೇ ಧಾತು. ಲಟಿಗೆ ಶಾನಚಾದೇಶ. ಶ್ಯನ್ ವಿಕರಣ. ಜ್ಞಾಜನೋರ್ಜಾ (ಪಾ. ಸೂ. ೭-೩-೭೯) ಎಂಬುದರಿಂದ ಧಾತುವಿಗೆ ಜಾದೇಶ. ಆನೇಮುಕ್ (ಪಾ. ಸೂ. ೭-೨-೮೨) ಎಂಬುದರಿಂದ ಅದಂತಕ್ಕೆ ಮುಕಾಗಮ. ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಶ್ಯನ್‌ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಉದ್ಯನ್—ಉತ್ ಉಪಸರ್ಗ. ಇಣ್ ಗತೌ. ಧಾತು. ಲಟಿಗೆಶತ್ರಾದೇಶ. ಇಣೋಯಣ್ (ಪಾ. ಸೂ. ೬-೪-೮೧) ಎಂಬುದರಿಂದ ಧಾತುವಿಗೆ ಯಣಾದೇಶ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

ಪುರೀಷಾತ್—ಪೄ ಪಾಲನಪೂರಣಯೋಃ ಧಾತು. ಕೄಪೄವೃಭ್ಯಾಮೀಷನ್ (ಉ. ಸಾ ೪-೪೬೬) ಎಂಬುದರಿಂದ ಈಷನ್‌ಪ್ರತ್ಯಯ ಞ್ನಿತ್ಯಾದಿರ್ನಿತ್ಯಮ್ (ಪಾ. ಸೂ. ೬-೧-೧೯೭) ಎಂಬುದರಿಂಡ ಆದ್ಯುದಾತ್ತಸ್ವರ ಬರುತ್ತದೆ.

ಪಕ್ಷಾ—ಪಣ ವ್ಯವಹಾರೇ ಸ್ತುತೌ ಚ ಧಾತು. ಗೃಧಿಪಣ್ಯೋರ್ದಕೌ ಚ (ಉ. ಸೂ. ೩-೩೪೯) ಎಂಬುದರಿಂದ ಸ ಪ್ರತ್ಯಯ. ಧಾತುಣಕಾರಕ್ಕೆ ಕಕಾರಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಸುಪಾಂ ಸುಲುಕ್ ಎಂಬುದರಿಂದ ದ್ವಿವಚನಕ್ಕೆ ಆಕಾರಾದೇಶ.

ಉಪಸ್ತುತ್ಯಮ್—ಷ್ಟುಞ್ ಸ್ತುತೌ. ಧಾತು. ಏತಿಸ್ತುಶಾಸ್ (ಪಾ. ಸೂ. ೩-೧-೧೦೯) ಎಂಬುದರಿಂದ ಕ್ಯಪ್ ಪ್ರತ್ಯಯ. ಪಿತ್ತಾದುದರಿಂದ ಹ್ರಸ್ವಸ್ಯ ಪಿತಿ ಕೃತಿ ತುಕ್ (ಪಾ. ಸೂ. ೬-೧-೭೧) ಎಂಬುದರಿಂದ ತುಕಾಗಮ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ.

ಜಾತಮ್—ಜನೀ ಪ್ರಾದುರ್ಭಾವೇ. ಧಾತು. ಭಾವಾರ್ಥದಲ್ಲಿ ಕ್ತ ಪ್ರತ್ಯಯ. ಜನಸನಖನಾಂ ಸಞ್ಝಲೋಃ (ಪಾ. ಸೂ. ೬-೪-೪೨) ಎಂಬುದರಿಂದ ಧಾತುವಿಗೆ ಆತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೧ ॥



ಸಂಹಿತಾಪಾಠಃ

ಯಮೇನ ದತ್ತಂ ತ್ರಿತ ಏನಮಾಯುನಗಿಂದ್ರ ಏಣಂ ಪ್ರಥಮೋ ಅಧ್ಯ-
ತಿಷ್ಠತ್ ।
ಗಂಧರ್ವೋ ಅಸ್ಯ ರಶನಾಮಗೃಭ್ಣಾತ್ಸೂರಾದಶ್ವಂ ವಸವೋ ನಿರತಷ್ಟ ॥೨॥

ಪದಪಾಠಃ

ಯಮೇನ । ದತ್ತಂ । ತ್ರಿತಃ । ಏನಂ । ಅಯುನಕ್ । ಇಂದ್ರಃ । ಏನಂ । ಪ್ರಥಮಃ । ಅಧಿ । ಅತಿಷ್ಠತ್ ।
ಗಂಧರ್ವಃ । ಅಸ್ಯ । ರಶನಾಂ । ಅಗೃಭ್ಣಾತ್ । ಸೂರಾತ್ । ಅಶ್ವಂ । ವಸವಃ । ನಿಃ । ಅತಷ್ಟ ॥ ೨ ॥

ಸಾಯಣಭಾಷ್ಯಂ

ಯಮೇನ ನಿಯಾಮಕೇನಾಗ್ನಿನಾ ದತ್ತಮೇನಮಶ್ವಂ ತ್ರಿತಃ ಪೃಥಿವ್ಯಾದಿಷು ತ್ರಿಷು ಸ್ಥಾನೇಷು ವರ್ತಮಾನ ಸ್ತ್ರೀರ್ಣತಮೋ ವಾ ವಾಯುರಯುನಕ್ । ರಥೇ ಯೋಜಿತವಾನ್ । ಕಿಂಚೈನಮಶ್ವಮಿಂದ್ರಃ ಪ್ರಥಮಃ ಪ್ರತಮಃ ಪ್ರಕೃಷ್ಟತಮಃ । ಪ್ರಥಮ ಇತಿ ಮುಖ್ಯನಾಮ । ಅಧ್ಯತಿಷ್ಠತ್ । ಅಧಿಷ್ಠಿತವಾನ್ । ಅಸ್ಯ ಗಂಧರ್ವಃ ಸೋಮಃ । ಸೋಮೇನ ಸಮಯಾ ವಿಪೃಕ್ತ ಇತಿ ವಕ್ಷ್ಯಮಾಣತ್ವಾತ್ । ಸ ಚಾಸ್ಯಾಶ್ವಸ್ಯ ರಶನಾಂ ನಿಯಮನರಜ್ಜುಮಗೃಭ್ಣಾತ್ । ಅಗ್ರಹೀತ್ । ಈದೃಶೋಽಶ್ವಃ ಕುತಃ ಸಮುತ್ಪನ್ನ ಇತಿ ಚೇತ್ ಉಚ್ಯತೇ । ಹೇ ವಸವೋ ರಶ್ಮಯಃ ಯೂಯಂ. ಸೂರಾದಾದಿತ್ಯಾದಶ್ವಮೇವಂಮಹಾನುಭಾವಂ ನಿರತಷ್ಟ । ನಿಶ್ಶೇಷೇಣ ಸಾಧು ಸಂಪಾದಿತವಂತಃ । ಯದ್ವಾ । ವಸುಶಬ್ದೇನೋಕ್ತಾ ಏವ ಯಮಾದಯಃ ಪರಾಮೃ-ಶ್ಯಂತೇ । ಹೇ ವಸವಃ ಸ್ವಸ್ವವ್ಯಾಪಾರೇಣ ಸರ್ವಸ್ಯಾಚ್ಛಾದಯಿತಾರಃ ಯೂಯಂ ಸೂರಾದಾದಿತ್ಯಾದಶ್ವ-ಮೇನಂ ನಿರತಷ್ಟ । ಅತಕ್ಷತ । ನಿರಿತ್ಯೇಷ ಸಮಿತ್ಯೇತಸ್ಯ ಸ್ಥಾನೇ । ತಕ್ಷತಿಃ ಕರೋತಿಕರ್ಮಾ । ಸ ಚ ಕ್ರಿಯಾಸಾಮಾನ್ಯವಚನಃ । ಅತ್ರೌಚಿತ್ಯಾದ್ವಾರಣೇ ವರ್ತತೇ । ಸಮ್ಯಗ್ಧಾರಿತವಂತ ಇತ್ಯರ್ಥಃ ॥ ತಕ್ಷೇ-ರ್ಲಙಿ ಛಾಂದಸಃ ಶಪೋ ಲುಕ್ । ಸ್ಕೋಃ ಸಂಯೋಗಾದ್ಯೋರಿತಿ ಕಲೋಪಃ ॥

। ಪ್ರತಿಪದಾರ್ಥ ।

ಯಮೇನ—ಯಮನಿಂದ । ದತ್ತಂ—ಕೊಡಲ್ಪಟ್ಟ । ಏನಂ—ಈ ಅಶ್ವವನ್ನು । ತ್ರಿತಃ—ಪ್ರಥಿವ್ಯಾದಿ ಮೂರು ಸ್ಥಾನಗಳಲ್ಲಿ ಸಂಚರಿಸತಕ್ಕ ವಾಯುವು । ಅಯುನಕ್—ರಥಕ್ಕೆ ಸೇರಿಸಿದನು । ಏನಂ—ಈ ಅಶ್ವವನ್ನು । ಪ್ರಥಮಃ—ಶ್ರೇಷ್ಠನಾದ । ಇಂದ್ರಃ—ಇಂದ್ರನು । ಅಧ್ಯತಿಷ್ಠತ್—ಹತ್ತಿ ಕುಳಿತನು । ಗಂಧರ್ವಃ—ಸೋಮ ರಾಜನು । ಅಸ್ಯ— ಈ ಅಶ್ವದ । ರಶನಾಂ—ಲಗಾಮನ್ನು । ಅಗೃಭ್ಣಾತ್—ಹಿಡಿದನು । ವಸವಃ—ಸೂರ್ಯ ರಶ್ಮಿಗಳು ಅಥವಾ ಯಮಾದಿಗಳು । ಅಶ್ವಂ— ಈ ಅಶ್ವವನ್ನು । ಸೂರಾತ್—ಆದಿತ್ಯನಿಂದ । ನಿರತಷ್ಟ— ಸಂಪಾದಿಸಿದರು.

### ಭಾವಾರ್ಥ

ಯಮನಿಂದ ದತ್ತವಾದ ಈ ಅಶ್ವವನ್ನು ಪೃಥಿವ್ಯಾದಿಮೂರು ಸ್ಥಾನಗಳಲ್ಲಿ ಸಂಚರಿಸತಕ್ಕ ವಾಯುವು ರಥಕ್ಕೆ ಸೇರಿಸಿದನು. ಈ ಅಶ್ವವನ್ನು ಶ್ರೇಷ್ಠವಾದ ಇಂದ್ರನು ಹತ್ತಿ ಕುಳಿತನು. ಸೋಮರಾಜನು ಈ ಅಶ್ವದ ಲಗಾಮನ್ನು ಹಿಡಿದನು. ಸೂರ್ಯರಶ್ಮಿಗಳು ಅಥವಾ ಯಮಾದಿಗಳು ಈ ಅಶ್ವವನ್ನು ಆದಿತ್ಯನಿಂದ ಸಂಪಾದಿಸಿದರು.

### English Translation

Trita harnessed the horse which was given by Yama: Indra first mounted him, and Gandharva seized his reins. Vasus, you fabricated the horse from the sun.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಮೇಧ್ಯಾಶ್ವಕ್ಕೂ ಅಗ್ನಿಗೂ, ಹಾಗೆಯೇ ಇಂದ್ರಾದಿಗಳಿಗೂ ಇರತಕ್ಕ ಸಂಬಂಧವನ್ನು ತಿಳಿಸಿದೆ.

ಯಮೇನ ದತ್ತಂ— ಯಮೇನ ನಿಯಾಮಕೇನ ಅಗ್ನಿನಾ ಎಂದು ಯಮ ಶಬ್ದಕ್ಕೆ ಅಗ್ನಿಯೆಂದರ್ಥ ಮಾಡಿದೆ.

ಯಮೋ ಯಚ್ಛತೀತಿ ಸತಃ । ಅಗ್ನಿರಪಿ ಯಮ ಉಚ್ಯತೇ ।

(ನಿ. ೧೦-೧೯)

ನಿಯಮಿಸುವ ಸಾಮರ್ಥ್ಯವಿರುವುದರಿಂದ ಅಗ್ನಿಗೂ ಯಮನೆಂದು ಹೆಸರು ಎಂದು ನಿರುಕ್ತಕಾರರು ಹೇಳಿರುವರು.

ಯಮೋ ಹ ಜಾತೋ ಯಮೋ ಜನಿತ್ವಂ ಜಾರಃ ಕನೀನಾಂ ಪತಿರ್ಜನೀನಾಂ ।

(ಋ. ಸಂ. ೧-೬೬-೮)

ಎಂಬ ಋಕ್ಕನ್ನುದಹರಿಸಿ ಅಲ್ಲಿ ಯಮ ಶಬ್ದವು ಅಗ್ನಿಪರ್ಯಾಯವೆಂದು ತೋರಿಸಿದ್ದಾರೆ. ಸಾಯಣರು ಉದಾಹೃತವಾದ ಋಕ್ಕಿನಲ್ಲಿ ಈ ಪದಕ್ಕೆ ಎರಡು ವಿಧವಾದ ಅರ್ಥವನ್ನು ಮಾಡಿದ್ದಾರೆ. ಯಚ್ಛತಿ ದದಾತಿ ಸ್ತೋತೃಭ್ಯಃ ಕಾಮಾನಿತಿ ಯಮೋಽಗ್ನಿರುಚ್ಯತೇ । ಭಕ್ತರಿಗೆ ಇಷ್ಟಾರ್ಥಗಳನ್ನು ಕೊಡಿಸಿಕೊಡುವುದರಿಂದ ಅಗ್ನಿಗೆ ಯಮನೆಂದ ಹೆಸರೆಂದು ಒಂದು ವಿಧವಾಗಿಯೂ, ಅಥವಾ ಇಂದ್ರಾಗ್ನ್ಯೋರ್ಯುಗಪದುತ್ಪನ್ನತ್ವಾದಗ್ನೇರ್ಯಮತ್ವಂ। ಇಂದ್ರನೂ ಅಗ್ನಿಯೂ ಒಟ್ಟಿಗೆ ಉತ್ಪನ್ನರಾದುದರಿಂದ ಅಗ್ನಿಗೆ ಯಮನೆಂದು ಹೆಸರೆಂದು ಇನ್ನೊಂದು ವಿಧವಾಗಿಯೂ ಅರ್ಥಮಾಡಿದ್ದಾರೆ. ಯಮೋ ಹ ಜಾತ ಇಂದ್ರೇಣ ಸಹ ಸಂಗತಃ ಎಂಬ ನಿರುಕ್ತಕಾರರ ವಾಕ್ಯವು ಈ ಎರಡನೆಯ ಅರ್ಥವನ್ನು ಸಮರ್ಥಿಸುತ್ತದೆ. ಅದೇ ಅಲ್ಲದೇ,

ಬಳಿತ್ಥಾ ಮಹಿಮಾ ವಾಮಿಂದ್ರಾಗ್ನೀ ಪನಿಷ್ಠ ಆ ।
ಸಮಾನೋ ವಾಂ ಜನಿತಾ ಭ್ರಾತರಾ ಯುವಂ ಯಮಾವಿಹೇಹಮಾತರಾ ॥

(ಋ. ಸಂ. ೬-೫೯-೨)

ಎಂಬಲ್ಲಿ ಯುವಂ ಯಮೌ ನೀವಿಬ್ಬರೂ ಒಟ್ಟಿಗೆ ಹುಟ್ಟಿದವರು ಎಂದು ಇಂದ್ರಾಗ್ನಿಗಳ ಸಹಕಾಲೀನವಾದ ಉತ್ಪತ್ತಿಯನ್ನು ಹೇಳಿರುವುದರಿಂದಲೂ ಸಹ ಎರಡನೆಯ ಅರ್ಥವನ್ನು ಹೇಳಬಹುದು.

ಇಲ್ಲಿ ಯಮನಿಂದ ದತ್ತವಾದುದು, ಇಂದ್ರನಿಂದ ಅಧಿಷ್ಠಿತವಾದುದು ಇತ್ಯಾದಿವರ್ಣನೆಗಳಿಗೆ ಸಂದರ್ಭವಾವುದೆಂಬುದನ್ನು ನಿಷ್ಕೃಷ್ಟವಾಗಿ ಹೇಳುವುದಕ್ಕೆ ಸರಿಯಾದ ಆಧಾರವು ಸಿಕ್ಕುವುದು ಕಷ್ಟ. ಸಾಯಣರೂ ಸಹ ಈ ಋಕ್ಕಿಗೆ ಅರ್ಥಮಾಡಲು ಶ್ರಮಪಟ್ಟಿದ್ದಾರೆ. ಮೊದಲು ಮೇಲೆ ಪ್ರತಿಪದಾರ್ಥದಲ್ಲಿ ಹೇಳಿರುವ ಅರ್ಥವನ್ನು ಹೇಳಿ ಅನಂತರ ಯದ್ವಾ ವಸುಶಬ್ದೇನೋಕ್ತಾ ಏವ ಯಮಾದಯಃ ಪ್ರತಿಪದ್ಯಂತೇ । ಹೇ ವಸವಃ ಸ್ವಸ್ವವ್ಯಾಪಾರೇಣ ಸರ್ವಸ್ಯಾಚ್ಛಾದಯಿತಾರಃ ಯೂಯಂ ಸೂರಾದಾದಿತ್ಯಾತ್ ಅಶ್ವಂ ಅತಕ್ಷತ । ಎಲೈ ವಸುಗಳೇ, (ಎಂದರೆ ಋಕ್ಕಿನಲ್ಲಿ ಉಕ್ತವಾದ ಯಮಾದಿಗಳೇ) ನೀವು ನಿಮ್ಮ ನಿಮ್ಮ ವ್ಯಾಪಾರಗಳಿಂದ ಎಲ್ಲವನ್ನೂ ವ್ಯಾಪಿಸುವವರಾಗಿ ಆದಿತ್ಯನಿಂದ ಅಶ್ವವನ್ನು ನಿರ್ಮಿಸಿದಿರಿ ಮತ್ತು ಯಜ್ಞಕ್ಕಾಗಿ ಪ್ರೇರಿಸಿದಿರಿ ಎಂಬರ್ಥವುಂಟೆಂದೂ ತಿಳಿಸಿದ್ದಾರೆ. ಈ ಸಂದರ್ಭವನ್ನು ಸೂಕ್ಷ್ಮವಾಗಿ ಶತಪಥದಲ್ಲಿ ಈರೀತಿ ವರ್ಣಿಸಿದೆ.

ಯುಂಜಂತಿ ಬ್ರಧ್ನಮರುಷಂ ಚರಂತಮಿತಿ । ಅಸೌ ವಾ ಆದಿತ್ಯೋ ಬ್ರಧ್ನೋಽರುಷೋಽಮುಮೇವಾಸ್ಮಾ ಆದಿತ್ಯಂ ಯುನಕ್ತಿ ಸ್ವರ್ಗಸ್ಯ ಲೋಕಸ್ಯ ಸಮಷ್ಟ್ಯೈ ॥

(ಶ. ಬ್ರಾ. ೧೩-೨-೬-೧)

ಸ್ವರ್ಗಲೋಕದ ಪ್ರಾಪ್ತಿಗಾಗಿ ಅರುಷವರ್ಣದ (ಕೆಂಪುಬಣ್ಣದ) ಅಶ್ವವನ್ನು ಯೋಜಿಸುತ್ತಾರೆ. ಆದಿತ್ಯನೇ ಈ ಅಶ್ವವು.

ತದಾಹುಃ । ಪರಾಙ್ ವಾ ಏತಸ್ಮಾದ್ಯಜ್ಞ ಏತಿ ಯಸ್ಯ ಪಶುರುಪಾ ಕೃತೋಽನ್ಯತ್ರ ವೇದೇರೇತೀತ್ಯೇತಗ್ಂ ಸ್ತೋತರನೇನ ಪಥಾ ಪುನರಶ್ವಮಾವರ್ತಯಾಸಿ ನ ಇತಿ ವಾಯುರ್ವೈ ಸ್ತೋತಾ ತಮೇವಾಸ್ಮಾ ಏತತ್ಪರಸ್ತಾದ್ದಧಾತಿ ತಥಾ ನಾತ್ಯೇತಿ ॥

(ಶ. ಬ್ರಾ. ೧೩-೨-೬-೨)

ಅಶ್ವವು ವೇದಿಯಿಂದ ಹೊರಕ್ಕೆ ಇದ್ದರೆ ಯಜ್ಞವೂ ಸಹ ವೇದಿಯೊಳಗೆ (ಅಶ್ವವು) ಇರುವುದಿಲ್ಲವಾದುದರಿಂದ ಎಲೈ ಸ್ತೋತೃವೇ, ಅಶ್ವವನ್ನು ಅದರ ನಿರ್ದಿಷ್ಟವಾದ ಸ್ಥಾನದಲ್ಲಿರುವಂತೆ ಮಾಡು ಎಂದು ಪ್ರಾರ್ಥಿಸಿದೆ. ವಾಯುವೇ ಈ ಸ್ತೋತೃವು. ಪ್ರಾರ್ಥಿತನಾದೊಡನೆಯೇ ವಾಯುವು ಅಶ್ವವನ್ನು ನಿರ್ದಿಷ್ಟವಾದ ಸ್ಥಾನದಲ್ಲಿರುವಂತೆ ಮಾಡುತ್ತಾನೆ. ಎಂದರೆ ಅದರ ಸಂಚಾರವನ್ನು ಬಂಧಿಸುತ್ತಾನೆ.

ವಸವಸ್ತ್ವಾಂಜಂತು ಗಾಯತ್ರೇಣ ಛಂದಸಾ ॥ ಇತ್ಯಾದಿಯಾಗಿ ಮಹಿಷಿಯು ಅಶ್ವವನ್ನು ಪ್ರಶಂಸಿಸುತ್ತಾಳೆ. ಈ ವರ್ಣನೆಯಲ್ಲಿ ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿರುವ ಸನ್ನಿವೇಶವು ಕಥಾದೃಷ್ಟಿಯಿಂದ ಸೂಚಿತವಾಗಿಲ್ಲದಿದ್ದರೂ ಸಹ ವಾಯ್ವಾದಿಗಳು ಮೇಧ್ಯಾಶ್ವವನ್ನು ಯಜ್ಞಾರ್ಹವನ್ನಾಗಿ ಮಾಡತಕ್ಕ ವಿವರಣೆಯಿದೆ. ಇದನ್ನೇ ತೈತ್ತಿರೀಯಸಂಹಿತೆಯಲ್ಲಿ,

ಕ್ರಮೈರತ್ಯಕ್ರಮೀದ್ವಾಜೀ ವಿಶ್ವೈರ್ದೇವೈರ್ಯಜ್ಞಿಯೈಸ್ಸಂವಿದಾನಃ ।

(ತೈ. ಸಂ. ೫-೭-೨೪)

ಎಂದು ವಿವರಿಸಿದೆ. ಈ ವಾಕ್ಯಕ್ಕೆ ವಿಶ್ವೈರ್ದೇವೈಃ ಯಜ್ಞಿಯೈಃ ಯಜ್ಞಾರ್ಹೈಃ ಸಂವಿದಾನಃ ಐಕಮತ್ಯಂ ಗತಃ । ವಿಶ್ವೇದೇವತೆಗಳೊಂದಿಗೆ ಒಂದಾದುದಾಗಿ ತಿಳಿಸಿದೆ. ಎಂದರೆ ಅವರ ಅಂಶವೆಲ್ಲವೂ ಅಶ್ವದಲ್ಲಿ ಅಡಗಿದ್ದಿತು ಎಂದರ್ಥವು- ಇದನ್ನೇ,

> ದ್ಯೌಸ್ತೇ ಪೃಷ್ಠಂ ಪೃಥಿವೀ ಸಧಸ್ಥಮಾತ್ಮಾಂತರಿಕ್ಷಗ್ಂ ಸಮುದ್ರೋ ಯೋನಿಸ್ಸೂರ್ಯಸ್ತೇ ಚಕ್ಷು-
> ರ್ವಾತಃ ಪ್ರಾಣಶ್ಚಂಪ್ರಮಾಶ್ಶ್ರೋತ್ರಂ ॥
>
> (ತೈ. ಸಂ. ೫-೮.೨೫)

ಇತ್ಯಾದಿಯಾಗಿ ವರ್ಣಿಸಿದೆ.

ತ್ರಿತಃ—ಪೃಥಿವ್ಯಾದಿತ್ರಿಷು ಸ್ಥಾನೇಷು ವರ್ತಮಾನಃ ತೀರ್ಣತಮೋ ವಾ ವಾಯುಃ । ಪೃಥಿವ್ಯಾದಿ ಮೂರು ಸ್ಥಾನಗಳಲ್ಲಿರುವುದರಿಂದಾಗಲಿ ಅಥವಾ ಅತ್ಯಂತವೇಗಶಾಲಿಯೆಂಬುದರಿಂದಾಗಲಿ ಈ ಹೆಸರು ಪ್ರಸಿದ್ಧವೆಂದು ವಿವರಿಸಿದೆ. ಈ ವಿಶೇಷಣವು ಇಂದ್ರನ ಸ್ವರೂಪವನ್ನೂ ತಿಳಿಸುತ್ತದೆ ನಿರುಕ್ತಕಾರರು,

> ಪಿತುಂ ನು ಸ್ತೋಷಂ ಮಹೋ ಧರ್ಮಾಣಂ ತವಿಷೀಂ ।
> ಯಸ್ಯ ತ್ರಿತೋ ವ್ಯೋಜಸಾ ವೃತ್ರಂ ವಿಪರ್ವಮರ್ದಯತ್ ॥
>
> (ಋ. ಸಂ. ೧-೧೮೭-೧)

ಎಂಬ ಋಕ್ಕಿನಲ್ಲಿರುವ ತ್ರಿತಶಬ್ದವನ್ನು ವಿವರಿಸುವಾಗ ಓಜಸಾ ಬಲೇನ ತ್ರಿತಃ ತ್ರಿಸ್ಥಾನ ಇಂದ್ರಃ ಎಂದು ಅರ್ಥ ಮಾಡಿದ್ದಾರೆ. ಇಂದ್ರನಿಗೂ ವಾಯುವಿಗೂ ತಾದಾತ್ಮ್ಯವನ್ನು ಹೇಳುವ ಸನ್ನಿವೇಶಗಳೂ ಇವೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಇಂದ್ರನ ಹೆಸರು ಸ್ಪಷ್ಟವಾಗಿ ಪುನಃ ಉಕ್ತವಾಗಿರುವುದರಿಂದ ಇಲ್ಲಿ ವಾಯುವೆಂದೇ ಅರ್ಥಮಾಡಬೇಕು.

ವಸವಃ—ಈ ಪದಕ್ಕೆ ಯಮಾದಿ (ಅಗ್ನ್ಯಾದಿ) ದೇವತೆಗಳೆಂದು ಒಂದರ್ಥವನ್ನೂ, ಸೂರ್ಯರಶ್ಮಿಗಳೆಂದು ಇನ್ನೊಂದು ಅರ್ಥವನ್ನೂ ಹೇಳಿದ್ದಾರೆ. ಈ ಪದಕ್ಕೆ ನಿರುಕ್ತಕಾರರು ಈರೀತಿ ನಿರ್ವಚನವನ್ನು ಹೇಳಿದ್ದಾರೆ.

> ವಸವಃ—ವಸವೋ ಯದ್ವಿವಸತೇ ಸರ್ವಮಗ್ನಿರ್ವಸುಭಿರ್ವಾಸವ ಇತಿ ಸಮಾಖ್ಯಾ, ತಸ್ಮಾತ್ಪೃಥಿ-
> ವೀಸ್ಥಾನಾಃ । ಇಂದ್ರೋ ವಸುಭಿರ್ವಾಸವ ಇತಿ ಸಮಾಖ್ಯಾ, ತಸ್ಮಾನ್ಮಧ್ಯಸ್ಥಾನಾಃ । ವಸವ
> ಆದಿತ್ಯರಶ್ಮಯೋ ವಿವಾಸನಾತ್ತಸ್ಮಾದ್ದ್ಯುಸ್ಥಾನಾಃ ॥
>
> (ನಿ ೧೨-೪೧)

ಎಲ್ಲವನ್ನೂ ಹೊದಿಕೆಯ ರೂಪದಲ್ಲಿ ವ್ಯಾಪಿಸುವುದರಿಂದ ಅಗ್ನಿಗೆ ವಾಸವನೆಂದು ಹೆಸರು. ಆದುದರಿಂದ ಪೃಥ್ವೀಸ್ಥಾನದ ದೇವತೆಯಾಗಬಹುದು. ಇದೇ ಗುಣವನ್ನು ಹೊಂದಿರುವುದರಿಂದ ಇಂದ್ರನಿಗೂ ವಾಸವನೆಂದು ಹೆಸರು. ಆದುದರಿಂದ ಮಧ್ಯಸ್ಥಾನ ದೇವತೆಯ ಹೆಸರಾಗಬಹುದು. ಅತ್ಯಂತ ಪ್ರಕಾಶಮಾನವಾಗಿರುವುದರಿಂದ ಆದಿತ್ಯರಶ್ಮಿಗಳಿಗೂ ವಸುಗಳೆಂದು ಹೆಸರು. ಆದರಿಂದ ದ್ಯುಲೋಕದ ದೇವತೆಯ ಹೆಸರಾಗಬಹುದು. ಎಂದು ಈ ಪದದ ವಿಸ್ತೃತವಾದ ಅರ್ಥವನ್ನು ತಿಳಿಸಿ ಇದರ ಸಮರ್ಥನೆಗೆ--

> ಸ್ವಗಾ ವೋ ದೇವಾಸ್ಸದನಮಕರ್ಮ ಯ ಆಜಗ್ಮ ಸವನೇದಂ ಜುಷಾಣಾಃ ।
> ಜಕ್ಷಿವಾಗ್ಂಸಃ ಪಪಿವಾಗ್ಂಸಶ್ಚ ವಿಶ್ವೇಸ್ಮೇ ಧತ್ತ ವಸವೋ ವಸೂನಿ ॥
>
> (ತೈ. ಸಂ. ೧-೪-೪೪-೨)

ಎಂಬ ವಾಕ್ಯವನ್ನುದಹರಿಸಿ ಅಲ್ಲಿ ವಸುವೆಂಬ ಪದಕ್ಕಿರತಕ್ಕ ವಿಸ್ತೃತವಾದ ಅರ್ಥವನ್ನು ತೋರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಸಾಯಣರು ಇದೇ ರೀತಿಯ ತಾತ್ಪರ್ಯವನ್ನು ಹೇಳಿದ್ದಾರೆ. ಆದುದರಿಂದ ಯಜ್ಞಾಶ್ವವು ಮೂರು ಲೋಕಗಳಲ್ಲಿಯೂ ತನ್ನ ಪ್ರಭಾವವನ್ನು ಬೀರಿ ಮೂರು ಲೋಕಗಳ ವ್ಯವಹಾರಗಳಿಗೂ ಸಹ ಸಹಾಯವನ್ನು ಮಾಡಿತೆಂದೂ ಹೇಳಬಹುದು. ಇದೇ ಅಭಿಪ್ರಾಯವನ್ನು ತೈತ್ತಿರೀಯ ಸಂಹಿತೆಯಲ್ಲಿಯೂ ಸಹ ಬೇರೆ ವಾಕ್ಯಗಳಿಂದ ಸೂಚಿಸಿದೆ.

> ಅಕ್ರಾನ್ವಾಜೀ ಪೃಥಿವೀಮಗ್ನಿಂ ಯುಜಮಕೃತ ವಾಜ್ಯರ್ವಾಕ್ರಾನ್ ವಾಜ್ಯಂತರಿಕ್ಷಂ ವಾಯುಂ ಯುಜಮಕೃತ ವಾಜ್ಯರ್ವಾ ದ್ಯಾಂ ವಾಜ್ಯಾಕ್ರಗ್‌ಸ್ತ ಸೂರ್ಯಂ ಯುಜಮಕೃತ ವಾಜ್ಯರ್ವಾ-ಗ್ನಿಸ್ತೇ ವಾಜಿನ್ ಯುಙ್ಙನು ತ್ವಾರಭೇ ಸ್ವಸ್ತಿ ಮಾ ಸಂ ಪಾರಯ ವಾಯುಸ್ತೇ ವಾಜಿನ್ ಯುಙ್ಙನು ತ್ವಾರಭೇ ಸ್ವಸ್ತಿಮಾ ಸಂ ಪಾರಯ ॥
>
> (ತೈ. ಸಂ. ೭-೫-೧೯)

ಈ ಭಾವವು ಮುಂದಿನ ಋಕ್ಕಿನಲ್ಲಿಯೂ ಸೂಚಿತವಾಗಿರುವುದರಿಂದ ಈ ಸಂಹಿತಾವಾಕ್ಯಗಳ ಅರ್ಥವನ್ನು ಮುಂದಿನ ಋಕ್ಕಿನಲ್ಲಿ ವಿವರಿಸಲಾಗುತ್ತದೆ.

### ವ್ಯಾಕರಣಪ್ರಕ್ರಿಯಾ

**ದತ್ತಮ್**—ಡುದಾಞ್ ದಾನೇ ಧಾತು. ನಿಷ್ಠಾ ಎಂಬುದರಿಂದ ಕ್ತ ಪ್ರತ್ಯಯ. ದೋದದ್‌ಘೋಃ (ಪಾ. ಸೂ. ೭-೪-೪೬) ಎಂಬುದರಿಂದ ಧಾತುವಿಗೆ ದಥ್ ಆದೇಶ. ಖರಿ ಚ ಎಂಬುದರಿಂದ ಚರ್ತ್ವ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಯುನಕ್**—ಯುಜಿರ್ ಯೋಗೇ ಧಾತು. ಲಙ್ ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. ಇತಶ್ಚ ಎಂಬುದರಿಂದ ಅದರ ಇಕಾರಕ್ಕೆ ಲೋಪ. ರುಧಾದಿಭ್ಯಃ ಶ್ನಮ್ (ಪಾ. ಸೂ. ೩-೧-೭೮) ಎಂಬುದರಿಂದ ಶ್ನಮ್ ವಿಕರಣ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. ಹಲ್‌ಙ್ಯಾಭ್ಯೋದೀ—ಸೂತ್ರದಿಂದ ಪ್ರತ್ಯಯಕ್ಕೆ ಲೋಪ. ಚೋಃಕುಃ—ಎಂಬುದರಿಂದ ಚಕಾರಕ್ಕೆ ಕುತ್ವ. ವಾವಸಾನೇ ಸೂತ್ರದಿಂದ ಚರ್ತ್ವ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅತಿಷ್ಠತ್**—ಷ್ಠಾ ಗತಿನಿವೃತ್ತೌ ಧಾತು. ಲಙ್ ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ರಶನಾಮ್**—ಅಶೂ ವ್ಯಾಪ್ತೌ ಧಾತು. ಅಶೇರಚ (ಉ. ಸೂ. ೨-೨೩೩) ಎಂಬುದರಿಂದ ಯುಚ್ ಪ್ರತ್ಯಯ. ಪ್ರಕೃತಿಗೆ ಅಶಾದೇಶ. ಯುವೋರನಾಕೌ (ಪಾ. ಸೂ ೭-೧-೧) ಎಂಬುದರಿಂದ ಅನಾದೇಶ ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಅಗೃಭ್ಣಾತ್**—ಗ್ರಹ ಉಪಾದಾನೇ ಧಾತು. ಕ್ರ್ಯಾದಿ. ಪ್ರಥಮಪುರುಷಏಕವಚನರೂಪ. ಹೃಗ್ರಹೋರ್ಭಶ್ಛಂದಸಿ ಎಂಬುದರಿಂದ ಹಕಾರಕ್ಕೆ ಭತ್ವ. ತಿಙಂತನಿಘಾತಸ್ವರ ಬರುತ್ತದೆ.

ಸೂರಾತ್—ಷೂಙ್ ಪ್ರಾಣಿಗರ್ಭವಿಮೋಚನೇ ಧಾತು. ಸುಸೂಧಾಗೃಧಿಭ್ಯಃ ಕ್ರನ್ (ಉ. ಸೂ. ೨-೧೮೨) ಎಂಬುದರಿಂದ ಕ್ರನ್ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಅತಷ್ಟ—ತಕ್ಷೂ ಛೇದನೇ ಧಾತು. ಲಙ್ ಮಧ್ಯಮಪುರುಷಬಹುವಚನಕ್ಕೆ ತಸ್ ಥಸ್ ಥ—(ಪಾ. ಸೂ. ೩-೪-೧೦೧) ಎಂಬುದರಿಂದ ತಾದೇಶ. ಬಹುಲಂ ಛಂದಸಿ ಎಂಬುದರಿಂದ ಶಪಿಗೆ ಲುಕ್. ಸ್ಕೋಸ್ಸಂಯೋಗಾದ್ಯೋಃ-(ಪಾ. ಸೂ. ೮-೨-೨೯) ಎಂಬುದರಿಂದ ಕಕಾರಕ್ಕೆ ಲೋಪ. ಪ್ರತ್ಯಯಕ್ಕೆ ಷ್ಟುತ್ವ. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ. ॥ ೨ ॥

---

ಸಂಹಿತಾಪಾಠಃ

ಅಸಿ ಯಮೋ ಅಸ್ಯಾದಿತ್ಯೋ ಅರ್ವನ್ನಸಿ ತ್ರಿತೋ ಗುಹ್ಯೇನ ವ್ರತೇನ ।
ಅಸಿ ಸೋಮೇನ ಸಮಯಾ ವಿಪೃಕ್ತ ಆಹುಸ್ತೇ ತ್ರೀಣಿ ದಿವಿ ಬಂಧನಾನಿ ।
॥ ೩ ॥

ಪದಪಾಠಃ

ಅಸಿ । ಯಮಃ । ಅಸಿ । ಆದಿತ್ಯಃ । ಅರ್ವನ್ । ಅಸಿ । ತ್ರಿತಃ । ಗುಹ್ಯೇನ । ವ್ರತೇನ ।
ಅಸಿ । ಸೋಮೇನ । ಸಮಯಾ । ವಿऽಪೃಕ್ತಃ । ಆಹುಃ । ತೇ । ತ್ರೀಣಿ । ದಿವಿ । ಬಂಧನಾನಿ ॥ ೩ ॥

ಸಾಯಣಭಾಷ್ಯಂ

ಹೇ ಅರ್ವನ್ ತ್ವಂ ಯಮೋಽಸಿ । ನಿಯಮಿತಾಗ್ನಿರಸಿ । ತೇನ ದತ್ತತ್ವಾತ್ತಚ್ಛಬ್ದವ್ಯಪದೇಶಃ । ತಥಾದಿತ್ಯೋಽಸಿ । ಸೂರಾನ್ನಿರತಷ್ಟೇತ್ಯುಕ್ತತ್ವಾತ್ । ತಥಾ ಗುಹ್ಯೇನ ವ್ರತೇನ ಗೋಪನಿಯೇನ ದುರ್ನಿರೂಪೇಣ ವಾ ಕರ್ಮಣಾ । ಸರ್ವತ್ರವ್ಯಾಪ್ತಿರೂಪೇಣೇತ್ಯರ್ಥಃ । ತೇನ ತ್ರಿತಸ್ತ್ರಿಷು ಸ್ಥಾನೇಷು ತಾಯಮಾನೋ ವಾಯುರಸಿ । ತ್ರಿತ ಏನಮಾಯುನಗಿತ್ಯುಕ್ತತ್ವಾತ್ತದ್ರೂಪತ್ವಂ । ಅಥವಾ ಗುಹ್ಯೇನ ವ್ರತೇನ ಗೋಪನೀಯೇನ ಕರ್ಮಣಾ ಯೋಗಾದಿಸಾಧನರೂಪೇಣ ತ್ರಿತ ಏತನ್ನಾಮಕ ಋಷಿರಸಿ । ಕಿಂಚ ಹೇ ಅಶ್ವ ತ್ವಂ ಸೋಮೇನ ಸಮಯಾ ಸಹ ವಿಪೃಕ್ತಃ । ವೀತ್ಯೇಷ ಸಮಿತ್ಯೇತಸ್ಮಿನ್ನರ್ಥೇ । ಸಂಪೃಕ್ತೋಽಸಿ ತೇನ ಗೃಹೀತತ್ವಾತ್ । ಹೇ ಅಶ್ವೈವಂರೂಪ ತೇ ತವ ದಿವಿ ದ್ಯುಲೋಕ ಆದಿತ್ಯೇ ವಾ ವರ್ತಮಾನಸ್ಯ ತ್ರೀಣಿ ಬಂಧನಾನ್ಯುತ್ಪತ್ತಿಕಾರಣಾನ್ಯಾಹುಃ ಪುರಾವಿದಃ । ವಸವ ಆದಿತ್ಯೋ ದ್ಯುಸ್ಥಾನಂ ಚೇತಿ ತ್ರೀಣಿ ॥

ಪ್ರತಿಪದಾರ್ಥ

(ಹೇ) ಅರ್ವನ್—ಎಲೈ ಅಶ್ವವೇ । (ತ್ವಂ—ನೀನು) । ಯಮಃ – ಅಗ್ನಿಯಾಗಿ । ಅಸಿ—ಆಗಿದ್ದೀಯೆ. ಆದಿತ್ಯಃ—ಆದಿತ್ಯರೂಪನಾಗಿ । ಅಸಿ—ಆಗಿದ್ದೀಯೆ । ಗುಹ್ಯೇನ—ರಹಸ್ಯಾತ್ಮಕವಾದ । ವ್ರತೇನ—ಕರ್ಮ ದಿಂದ । ತ್ರಿತಃ—ವಾಯುರೂಪನಾಗಿ । ಅಸಿ—ಆಗಿದ್ದೀಯೆ । ಸೋಮೇನ ಸಮಯಾ—ಸೋಮನೊಂದಿಗೆ । ವಿಪೃಕ್ತಃ—ಸಂಬಂಧಿಸಿದವನಾಗಿ । ಅಸಿ—ಆಗಿದ್ದೀಯೆ । ತೇ—ನಿನಗೆ । ದಿವಿ—ದ್ಯುಲೋಕದಲ್ಲಿ । ತ್ರೀಣಿ-ಬಂಧನಾನಿ—ಮೂರು ವಿಧವಾದ ಬಂಧನಗಳು ಇರುವುವೆಂದು । ತೇ—ತತ್ತ್ವಜ್ಞರು । ಆಹುಃ—ಹೇಳುತ್ತಾರೆ.

ಭಾವಾರ್ಥ

ಎಲೈ ಅಶ್ವವೇ, ನೀನು ಅಗ್ನಿರೂಪನಾಗಿಯೂ, ವಾಯ್ವಾತ್ಮಕನಾಗಿಯೂ, ನಿನ್ನ ರಹಸ್ಯವಾದ ಕರ್ಮದಿಂದ ಸೋಮನೊಂದಿಗೆ ಸಂಬಂಧಿಸಿದವನಾಗಿಯೂ, ಮತ್ತು ಆದಿತ್ಯರೂಪದವನಾಗಿಯೂ ಆಗಿದ್ದೀಯೆ. ನಿನಗೆ ದ್ಯುಲೋಕ ದಲ್ಲಿ ಮೂರು ವಿಧವಾದ ಬಂಧನಗಳಿರುವುವೆಂದು ತಿಳಿದವರು ಹೇಳುತ್ತಾರೆ.

English Translation

You, horse, are Yama : you are Aditya : you are Trita by a mysterious act : you are associated with Soma. The sages have said there are three bindings of you in heaven.

। ವಿಶೇಷವಿಷಯಗಳು ।

ಅಗ್ನಿಯಿಂದ ದತ್ತವಾದುದರಿಂದ ಯಜ್ಞಾಶ್ವವು ಅಗ್ನ್ಯಾತ್ಮಕವಾಗಿಯೇ ಇದೆ. ಆದಿತ್ಯನಿಂದ ಗೃಹೀತ ವಾದುದರಿಂದ ಆದಿತ್ಯಾತ್ಮಕವಾಗಿಯೇ ಇದೆ. ಇತ್ಯಾದಿಯಾಗಿ ಅಗ್ನ್ಯಾದಿಗಳೊಡನೆ ತಾದಾತ್ಮ್ಯವನ್ನು ಹೇಳಿದೆ ಆದರೆ ಈ ತಾದಾತ್ಮ್ಯವನ್ನು ಹೇಳಿರುವುದರ ಜೊತೆಗೆ ತ್ರೀಣಿ ದಿವಿ ಬಂಧನಾನಿ ಮೂರು ವಿಧವಾದ ಬಂಧನಗಳಿವೆ ಎಂದೂ ಹೇಳಿದೆ. ಇದೇ ಮಂತ್ರವು ತೈತ್ತಿರೀಯಸಂಹಿತೆಯಲ್ಲಿಯೂ ಇದ್ದು ಅದನ್ನು ವಿವರಿಸುವಾಗ ಸಾಯಣರು ಈ ರೀತಿ ಅರ್ಥಮಾಡಿದ್ದಾರೆ.

> ಈದೃಶಸ್ಯ ತೇ ತವ ದ್ಯುಲೋಕೇ ಬಂಧನಾನಿ ಬಂಧನಸಾಧನಾನಿ ದಾಮಾನಿ ತ್ರೀಣೀತ್ಯೇವ-ಮಭಿಜ್ಞಾ ಆಹುಃ । ವಣಿಜೋ ಹಿ ಶಕ್ತ್ಯಾಧಿಕ್ಯೇನಾತ್ಯುಗ್ರಮಶ್ವಂ ವಿಕ್ರೇತುಂ ಗ್ರಾಮಾಂತರೇ ನಯಂತಸ್ತ್ರಿಭಿರ್ದಾಮಭಿರ್ಬಧ್ನಂತಿ । ದಕ್ಷಿಣವಾಮಪಾರ್ಶ್ವಯೋರ್ದಾಮದ್ವಯಮುಭೌ ಪುರುಷೌ ಗೃಹ್ಣೀತಃ । ಯದಾ ದಕ್ಷಿಣಭಾಗವರ್ತಿನಂ ಪ್ರಷ್ಟುಮುದ್ಯುಂಕ್ತೇ ತದಾ ವಾಮ-ಭಾಗವರ್ತೀ ತಮಾಕರ್ಷತಿ । ತಂ ಚೇಷ್ಟ್ರಷ್ಟುಮುದ್ಯುಂಕ್ತೇ ತದಾನೀಮಿತರ ಆಕರ್ಷತಿ । ಯದಾ ಸಹಸಾ ಪುರತಃ ಪಲಾಯನಂ ಕರೋತಿ ತದಾ ತಂ ವಾರಯಿತುಂ ಗಲೇ ಬದ್ಧಮೇಕಂ ದಾಮ ಗೃಹೀತ್ವಾ ಪೃಷ್ಠತಃ ಕಶ್ಚಿದಾಕರ್ಷತಿ । ಯದಿದಂ ಬಂಧನತ್ರಯಂ । ಯದ್ವಾ ಶಾಸ್ತ್ರಸಿದ್ಧಂ ಕಿಂಚಿತ್ಕಾರಣತ್ರಯಂ ದ್ರಷ್ಟವ್ಯಂ । ತದನೇನ ಬಂಧನತ್ರಯೇಣಾಧಿಕಶಕ್ತಿರಶ್ವ ಇತಿ ಸ್ತುತೋ ಭವತಿ ॥
>
> (ತೈ. ಸಂ. ಭಾ. ೪-೬-೭)

ಮೇಲೆ ಹೇಳಿರುವ ಬಂಧನವನ್ನು ಲೌಕಿಕವಾದ ಅಶ್ವದ ಬಂಧನಕ್ಕೆ ಹೋಲಿಸಬಹುದು. ಗ್ರಾಮಾಂತರಕ್ಕೆ ವಿಕ್ರಯ ಕ್ಕಾಗಿ ತೆಗೆದುಕೊಂಡುಹೋಗುತ್ತಿರುವ ಅಶ್ವವು ಬಹಳ ಶಕ್ತಿಯುತವಾಗಿದ್ದರೆ ಅವಕ್ಕೆ ಮೂರುಕಡೆಗಳಲ್ಲಿಯೂ ಬಂಧಕರಿರುತ್ತಾರೆ. ಒಂದು ವೇಳೆ ಅದು ಬಲದಪಾರ್ಶ್ವಕ್ಕೆ ತಿರುಗಿದರೆ ಆಗ ಎಡಗಡೆಯವನು ಎಳೆಯುತ್ತಾನೆ. ಹೀಗೆಯೇ ಎಡಗಡೆಗೆ ತಿರುಗಿದಾಗ ಬಲಗಡೆಯವನು ಎಳೆಯುತ್ತಾನೆ. ಅಕಸ್ಮಾತ್ತಾಗಿ ಮುಂಭಾಗದಲ್ಲಿ ಧಾವಿಸಿ ಓಡಿಹೋಗಲು ಪ್ರಯತ್ನಪಟ್ಟರೆ ಆಗ ಹಿಂಭಾಗದಲ್ಲಿರುವವನು ಎಳೆಯುತ್ತಾನೆ. ಹೀಗೆ ಈ ಅಶ್ವಕ್ಕೂ ಸಹ ಬಂಧನ ತ್ರಯವಿರುತ್ತದೆಂದು ಮೊದಲು ಲೌಕಿಕವಾದ ಉಪಮಾನವನ್ನು ಹೇಳಿ ದೇವಾಂಶಸಂಭೂತವಾದ ಈ ಅಶ್ವದ ಬಂಧನವನ್ನು ಲೌಕಿಕವಾದ ಅಶ್ವದ ಬಂಧನಕ್ಕೆ ಹೋಲಿಸುವುದು ಉಚಿತವಲ್ಲವೆಂದು ತಿಳಿದು ಕಾರಣಾಂತರವನ್ನು ಹೇಳಿರುತ್ತಾರೆ.

ಆದರೆ ಈ ಬಂಧನದ ಸ್ವರೂಪವೇನೆಂಬುವನ್ನು ತಿಳಿಯುವುದಕ್ಕೆ ಸರಿಯಾದ ಆಧಾರವಿಲ್ಲದುದರಿಂದ ಅವರಿಗೂ ಈ ವಿಷಯದಲ್ಲಿ ನಿಷ್ಕೃಷ್ಟವಾದ ಅಭಿಪ್ರಾಯವನ್ನು ಕೊಡಲು ಸಾಧ್ಯವಿಲ್ಲವಾಗಿ ಯದ್ವಾ ಶಾಸ್ತ್ರಸಿದ್ಧಂ ಕಿಂಚಿತ್ಕಾರಣತ್ರಯಂ ದ್ರಷ್ಟವ್ಯಂ । ಶಾಸ್ತ್ರವಿಹಿತವಾದ ಬೇರೆ ಕಾರಣವನ್ನು ತಿಳಿಯಬೇಕು ಎಂದಿದ್ದಾರೆ. ಈ ಬಂಧನದ ಸ್ವರೂಪವನ್ನು ತೈತ್ತಿರೀಯಸಂಹಿತೆಯಲ್ಲಿಯೇ ಆಕ್ರಾನ್ವಾಜೀ ಪೃಥಿವೀಮಗ್ನಿಂ .... .... .... ........ ಆಕ್ರಾನ್ವಾಜ್ಯಂತರಿಕ್ಷಂ ವಾಯುಂ ಯುಜಮಕೃತ .... .... .... ॥ ( ತೈ. ಸಂ. ೭-೫-೧೯ ) ಇತ್ಯಾದಿಯಾಗಿ ಹಿಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ಉದಹರಿಸಿರುವ ಮಂತ್ರಗಳಲ್ಲಿ ವರ್ಣಿಸಿದೆ. ಅದರ ಅರ್ಥವೇನೆಂದರೆ,

ಈ ಮೇಧ್ಯಾಶ್ವವು ಪೃಥ್ವಿಯನ್ನಾಕ್ರಮಿಸಿ ಪಾರ್ಥಿವವಾದ ಕರ್ಮಾಚರಣೆಗಾಗಿ ಅಗ್ನಿಯನ್ನು ತನ್ನ ನೊಗದ ರೂಪದ ಬಂಧಕವನ್ನಾಗಿ ಮಾಡಿಕೊಂಡಿತು. ಎಂದರೆ ಅಗ್ನಿಯದ್ವಾರಾ ತನ್ನ ಸೇವೆಯನ್ನು ಸಲ್ಲಿಸಿತು. ಹಾಗೆಯೇ ಈ ಅಶ್ವವು ಅಂತರಿಕ್ಷವನ್ನು ವ್ಯಾಪಿಸಿ ವಾಯುವನ್ನು ತನ್ನ ಯೋಕ್ತ್ರವನ್ನಾಗಿ ಮಾಡಿಕೊಂಡು (ತನ್ನ ಸೇವೆಯನ್ನು ಸಲ್ಲಿಸಿತು). ಇದೇ ಅಶ್ವವು ದ್ಯುಲೋಕಕ್ಕೆ ಹೋಗಿ ಅಲ್ಲಿ ಆದಿತ್ಯನನ್ನು ತನ್ನ ಯೋಕ್ತ್ರವನ್ನಾಗಿ ಮಾಡಿಕೊಂಡು ಅಲ್ಲಿನ ವ್ಯವಹಾರಗಳಿಗೆ ಅನುಕೂಲವನ್ನು ಮಾಡಿಕೊಟ್ಟಿತು. ಆದುದರಿಂದ ಪಾರ್ಥಿವಾಗ್ನಿಯ ಸಹಾಯದಿಂದಲೂ ಅಂತರಿಕ್ಷಸ್ಥವಾದ ವಾಯುವಿನ ಮೂಲಕವೂ ದ್ಯುಲೋಕಸ್ಥನಾದ ಆದಿತ್ಯನ ಪ್ರಭಾವದಿಂದಲೂ ನಮಗೆ ಶ್ರೇಯಸ್ಸನ್ನ ನುಗ್ರಹಿಸು ಎಂದು ಪ್ರಾರ್ಥಿಸಿದೆ. ಈ ವರ್ಣನೆಯಲ್ಲಿ ಇನ್ನೊಂದಂಶವನ್ನೂ ಗಮನಿಸಬೇಕು. ಹಿಂದಿನ ಋಕ್ಕಿನಲ್ಲಿ ವಸವಃ ಎಂಬ ಪದಕ್ಕೆ ನಿರುಕ್ತಕಾರರ ವಾಕ್ಯಗಳ ಆಧಾರದ ಮೇಲೆ ಮೂರುಲೋಕಗಳಲ್ಲೂ ವ್ಯಾಪಿಸಿರುವ ಅಗ್ನಿ, ವಾಯು ಅಥವಾ ಇಂದ್ರ, ಮತ್ತು ಆದಿತ್ಯ ಈ ದೇವತೆಗಳು ಎಂದರ್ಥವನ್ನು ಮಾಡಿ ಆ ದೇವತೆಗಳು ಈ ಯಜ್ಞಾಶ್ವ ವನ್ನು ಜೋದಿಸಿದರು ಎಂದು ಹೇಳಿದೆ. ಉದಾಹೃತವಾದ ಈ ಸಂಹಿತಾವಾಕ್ಯಗಳಲ್ಲಿಯೂ ಸಹ ಇದೇ ಅಭಿಪ್ರಾಯ ವನ್ನು ಸೂಚಿಸಿದೆ. ಇದರಿಂದ ಈ ಅಶ್ವದ ದಿವ್ಯಶಕ್ತಿಯನ್ನೂ ಲೋಕೋಪಕಾರಕವಾದ ವ್ಯಾಪಾರಗಳನ್ನೂ ತಿಳಿಯ ಬಹುದು.

ಗುಹ್ಯೇನ ಕರ್ಮಣಾ—ಗೋಪನೀಯೇನ ದುರ್ನಿರೂಪೇಣ ವಾ ಕರ್ಮಣಾ । ಸರ್ವತ್ರವ್ಯಾಪ್ತಿ-ರೂಪೇಣೇತ್ಯರ್ಥಃ । ರಹಸ್ಯವಾದ ಅಥವಾ ನಿರೂಪಣಾತೀತವಾದ ಕರ್ಮದಿಂದ ಎಂದರ್ಥ. ವಾಯುವು ಸರ್ವ ವ್ಯಾಪಿಯಾದುದರಿಂದಲೂ, ಮಿತದೃಷ್ಟಿಯುಳ್ಳ ಮಾನವರಿಗೆ ವಾಯುವಿನ ವಿಶ್ವವ್ಯಾಪಕವಾದ ವ್ಯವಹಾರಗಳನ್ನು ನಿರೂಪಿಸಲು ಸಾಧ್ಯವಿಲ್ಲದುದರಿಂದಲೂ ಈ ವರ್ಣನೆ ಇದೆಯೆಂದು ಹೇಳಬಹುದು.

## ವ್ಯಾಕರಣಪ್ರಕ್ರಿಯಾ

ಅಸಿ–ಅಸ ಭುವಿ ಧಾತು. ಲಟ್. ಮಧ್ಯಮಪುರುಷಏಕವಚನ ಸಿಪ್ ಪರವಾದಾಗ ತಾಸಸ್ತ್ಯೋರ್ಲೋಪಃ (ಪಾ. ಸೂ. ೭-೪-೫೦) ಎಂಬುದರಿಂದ ಧಾತು ಸಕಾರಕ್ಕೆ ಲೋಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಸಿಪ್ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

ಯಮಃ—ಯಮಯತೀತಿ ಯಮಃ ಯಮ ಉಪರಮೇ ಧಾತು. ಅಂತರ್ಭಾವಿತಣ್ಯರ್ಥಕ ಧಾತು. ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ಚಿತ್ತಾದುದರಿಂದ ಅಂತೋದಾತ್ತವಾಗುತ್ತದೆ.

ಗುಹ್ಯೇನ—ಗುಹಾಯಾಂ ಭವಮ್ ಗುಹ್ಯಮ್. ತೇನ. ಭವೇ ಛಂದಸಿ (ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. ಯಸ್ಯೇತಿಚ ಎಂಬುದರಿಂದ ಆಕಾರಲೋಪ. ಯತೋನಾವಃ (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಸಮಯಾ—ಸಮ್ ಉಪಸರ್ಗ. ಇಣ್ ಗತೌ ಧಾತು. ಆಃಸಮಿಣ್ನಿಕಷಿಭ್ಯಾಮ್ (ಉ. ಸೂ. ೬-೪೧೪) ಎಂಬುದರಿಂದ ಸಮ್ ಉಪಪದವಾಗಿರುವಾಗ ಆ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಾರಕ್ಕೆ ಗುಣ. ಅಯಾದೇಶ.

ವಿಪೃಕ್ತೇಃ—ಪೃಚೀ ಸಂಪರ್ಕೇ ಧಾತು. ಕರ್ಮಣಿಯಲ್ಲಿ ನಿಷ್ಠಾ ಎಂಬುದರಿಂದ ಕ್ತಪ್ರತ್ಯಯ. ಚೋಃಕುಃ ಎಂಬುದರಿಂದ ಧಾತುಚಕಾರಕ್ಕೆ ಕುತ್ವ. ಗತಿರನಂತರಃ (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ವಿ) ಉದಾತ್ತಸ್ವರ ಬರುತ್ತದೆ.

ಆಹುಃ—ಬ್ರೂಞ್ ವ್ಯಕ್ತಾಯಾಂ ವಾಚಿ. ಧಾತು. ಲಟ್ ಪ್ರಥಮಪುರುಷ ಬಹುವಚನ ಝಿ ಪರವಾದಾಗ ಬ್ರುವಃ ಪಂಚಾನಾಮಾದಿತ ಆಹೋಬ್ರುವಃ (ಪಾ. ಸೂ. ೩-೪-೮೪) ಎಂಬುದರಿಂದ ಅದಕ್ಕೆ ಉಸಾದೇಶ. ಧಾತುವಿಗೆ ಆಹಾದೇಶ. ಉಸ್ಯಪದಾಂತಾತ್ (ಪಾ ಸೂ. ೬-೧-೯೬) ಎಂಬುದರಿಂದ ಪರರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ದಿವಿ—ಸಪ್ತಮ್ಯಂತರೂಪ. ಊಡಿದಂ ಪದಾದಿ—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಬಂಧನಾನಿ—ಬಂಧ ಬಂಧನೇ. ಧಾತು. ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ. ಯುವೋರನಾಕೌ (ಪಾ. ಸೂ. ೭ ೧-೧) ಎಂಬುದರಿಂದ ಅದಕ್ಕೆ ಅನಾದೇಶ. ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ॥ ೩ ॥

———:o:———

ಸಂಹಿತಾಪಾಠಃ

ತ್ರೀಣಿ ತ ಆಹುರ್ದಿವಿ ಬಂಧನಾನಿ ತ್ರೀಣ್ಯಪ್ಸು ತ್ರೀಣ್ಯಂತಃ ಸಮುದ್ರೇ ।

ಉತೇವ ಮೇ ವರುಣಶ್ಛಂತ್ಸ್ಯರ್ವನ್ಯತ್ರಾ ತ ಆಹುಃ ಪರಮಂ ಜನಿತ್ರಂ ।

॥ ೪ ॥

ಪದಪಾಠಃ

ತ್ರೀಣಿ । ತೇ । ಆಹುಃ । ದಿವಿ । ಬಂಧನಾನಿ । ತ್ರೀಣಿ । ಅಪ್ಽಸು । ತ್ರೀಣಿ । ಅಂತರಿತಿ । ಸಮುದ್ರೇ ।

ಉತಽಇವ । ಮೇ । ವರುಣಃ । ಛಂತ್ಸಿ । ಅರ್ವನ್ । ಯತ್ರ । ತೇ । ಆಹುಃ । ಪರಮಂ । ಜನಿತ್ರಂ ॥ ೪ ॥

ಸಾಯಣಭಾಷ್ಯಂ

ಪೂರ್ವಂ ದಿವಿ ತ್ರೀಣಿ ಬಂಧನಾನೀತ್ಯುಕ್ತಂ । ಇದಾನೀಂ ಸ್ಥಾನತ್ರಯೇಷ್ವಪಿ ತ್ರೀಣಿ ಬಂಧನಾನೀತ್ಯಾಹ । ಹೇ ಅರ್ವನ್ ತೇ ತವ ದಿವಿ ಸಂಬಂಧನಾನಿ ತ್ರೀಣ್ಯಾಹುಃ । ತಾನಿ ಪೂರ್ವಮುಕ್ತಾನಿ । ಅಪ್ಸು । ಅಬುಪಜೀವಿತತ್ವಾದ್ಭೂಲೋಕೋಽಪ್ಯಪ್ಶಬ್ದೇನಾಭಿಧೀಯತೇ । ಪೃಥಿವ್ಯಾಂ ತ್ರೀಣಿ ಬಂಧನಾನ್ಯಾಹುಃ । ಅನ್ನಂ ಸ್ಥಾನಂ ಬೀಜಮಿತಿ ತ್ರೀಣಿ । ತಥಾ ಸಮುದ್ರೇಂತಃ ಸಮುದ್ರಮಧ್ಯೇ । ಸಮುದ್ದ್ರವಣಾದಪಾದಾನಾತ್ಸಮುದ್ರಮಂತರಿಕ್ಷಂ। ತಸ್ಮಿಂಸ್ತ್ರೀಣಿ ವೃಷ್ಟ್ಯುತ್ಪತ್ತಿನಿಮಿತ್ತಾನಿ ಮೇಘೋ ವಿದ್ಯುತ್ ಸ್ತನಿತಮಿತಿ। ಉತೇವ। ಇವಶಬ್ದಶ್ಚಾರ್ಥೇ । ಅಪಿ ಚ ಹೇ ಅರ್ವನ್ನಶ್ವ ವರುಣಃ ಪಾಪಸ್ಯ ವಾರಕಃ ಫಲಸ್ಯಾವರ್ಜಯಿತಾ ವಾ ತ್ವಂ ಮೇ ಮಹ್ಯಂ ಛಂತ್ಸಿ । ಕಥಯಸಿ। ಕಿಂ ಕಥಯಸೀತಿ ಚೇತ್ ಉಚ್ಯತೇ। ತೇ ತವ ಪರಮಂ ಜನಿತ್ರಂ ನಿರತಿಶಯಂ ಜನ್ಮ । ಜನೇರೌಣಾದಿಕ ಇತ್ರಪ್ರತ್ಯಯಃ ॥ ಯತ್ರ ಯೇಷು ತ್ರಿಷೂಕ್ತೇಷು ಸ್ಥಾನೇಷ್ವಾಹುಃ ಕಥಯಂತಿ । ಯದ್ವಾ। ಯತ್ರ ಯಸ್ಮಿನ್ನಾದಿತ್ಯೇ ಪರಮಂ ಜನಿತ್ರಮಾಹುಃ ಸೂರಾದಶ್ವಂ ವಸವೋ ನಿರತಷ್ಟೇತ್ಯುಕ್ತತ್ವಾತ್ । ತಾದೃಶಂ ಪ್ರಶಸ್ಯಂ ಜನ್ಮ ಯಜ್ಞಸಾಧನಭಾವೇನ ಕಥಯಸೀತ್ಯರ್ಥಃ ॥

ಪ್ರತಿಪದಾರ್ಥ

(ಅರ್ವನ್—ಎಲೈ ಅಶ್ವವೇ) । ತೇ—ನಿನಗೆ। ದಿವಿ—ದ್ಯುಲೋಕದಲ್ಲಿ । ತ್ರೀಣಿ ಬಂಧನಾನಿ—ಮೂರು ಬಂಧನಗಳೂ । ಅಪ್ಸು—ಪೃಥ್ವಿಯಲ್ಲಿ । ತ್ರೀಣಿ—ಮೂರು (ಬಂಧನಗಳೂ) । ಸಮುದ್ರೇ ಅಂತಃ—ಅಂತರಿಕ್ಷದ ಮಧ್ಯಭಾಗದಲ್ಲಿ । ತ್ರೀಣಿ—ಮೂರು (ಬಂಧನಗಳೂ) ಉಂಟೆಂದು । ಆಹುಃ—(ತತ್ತ್ವಜ್ಞರು) ಹೇಳುತ್ತಾರೆ । ಉತೇವ—ಅವರು ಹೇಳುವುದು ಮಾತ್ರವಲ್ಲದೇ । ಅರ್ವನ್—ಎಲೈ ಅಶ್ವವೇ, । ಯತ್ರ—ಯಾವ ಮೂರು ಸ್ಥಾನಗಳಲ್ಲಿಯೂ ಅಥವಾ ಯಾವ ಆದಿತ್ಯನಿಂದ (ಸಂಭವಿಸಿದ) । ತೇ—ನಿನ್ನ । ಜನಿತ್ರಂ—ಉತ್ಪತ್ತಿಯನ್ನೂ । ಪರಮಂ—ಅತ್ಯತಿಶಯವಾದುದೆಂಬುದಾಗಿ । ಆಹುಃ—ವರ್ಣಿಸುತ್ತಾರೋ (ಅಂತಹ ನಿನ್ನ

ಜನ್ಮದ ಸ್ವರೂಪವನ್ನು) । ವರುಣಃ—ಪಾಪನಿವಾರಕನಾದ ಅಥವಾ ಫಲದಾಯಕನಾದ ನೀನು । ಮೇ—ನನಗೆ । ಛನ್ತ್ಸಿ—ಹೇಳುತ್ತೀಯೆ, (ನಿನ್ನ ವ್ಯವಹಾರಗಳಿಂದ ಪ್ರಕಾಶಪಡಿಸುತ್ತೀಯೆ).

**ಭಾವಾರ್ಥ**

ಎಲೈ ಅಶ್ವವೇ, ನಿನಗೆ ದ್ಯುಲೋಕದಲ್ಲಿ ಮೂರು ಬಂಧನಗಳೂ, ಪೃಥ್ವಿಯಲ್ಲಿ ಮೂರು ಬಂಧನಗಳೂ, ಅಂತರಿಕ್ಷದ ಮಧ್ಯಭಾಗದಲ್ಲಿ ಮೂರು ಬಂಧನಗಳೂ ಉಂಟೆಂದು ತತ್ತ್ವಜ್ಞರು ಹೇಳುತ್ತಾರೆ. ಅವರು ಹೇಳುವುದು ಮಾತ್ರವಲ್ಲದೇ ಎಲೈ ಅಶ್ವವೇ, ಯಾವ ಆದಿತ್ಯನಿಂದ ಸಂಭವಿಸಿದ ನಿನ್ನ ಉತ್ಪತ್ತಿಯನ್ನು ತತ್ತ್ವಜ್ಞರು ಅತ್ಯತಿಶಯವಾದುದೆಂದು ವರ್ಣಿಸುತ್ತಾರೆಯೋ ಅಂತಹ ನಿನ್ನ ಜನ್ಮದ ಸ್ವರೂಪವನ್ನು ಪಾಪನಿವಾರಕನಾದ ನೀನು ನನಗೆ ನಿನ್ನ ವ್ಯವಹಾರಗಳಿಂದ ಪ್ರಕಾಶಪಡಿಸುತ್ತೀಯೆ.

## English Translation

They have said that three are your binds in heaven; three upon earth; and three in the firmament. You declare to me, Horse, who are (one with) Varuna, that which they have called your most excellent birth.

**ವಿಶೇಷವಿಷಯಗಳು**

ಹಿಂದಿನ ಋಕ್ಕಿನಲ್ಲಿ " ತ್ರೀಣಿ ಬಂಧನಾನಿ " ಎಂದು ಆದಿತ್ಯಾದಿಗಳ ಮೂಲಕವಾಗಿ ನಿಯತವಾಗಿ ಮಾಡುತ್ತಿರುವ ಅಶ್ವದ ಲೋಕೋಪಕಾರಕವಾದ ವ್ಯವಹಾರಗಳನ್ನು ವರ್ಣಿಸಿದೆ. ಇಲ್ಲಿ ಒಂದೊಂದು ಲೋಕದಲ್ಲಿಯೂ ಮೂರು ಬಂಧನಗಳಿವೆಯೆಂದು ಹೇಳಿದೆ. ಆದರಲ್ಲಿ ಕೊಂಚಭಾಗವನ್ನು ಹಿಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಿದೆ.

ಅಪ್ಸು ತ್ರೀಣಿ — ಅಬುಪಜೀವಿತತ್ವಾತ್ ಭೂಲೋಕೋಽಪಿ ಅಪ್‌ಶಬ್ದೇನಾಭಿಧೀಯತೇ । ಪೃಥಿವ್ಯಾಂ । ಅಪ್ಪಿನ (ಉದಕದ) ಅವಲಂಬನದಿಂದ ಜೀವಿಸುವುದಾದುದರಿಂದ ಭೂಲೋಕಕ್ಕೂ ಅಪ್ ಎಂಬುದು ಪರ್ಯಾಯನಾಮವಾಗಿದೆ. ಆದುದರಿಂದ ಅಪ್ಸು ಎಂದರೆ ಪೃಥಿವಿಯಲ್ಲಿ ಎಂದು ಇಲ್ಲಿ ಅರ್ಥವಾಗುತ್ತದೆ ಎಂದು ಸಾಯಣರು ವಿವರಿಸಿದ್ದಾರೆ. ಇಲ್ಲಿನ ಸಂದರ್ಭಕ್ಕೆ ಈ ಅರ್ಥವು ಹೊಂದಿಕೊಳ್ಳುತ್ತದೆ. ದಿವಿ, ಸಮುದ್ರೇ, ಎಂದು ದ್ಯುಲೋಕ, ಅಂತರಿಕ್ಷಲೋಕಗಳ ಜೊತೆಯಲ್ಲಿ ಪೃಥ್ವಿಯನ್ನೂ ಸೇರಿಸಿಕೊಳ್ಳಬೇಕಾದರೆ ಅಪ್ಸು ಎಂಬ ಪದಕ್ಕೆ ಪೃಥ್ವಿಯಲ್ಲಿ ಎಂಬರ್ಥವನ್ನು ಮಾಡಲೇಬೇಕು. ಆದರೆ ಸಾಯಣರು ತೈತ್ತಿರೀಯಸಂಹಿತೆಯಲ್ಲಿ ಇದೇ ಮಂತ್ರವನ್ನು ವ್ಯಾಖ್ಯಾನಮಾಡಿರುವಾಗ ಅಲ್ಲಿ ಅಪ್ಸು ಎಂಬುದಕ್ಕೆ ಉದಕದಲ್ಲಿ ಎಂದರ್ಥಮಾಡಿದ್ದಾರೆ. ಆ ವ್ಯಾಖ್ಯಾನವು ಈ ರೀತಿಯಿದೆ.

> ಯಥಾ ದ್ಯುಲೋಕೇ ತವೋಚ್ಚೈಃಶ್ರವೋರೂಪಸ್ಯ ಬಂಧನತ್ರಯಮಭಿಜ್ಞಾ ಆಹುಸ್ತಥೈವಾಪ್ಸು ಸಮುದ್ರೇ ಚ । ಯಥಾ ವಾ ವಾಜಪೇಯೇಽಪ್ಸ್ವಂತರಮೃತಮಿತಿ ಮಂತ್ರೇಣಾಶ್ವಾನಪ್ಸು ಸ್ನಾಪಯಂತಿ ತಥಾಪಿ ಪೂರ್ವೋಕ್ತರೀತ್ಯಾ ಬಂಧನತ್ರಯಮಪೇಕ್ಷಿತಂ ತಥಾ ಸಮುದ್ರಮಧ್ಯೇ ಸ್ಥಿತಾಯಾ ವಡವಾಯಾ ಬಂಧನತ್ರಯಂ ಇತ್ಯೇವಮಭಿಜ್ಞಾ ಆಹುಃ.
>
> (ತೈ. ಸಂ. ಭಾ. ೪.೬ ೭)

ಇಲ್ಲಿ " ಅಪ್ಸು । ಅಂತರಮೃತಮಪ್ಸು ಭೇಷಜಮಪಾಂ " ಎಂಬ ವಾಜಪೇಯದ ಕಾಲದಲ್ಲಿ ಉಪಯೋಗಿಸುವ ಮಂತ್ರವನ್ನು ಉದಹರಿಸಿ ಅಲ್ಲಿ ಉದಕವೆಂದರ್ಥವಾಗುವಂತೆ ತೈತ್ತಿರೀಯ ಸಂಹಿತಾವಾಕ್ಯಕ್ಕೂ ಉದಕವೆಂಬರ್ಥವೆಂದು ತೋರಿಸಿದ್ದಾರೆ. ಸಮುದ್ರಕ್ಕೆ ರೂಢವಾಗಿರತಕ್ಕ ಸಮುದ್ರವೆಂದು ಹೇಳಿದ್ದಾರೆ. ಈ ಭಾಷ್ಯವನ್ನೇ ಆಧಾರವನ್ನಾಗಿಟ್ಟುಕೊಂಡು Keith ಎಂಬುವನೂ ಸಹ ಆ ವಾಕ್ಯಕ್ಕೆ ಈ ರೀತಿ ಪರಿವರ್ತನವನ್ನು ಮಾಡಿದ್ದಾನೆ.

Three, they say, are thy bonds in the sky, Three in the waters, three within the ocean; And like Varuna to me thou appearest, where, they say, is thy highest, O steed, birth place.

[Harvard oriental Series Vol. 19. P. 376]

ಹೀಗೆ ಋಕ್ಸಂಹಿತಾವಾಕ್ಯಕ್ಕೆ ಒಂದು ವಿಧವಾಗಿಯೂ, ತೈತ್ತಿರೀಯಸಂಹಿತೆಯಲ್ಲಿ ಉದಹರಿಸಿರುವ ಅದೇ ಮಂತ್ರಕ್ಕೆ ಇನ್ನೊಂದು ವಿಧವಾಗಿಯೂ ಅರ್ಥಮಾಡಿರುವುದರಿಂದ ಇಂತಹ ಸಂದರ್ಭಗಳಲ್ಲಿ ನಿಷ್ಕೃಷ್ಟವಾದ ತಾತ್ಪರ್ಯವು ತಿಳಿಯುವುದು ಕಷ್ಟವಾಗುತ್ತದೆ. ಆದರೆ ಪ್ರಕೃತವಾದ ಸಂದರ್ಭದಲ್ಲಿ ಋಕ್ಸಂಹಿತಾಮಂತ್ರದಲ್ಲಿ ಹೇಳಿರುವ ವಿವರಣೆಯೇ ಸಂದರ್ಭಕ್ಕನುಗುಣವಾಗಿದೆ ಅದರಲ್ಲಿ ಪೃಥ್ವಿಯಲ್ಲಿರುವ ಬಂಧನತ್ರಯವು ಯಾವುದು ಮತ್ತು ಅಂತರಿಕ್ಷದ ಬಂಧನತ್ರಯದ ಸ್ವರೂಪವೇನು ಎಂಬುದನ್ನು ವಿವರಿಸುತ್ತಾ, ಅಪ್ಸು ಅನ್ನಂ, ಸ್ಥಾನಂ, ಬೀಜಮಿತಿ ತ್ರೀಣಿ । ಅಂತರಿಕ್ಷೇ ವೃಷ್ಟ್ಯುತ್ಪತ್ತಿನಿಮಿತ್ತಾನಿ ಮೇಘೋ, ವಿದ್ಯುತ್, ಸ್ತನಿತಮಿತಿ । ಪೃಥ್ವಿಯಲ್ಲಿ ಅನ್ನ ಸ್ಥಾನ, ಬೀಜವೆಂಬ ಮೂರುವಿಧವಾದ ಬಂಧನವೂ, ಅಂತರಿಕ್ಷದಲ್ಲಿ ವೃಷ್ಟ್ಯುತ್ಪತ್ತಿಗೆ ಕಾರಣವಾದ ಮೇಘ, ಮಿಂಚು ಮತ್ತು ಗುಡುಗು ಎಂಬ ಮೂರುವಿಧವಾದ ಬಂಧನವೆಂದೂ ವಿವರಿಸಿದ್ದಾರೆ. ಈ ವಾಕ್ಯಕ್ಕೆ ಇನ್ನೂ ಗೂಢವಾದ ತಾತ್ಪರ್ಯವಿರಬೇಕೆಂದು ತೋರುತ್ತದೆ.

ವರುಣಃ—ಎಂಬ ಪದವು ಇಲ್ಲಿ ಅಶ್ವಪರ್ಯಾಯವಾಗಿಯೇ ಇದೆ. ಪಾಪಸ್ಯ ವಾರಕಃ ಫಲಸ್ಯಾವರ್ಜಯಿತಾ । ಪಾಪವನ್ನು ನಿವಾರಿಸುವವನು ಅಥವಾ ಫಲವನ್ನು ಒದಗಿಸುವವನು ಎಂಬರ್ಥವಾಗುತ್ತದೆಂದು ವಿವರಿಸಿದ್ದಾರೆ. ಅಥವಾ ಹಿಂದೆ ಯಮೇನ ದತ್ತಂ (೧-೧೬೩-೨) ಎಂಬ ವಾಕ್ಯದಲ್ಲಿ ಅಗ್ನಿಯಿಂದ ದತ್ತವಾದ ಎಂಬ ಸಂಬಂಧವನ್ನು ಹೇಳಿರುವುದರಿಂದಲೇ ಅಸಿ ಯಮಃ ಅಸ್ಯಾದಿತ್ಯಃ (೧-೧೬೩-೩) ಎಂದು ತಾದಾತ್ಮ್ಯವನ್ನು ಹೇಳಿರುವಂತೆ ಇದೇ ಅಶ್ವವು ವರುಣನೊಂದಿಗೂ ಅತ್ಯಂತ ನಿಕಟವಾದ ಸಂಬಂಧವನ್ನು ಹೊಂದಿರುವುದರಿಂದ ಇಲ್ಲಿ ವರುಣನೊಂದಿಗೆ ತಾದಾತ್ಮ್ಯವನ್ನು ಹೇಳಿರಬಹುದು. ವರುಣನೊಂದಿಗೆ ಈ ಮೇಧ್ಯಾಶ್ವಕ್ಕಿರುವ ಸಂಬಂಧವನ್ನು ಈ ರೀತಿ ತಿಳಿಸಿದೆ.

ವಾರುಣೋ ವಾ ಅಶ್ವಃ । ತಂ ದೇವತಯಾ ವ್ಯರ್ಧಯತಿ ।

(ತೈ. ಬ್ರಾ. ೩-೮-೧೬-೧)

ಎಂಬ ಬ್ರಾಹ್ಮಣವಾಕ್ಯವನ್ನುದಹರಿಸಿ ಹಿಂದೆ ಈ ವಿಷಯವನ್ನು ವಿವರಿಸಿದೆ. ಇದೇ ಅಲ್ಲದೇ,

ಅಥ ಶ್ವೋ ಭೂತೇ । ಸೂತಸ್ಯ ಗೃಹಾನ್ಪರೇತ್ಯ ವಾರುಣಂ ಯವಮಯಂ ಚರುಂ ನಿರ್ವಪತಿ ಸ ವೋ ವೈ ಸೂತಃ ಸ ವೋ ವೈ ದೇವಾನಾಂ ವರುಣಸ್ತಸ್ಮಾದ್ವಾರುಣೋ ಭವತ್ಯೇತೇದ್ವಾ

ಅಸ್ಯೈಕಂ ರತ್ನಂ ಯತ್ರೋತಸ್ತಸ್ಮಾ ಏವೈತೇನ ಸೂಯತೇ ತೇಗ್ಗ್ ಸ್ವಮನೇಕಕ್ರಮಿಣಂ ಕುರುತೇ ತಸ್ಯಾಶ್ವೋ ದಕ್ಷಿಣಾ ಸ ಹಿ ವಾರುಣೋ ಯದಶ್ವಃ ॥

(ಶ. ಬ್ರಾ. ೪-೩-೧-೫)

ಎಂಬಲ್ಲಿ ವರುಣನಿಗೂ ಅಶ್ವಕ್ಕೂ ತಾದಾತ್ಮ್ಯವನ್ನೇ ಹೇಳಿ ರಾಜಸೂಯದಲ್ಲಿ ಅಶ್ವಕ್ಕೆ ಪ್ರಿಯವಾದ ಯವವನ್ನು ವರುಣನಿಗೂ ಅರ್ಪಿಸಬೇಕೆಂಬ ವಿಧಿಯಿದೆ. ಹೀಗೆ ಇನ್ನೂ ಅನೇಕ ಸಂದರ್ಭಗಳಲ್ಲಿ ಈ ವಿಧವಾದ ತಾದಾತ್ಮ್ಯವನ್ನು ಹೇಳಿರುವುದರಿಂದ ಪ್ರಕೃತವಾದ ಋಕ್ಕಿನಲ್ಲಿಯೂ ಅದೇ ಅಭಿಪ್ರಾಯವು ಸೂಚಿತವಾಗುತ್ತದೆ ಎಂದರೆ ತಪ್ಪಾಗಲಾರದು.

॥ ವ್ಯಾಕರಣಪ್ರಕ್ರಿಯಾ ॥

ಅಪ್ಸು—ಸಪ್ತಮೀಬಹುವಚನಾಂತರೂಪ ಊಡಿದಂಪದಾದಿ—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಛನ್ತ್ಸಿ—ಛದಿ ಸಂವರಣೇ. ಧಾತು. ಚುರಾದಿ. ಇದಿತ್ತಾದುದರಿಂದ ಣಿಚ್ ವಿಕಲ್ಪವಾದುದರಿಂದ ಬರುವುದಿಲ್ಲ. ಇದಿತೋ ನುಮ್‌ಧಾತೋಃ (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. ಲಟ್ ಮಧ್ಯಮ ಪುರುಷ ಏಕವಚನದಲ್ಲಿ ಸಿಪ್. ಖರಿ ಚ ಎಂಬುದರಿಂದ ಧಾತು ದಕಾರಕ್ಕೆ ಚರ್ತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಯತ್ರಾ—ಋಚಿತುನುಘ—(ಪಾ. ಸೂ. ೬-೩-೧೩೩) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

ಜನಿತ್ರಮ್—ಜನೀ ಪ್ರಾದುರ್ಭಾವೇ, ಧಾತು. ಅಶಿತ್ರಾದಿಯಲ್ಲಿ ಸೇರಿರುವುದರಿಂದ ಅಶಿತ್ರಾದಿಭ್ಯ ಇತ್ರೋತ್ರೌ (ಉ. ಸೂ. ೪-೬೮) ಎಂಬುದರಿಂದ ಇತ್ರ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ. ॥ ೪ ॥

---

ಸಂಹಿತಾಪಾಠಃ

ಇಮಾ ತೇ ವಾಜಿನ್ನವಮಾರ್ಜನಾನೀಮಾ ಶಫಾನಾಂ ಸನಿತುರ್ನಿಧಾನಾ ।
ಅತ್ರಾ ತೇ ಭದ್ರಾ ರಶನಾ ಅಪಶ್ಯನ್ನೃತಸ್ಯ ಯಾ ಅಭಿರಕ್ಷಂತಿ ಗೋಪಾಃ ।
॥ ೫ ॥

। ಪದಪಾಠಃ ।

ಇಮಾ । ತೇ । ವಾಜಿನ್ । ಅವಮಾರ್ಜನಾನಿ । ಇಮಾ । ಶಫಾನಾಂ । ಸನಿತುಃ । ನಿಧಾನಾ ।
ಅತ್ರ । ತೇ । ಭದ್ರಾಃ । ರಶನಾಃ । ಅಪಶ್ಯಂ । ಋತಸ್ಯ । ಯಾಃ । ಅಭಿರಕ್ಷಂತಿ । ಗೋಪಾಃ ॥ ೫ ॥

### ಸಾಯಣಭಾಷ್ಯಂ

ಹೇ ವಾಜಿನ್ನಶ್ವ ತೇ ಸಂಬಂಧೀನ್ಯವಮಾರ್ಜನಾನ್ಯಂಗಸಂಶೋಧಕಾನಿ ಸ್ಥಾನಾನೀಮೇಮಾನ್ಯ-ಕ್ತಾನಿ ದ್ಯುಲೋಕಾದೀನಿ ಕಿಂಚ ಸನಿತುರ್ಯಾಗಸಂಭಕ್ತುಸ್ತವೇಮೇಮಾನಿ ಶಫಾನಾಂ ನಿಧಾನಾನಿ ಸ್ಥಾನಾನಿ। ಸಂಚಾರಪ್ರದೇಶಾ ಇತ್ಯರ್ಥಃ । ಕಿಂಚಾತ್ರೈವ ತೇ ತವ ಭದ್ರಾ ಭಂಧನೀಯಾಃ ಕಲ್ಯಾಣಾ ರಶನಾ ಗ್ರೀವಾ-ದಿಷು ಸಂಯುಕ್ತಾ ರಜ್ಜೂರತ್ರಾಪಶ್ಯಂ । ಏಷೂಕ್ತೇಷು ಸ್ಥಾನೇಷ್ವಪಶ್ಯಂ । ರಶನಾ ವಿಶೇಷ್ಯಂತೇ । ಯಾ ಗೋಪಾ ಗೋಪಯಿತ್ರ್ಯೋ ರಶನಾ ಋತಸ್ಯಸತ್ಯಭೂತಸ್ಯ ಯಜ್ಞಸಾಧನಸ್ಯ ವಾಶ್ವಸ್ಯ॥ ಕರ್ಮಣಿ ಷಷ್ಠೀ॥ ಋತಮಭಿರಕ್ಷಂತಿ ಅಭಿತಃ ಪಾಲಯಂತಿ ತಾ ಅಪಶ್ಯಂ । ದೃಷ್ಟವಾನಸ್ಮಿ । ಯದ್ವಾ । ಇಮಾ ತೇ ತವಾ-ವಮಾರ್ಜನಾನ್ಯಂಗಪ್ರಕ್ಷಾಲನಸಾಧನಾನ್ಯುದಕಾನಿ । ಇಮಾನಿ ಸನಿತುಸ್ತವ ಶಫಾನಾಂ ನಿಧಾನಾನಿ ದೇವ-ಯಜನಭೂಮಯಃ ಸಂಚಾರಪ್ರದೇಶಾ ವಾ । ಅತ್ರಾಸ್ಮಿನ್ದೇವಯಜನಸ್ಥಾನೇ ಯಾ ರಶನಾ ಗೋಪಾಸ್ತವ ಪಾಲಯಿತಾರೋ ರಾಜಪುರುಷಾ ಋತ್ವಿಜೋ ವಾ ಋತಸ್ಯ ಸಂಬಂಧಿನ್ಯೋಽಭಿರಕ್ಷಂತಿ ತಾ ಅಪಶ್ಯಂ ॥

### ಪ್ರತಿಪದಾರ್ಥ

ವಾಜಿನ್—ಎಲೈ ಅಶ್ವವೇ । ತೇ—ನಿನ್ನ । ಅವಮಾರ್ಜನಾನಿ—ಅಂಗಗಳನ್ನು ಶುದ್ಧಿಮಾಡತಕ್ಕ ಸ್ಥಾನಗಳಾದ । ಇಮಾ—ಈ ದ್ಯುಲೋಕಾದಿಗಳನ್ನೂ । ಸನಿತುಃ—ಯಜ್ಞದಲ್ಲಿ ಭಾಗವಹಿಸತಕ್ಕ ನಿನ್ನ । ಶಫಾನಾಂ—ಗೊರಸುಗಳನ್ನು । ನಿಧಾನಾ—ಇಡತಕ್ಕ । ಇಮಾ—ಈ ಪ್ರದೇಶಗಳನ್ನೂ (ಮತ್ತು) । ಯಾಃ—ಯಾವುವು । ಗೋಪಾಃ—ರಕ್ಷಕವಾದವೂ । ಋತಸ್ಯ—ಯಜ್ಞಸಾಧನವಾದ ಅಥವಾ ಸತ್ಯಾತ್ಮಕವಾದ ಅಶ್ವವನ್ನು । ಅಭಿ-ರಕ್ಷಂತಿ—ಕಾಪಾಡುತ್ತವೆಯೋ ಅಂತಹವೂ ಮತ್ತು । ಭದ್ರಾಃ—ಮಂಗಳಾತ್ಮಕವಾದವೂ ಆದ । ತೇ—ನಿನ್ನ । ರಶನಾಃ—ಕಡಿವಾಣಗಳನ್ನು । ಅತ್ರ—ಇಲ್ಲಿ । ಅಪಶ್ಯಂ—ನೋಡಿದ್ದೇನೆ.

### ಭಾವಾರ್ಥ

ಎಲೈ ಅಶ್ವವೇ, ನಿನ್ನ ಅಂಗಗಳನ್ನು ಶುದ್ಧಿಮಾಡತಕ್ಕ ಸ್ಥಾನಗಳಾದ ಈ ದ್ಯುಲೋಕಾದಿಗಳನ್ನೂ, ಯಜ್ಞದಲ್ಲಿ ಭಾಗವನ್ನು ವಹಿಸತಕ್ಕ ನಿನ್ನ ಗೊರಸುಗಳನ್ನು ಇಡತಕ್ಕ ಈ ಪ್ರದೇಶಗಳನ್ನೂ ಮತ್ತು ಯಜ್ಞಸಾಧನವಾದ ಅಶ್ವವನ್ನು ಕಾಪಾಡತಕ್ಕವೂ ಮತ್ತು ಮಂಗಳಾತ್ಮಕವೂ ಆದ ನಿನ್ನ ಕಡಿವಾಣಗಳನ್ನು ಇಲ್ಲಿ ನೋಡಿದ್ದೇನೆ.

### English Translation

I have beheld, Horse, these your purifying (regions); these impressions of the feet of you, who share in the sacrifice; and here your auspicious reins, which are the protectors of the rite that preserve it.

### ವಿಶೇಷವಿಷಯಗಳು

ಈ ಋಕ್ಕಿಗೆ ಎರಡು ವಿಧವಾದ ಅನ್ವಯವನ್ನು ಮಾಡಿದ್ದಾರೆ. ಮೊದಲನೆಯದಾಗಿ, ದ್ಯುಲೋಕಾದಿಗಳ ಪರವಾಗಿಯೂ ಎರಡನೆಯದಾಗಿ ಉದಕಾದಿಗಳ ಪರವಾಗಿಯೂ ವಿವರಿಸಿದೆ. ಮೊದಲನೆಯ ಅನ್ವಯವನ್ನು ಪ್ರತಿಪದಾ

ರ್ಥದಲ್ಲಿ ಕೊಟ್ಟಿದೆ. ಎರಡನೆಯದಾಗಿ, ಅವಮಾರ್ಜನಾನಿ ಎಂಬ ಪದಕ್ಕೆ ಅಂಗಪ್ರಕ್ಷಾಲನಸಾಧನಾನ್ಯುದಕಾನಿ ಎಂದರೆ ಅಂಗಗಳನ್ನು ತೊಳೆದು ಶುದ್ಧಿಮಾಡತಕ್ಕ ಉದಕಗಳೆಂದೂ, ಶಫಾನಾಂ ನಿಧಾನಾ ಇಮಾ ಎನ್ನುವುದಕ್ಕೆ ಗೊರಸುಗಳನ್ನು ಇಡತಕ್ಕ ಯಜ್ಞಭೂಮಿಯೆಂದೂ ಗೋಪಾಃ ರಶನಾಃ ಎಂಬುದಕ್ಕೆ ಯಜ್ಞರಕ್ಷಕರಾದ ಋತ್ವಿಕ್ಕುಗಳೆಂದೂ ಅಥವಾ ಅಶ್ವರಕ್ಷಕರಾದ ರಾಜಪುರುಷರೆಂದೂ ಅರ್ಥಮಾಡಿದೆ.

ತೈತ್ತಿರೀಯಸಂಹಿತೆಯಲ್ಲಿರುವ ಇದೇ ಮಂತ್ರಕ್ಕೆ ಸಾಯಣರು ಇನ್ನೂ ಕೊಂಚ ವ್ಯತ್ಯಸ್ತವಾಗಿ ಅರ್ಥಮಾಡಿದ್ದಾರೆ. ಅಲ್ಲಿ (ತೈ. ಸಂ. ೪-೬-೭) ಅವಮಾರ್ಜನಾನಿ ಎಂಬುದಕ್ಕೆ ಶರೀರಶೋಧನಸಾಧನಾನಿ ಲೋಹಮಯಾನಿ । ಶರೀರವನ್ನು ಉಜ್ಜತಕ್ಕ ಲೋಹಮಯವಾದ ಸಾಧನವೆಂದೂ ; ಶಫಾನಾಂ ನಿಧಾನಾ ಎನ್ನುವುದಕ್ಕೆ ಲೋಹಮಯಾನ್ಯಾಭರಣವಿಶೇಷರೂಪಾಣಿ ಎಂದರೆ ರಾಜಾಶ್ವಗಳು ನಡೆಯುವಾಗ ಅವುಗಳ ಗೊರಸುಗಳಿಗೆ ಯಾವ ವಿಧವಾದ ತೊಂದರೆಗಳೂ ಆಗದಿರಲೆಂದು ಲೋಹಮಯವಾದ ಮುಚ್ಚಳವನ್ನು ಹಾಕುವುದು ವಾಡಿಕೆಯಾದುದರಿಂದ ಇಲ್ಲಿಯೂ ಅಂತಹ ಆವರಣಸಾಧನವನ್ನು ಸೂಚಿಸುವ ಪದವೆಂದೂ, ಅರ್ಥಮಾಡಿದ್ದಾರೆ.

ಭದ್ರಾಃ—ಭದ್ರಂ ಭಗೇನ ವ್ಯಾಖ್ಯಾತಂ । ಭಜನೀಯಂ, ಭೂತಾನಾಮಭಿದ್ರವಣೀಯಂ ಭವದ್ರಮಯತೀತಿ ವಾ ಭಾಜನವದ್ವಾ । (ನಿ. ೪-೯) । ಶ್ರೇಯಸ್ಕರ ಅಥವಾ ಮಂಗಳಕರ ಎಂಬರ್ಥದಲ್ಲಿ ಭದ್ರಶಬ್ದವು ಉಪಯೋಗಿಸಲ್ಪಡುತ್ತದೆ. ಇನ್ನೂ ವಿವರಿಸಿದರೆ ಭೋಗಕ್ಕೆ ಅರ್ಹವಾದುದು, ಪ್ರಾಣಿಗಳಿಗೆ ಅತ್ಯಂತ ಅಪೇಕ್ಷಿತವಾದುದು, ಅಥವಾ ಸುಖಭೋಗವನ್ನುಂಟುಮಾಡತಕ್ಕದ್ದು ಅಥವಾ ಅರ್ಹತೆಯುಳ್ಳವನಿಗೆ ಮಾತ್ರ ಸೇರತಕ್ಕದ್ದು ಎಂಬ ಅರ್ಥಗಳಲ್ಲಿ ಭದ್ರಶಬ್ದದ ಪ್ರಯೋಗವಿದೆ. ನಿರುಕ್ತಕಾರರು ಈ ಪದವನ್ನು ವಿವರಿಸುವಾಗ ಶ್ರುತಿವಾಕ್ಯದ ಉದಾಹರಣೆಯಿಂದ ಸನ್ನಿವೇಶಕ್ಕನುಗುಣವಾದ ಅರ್ಥವನ್ನು ವಿವರಿಸಿದ್ದಾರೆ.

ಅತ್ರಾ ಸಖಾಯಃ ಸಖ್ಯಾನಿ ಜಾನತೇ ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿ ವಾಚಿ ॥

(ಋ. ಸಂ. ೧೦-೭೧-೨)

ಎಂಬ ವಾಕ್ಯದಲ್ಲಿ ಭದ್ರಶಬ್ದವನ್ನು ವಿವರಿಸುತ್ತಾ ಮಂಗಳಾತ್ಮಕವಾದುದು ಎಂಬರ್ಥವನ್ನು ಹೇಳಿದ್ದಾರೆ, ಅದರಂತೆ ಇಲ್ಲಿಯೂ ಸಹ ಮಂಗಳಾತ್ಮಕ ಎಂದು ಅರ್ಥ

### ವ್ಯಾಕರಣಪ್ರಕ್ರಿಯಾ

ಇಮಾ—ನಪುಂಸಕ ಬಹುವಚನದಲ್ಲಿ ಶೇಶ್ಛಂದಸಿ ಬಹುಲಮ್ (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

ಅವಮಾರ್ಜನಾನಿ—ಮೃಜೂ ಶುದ್ಧೌ. ಧಾತು. ಲ್ಯುಟ್ ಪ್ರತ್ಯಯ ಯುವೋರನಾಕೌ ಎಂಬುದರಿಂದ ಅನಾದೇಶ. ಪ್ರತ್ಯಯ ನಿಮಿತ್ತವಾಗಿ ಮೃಜೇರ್ವೃದ್ಧಿಃ (ಪಾ ಸೂ. ೭-೨-೧೧೪) ಎಂಬುದರಿಂದ ಧಾತುವಿನ ಲಘೂಪಧೆಗೆ ವೃದ್ಧಿ. ರಪರವಾಗಿ ಬರುತ್ತದೆ. ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

ಸನಿತುಃ—ಷಣ ಸಂಭಕ್ತೌ. ಧಾತು. ಧಾತ್ವಾದೇಃ ಷಃ ಸಃ ಎಂಬುದರಿಂದ ಆದಿಗೆ ಸತ್ವ. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಆರ್ಧಧಾತುಕೆ—(ಪಾ. ಸೂ. ೭-೨-೩೫) ಎಂಬುದರಿಂದ ಅದಕ್ಕೆ ಇಡಾಗಮ. ಷಷ್ಠೀ ಏಕವಚನಾಂತರೂಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ನಿಧಾನಾ—ಡುಧಾಞ್ ಧಾರಣಪೋಷಣಯೋಃ ಧಾತು. ಕರಣಾಧಿಕರಣಯೋಶ್ಚ ( ಪಾ. ಸೂ. ೩-೩-೧೧೭) ಎಂಬುದರಿಂದ ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ. ಅದಕ್ಕೆ ಅನಾದೇಶ. ಗತಿಕಾರಕೋಪಪದಾತ್-ಕೃತ್ (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ನಪುಂಸಕ ಬಹುವಚನದಲ್ಲಿ ಶೇಶ್ಛಂದಸಿ ಬಹುಲಮ್ (ಪಾ. ಸೂ. ೯-೧-೭೦) ಎಂಬುದರಿಂದ ಶಿಗೆ ಲೋಪ.

ಅತ್ರಾ—ಋಚಿತುನುಘ—(ಪಾ. ಸೂ. ೬-೩-೧೩೩) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

ಭದ್ರಾಃ—ಭದಿ ಕಲ್ಯಾಣೇ ಸುಖೇ ಚ. ಋಜ್ರೇಂದ್ರಾಗ್ರ—(ಉ.ಸೂ. ೧-೧೮೬) ಎಂಬುದರಿಂದ ರಗಂತವಾಗಿ ನಿಪಾತಿತವಾಗಿದೆ.

ಅಪಶ್ಯಮ್—ದೃಶಿರ್ ಪ್ರೇಕ್ಷಣೇ. ಧಾತು. ಲಙ್ ಉತ್ತಮಪುರುಷಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

ಋತಸ್ಯ—ಕರ್ಮಾರ್ಥದಲ್ಲಿ ಷಷ್ಠೀ ಬಂದಿದೆ.

ಅಭಿರಕ್ಷಂತಿ—ರಕ್ಷ ಪಾಲನೇ. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಯದ್ವೃತ್ತಾನ್ನಿತ್ಯಂ (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ತ್ಯಾಸ್ಯನುದಾತ್ತೇತ್—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ ತಿಙಿಚೋ-ದಾತ್ತವತಿ (ಪಾ. ಸೂ. ೮–೧–೭೧) ಎಂಬುದರಿಂದ ಗತಿಗೆ (ಅಭಿ) ನಿಘಾತಸ್ವರ ಬರುತ್ತದೆ.

ಗೋಪಾಃ—ಗುಪೂ ರಕ್ಷಣೇ. ಧಾತು. ನಂದಿಗ್ರಹಪಚಾದಿಭ್ಯಃ—(ಪಾ. ಸೂ. ೩-೧-೧೩೪) ಎಂಬುದರಿಂದ ಕರ್ತರಿಯಲ್ಲಿ ಅಚ್‌ಪ್ರತ್ಯಯ. ಪುಗಂತಲಘೂಪಧಸ್ಯ ಚ (ಪಾ. ಸೂ. ೭–೩–೮೬) ಎಂಬುದರಿಂದ ಪ್ರತ್ಯಯನಿಮಿತ್ತವಾಗಿ ಧಾತುಲಘೂಪಧೆಗೆ ಗುಣ. ಚಿತಃ (ಪಾ. ಸೂ. ೬–೧–೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ॥ ೫ ॥

———:O:———

ಸಂಹಿತಾಪಾಠಃ

ಆತ್ಮಾನಂ ತೇ ಮನಸಾರಾದಜಾನಾಮವೋ ದಿವಾ ಪತಯಂತಂ ಪತಂಗಂ।

ಶಿರೋ ಅಪಶ್ಯಂ ಪಥಿಭಿಃ ಸುಗೇಭಿರರೇಣುಭಿರ್ಜೇಹಮಾನಂ ಪತತ್ರಿ ॥ ೬ ॥

ಪದಪಾಠಃ

ಆತ್ಮಾನಂ । ತೇ । ಮನಸಾ । ಆರಾತ್ । ಅಜಾನಾಂ । ಅವಃ । ದಿವಾ । ಪತಯಂತಂ । ಪತಂಗಂ ।

ಶಿರಃ । ಅಪಶ್ಯಂ । ಪಥಿಽಭಿಃ । । ಸುಽಗೇಭಿಃ । ಅರೇಣುಽಭಿಃ । ಜೇಹಮಾನಂ । ಪತತ್ರಿ ॥ ೬ ॥

ಸಾಯಣಭಾಷ್ಯಂ

ಹೇ ಅಶ್ವ ತೇ ತವಾತ್ಮಾನಂ ಶರೀರಂ ಮನಸಾಸ್ಮದೀಯೇನ ಪ್ರಕೃಷ್ಟಗಮನವತಾ ಚೇತಸಾರಾ-ತತಿದೂರೇ ಸ್ಥಿತಮಜಾನಾಂ । ಜಾನಾಮಿ । ಅತಿವ್ಯಾಪ್ತಂ ಭಾವಯಾಮಿತ್ಯರ್ಥಃ । ಕಥಂ । ಅವೋಽ-ವ-ಸ್ತಾತ್ । ಸಾಮರ್ಥ್ಯಾದ್ಭೂಮೇಃ । ಭೂಮಿಮಾರಭ್ಯ ದಿವಾಂತರಿಕ್ಷೇಣ ಮಾರ್ಗೇಣ ಪತಂಗಮಾದಿತ್ಯಂ ಪತಯಂತಂ ಗಚ್ಛಂತಂ ಪ್ರಾಪ್ನುವಂತಂ । ಯದ್ವಾ । ಯತೋ ದಿವಾಂತರಿಕ್ಷೇಣ ಮಾರ್ಗೇಣ ದಿವಿ ವಾ ಪತಯಂತಂ ಗಚ್ಛಂತಂ ಪತಂಗಮಾದಿತ್ಯಮವಃ ಅವಃ ವ್ಯಾಪ್ನೋಷಿ ಅತೋ ವ್ಯಾಪ್ತಂ ಜಾನಾಮಿ । ಕಿಂಚ ಶಿರೋಽಪಶ್ಯಂ । ತವ ಶಿರ ಏವಂ ಪಶ್ಯಾಮಿ । ಕಥಂ । ಸುಗೇಭಿಃ ಶೋಭನಗಮನಸಾಧನೈರರೇಣುಭಿರ-ಪಾಪೈಃ ಪಥಿಭಿರ್ಮಾರ್ಗೈಃ । ಆದಿತ್ಯಮಂಡಲಾದಪ್ಯುಪರಿಭೂತೈಃ ಸತ್ಯಲೋಕಮಾರ್ಗೈರಿತ್ಯರ್ಥಃ । ತತ್ರ ಪ್ರತಿಬಂಧಾಭಾವಾನ್ಮಾರ್ಗಾಣಾಮುಕ್ತರೂಪತ್ವಂ । ತಥಾವಿಧೈಸ್ತ್ರೈರ್ಜೇಹಮಾನಮುಪರ್ಯುಪರಿ ವ್ಯಾಪ್ನು-ವತ್ ಪತತ್ರಿ ಪತನವಚ್ಛಿರೋಽಪಶ್ಯಂ । ಭಾವಯಾಮಿ । ಏವಂ ಲೋಕತ್ರಯವ್ಯಾಪ್ತಂ ಭಾವಯಾ-ಮಿತ್ಯರ್ಥಃ । ಯದ್ವಾ । ತ ಆತ್ಮಾನಮೇವಂ ಭಾವಯಾಮಿ ಮನಸಾ ದಿವಾ ದ್ಯೋತನಾತ್ಮಕೇನಾಂತ-ರಿಕ್ಷಮಾರ್ಗೇಣ ದಿವಃ ಸಕಾಶಾದ್ವಾವೋಽವಸ್ತಾದವಾಙ್ಮುಖಂ ಪತಯಂತಂ ಯೋಗದೇಶಂ ಪ್ರತಿ ವ್ಯಾಪ್ನು-ವತ್ ಅತ ಏವ ಪತಂಗಂ ಪತನಶೀಲಮಧಃಪತದಾದಿತ್ಯಸದೃಶಂ ವಾ । ಏವಂ ತವ ಶಿರೋ ಭಾವಯಾ-ಮೀತ್ಯರ್ಥಃ । ಶಿರಶ್ಚೈವಮಪಶ್ಯಂ । ಉಕ್ತರೂಪೈರ್ದೇವಯಜನಮಾರ್ಗೈರ್ಜೇಹಮಾನಂ ಯಜ್ಞದೇಶಂ ವ್ಯಾಪ್ನುವತ್ ಪತತ್ರಿ ಶೀಘ್ರಗಾಮಿ ಶಿರಃ ಪಶ್ಯಾಮಿ । ಯದ್ಯಪ್ಯಾತ್ಮಶಬ್ದೇನ ಸಶಿರಸ್ಕಂ ಶರೀರಮುಕ್ತಂ ತಥಾಪಿ ದೇಹಾತ್ಪೂರ್ವಂ ಶಿರಸೋ ದೃಶ್ಯಮಾನತ್ವಾತ್ ಪೃಥಗಭಿಧೀಯತೇ ॥

ಪ್ರತಿಪದಾರ್ಥ

(ಅಶ್ವ—ಎಲೈ ಅಶ್ವವೇ) । ಅವಃ—ಭೂಮಿಯಿಂದ (ಹೊರಟು) । ದಿವಾ—ಅಂತರಿಕ್ಷಮಾರ್ಗವಾಗಿ । ಪತಂಗಂ—ಸೂರ್ಯನನ್ನು ಲಕ್ಷಿಸಿ । ಪತಯಂತಂ—ಹಾರಿ ಹೋಗುತ್ತಿರುವ । ತೇ—ನಿನ್ನ । ಆತ್ಮಾನಂ—ರೂಪ ವನ್ನು । ಆರಾತ್—ಬಹುದೂರದಿಂದಲೇ । ಮನಸಾ—ನನ್ನ ಶ್ರದ್ಧಾಯುತವಾದ ಮನಸ್ಸಿನಿಂದ । ಅಜಾನಾಂ—ತಿಳಿದೆನು । (ಮತ್ತು) ಅರೇಣುಭಿಃ-ಧೂಳಿಲ್ಲದುದೂ (ಶುದ್ಧವಾದುದೂ) । ಸುಗೇಭಿಃ—ಶ್ರೇಷ್ಠವಾದ ಸಂಚಾರಾರ್ಹ ವಾದುದೂ ಆದ । ಪಥಿಭಿಃ—ಮಾರ್ಗದಿಂದ । ಜೇಹಮಾನಂ—ಮೇಲಿಂದ ಮೇಲಕ್ಕೆ ವ್ಯಾಪಿಸುತ್ತಾ । ಪತತ್ರಿ—ಹಾರುತ್ತಿರುವ । ಶಿರಃ—ನಿನ್ನ ಶಿರಸ್ಸನ್ನೂ ಸಹ । ಅಪಶ್ಯಂ—ನೋಡುತ್ತೇನೆ.

ಭಾವಾರ್ಥ

ಎಲೈ ಅಶ್ವವೇ, ಪೃಥ್ವಿಯಿಂದ ಹೊರಟು ಸೂರ್ಯನನ್ನು ಲಕ್ಷಿಸಿ ಅಂತರಿಕ್ಷಮಾರ್ಗವಾಗಿ ಹಾರಿಹೋಗುತ್ತಿರುವ ನಿನ್ನ ರೂಪವನ್ನು ಬಹುದೂರದಿಂದಲೇ ನನ್ನ ಶ್ರದ್ಧಾಯುತವಾದ ಮನಸ್ಸಿನಿಂದ ತಿಳಿದೆನು. ಮತ್ತು ಕಶ್ಮಲವಿಲ್ಲದೇ ಶುದ್ಧವಾದುದೂ, ಶ್ರೇಷ್ಠವಾದ ಸಂಚಾರಾರ್ಹವಾದುದೂ ಆದ ಮಾರ್ಗದಿಂದ ಮೇಲಿಂದ ಮೇಲಕ್ಕೆ ವ್ಯಾಪಿಸುತ್ತಾ ಹಾರುತ್ತಿರುವ ನಿನ್ನ ಶಿರಸ್ಸನ್ನೂ ಸಹ ನೋಡುತ್ತಿದ್ದೇನೆ.

## English Translation

I recognise in my mind your form afar off, going from (the earth) below, by way of heaven, to the sun. I behold your head soaring aloft, and mounting quickly by unobstructed paths, unsullied by dust.

### ವಿಶೇಷವಿಷಯಗಳು

ಈ ಋಕ್ಕಿಗೆ ಎರಡುವಿಧವಾದ ಅನ್ವಯವನ್ನು ಮಾಡಿದ್ದಾರೆ. ಮೊದಲನೆಯದಾಗಿ ಅವಃ ಎಂಬ ಪದಕ್ಕೆ ಅವಸ್ತಾತ್ ಕೆಳಭಾಗದಿಂದ ಎಂದರೆ ಭೂಮಿಯಿಂದ ಎಂದೂ, ಎರಡನೆಯದಾಗಿ ಅವಃ ಅವಸ್ತಾತ್ ಕೆಳಭಾಗವನ್ನು ಎಂದರೆ ಭೂಮಿಯನ್ನು ಅಭಿಲಕ್ಷಿಸಿ ಎಂದೂ ಅರ್ಥಮಾಡಿದೆ. ಮೊದಲನೆಯ ಅರ್ಥವನ್ನು ಪ್ರತಿಪದಾರ್ಥದಲ್ಲಿ ತಿಳಿಸಿದೆ. ಎರಡನೆಯ ಅನ್ವಯದ ಪ್ರಕಾರ ದಿವಃ ಸಕಾಶಾತ್ ಅಂತರಿಕ್ಷದಿಂದ ಹೊರಟು, ಅವಃ ಭೂಮಿಗೆ ಎದುರಾಗಿ ಪತೆಯಂತಂ ಹಾರಿ ಕೆಳಕ್ಕೆ ಬರುತ್ತಿರುವ ಪತಂಗಂ ಆದಿತ್ಯಸದೃಶವಾದ ಆತ್ಮಾನಂ ಅಶ್ವದ ಸ್ವರೂಪವನ್ನು ಎಂದೂ ಉತ್ತರಾರ್ಧದಲ್ಲಿ, ಸುಗೇಭಿಃ ಪಥಿಭಿಃ ಶ್ರೇಷ್ಠವಾದ ದೇವಯಜನಮಾರ್ಗದಲ್ಲಿ ಜೇಹಮಾನಂ ವ್ಯಾಪಿಸುತ್ತಲೂ ಪತತ್ರಿ ಶೀಘ್ರಗಾಮಿಯಾಗಿ ಇರತಕ್ಕ ಶಿರಃ ಪಶ್ಯಾಮಿ ಎಂದರ್ಥಮಾಡಿದೆ. ಇಲ್ಲಿ ಆತ್ಮಾನಂ ಎಂಬ ಪದದಿಂದಲೇ ಶಿರಸ್ಸಿನಿಂದಲೂ ಕೂಡಿದ ದೇಹವೆಂದರ್ಥವಾಗುವಾಗ ಪುನಃ ಶಿರಃ ಎಂಬ ಪದವನ್ನುಪಯೋಗಿಸಿ ಅದರ ವರ್ಣನೆ ಏತಕ್ಕೆ ಎಂಬ ಆಕ್ಷೇಪವು ಬಂದರೆ ಅದಕ್ಕೆ ಸಮಾಧಾನರೂಪವಾಗಿ ಯದ್ಯಪ್ಯಾತ್ಮಶಬ್ದೇನ ಸಶಿರಸ್ಕಂ ಶರೀರ–ಮುಕ್ತಂ ತಥಾಪಿ ದೇಹಾತ್ಪೂರ್ವಂ ಶಿರಸೋ ದೃಶ್ಯಮಾನತ್ವಾತ್ ಪೃಥಗಭಿಧೀಯತೇ । ಆತ್ಮಶಬ್ದದಿಂದಲೇ ಶಿರಸ್ಸನ್ನೊಳಗೊಂಡ ದೇಹವೆಂದಾದರೂ ಸಹ ಸಂಚಾರ ಕಾಲದಲ್ಲಿ ಮೊದಲು ಶಿರಸ್ಸು ಕಾಣುವುದರಿಂದ ಈ ಪದವನ್ನು ಪ್ರತ್ಯೇಕವಾಗಿ ಹೇಳಿದೆಯೆಂದು ವಿವರಿಸಿದೆ. ಆಗಲೂ ಒಂದು ಆಕ್ಷೇಪವು ಸಾಧ್ಯವಾಗಬಹುದು. ಇಂತಹ ಸಂದರ್ಭದಲ್ಲಿ ಮೊದಲು ಶಿರಸ್ಸನ್ನು ನೋಡಿದೆನು ಎಂದು ಹೇಳಿ ಅನಂತರ ದೇಹವನ್ನು ನೋಡಿದೆನು ಎಂದು ಕ್ರಮವನ್ನನುಸರಿಸ ಬೇಕಾಗಿದ್ದಿತು ಎಂಬ ಆಕ್ಷೇಪವು ಸಹಜವಾಗಿದೆ. ಆದರೆ ಋಷಿವಾಕ್ಯದಲ್ಲಿ ಇಂತಹ ದೋಷಗಳಿಗವಕಾಶವಿಲ್ಲ.

ಸಾಯಣರು ಪ್ರತಿಪದಾರ್ಥದಲ್ಲಿ ಹೇಳಿರುವ ಅರ್ಥವನ್ನೇ ಮೊದಲು ಹೇಳಿರುವುದರಿಂದ ಅದನ್ನೇ ಮುಖ್ಯವಾಗಿಟ್ಟುಕೊಂಡಿರುವಂತೆ ತಿಳಿಯುತ್ತದೆ. ಅದನ್ನೇ ಅನುಸರಿಸಿದರೆ ಆಗ ಸುಗೇಭಿಃ ಅರೇಣುಭಿಃ ಪಥಿಭಿಃ ಎಂಬುದಕ್ಕೆ ಆದಿತ್ಯಮಂಡಲಾದಪಿ ಉಪರಿಭೂತೈಃ ಸತ್ಯಲೋಕಮಾರ್ಗೈಃ । ಆದಿತ್ಯಮಂಡಲಕ್ಕಿಂತಲೂ ಮೇಲ್ಭಾಗದಲ್ಲಿರತಕ್ಕ ಸತ್ಯಲೋಕಮಾರ್ಗದಿಂದ ಎಂದಿದ್ದಾರೆ. ಈ ಸತ್ಯಲೋಕದ ವರ್ಣನೆಯನ್ನು ಉಪನಿಷತ್ತುಗಳಲ್ಲಿ ಈರೀತಿ ಹೇಳಿದೆ.

ಸತ್ಯಮೇವ ಜಯತಿ ನಾನೃತಂ ಸತ್ಯೇನ ಪಂಥಾ ವಿತತೋ ದೇವಯಾನಃ ।
ಯೇನಾಕ್ರಮಂತ್ಯೃಷಯೋ ಹ್ಯಾಪ್ತಕಾಮಾ ಯತ್ರ ತತ್ಸತ್ಯಸ್ಯ ಪರಮಂ ನಿಧಾನಂ ॥
(ಮುಂಡಕ. ೩-೧-೬)

ಆಪ್ತಕಾಮರೂ. ಪರಮಾರ್ಥತತ್ತ್ವವನ್ನು ತಿಳಿದವರೂ ಆದ ಋಷಿಗಳು ಅತ್ಯಂತ ಪ್ರಕೃಷ್ಟವಾದ ಈ ಸತ್ಯಲೋಕವನ್ನು ಪಡೆಯುತ್ತಾರೆಂದೂ, ಇದೇ ಅತ್ಯುತ್ತಮವಾದ ಸ್ಥಾನವೆಂದೂ ವರ್ಣಿಸಿದೆ- ಇದನ್ನೇ,

ಯಸ್ತು ವಿಜ್ಞಾನವಾನ್ಭವತಿ ಸಮನಸ್ಕಃ ಸದಾ ಶುಚಿಃ ।
ಸ ತು ತತ್ಪದಮಾಪ್ನೋತಿ ಯಸ್ಮಾದ್ಭೂಯೋ ನ ಜಾಯತೇ ।

(ಕಠ. ೩-೮-೯)

ಅಧ್ಯಾತ್ಮಿಕವಾದ ಜ್ಞಾನವನ್ನು ಸಂಪಾದಿಸಿ ಶಮದಮಾದಿ ಸಂಪತ್ತುಗಳಿಂದ ಕೂಡಿದ ಆತ್ಮಸಂಯಮಿಯು ಈ ಸತ್ಯ ಲೋಕವನ್ನು ಪಡೆದು ಪುನಃ ಸಂಸಾರಿಯಾಗುವುದಿಲ್ಲ ಎಂದು ಆದಿತ್ಯಲೋಕವನ್ನೂ ಮೀರಿದ ಸತ್ಯಲೋಕದ ವರ್ಣನೆಯಿದೆ.

ಜೇಹಮಾನಂ—ಜೇಹತೇ ಎಂಬ ಪದವು ೧೨೨ ಗತಿಕರ್ಮನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯). ಪ್ರಯತ್ನಪಡು, ಉದ್ಭವಿಸು ಎಂಬರ್ಥವನ್ನು ಕೊಡುವ ಜೇಹೃ ಧಾತುವಿನಿಂದ ನಿಷ್ಪನ್ನವಾಗಿದೆ. ಮತ್ತು ಈ ಪದಕ್ಕೆ ಸಂದರ್ಭಾನುಸಾರವಾಗಿ ಅರ್ಥವನ್ನು ಹೇಳಬೇಕು.

ಅಸ್ಯ ಶುಷ್ಮಾಸೋ ದದೃಶಾನಪವೇರ್ಜೇಹಮಾನಸ್ಯ ಸ್ವನಯನ್ನಿಯುದ್ಭಿಃ ।
ಪ್ರತ್ನೇಭಿರ್ಯೋ ರುಶದ್ಭಿರ್ದೇವತಮೋ ವಿ ರೇಭದ್ಭಿರರತಿರ್ಭಾತಿ ವಿಭ್ವಾ ॥

(ಋ. ಸಂ. ೧೦-೩-೬)

ಎಂಬಲ್ಲಿ ಕೇವಲಗಮನಾರ್ಥದಲ್ಲೂ, ಎಂದರೆ ದೇವಾನ್ ಪ್ರತಿ ಗಚ್ಛತಃ ಎಂದೂ,

ಯೇ ತಾತೃಷುರ್ದೇವತ್ರಾ ಜೇಹಮಾನಾ ಹೋತ್ರಾವಿದಃ ಸ್ತೋಮತಷ್ಟಾಸೋ ಅರ್ಕೈಃ ।
ಆಗ್ನೇ ಯಾಹಿ ಸುವಿದತ್ರೇಭಿರರ್ವಾಙ್ ಸತ್ಯೈಃ ಕವ್ಯೈಃ ಪಿತೃಭಿರ್ಘರ್ಮಸದ್ಭಿಃ ॥

(ಋ. ಸಂ. ೧೦-೧೫-೯)

ಎಂಬಲ್ಲಿ ಪ್ರಾಪ್ತಾಃ ಎಂಬರ್ಥವೂ ಆಗುತ್ತದೆ. ಕೆಲವು ಸಂದರ್ಭಗಳಲ್ಲಿ ಅತ್ಯುತ್ಕಟವಾದ ಇಚ್ಛೆಯನ್ನು ತೋರಿಸುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ವ್ಯಾಪಿಸು ಎಂಬರ್ಥವಿದೆ.

### ವ್ಯಾಕರಣಪ್ರಕ್ರಿಯಾ

ಅಜಾನಾಮ್—ಜ್ಞಾ ಅವಬೋಧನೇ ಧಾತು. ಲಙ್ ಉತ್ತಮಪುರುಷ ಏಕವಚನದಲ್ಲಿ ಮಿಪ್. ತಸ್-ಥಸ್‌ಥಮಿಪಾಂ—(ಪಾ. ಸೂ. ೩-೪-೧೦೧) ಎಂಬುದರಿಂದ ಅದಕ್ಕೆ ಅಮಾದೇಶ. ಕ್ರ್ಯಾದಿಭ್ಯಃ ಶ್ನಾ (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾ ವಿಕರಣ. ಜ್ಞಾಜನೋರ್ಜಾ (ಪಾ. ಸೂ. ೭-೩-೭೯) ಎಂಬುದರಿಂದ ಧಾತುವಿಗೆ ಜಾದೇಶ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಅವಃ—ಪೂರ್ವಾಧರಾವರಾಣಾಮಸಿಪುರಧವಶ್ಚೈಷಾಮ್ ( ಪಾ. ಸೂ. ೫-೩-೩೯ ) ಎಂಬುದರಿಂದ ಅಸ್ತಾತ್ಯರ್ಥದಲ್ಲಿ ಅಸಿ ಪ್ರತ್ಯಯ. ಪ್ರಕೃತಿಗೆ ಅವ್ ಆದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಪತಯಂತಮ್—ಪತ ಗತೌ. ಧಾತು. ಚುರಾದಿ. ಸತ್ಯಾಪಪಾಶ—(ಪಾ. ಸೂ. ೩-೧-೧೫) ಎಂಬುದ ರಿಂದ ಸ್ವಾರ್ಥದಲ್ಲಿ ಣಿಚ್. ಅದಂತವಾದುದರಿಂದ ಣಿಚ್ ನಿಮಿತ್ತವಾಗಿ ಲೋಪ. ಣಿಜಂತದಮೇಲೆ ಲಟಿಗೆ

ಶತ್ರಾದೇಶ. ಶಪ್ ವಿಕರಣ. ಶಪ್ ನಿಮಿತ್ತವಾಗಿ ಣಿಚಿಗೆ ಗುಣ. ಅಯಾದೇಶ. ದ್ವಿತೀಯಾಏಕವಚನ ಪರ ಪಾದಾಗ ಉಗಿತ್ತಾದುದರಿಂದ ನುಮಾಗಮ. ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

ಪತಂಗಮ್—ಪತ್ಲೃ ಗತೌ. ಧಾತು. ಪತೇರಂಗಚ್ (ಉ. ಸೂ. ೧-೧೧೬) ಎಂಬುದರಿಂದ ಅಂಗಚ್ ಪ್ರತ್ಯಯ. ಚಿತಃ—(ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

ಅಪಶ್ಯಮ್—ದೃಶಿರ್ ಪ್ರೇಕ್ಷಣೇ. ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಉತ್ತಮ ಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಸುಗೇಭಿಃ—ಗಮ್ಲೃ ಗತೌ. ಧಾತು. ಸುದುರೋರಧಿಕರಣೇ ಎಂಬುದರಿಂದ ಡಪ್ರತ್ಯಯ. ಡಿತ್ವ ಸಾಮರ್ಥ್ಯದಿಂದ ಧಾತುವಿನ ಟಿಗೆ (ಅಮ್) ಲೋಪ. ಪ್ರತ್ಯಯಸ್ವರ ಬರುತ್ತದೆ. ಬಹುಲಂ ಛಂದಸಿ ಎಂಬುದರಿಂದ ಭಿಸಿಗೆ ಐಸ್ ವಿಕಲ್ಪವಾದುದರಿಂದ ಏತ್ವ.

ಅರೇಣುಭಿಃ—ನ ವಿದ್ಯಂತೇ ರೇಣವಃ ಯೇಷು ತೇ. ಅರೇಣವಃ ತೈಃ. ನಞ್ ಸುಭ್ಯಾಮ್ ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

ಜೇಹಮಾನಮ್—ಜೇಹೃ ಪ್ರಯತ್ನೇ. ಧಾತು. ಭ್ವಾದಿ. ಅನುದಾತ್ತೇತ್ತಾದುದರಿಂದ ಅನುದಾತ್ತಙಿತ ಆತ್ಮನೇಪದಮ್ (ಪಾ. ಸೂ. ೧-೩-೧೨) ಎಂಬುದರಿಂದ ಆತ್ಮನೇ ಪದಿಯಾಗುತ್ತವೆ. ಲಟಿಗೆ ಶಾನಚಾದೇಶ. ಶಪ್ ವಿಕರಣ. ಆನೇಮುಕ್ (ಪಾ. ಸೂ. ೭-೨-೮೨) ಎಂಬುದರಿಂದ ಮುಕಾಗಮ. ತಾಸ್ಯನುದಾತ್ತೇತ್—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ ॥ ೬ ॥



ಸಂಹಿತಾಪಾಠಃ

ಅತ್ರಾ ತೇ ರೂಪಮುತ್ತಮಮಪಶ್ಯಂ ಜಿಗೀಷಮಾಣಮಿಷ ಆ ಪದೇ ಗೋಃ ।
ಯದಾ ತೇ ಮರ್ತೋ ಅನು ಭೋಗಮಾನಳಾದಿದ್ಗ್ರಸಿಷ್ಠ ಓಷಧೀರಜೀಗಃ ॥ ೭ ॥

ಪದಪಾಠಃ

ಅತ್ರ । ತೇ । ರೂಪಂ । ಉತ್ऽತಮಮ್ । ಅಪಶ್ಯಂ । ಜಿಗೀಷಮಾಣಂ । ಇಷಃ । ಆ । ಪದೇ । ಗೋಃ ।

ಯದಾ । ತೇ । ಮರ್ತಃ । ಅನು । ಭೋಗಂ । ಆನಟ್ । ಆತ್ । ಇತ್ । ಗ್ರಸಿಷ್ಠಃ । ಓಷಧೀಃ ।

ಅಜೀಗರಿತಿ ॥ ೭ ॥

ಸಾಯಣಭಾಷ್ಯಂ

ಏವಂ ಗಮನಾನಂತರಂ ಹೇ ಅಶ್ವ ತೇ ತವೋತ್ತಮಮುತ್ಕೃಷ್ಟರೂಪೇಣೋತ್ಕೃಷ್ಟತಮಂ ರೂಪಮತ್ರಾಸ್ಮಿನ್ಯಾಗದೇಶೇಽಪಶ್ಯಂ । ಪಶ್ಯಾಮಿ । ಕೀದೃಶಂ । ಗೋರ್ಭೂಮ್ಯಾಃ ಪದೇ ಸ್ಥಾನೇ ದೇವಸ್ಥಾನೇ ದೇವಯಜನಪ್ರದೇಶ ಆಜಿಧಾವನಸ್ಥಾನೇ ವೇಷಃ ॥ ಕರ್ಮಣಿ ಷಷ್ಠೀ ॥ ಇಷಮಿಷ್ಯಮಾಣಮನ್ನಮನ್ನಾನಿ ವಾ ಆ ಸರ್ವತೋ ಜಿಗೀಷಮಾಣಂ ಗಂತುಮಿಚ್ಛಂತಂ । ಹೇ ಅಶ್ವ ತೇ ತವ ಯದಾ ಮರ್ತೋ ಮನುಷ್ಯೋ ಭೋಗಂ ಭೋಕ್ತವ್ಯಮನ್ನಮನ್ವಾನಟ್ ॥ ನಶತಿರ್ಗತಿಕರ್ಮಾ ॥ ಅನುಕ್ರಮೇಣ ಸಮೀಪಂ ಗಮಯತಿ । ಆದಿದನಂತರಂ ತದಾನೀಮೇವ ತದನುಗ್ರಹಾದ್ವಿಲಂಬಮಕೃತ್ವಾ ಗ್ರಸಿಷ್ಠೋ ಮಹಾತೃಷ್ಣಯೇವ ಗ್ರಸಿತೃತಮೋ ಭಕ್ಷಯಿತೃತಮಃ ಸನ್ನೋಷಧೀರನ್ನಾನ್ಯಜೀಗಃ । ಗಿರಸಿ । ಭಕ್ಷಯಸಿ । ಮಹಾನುಭಾವೋಽಪಿ ತ್ವಂ ಲೌಕಿಕಾಶ್ವವತ್ತುಚ್ಛೇನ ಪುರುಷೇಣ ದೀಯಮಾನಂ ಸ್ವಲ್ಪಂ ಭಕ್ಷ್ಯಮನುಗ್ರಹಾತ್ಸ್ವೀಕರೋಷೀತ್ಯರ್ಥಃ ॥

ಪ್ರತಿಪದಾರ್ಥ

(ಅಶ್ವ—ಎಲೈ ಅಶ್ವವೇ) ಗೋಃ—ಪೃಥ್ವಿಯ । ಪದೇ—ಯಜ್ಞಭೂಮಿಯಲ್ಲಿ । ಇಷಃ—ಅನ್ನವನ್ನು । ಆ— ಸುತ್ತಲೂ । ಜಿಗೀಷಮಾಣಂ— ಪಡೆಯಲಿಚ್ಛೆಯುಳ್ಳ । ತೇ— ನಿನ್ನ । ಉತ್ತಮಂ— ಶ್ರೇಷ್ಠವಾದ । ರೂಪಂ—ರೂಪವನ್ನು । ಅತ್ರ—ಈ ಯಾಗಪ್ರದೇಶದಲ್ಲಿ । ಅಪಶ್ಯಂ—ನೋಡುತ್ತೇನೆ (ಮತ್ತು) । ತೇ—ನಿನ್ನ । ಮರ್ತಃ—(ಸೇವಕನಾದ) ಮಾನವನು । ಯದಾ—ಯಾವಾಗ । ಭೋಗಂ—ಭೋಗ್ಯವಾದ ಅನ್ನವನ್ನು । ಅನು ಆನಟ್—ಕ್ರಮವಾಗಿ ತಂದು ಅರ್ಪಿಸುತ್ತಾನೆಯೋ । ಆದಿತ್—ಆ ಒಡನೆಯೇ । ಗ್ರಸಿಷ್ಠಃ (ಅದನ್ನು) ತಿನ್ನಬೇಕೆಂಬ ಆತುರದಿಂದ । ಓಷಧೀಃ—ಅನ್ನಗಳನ್ನು । ಅಜೀಗಃ—ಭಕ್ಷಿಸುತ್ತೀಯೆ ॥

ಭಾವಾರ್ಥ

ಎಲೈ ಅಶ್ವವೇ, ಪೃಥ್ವಿಯ ಯಜ್ಞಭೂಮಿಯ ಸುತ್ತಲೂ ಅನ್ನವನ್ನು ಪಡೆಯಲಿಚ್ಛೆಯುಳ್ಳ ನಿನ್ನ ಶ್ರೇಷ್ಠವಾದ ರೂಪವನ್ನು ನಾನು ಈ ಯಾಗಪ್ರದೇಶದಲ್ಲಿ ನೋಡುತ್ತೇನೆ ಮತ್ತು ಯಾವಾಗ ನಿನ್ನ ಅನುಚರನಾದ ಮಾನವನು ನಿನಗೆ ಭೋಗ್ಯವಾದ ಅನ್ನವನ್ನು ಕ್ರಮವಾಗಿ ತಂದು ನಿನಗೆ ಅರ್ಪಿಸುತ್ತಾನೆಯೋ ಆ ಒಡನೆಯೇ ನೀನು ಅದನ್ನು ತಿನ್ನಬೇಕೆಂಬ ಆತುರದಿಂದ ಆ ಅನ್ನಗಳನ್ನು ಭಕ್ಷಿಸುತ್ತೀಯೆ.

## English Translation

I behold your most excellent form coming eagerly to (receive) your food in your (holy) place of earth: when your attendant brings you nigh to the enjoyment (of the provender), therefore greedy, you devour the fodder.

### ವಿಶೇಷವಿಷಯಗಳು

**ಉತ್ತಮಂ ರೂಪಂ ಅಪಶ್ಯಂ**—ಪ್ರಕ್ರಮಾಹುತಿಯ ಕಾಲದಲ್ಲಿ ಪಠಿಸತಕ್ಕ ಮಂತ್ರವು. ಪ್ರಕ್ರಮಾಹುತಿಯಲ್ಲಿ ಅಶ್ವದ ರೂಪವೂ, ಅದಕ್ಕೆ ಅನುಗುಣವಾದ ಆಹುತಿಯೂ ಅರ್ಪಿತವಾಗತಕ್ಕದ್ದು. ಆದುದರಿಂದ ನಿನ್ನ ಉತ್ತಮವಾದ ರೂಪವನ್ನು ನೋಡುತ್ತಿದ್ದೇನೆಂದು ಪ್ರಕಟಿಸುತ್ತಾನೆ ಅಶ್ವದ ಈ ರೂಪಾನುಗುಣವಾದ ಆಹುತ್ಯರ್ಪಣವಾಗದೇ ಯಜ್ಞವು ಪೂರ್ಣವಾಗುವುದಿಲ್ಲವೆಂದು ಸಿದ್ಧವಾದುದರಿಂದ ಈ ಪ್ರಕ್ರಮಾಹುತಿಯು ವಿಧ್ಯುಕ್ತವಾದ ಕರ್ಮವಾಗಿದೆ ಮೊದಲು ಈ ಆಹುತಿಯ ಸ್ವರೂಪವನ್ನು ವಿವರಿಸಿ ಅನಂತರ ಈ ಆಹುತಿಯನ್ನು ಸ್ವೀಕಾರಮಾಡಲು ಯೋಗ್ಯವಾದ ಅಶ್ವದ ರೂಪವೇನೆಂಬುದನ್ನು ಪರಿಶೀಲಿಸಲಾಗುತ್ತದೆ.

**ಯಥಾ ವೈ ಹವಿಷೋಽಹುತಸ್ಯ ಸ್ಕಂದೇತ್ । ಏವಮೇತತ್ಪಶೋಃ ಸ್ಕಂದತಿ ಯಂ ಪ್ರೋಕ್ಷಿತಮ-ನಾಲಬ್ಧಮುತ್ಸೃಜಂತಿ ಯದ್ರೂಪಾಣಿ ಜುಹೋತಿ ಸರ್ವಹುತಮೇವೈನಂ ಜುಹೋತ್ಯಸ್ಕಂದಾ-ಯಸ್ಕನ್ನಗ್ಂ .... .... .... .... .... ಏತಾನಿ ವಾ ಅಶ್ವಸ್ಯ ರೂಪಾಣಿ ತಾನ್ಯೇವಾವರುಂಧೇ ॥**

(ಶ. ಬ್ರಾ. ೧೩-೧-೩-೫)

ಆಹುತ್ಯರ್ಪಣದ ಕಾಲದಲ್ಲಿ ಕೊಂಚಭಾಗವೇನಾದರೂ ವೇದಿಕೆಯಿಂದ ಹೊರಗೆಬಿದ್ದ ಸಂದರ್ಭದಲ್ಲಿ ಆಗ ಆಹುತಿಯು ಪೂರ್ಣವಾದಂತಾಗುವುದಿಲ್ಲ. ಆಗ ಈ ರೂಪಾಹುತಿಯನ್ನು ಅರ್ಪಿಸಿದರೆ ಅದರಿಂದ ಆ ನ್ಯೂನತೆಯು ಸರಿಯಾಗುವುದು. "ಹಿಂಕಾರಾಯ ಸ್ವಾಹಾ ; ಹಿಂಕೃತಾಯ ಸ್ವಾಹಾ" ಇತ್ಯಾದಿಯಾಗಿ ಆಹುತಿಯನ್ನರ್ಪಿಸಬೇಕು. ಇವುಗಳೇ ಅಶ್ವದ ರೂಪಗಳು. ಈ ವಿಷಯದಲ್ಲಿ ಒಂದು ಚರ್ಚೆಯೂ ಇದೆ—

**ತದಾಹುಃ । ಅನಾಹುತಿರ್ವೈ ರೂಪಾಣಿ ನೈನಾ ಹೋತವ್ಯಾ ಇತ್ಯಥೋ ಖಲ್ವಾಹುರತ್ರ ವಾ ಅಶ್ವಮೇಧಃ ಸಂತಿಷ್ಠತೇ ಯದ್ರೂಪಾಣಿ ಜುಹೋತಿ ॥**

(ಶ. ಬ್ರಾ. ೧೩-೧-೩-೬)

ಈ ರೂಪಾಹುತಿಯ ಅವಶ್ಯಕತೆಯೇ ಇರುವುದಿಲ್ಲ ಎನ್ನತಕ್ಕವರೇ ಇದರ ಮಹತ್ತ್ವವನ್ನರಿತನಂತರ ಇದರ ಆಚರಣೆಯಿಂದ ಮಾತ್ರ ಅಶ್ವಮೇಧವು ಪೂರ್ಣವಾಗುತ್ತದೆಂದು ಒಪ್ಪಿಕೊಳ್ಳುತ್ತಾರೆ. ಆದರೆ ಅಶ್ವದ ಈ ರೂಪವಾವುದು ಎಂದರೆ ಆದರ ವರ್ಣನೆಯು ಈರೀತಿಯಲ್ಲಿದೆ. ವಿಶ್ವಾತ್ಮಕವಾದ ಅಶ್ವದ ಈ ರೂಪವನ್ನು ಹಿಂದೆ,

**ಅಸಿ ಯಮೋ ಅಸ್ಯಾದಿತ್ಯೋ ಅರ್ವನ್ನಸಿ ತ್ರಿತೋ ಗುಹ್ಯೇನ ವ್ರತೇನ ।**
**ಅಸಿ ಸೋಮೇನ ಸಮಯಾ ವಿಪೃಕ್ತ ಆಹುಸ್ತೇ ತ್ರೀಣಿ ದಿವಿ ಬಂಧನಾನಿ ॥**

(ಋ. ಸಂ. ೧-೧೬೩-೩)

ಇತ್ಯಾದಿಯಾಗಿ ವರ್ಣಿಸಿ ಅಗ್ನ್ಯಾದಿರೂಪದಲ್ಲಿ ಮೂರು ಲೋಕಗಳನ್ನೂ ವ್ಯಾಪಿಸುವ ರೂಪವನ್ನು ಹೊಂದಿದೆಯೆಂದು ತಿಳಿಸಿದೆ. ಅಲ್ಲದೆ, ಮುಂದೆಯೂ ಸಹ

ತವ ಶರೀರಂ ಪತಯಿಷ್ಣ್ವರ್ವನ್ತವ ಚಿತ್ತಂ ವಾತ ಇವ ಧ್ರಜೀಮಾನ್ ।
ತವ ಶೃಂಗಾಣಿ ವಿಷ್ಠಿತಾ ಪುರುತ್ರಾರಣ್ಯೇಷು ಜರ್ಭುರಾಣಾ ಚರಂತಿ ॥

(ಋ. ಸಂ. ೧-೧೬೩-೧೧)

ಎಂಬಲ್ಲಿ ಅಶ್ವದ ಶರೀರವನ್ನೂ ಚಿತ್ತವನ್ನೂ ಶೃಂಗಸ್ಥಾನೀಯರೋಮಗಳನ್ನೂ ವರ್ಣಿಸಿ ಅದರ ರೂಪವನ್ನು ಪ್ರಶಂಸಿಸಿದೆ. ಈ ವರ್ಣನೆಯ ಸ್ವರೂಪವನ್ನು ಮುಂದೆ ವಿವರಿಸಲಾಗುತ್ತದೆ.

ಯದಾ ತೇ ಮರ್ತಃ ಅನು ಭೋಗಮಾನಟ್—ಮಾನವನಾದ ಅನುಚರನು ನಿನಗೆ ಭೋಗ್ಯವಾದ ಆಹಾರವನ್ನು ಇರಿಸಿದಾಗ ಎಂಬುದರ ಕ್ರಮವನ್ನು,

ಪ್ರಾಜಾಪತ್ಯೋಽಶ್ವಃ ಸ್ವಯೈವೈನಂ ದೇವತಯಾ ಸಮರ್ಧಯಂತಿ ಲಾಜೀಂಛಾಚೀನ್ ಯಶೋ ಮಮ್ಯಾ ಇತಿ ವಾ ಏತಿರಿಕ್ತಮನ್ನಮಶ್ವಾಯೋಪಾವಹರತಿ ।

(ಶ. ಬ್ರಾ. ೧೩-೨-೬.೮)

ಇತ್ಯಾದಿವಾಕ್ಯಗಳಲ್ಲಿ ಅಶ್ವಕ್ಕೆ ಅರ್ಪಿತವಾಗತಕ್ಕ ಅನ್ನಗಳ ವರ್ಣನೆಯಿದೆ.

ಜಿಗೀಷಮಾಣಂ—ಈ ಪದಕ್ಕೆ ಜೇತುಮಿಚ್ಛಾ ಜಯಿಸಲು ಇಚ್ಛೆಯುಳ್ಳ ಎಂದು ರೂಢವಾದ ಅರ್ಥವಿದೆ. ಆದರೆ ಇಲ್ಲಿ ಆ ಅರ್ಥವಿಲ್ಲ. ಈ ಪದವು ಋಕ್ಸಂಹಿತೆಯಲ್ಲಿ ಬರುವಾಗಲೆಲ್ಲಾ ಪಡೆಯಲಿಚ್ಛೆಯುಳ್ಳ ಅಥವಾ ಯೋಗ್ಯವಾದ ಎಂಬರ್ಥವೇ ಆಗಿರುತ್ತದೆ. ಉದಾಹರಣೆಗೆ—

ಸ್ತುತಾಸೋ ನೋ ಮರುತೋ ಮೃಳಯಂತೂತ ಸ್ತುತೋ ಮಘವಾ ಶಂಭವಿಷ್ಠಃ ।
ಊರ್ಧ್ವಾ ನಃ ಸಂತು ಕೋಮ್ಯಾ ವನಾನ್ಯಹಾನಿ ವಿಶ್ವಾ ಮರುತೋ ಜಿಗೀಷಾ ।

(ಋ. ಸಂ ೧-೧೭೧-೩)

ಎಂಬಲ್ಲಿ ಮರುತ್ತುಗಳ ಅನುಗ್ರಹವನ್ನಪೇಕ್ಷಿಸಿದೆ. ಇಲ್ಲಿ ಜಿಗೀಷಾ ಎಂಬ ಪದಕ್ಕೆ ಜಿಗೀಷಿತವ್ಯಾನಿ ಪ್ರಾಪ್ತವ್ಯಾನಿ ಉತ್ತರತ್ರಾನುಭೋಯಮಾನಾನಿ । ನಾವು ಪಡೆಯತಕ್ಕದ್ದೂ, ನಾವು ಅನುಭವಿಸತಕ್ಕದ್ದೂ ಆದ ಸಕಲ ಇಷ್ಟಾರ್ಥಗಳನ್ನು ಕೊಡು ಎಂದು ಪ್ರಾರ್ಥಿಸಿದೆ. ಇದರಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಜಿಗೀಷಮಾಣಂ ಗಂತುಮಿಚ್ಛಂತಂ । ಪಡೆಯಲಿಚ್ಛೆಯುಳ್ಳ ಎಂದು ತಾತ್ಪರ್ಯವಾಗುತ್ತದೆ.

ವ್ಯಾಕರಣಪ್ರಕ್ರಿಯಾ

ಅತ್ರ—ಋಚಿತುನುಘ—(ಪಾ. ಸೂ. ೬-೩-೧೩೩) ಎಂಬುದರಿಂದ ಸಂಹಿತಾವಲ್ಲಿ ದೀರ್ಘ ಬರುತ್ತದೆ.

ಜಿಗೀಷಮಾಣಮ್—ಜಿ ಜಯೇ ಧಾತು. ಧಾತೋಃ ಕರ್ಮಣಃ—(ಪಾ. ಸೂ. ೩-೧-೭) ಎಂಬುದರಿಂದ ಇಚ್ಛಾರ್ಥದಲ್ಲಿ ಸನ್. ಅಜ್ಝನಗ—(ಪಾ. ಸೂ. ೬-೪-೧೬) ಎಂಬುದರಿಂದ ಸನ್ ಪರವಾದಾಗ ಧಾತುವಿಗೆ ದೀರ್ಘ. ಸನ್ಯಙೋಃ (ಪಾ. ಸೂ ೬-೧-೯) ಸೂತ್ರದಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹ್ರಸ್ವ. ಸನ್ಲಿಟೋರ್ಜೇಃ (ಪಾ. ಸೂ. ೭-೩-೫೭) ಎಂಬುದರಿಂದ ಧಾತುಜಕಾರಕ್ಕೆ ಕುತ್ವ. ವ್ಯತ್ಯಯದಿಂದ ಸನ್ನಂತದ ಮೇಲೆ ಲಟ್ ಬಂದಾಗ ಶಾನಚಾದೇಶ. ಆನೇಮುಕ್ ಎಂಬುದರಿಂದ ಮುಕಾಗಮ. ಷತ್ವ, ಣತ್ವಾದಿ. ಅಭ್ಯಸ್ತಾನಾಮಾದಿಃ (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

ಇಷಃ—ಷಷ್ಠೀ ಏಕವಚನಾಂತರೂಪ. ಸಾವೇಕಾಚ—(ಪಾ ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಕರ್ಮಾರ್ಥದಲ್ಲಿ ಷಷ್ಠೀ ಬಂದಿದೆ.

ಆನಟ್—ಣಶ ಅದರ್ಶನೇ. ಧಾತು. ಇಲ್ಲಿ ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಛಂದಸಿ ಲುಙ್ಲಙ್ ಲಿಟಃ (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಏಕವಚನದಲ್ಲಿ ತಿಪ್. ಇಕಾರಲೋಪ ಬಹುಲಂ ಛಂದಸಿ ಎಂಬುದರಿಂದ ವಿಕರಣಕ್ಕೆ ಲುಕ್. ವ್ರಶ್ಚಭ್ರಸ್ಜ—ಸೂತ್ರದಿಂದ ಧಾತು ಶಕಾರಕ್ಕೆ ಷತ್ವ. ಹಲ್ಙ್ಯಾಭ್ಯೋ—ಸೂತ್ರದಿಂದ ಪ್ರತ್ಯಯಕ್ಕೆ ಲೋಪ. ಛಾಂದಸವಾಗಿ ಅಂಗಕ್ಕೆ ಆಡಾಗಮ. ಪದಾಂತ ಷಕಾರಕ್ಕೆ ಜಶ್ತ್ವ, ಚರ್ತ್ವ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆಡಾಗಮ ಉದಾತ್ತ ವಾದುದರಿಂದ ಆದ್ಯುದಾತ್ತವಾಗುತ್ತದೆ

ಗ್ರಸಿಷ್ಠಃ—ಗ್ರಸು ಅದನೇ. ಧಾತು. ಕರ್ತರಿಯಲ್ಲಿ ತೃಚ್ ಬಂದಾಗ ಗ್ರಸಿತೃ ಎಂದು ರೂಪವಾಗು ತ್ತದೆ. ಅತಿಶಯೇನ ಗ್ರಸಿತಾ ಗ್ರಸಿಷ್ಠಃ ತುಶ್ಛಂದಸಿ (ಪಾ. ಸೂ. ೫-೩-೫೯) ಎಂಬುದರಿಂದ ತೃಜಂತದಮೇಲೆ ಅತಿ ಶಯಾರ್ಥದಲ್ಲಿ ಇಷ್ಠನ್ ಪ್ರತ್ಯಯ. ತುರಿಷ್ಠೇ ಮೇಯಸ್ಸು (ಪಾ. ಸೂ. ೬-೪-೧೫೪) ಎಂಬುದರಿಂದ ಇಷ್ಠನ್ ಪರ ವಾದಾಗ ತೃಚಿಗೆ ಲೋಪ. ಞ್ನಿತ್ಯಾದಿರ್ನಿತ್ಯಮ್ (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಓಷಧೀಃ—ಓಷಃ ಪಾಕಃ ಆಸು ಧೀಯತೇ ಇತಿ ಓಷಧಯಃ ಕರ್ಮಣ್ಯಧಿಕರಣೇ ಚ (ಪಾ. ಸೂ. ೩-೩-೯೩) ಎಂಬುದರಿಂದ ಧಾಞ್ ಧಾತುವಿಗೆ ಕಿ ಪ್ರತ್ಯಯ. ಆತೋ ಲೋಪ ಇಟಿ ಚ (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಇದಕ್ಕೆ ಸ್ತ್ರೀತ್ವ ವಿವಕ್ಷಾಮಾಡಿದಾಗ ಕೃದಿಕಾರಾದಕ್ತಿನಃ ಎಂಬುದ ರಿಂದ ಙೀಷ್. ಇದಕ್ಕೆ ಶಸ್ ಪರವಾದಾಗ ಪೂರ್ವಸವರ್ಣದೀರ್ಘ. ದಾಸೀಭಾರಾದಿಯಲ್ಲಿ ಪಠಿತವಾದುದರಿಂದ ಪೂರ್ವ ಪದಪ್ರಕೃತಿಸ್ವರ ಬರುತ್ತದೆ. ಅದು ಘಿಞಂತವಾದುದರಿಂದ ಆದ್ಯುದಾತ್ತವಾಗುತ್ತದೆ.

ಅಜೀಗಃ—ಗೃ ನಿಗರಣೇ ಧಾತು. ಛಾಂದಸವಾಗಿ ಲಙ್. ಬಹುಲಂ ಛಂದಸಿ ಎಂಬುದರಿಂದ ಶಪಿಗೆ ಶ್ಲು ಆದೇಶ. ಶ್ಲು ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಬಹುಲಂ ಛಂದಸಿ ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಸಿಪ್ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ಹಲ್ಙ್ಯಾಭ್ಯೋ-ಸೂತ್ರದಿಂದ ಸಿಪಿಗೆ ಲೋಪ. ರೇಫಕ್ಕೆ ವಿಸರ್ಗ. ತುಜಾದೀನಾಂ ದೀರ್ಘೋಽಭ್ಯಾಸಸ್ಯ—(ಪಾ ಸೂ. ೬-೧-೭) ಎಂಬುವರಿಂದ ಅಭ್ಯಾಸಕ್ಕೆ ದೀರ್ಘ. ಅಂಗಕ್ಕೆ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೭ ॥

ಸಂಹಿತಾಪಾಠಃ

ಅನು ತ್ವಾ ರಥೋ ಅನು ಮರ್ಯೋ ಅರ್ವನ್ನನು ಗಾವೋಽನು ಭಗಃ ಕನೀನಾಂ ।

ಅನು ವ್ರಾತಾಸಸ್ತವ ಸಖ್ಯಮೀಯುರನು ದೇವಾ ಮಮಿರೇ ವೀರ್ಯಂ ತೇ ॥ ॥ ೮ ॥

ಪದಪಾಠ

ಅನು । ತ್ವಾ । ರಥಃ । ಅನು । ಮರ್ಯಃ । ಅರ್ವನ್ । ಅನು । ಗಾವಃ । ಅನು । ಭಗಃ । ಕನೀನಾಂ ।

ಅನು । ವ್ರಾತಾಸಃ । ತವ । ಸಖ್ಯಂ । ಈಯುಃ । ಅನು । ದೇವಾಃ । ಮಮಿರೇ । ವೀರ್ಯಂ । ತೇ ॥ ೮ ॥

ಸಾಯಣಭಾಷ್ಯಂ

ಇದಾನೀಂ ಕೃತ್ಸ್ನಸ್ಯ ಲೋಕಸ್ಯಾಪಿ ಮುಖ್ಯ ಇತಿ ಪ್ರತಿಪಾದಯತಿ । ಹೇ ಅರ್ವನ್ ಗಮನಶೀಲಾಶ್ವ ತ್ವಾ ತ್ವಾಮನ್ವನುಸೃತ್ಯ ರಥೋ ಗಚ್ಛತಿ । ತತಃ ಪುರತೋಽಶ್ವಸ್ಯ ಗಮನಾತ್ । ತಥಾ ಮರ್ತ್ಯೋ ಮರ್ತ್ಯಸ್ತ್ವಾ ತ್ವಾಮನು ॥ ಜಾತ್ಯೇಕವಚನಂ ॥ ಅನು ಗಾವಃ । ಗಾವೋಽಪಿ ತ್ವಾಮನುಗಚ್ಛಂತಿ । ತಥಾ ಕನೀನಾಂ ಕನ್ಯಕಾನಾಂ ಸ್ತ್ರೀಣಾಂ ಭಗೋ ಭಾಗ್ಯಂ ಸೌಂದರ್ಯಂ ತ್ವದ್ಗಮನು । ತಥಾ ವ್ರಾತಾಸೋ ವ್ರಾತಾಃ ಸಂಘಾತ್ಮಕಾ ಅನ್ಯೇಽಶ್ವಸಮೂಹಾ ವಸ್ವಾದಿದೇವಗಣಾ ವಾ ತ್ವಾಮನ್ವನುಸೃತ್ಯ ತವ ಸಖ್ಯಮೀಯುಃ । ಸಖಿಭಾವಂ ಗಚ್ಛಂತಿ । ದೇವಾ ಋತ್ವಿಜೋ ದ್ಯೋತಮಾನಾ ದೇವಾ ವಾ ತ್ವಾಮನುಸೃತ್ಯ ತೇ ವೀರ್ಯಂ ವೀರಕರ್ಮ ಮಮಿರೇ । ಸ್ತುತ್ಯಾ ಮಾಂತಿ । ಅತಃ ಸರ್ವೋಽಪಿ ತ್ವಾಮನುಸರಃ ತ್ವಂ ತು ಸರ್ವಸ್ಯ ಶ್ರೇಷ್ಠ ಇತ್ಯರ್ಥಃ ॥

ಪ್ರತಿಪದಾರ್ಥ

ಅರ್ವನ್—ಎಲೈ ಅಶ್ವವೇ । ತ್ವಾ—ನಿನ್ನನ್ನು । ರಥಃ—ಉತ್ತಮವಾದ ರಥವು । ಅನು—ಅನುಸರಿಸುತ್ತದೆ । ಮರ್ಯಃ—ಮಾನವನು । ಅನು—ಅನುಸರಿಸಿ ಬರುತ್ತಾನೆ । ಗಾವಃ—ಗೋವುಗಳು । ಅನು—ಹಿಂಬಾಲಿಸುತ್ತವೆ । ಕನೀನಾಂ—ಕನ್ನಿಕೆಯರ । ಭಗಃ—ಸೌಂದರ್ಯವು । ಅನು—ಅನುಸರಿಸುತ್ತದೆ । ವ್ರಾತಾಸಃ—ಸಂಘಾತ್ಮಕರಾದ ಇತರ ಅಶ್ವಸಮೂಹಗಳು ಅಥವಾ ವಸ್ವಾದಿ ದೇವಗಣಗಳು । ಅನು—ನಿನ್ನನ್ನು ಹಿಂಬಾಲಿಸಿ । ತವ—ನಿನ್ನ ಸಖ್ಯಂ—ಸ್ನೇಹವನ್ನು । ಈಯುಃ—ಪಡೆಯುತ್ತಾರೆ । ದೇವಾಃ—ಪ್ರಕಾಶಮಾನರಾದ ಋತ್ವಿಕ್ಕುಗಳು ಅಥವಾ ದೇವತೆಗಳು । ಅನು—(ನಿನ್ನನ್ನು) ಅನುಸರಿಸಿ । ತೇ—ನಿನ್ನ । ವೀರ್ಯಂ—ವೀರಕರ್ಮವನ್ನು । ಮಮಿರೇ—ಸ್ತೋತ್ರಗಳಿಂದ ಪ್ರಶಂಸಿಸುತ್ತಾರೆ.

ಭಾವಾರ್ಥ

ಎಲೈ ಅಶ್ವವೇ, ಉತ್ತಮವಾದ ರಥವೂ ನಿನ್ನನ್ನು ಅನುಸರಿಸುತ್ತವೆ. ಅದರಂತೆಯೇ ಮಾನವನೂ, ಗೋವುಗಳೂ, ಸುಂದರ ಸ್ತ್ರೀಯರೂ, ಸಂಘಾತ್ಮಕವಾದ ದೇವತೆಗಳ ಸಮೂಹವೂ, ನಿನ್ನನ್ನು ಹಿಂಬಾಲಿಸಿ ನಿನ್ನ ಸ್ನೇಹವನ್ನು ಪಡೆಯುತ್ತಾರೆ. ಪ್ರಕಾಶಮಾನರಾದ ಋತ್ವಿಕ್ಕುಗಳು ನಿನ್ನನ್ನು ಅನುಸರಿಸಿ ನಿನ್ನ ವೀರಕರ್ಮವನ್ನು ಸ್ತೋತ್ರಗಳಿಂದ ಪ್ರಶಂಸಿಸುತ್ತಾರೆ.

English Translation

The car follows you, O Horse: men attend you; cattle follow you; the loveliness of maidens (waits) upon you; troops of demigods following you have sought your friendship; the gods themselves have been admirers of your vigour.

ವಿಶೇಷವಿಷಯಗಳು

ತ್ವಂ ತು ಸರ್ವಸ್ಯ ಶ್ರೇಷ್ಠ ಇತ್ಯರ್ಥಃ—ನೀನು ದೇವಮಾನವಾದಿ ಸಕಲರಿಗಿಂತಲೂ ಶ್ರೇಷ್ಠನು ಎಂದರ್ಥವೆಂದು ಸಾಯಣರು ಈ ಋಕ್ಕಿನ ತಾತ್ಪರ್ಯವನ್ನು ತಿಳಿಸಿದ್ದಾರೆ.

ದೇವಾ ಮಮಿರೇ ವೀರ್ಯಂ ತೇ—ಇಲ್ಲಿ ದೇವಾಃ ಎಂಬ ಪದಕ್ಕೆ ಋತ್ವಿಕ್ಕುಗಳು ಅಥವಾ ದೇವತೆಗಳೆಂದರ್ಥಮಾಡಿದೆ. ಅವರು ಅಶ್ವದ ವೀರ್ಯಕರ್ಮಗಳನ್ನು ಸ್ತುತಿಗಳಿಂದ ಪ್ರಶಂಸಿಸುತ್ತಾರೆ. ಆ ಸ್ತೋತ್ರಗಳಿಂದ ಪ್ರಶಂಸೆಮಾಡುವ ಅಶ್ವದ ಮಹಿಮೆಯು ಈರೀತಿಯಲ್ಲಿ ವರ್ಣಿತವಾಗಿದೆ.

ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಮಾ ದದ ಇಮಾಮಗೃಭ್ಣನ್ರಶನಾಮೃತಸ್ಯ ಪೂರ್ವ ಆಯುಷಿ ವಿದಥೇಷು ಕವ್ಯಾ । ತಯಾ ದೇವಾಸ್ಸುತಮಾ ಬಭೂವುರ್ಋತಸ್ಯ ಸಾಮನ್ತ್ಸರಮಾರಪಂತೀ ॥

(ತೈ. ಸಂ. ೭-೧-೧೧-೧)

ಎಲೈ ಅಶ್ವವೇ, ಸವಿತೃದೇವನ ಪ್ರೇರಣೆಯಿಂದ ನಾನು ನಿನ್ನನ್ನು ಅಶ್ವಿನೀದೇವತೆಗಳ ಬಾಹುಗಳಿಂದಲೂ, ಪೂಷದೇವನ ಕೈಗಳಿಂದಲೂ ಸಹ ಹಿಡಿದು ಕರೆದುಕೊಂಡು ಹೋಗುತ್ತೇನೆ. ಈ ಯಜ್ಞಬಂಧನವನ್ನು ಪೂರ್ವದಲ್ಲಿ ಕವಿಗಳು ಯಜ್ಞಕಾಲಗಳಲ್ಲಿ ಗ್ರಹಣಮಾಡಿದರು. ಆದುದರಿಂದಲೇ ದೇವತೆಗಳು ಸುತವಾದ ಸೋಮರಸವನ್ನು ಪಡೆಯನುಕೂಲವಾಯಿತು. ದೇವಾದಿಗಳ ತೃಪ್ತಿಯು ನಿನ್ನ ಅನುಗ್ರಹದಿಂದಲೇ ಲಭಿಸತಕ್ಕದ್ದು.

ಅಭಿಧಾ ಅಸಿ ಭುವನಮಸಿ ಯಂತಾಸಿ ಧರ್ತಾಸಿ ಸೋಽಗ್ನಿಂ ವೈಶ್ವಾನರಗ್‌ಂ ಸಪ್ರಥಸಂ ಗಚ್ಛ ಸ್ವಾಹಾಕೃತಃ ಪೃಥಿವ್ಯಾಂ ಯಂತಾ ರಾಡ್ಯಂತಾಸಿ ಯಮನೋ ಧರ್ತಾಸಿ ಧರುಣಃ ಕೃಷ್ಯೈ ತ್ವಾ ಕ್ಷೇಮಾಯ ತ್ವಾ ರಯ್ಯೈ ತ್ವಾ ಪೋಷಾಯ ತ್ವಾ ಪೃಥಿವ್ಯೈ ತ್ವಾಂತರಿಕ್ಷಾಯ ತ್ವಾ ದಿವೇ ತ್ವಾ ಸತೇ ತ್ವಾಽಸತೇ ತ್ವಾಽದ್ಭ್ಯಸ್ತ್ವೌಷಧೀಭ್ಯಸ್ತ್ವಾ ವಿಶ್ವೇಭ್ಯಸ್ತ್ವಾ ಭೂತೇಭ್ಯಃ ॥

(ತೈ. ಸಂ. ೭-೧-೧೧-೧)

ಎಲೈ ಅಶ್ವವೇ, ನೀನೇ ಸಕಲವಾದ ಆವರಣವಾಗಿದ್ದೀಯೆ. ಸಕಲ ಭುವನವೂ, ನಿಯಾಮಕನೂ, ಅವಲಂಬನವೂ ಸಹ ಆಗಿದ್ದೀಯೆ. ನೀನು ವೈಶ್ವಾನರನಲ್ಲಿಗೆ ವಿಜಯಿಯಾಗಿ ಹೋಗು. ಪೃಥ್ವಿಯ ನಿಯಾಮಕನೇ ನೀನು ಮತ್ತು ಪೃಥ್ವಿಗೆ ಅವಲಂಬನವೂ ಆಧಾರವೂ ನೀನಾಗಿದ್ದೀಯೆ. ಅದರಂತೆಯೇ ಅಂತರಿಕ್ಷಕ್ಕೂ ದ್ಯುಲೋಕಕ್ಕೂ, ಓಷಧಿಗಳಿಗೂ, ಅಪ್ಪಿಗೂ ಸಕಲವಿಧವಾದ ಭೂತಗಳಿಗೂ ನೀನೇ ಆಧಾರವೂ ಅವಲಂಬನವೂ ಆಗಿದ್ದೀಯೆ. ಸಕಲ ಸತ್ತುಗಳಿಗೂ ಹಾಗೆಯೇ ಅಸತ್ತುಗಳಿಗೆ ಎಂದರೆ ಭಾವಾಭಾವಾತ್ಮಕವಾದ ಸಕಲಪ್ರಪಂಚಕ್ಕೂ ನೀನೇ ಆಧಾರವು.

ವಿಭೂರ್ಮಾತ್ರಾ ಪ್ರಭೂಃ ಪಿತ್ರಾಶ್ವೋಽಸಿ ಹಯೋಽಸ್ಯತ್ಯೋಽಸಿ ನರೋಽಸ್ಯರ್ವಾಸಿ ಸಪ್ತಿರಸಿ ವಾಜ್ಯಸಿ ವೃಷಾಸಿ ನೃಮಣಾ ಅಸಿ ಯಯುರ್ನಾಮಾಸ್ಯಾದಿತ್ಯಾನಾಂ ಪತ್ವಾನ್ವಿಹಿ ।

(ತೈ. ಸಂ. ೭-೧-೧೨-೧)

ನೀನು ಸಕಲವನ್ನೂ ವ್ಯಾಪಿಸತಕ್ಕ ಅಶ್ವವಾಗಿದ್ದೀಯೆ, ಪಶುಜಾತಿಗಳನ್ನೆಲ್ಲಾ ಜಯಿಸತಕ್ಕ ಹಯವೂ, ಅತ್ಯವೂ ಆಗಿದ್ದೀಯೆ, ನಿನ್ನನ್ನು ವಾಹಕನನ್ನಾಗಿ ಇಟ್ಟುಕೊಂಡಿರತಕ್ಕವರಿಗೆ ನೇತೃವಾದ ನರನಾಗಿದ್ದೀಯೇ, ಗಮನಕುಶಲನಾದ ಅರ್ವನೂ, ಸಂಗ್ರಾಮಗಳಲ್ಲಿ ಕೌಶಲ್ಯವನ್ನು ತೋರಿಸುವ ಸಪ್ತಿಯೂ, ವೇಗಗಾಮಿಯಾದ ವಾಜಿಯೂ ಮತ್ತು ಅಶ್ವನಾಮಗಳಲ್ಲೆಲ್ಲಾ ಅತ್ಯಂತ ಪ್ರಿಯವಾದ ಯಯುವೆಂಬ ನಾಮಧೇಯವುಳ್ಳವನೂ ಆಗಿದ್ದೀಯೆ. ಮತ್ತು ನಿನ್ನ ಮಹಿಮೆಯಿಂದ ಆದಿತ್ಯನನ್ನೇ ಸೇರುತ್ತೀಯೆ.

ಉಪಯಾಮಗೃಹೀತೋಽಸಿ ಪ್ರಜಾಪತಯೇ ತ್ವಾ ಜುಷ್ಟಂ ಗೃಹ್ಣಾಮಿ ತಸ್ಯ ತೇ ದ್ಯೌರ್ಮ-
ಹಿಮಾ ನಕ್ಷತ್ರಾಣಿ ರೂಪಮಾದಿತ್ಯಸ್ತೇ ತೇಜಃ ।
(ತೈ. ಸಂ. ೭-೫-೧೬-೧)

ತಸ್ಯ ತೇ ಪೃಥಿವೀ ಮಹಿಮೌಷಧಯೋ ವನಸ್ಪತಯೋ ರೂಪಮಗ್ನಿಸ್ತೇತೇಜಃ ।
(ತೈ. ಸಂ. ೭-೫-೧೬-೧)

ನೀನು ದ್ಯುಲೋಕದಲ್ಲಿರುವಾಗ ಆಕಾಶವೇ ನಿನ್ನ ಮಹಿಮೆಯು, ನಕ್ಷತ್ರಗಳೇ ನಿನ್ನ ರೂಪವು ಮತ್ತು ಆದಿತ್ಯನೇ ನಿನ್ನ ತೇಜಸ್ಸು. ನೀನು ಪೃಥ್ವಿಯಲ್ಲಿರುವಾಗ, ಪೃಥ್ವಿಯೇ ನಿನ್ನ ಮಹಿಮೆಯು, ಓಷಧಿವನಸ್ಪತಿಗಳೇ ನಿನ್ನ ರೂಪವು ಮತ್ತು ಅಗ್ನಿಯೇ ನಿನ್ನ ತೇಜಸ್ಸು. ಇತ್ಯಾದಿಯಾಗಿ ಮೇಧ್ಯಾಶ್ವದ ಸ್ವರೂಪವನ್ನು ಋತ್ವಿಕ್ಕುಗಳು ಪ್ರಶಂಸಿಸುವುದರಿಂದ ದೇವಾ ಮಮಿರೇ ವೀರ್ಯಂ ತೇ ಎಂದು ಸ್ತುತಿಸಿದೆ.

ವ್ರಾತಾಸಃ—ವ್ರಾತವೆಂದರೆ ಗುಂಪೆಂದರ್ಥ. ನಿರುಕ್ತಕಾರರು ಈ ಪದವನ್ನು ಮನುಷ್ಯನಾಮಗಳಲ್ಲಿ ಸೇರಿಸಿದ್ದಾರೆ. (ನಿ. ೩-೭) ಈ ಪದಕ್ಕೆ ಸಾಯಣರು ಪ್ರಕೃತವಾದ ಋಕ್ಕಿನಲ್ಲಿ ಸಂಘಾತ್ಮಕಾಃ ಅನ್ಯೇ ಅಶ್ವಸಮೂಹಾಃ ವಸ್ವಾದಿದೇವಗಣಾ ವಾ ಎಂದರ್ಥಮಾಡಿದ್ದಾರೆ. ಇತರ ಅಶ್ವಗಳು ಇದನ್ನನುಸರಿಸುವುದು ನ್ಯಾಯವಾಗಿದೆ. ಆದರೆ ಇತರ ದೇವತೆಗಳು ಎತಕ್ಕೆ ಅನುಸರಿಸಬೇಕೆಂಬ ಪ್ರಶ್ನೆಯು ಬರುವುದಾದರೆ, ದೇವತೆಗಳಿಗೆ ಲಭ್ಯವಾಗದ ಅನೇಕ ವಸ್ತುಗಳನ್ನು ಈ ಅಶ್ವವು ಅವರಿಗೆ ಲಬ್ಧವಾಗಲು ಅನುಕೂಲಮಾಡಿಕೊಟ್ಟಿದೆ. ಒಂದು ಉದಾಹರಣೆಯನ್ನು ತೆಗೆದುಕೊಂಡರೆ—

ದೇವಾ ವಾ ಉದಂಚಃ । ಸ್ವರ್ಗಂ ಲೋಕಂ ನ ಪ್ರಾಜಾನಂಸ್ತಮಶ್ವಃ ಪ್ರಾಜಾನದ್ಯದಶ್ವೇನೋ-
ದಂಚೋ ಯಂತಿ ಸ್ವರ್ಗಸ್ಯ ಲೋಕಸ್ಯ ಪ್ರಜ್ಞಾತ್ಯೈ ॥
(ಶ. ಬ್ರಾ ೧೩-೨-೮-೧)

ದೇವತೆಗಳು ಊರ್ಧ್ವಮುಖರಾಗಿ ಹೋಗುತ್ತಿದ್ದಾಗ ಸ್ವರ್ಗಲೋಕದ ಮಾರ್ಗವನ್ನೇ ತಿಳಿಯದಾದರು- ಆಗ ಅಶ್ವವನ್ನು ಹಿಂಬಾಲಿಸಿ ಆ ಮಾರ್ಗವನ್ನು ತಿಳಿದಿದ್ದ ಅಶ್ವದ ಸಹಾಯದಿಂದ ತಾವು ತಿಳಿದುಕೊಂಡರು ಇತ್ಯಾದಿಯಾಗಿ ಅನೇಕ ಸಂದರ್ಭಗಳು ವರ್ಣಿತವಾಗಿದೆ. ಆದುದರಿಂದ ವ್ರಾತಾಸಃ ಅನು ತವ ಸಖ್ಯಮೀಯುಃ ಎಂದು ಹೇಳಿದೆ. ಅದಲ್ಲದೇ ತಯಾ ದೇವಾಸ್ಸುತಮಾ ಬಭೂವುರ್ಯತಸ್ಯ ಸಾಮನ್ತ್ಸರಮಾರಂಪತೀ (ತೈ. ಸಂ. ೭-೧-೧೧) ಯಜ್ಞಾಶ್ವದ ಸಹಾಯದಿಂದ ದೇವತೆಗಳು ಸುತವಾದ ಸೋಮರಸವನ್ನು ಪಡೆದರು ಎಂಬುದಾಗಿಯೂ ಇರುವುದರಿಂದ ಅವರಿಗೆ ಆಧಾರವಾದ ಸೋಮಾದ್ಯನ್ನಗಳಿಗಾಗಿ ಅಶ್ವದ ಸಖ್ಯವನ್ನು ಮಾಡಲೇಬೇಕು ಎಂಬ ಅಂಶವನ್ನೂ ತಿಳಿಸಿದೆ.

ಮರ್ತ್ಯಃ—ಮರ್ತ್ಯೋ ಮನುಷ್ಯೋ ಮರಣಧರ್ಮಾ । ಮರಣಧರ್ಮವಿರುವುದರಿಂದ ಮಾನವನಿಗೆ ಮರ್ತ್ಯನೆಂದು ಹೆಸರು. (ನಿ. ೩-೧೫). ಮೇಧ್ಯಾಶ್ವದ ಸಹಾಯದಿಂದ ಮಾನವನು ಎಲ್ಲಾ ಶ್ರೇಯಸ್ಸನ್ನೂ ಪಡೆಯಬಲ್ಲನಾದುದರಿಂದ ಅವನು ಈ ಅಶ್ವವನ್ನನುಸರಿಸುತ್ತಾನೆ ಇತ್ಯಾದಿಯಾಗಿ ಒಂದರ್ಥವಾಗುತ್ತದೆ. ಎರಡನೆಯದಾಗಿ, ಯಜ್ಞಕ್ಕೆ ಪೂರ್ವಭಾವಿಯಾಗಿ ವಿಜಯಯಾತ್ರೆಗೆ ಈ ಅಶ್ವವನ್ನು ಬಿಟ್ಟಾಗ ಇದರ ರಕ್ಷಣೆಗಾಗಿ ಸಕಲ ಸಿದ್ಧತೆಗಳೂ ನಡೆದಿರುವುದೆಂದು ತಿಳಿಸುವಾಗ ಸಕಲ ವಿಶ್ವಕ್ಕೂ ಕ್ಷೇಮವನ್ನೊದಗಿಸಬಲ್ಲ ಈ ಯಜ್ಞಾಶ್ವವನ್ನು ರಕ್ಷಿಸುವುದರಿಂದ ದೇವಮಾನವಾದಿ ಸಕಲರಿಗೂ ಶ್ರೇಯಸ್ಸಿರುವುದರಿಂದ ಇದರ ರಕ್ಷಣೆಗಾಗಿ ಎಲ್ಲರೂ ಇದನ್ನು ಹಿಂಬಾಲಿಸುತ್ತಾರೆಂದು ವರ್ಣಿಸಿದೆಯೆಂದು ವಿವರಿಸಿದೆ.

ಕನೀನಾಂ ಭಗಃ ಅನು—ಅಶ್ವಕ್ಕೆ ನಾನಾಲಂಕಾರಗಳನ್ನುಮಾಡುವಾಗ ಮಹಿಷಿಯೂ ಅವಳ ಸಖಿಯರೂ ಮಾಡತಕ್ಕ ಪದ್ಧತಿಯಿದೆ. ಅಶ್ವದಲ್ಲಿ ಸಹಜವಾದ ಸ್ತ್ರೀಸೌಂದರ್ಯವಿದೆಯೆಂದು ಒಂದು ಅಭಿಪ್ರಾಯ. ಮತ್ತು ಸುಂದರ ಸ್ತ್ರೀಯರಿಂದ ಅಲಂಕೃತವಾದರೆ ಆಗ ಆ ಸೌಂದರ್ಯವನ್ನು ಅಶ್ವವೂ ಪಡೆಯುತ್ತದೆಂದು ಇನ್ನೊಂದಭಿಪ್ರಾಯವಿರುತ್ತದೆ.

ಗಾಯತ್ರೇಣ ಛಂದಸೇತಿ ಮಹಿಷ್ಯಭ್ಯನಕ್ತಿ । .... .... .... ಪತ್ನ್ಯೋಽಭ್ಯಂಜಂತಿ ಶ್ರಿಯೈ ವಾ ಏತ ದ್ರೂಪಂ ಯತ್ಪತ್ನ್ಯಃ ಶ್ರಿಯಮೇವಾಸ್ಮಿನ್ದಧಾತಿ ।

(ಶ. ಬ್ರಾ. ೧೩-೨-೬-೪)

ಇತ್ಯಾದಿಯಾಗಿ ವರ್ಣಿತವಾಗಿರುವುದರಿಂದ ಮಹಿಷ್ಯಾದಿಗಳಿಂದ ಅಲಂಕೃತವಾದರೆ ಅಶ್ವಕ್ಕೆ ಸ್ತ್ರೀಸೌಂದರ್ಯವು ವೃದ್ಧಿಯಾಗುತ್ತದೆಂದಭಿಪ್ರಾಯವು. ಅಥವಾ ಇದರಲ್ಲಿ ಇನ್ನೂ ಗೂಢವಾದ ರಹಸ್ಯಾರ್ಥವಿರಬಹುದು.

### ವ್ಯಾಕರಣಪ್ರಕ್ರಿಯಾ

ಮರ್ಯಃ—ಮೃಜ್ ಪ್ರಾಣತ್ಯಾಗೇ ಧಾತು. ಇದಕ್ಕೆ ಣ್ಯತ್‌ಪ್ರತ್ಯಯ ಪ್ರಾಪ್ತವಾದರೆ ಛಂದಸಿ ನಿಷ್ಟರ್ಕ್ಯದೇವಹೂಯ—(ಪಾ. ಸೂ. ೩-೧-೧೨೩) ಎಂಬುದರಿಂದ ಯತ್ ಪ್ರತ್ಯಯ. ಸಾರ್ವಧಾತುಕಾರ್ಧಧಾತುಕಯೋಃ ಎಂಬುದರಿಂದ ಗುಣ ರಪರವಾಗಿ ಬರುತ್ತದೆ ಯತೋಽನಾವಃ (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಜಾತಿವಾಚಕಪದವಾಗಿರುವುದರಿಂದ ಏಕವಚನದಲ್ಲಿ ಪ್ರಯುಕ್ತವಾಗಿದೆ.

ವ್ರಾತಾಸಃ—ಇದಕ್ಕೆ ಜಸ್ ಪರವಾದಾಗ ಆಜ್ಜಸೇರಸುಕ್ (ಪಾ. ಸೂ. ೭-೧-೫೦) ಎಂಬುದರಿಂದ ಅಸುಕಾಗಮ.

ಸಖ್ಯಮ್—ಸಖ್ಯುರ್ಭಾವಃ ಸಖ್ಯಮ್. ಸಖ್ಯುರ್ಯಃ (ಪಾ. ಸೂ. ೫-೧-೧೨೬) ಎಂಬುದರಿಂದ ಯ ಪ್ರತ್ಯಯ. ಯಸ್ಯೇತಿ ಚ (ಪಾ. ಸೂ. ೬-೪-೧೪೮) ಸೂತ್ರದಿಂದ ಇಕಾರಲೋಪ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಈಯುಃ—ಇಣ್ ಗತೌ ಧಾತು. ಛಂದಸಿ ಲುಙ್‌ಲಙ್‌ಲಿಟಃ (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಮಮೃಜ್ರೇ—ಮಾಜ್ ಮಾನೇ ಧಾತು. ಪೂರ್ವದಂತೆ ಛಾಂದಸವಾಗಿ ಲಿಟ್. ಪ್ರಥಮಪುರುಷಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ವೀರ್ಯಮ್—ವೀರಸ್ಯ ಕರ್ಮ. ವೀರ್ಯಮ್. ಸಂಬಂಧಾರ್ಥದಲ್ಲಿ ಯತ್ ಪ್ರತ್ಯಯ. ವೀರಶಬ್ದ ವಿಷಯದಲ್ಲಿ ಯತೋಽನಾವಃ ಸೂತ್ರದಿಂದ ಆದ್ಯುದಾತ್ತಸ್ವರ ಬರುವುದಿಲ್ಲದೆಂದು ಹಿಂದೆ ವಿವರಿಸಿದೆ. ತಿತ್‌ಸ್ವರಿತಮ್(ಪಾ ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ. ॥ ೮ ॥



॥ ಸಂಹಿತಾಪಾಠಃ ॥

ಹಿರಣ್ಯಶೃಂಗೋಽಯೋ ಅಸ್ಯ ಪಾದಾ ಮನೋಜವಾ ಅವರ ಇಂದ್ರ ಆಸೀತ್ ।
ದೇವಾ ಇದಸ್ಯ ಹವಿರದ್ಯಮಾಯನ್ಯೋ ಅರ್ವಂತಂ ಪ್ರಥಮೋ ಅಧ್ಯತಿಷ್ಠತ್ ॥ ೯ ॥

ಪದಪಾಠಃ

ಹಿರಣ್ಯಽಶೃಂಗಃ । ಅಯಃ । ಅಸ್ಯ । ಪಾದಾಃ । ಮನಃಽಜವಾಃ । ಅವರಃ । ಇಂದ್ರಃ । ಆಸೀತ್ ।
ದೇವಾಃ । ಇತ್ । ಅಸ್ಯ । ಹವಿಃಽಅದ್ಯಂ । ಆಯನ್ । ಯಃ । ಅರ್ವಂತಂ । ಪ್ರಥಮಃ । ಅಧಿಽಅತಿಷ್ಠತ್ । ॥ ೯ ॥

ಸಾಯಣಭಾಷ್ಯಂ

ಅಯಮಶ್ವೋ ಹಿರಣ್ಯಶೃಂಗೋ ಹಿತರಮಣೀಯಶೃಂಗೋ ವಾ ಉನ್ನತಶಿರಸ್ಕೋ ಹೃದಯರಮಣಶೃಂಗಸ್ಥಾನೀಯಶಿರೋರುಹೋ ವಾ । ಅಸ್ಯ ಪಾದಾ ಅಯೋಽಯೋಮಯಾಃ । ಅಯಃಪಿಂಡಸದೃಶಾ ಇತ್ಯರ್ಥಃ । ತಥಾ ಮನೋಜವಾ ಮನೋವೇಗಾಃ । ಅಥವೈತದಿಂದ್ರವಿಶೇಷಣಂ । ಈದೃಶಸ್ಯಾಶ್ವಸ್ಯ ಸಾಮರ್ಥ್ಯಂ ಪ್ರತಿ ಮನೋವೇಗ ಇಂದ್ರೋಽಪ್ಯವರೋ ನಿಕೃಷ್ಟ ಆಸೀತ್ । ಕಿಂಚಾಸ್ಯಾಶ್ವಸ್ಯ ಹವಿರದ್ಯಂ ಹವಿಷೋಽದನಂ ಭಕ್ಷಣಂ ॥ ಸ್ವಾರ್ಥಿಕೋ ಯತ್ ॥ ಅದನಯೋಗ್ಯಂ ಹವಿರ್ವಾಪೇಕ್ಷ್ಯ ದೇವಾ ಇತ್ ಸರ್ವೇಽಪಿ ದೇವಾ ಆಯನ್ । ಪ್ರಾಪ್ತಾಃ । ಯ ಇಂದ್ರೋಽರ್ವಂತಂ ಪ್ರಥಮಃ ಪ್ರಥಮಭಾವೀ ಸನ್ನಧ್ಯತಿಷ್ಠತ್ ಅಧಿಷ್ಠಿತವಾನ್ । ಸಹವಿಷ್ವ ್ಽನ ಸ್ವಕೀಯತ್ವೇನ ವಾಶ್ರಿತವಾನಿತ್ಯರ್ಥಃ । ಇಂದ್ರ ಏಣಂ ಪ್ರಥಮೋ ಅಧ್ಯತಿಷ್ಠದಿತಿ ಹ್ಯುಕ್ತಂ ॥

ಪ್ರತಿಪದಾರ್ಥ

(ಅಯಂ ಅಶ್ವಃ—ಈ ಅಶ್ವವು) । ಹಿರಣ್ಯಶೃಂಗಃ—ಸುವರ್ಣದಂತಿರುವುದೂ, ಕೊಂಬಿನ ಸ್ಥಾನದಲ್ಲಿರುವುದೂ ಆದ ಕೇಸರಗಳುಳ್ಳದ್ದಾಗಿದೆ । ಅಸ್ಯ—ಈ ಅಶ್ವದ । ಪಾದಾಃ—ಪಾದಗಳು । ಅಯಃ—ಉಕ್ಕಿನಂತೆ ದೃಢವಾದವುಗಳು । ಮನೋಜವಾಃ—ಮನೋವೇಗದಂತೆ ವೇಗವುಳ್ಳ । ಇಂದ್ರಃ—ಇಂದ್ರನು । ಅವರಃ—ಈ ಅಶ್ವಕ್ಕಿಂತಲೂ ನಿಕೃಷ್ಟನಾಗಿ । ಆಸೀತ್—ಆಗಿದ್ದಾನೆ । ಅಸ್ಯ—ಈ ಅಶ್ವದ । ಅದ್ಯಂ—ಭಕ್ಷಣಯೋಗ್ಯವಾದ । ಹವಿಃ—ಹವಿಸ್ಸನ್ನಪೇಕ್ಷಿಸಿ । ದೇವಾ ಇತ್—ಸಕಲ ದೇವತೆಗಳೂ ಕೂಡ । ಆಯನ್—ಬಂದಿದ್ದಾರೆ । ಯಃ—ಯಾವ ಅದೇ ಇಂದ್ರನು । ಅರ್ವಂತಂ—ಈ ಅಶ್ವವನ್ನು । ಪ್ರಥಮಃ—ಎಲ್ಲರಿಗಿಂತಲೂ ಮೊದಲು । ಅಧ್ಯತಿಷ್ಠತ್—ಹತ್ತಿಕುಳಿತನು ॥

**ಭಾವಾರ್ಥ**

ಈ ಅಶ್ವಕ್ಕೆ ಕೊಂಬಿನಂತಿರುವ ಕೇಸರಗಳು ಹೊಂಬಣ್ಣವುಳ್ಳವಾಗಿಯೂ ಆಕರ್ಷಕವಾಗಿಯೂ ಇವೆ. ಇದರ ಪಾದಗಳು ಉಕ್ಕಿನಂತೆ ದೃಢವಾಗಿವೆ. ಮನೋವೇಗದಂತೆ ವೇಗವುಳ್ಳ ಇಂದ್ರನು ವೇಗದಲ್ಲಿ ಈ ಅಶ್ವಕ್ಕಿಂತಲೂ ನಿಕೃಷ್ಟನಾಗಿದ್ದಾನೆ. ಭಕ್ಷಣಯೋಗ್ಯವಾದ ಈ ಆಶ್ವದ ಹವಿಸ್ಸನ್ನಪೇಕ್ಷಿಸಿ ಸಕಲ ದೇವತೆಗಳೂ ಸಹ ಬಂದಿದ್ದಾರೆ. ಎಲ್ಲರಿಗಿಂತಲೂ ಮೊದಲು ಇಂದ್ರನು ಈ ಅಶ್ವವನ್ನು ಹತ್ತಿ ಕುಳಿತನು.

## English Translation

His name is of gold ; his feet are of iron ; and fleet as thought, Indra is his inferior (in speed). The gods have come to partake of his (being offered as) oblations : the first who mounted the horse was Indra.

**ವಿಶೇಷವಿಷಯಗಳು**

ಮನೋಜವಾಃ—ಈ ಪದಕ್ಕೆ ಎರಡು ವಿಧವಾದ ಅನ್ವಯವನ್ನು ಮಾಡಿದ್ದಾರೆ. ಮೊದಲನೆಯದಾಗಿ, ಮನೋವೇಗಾಃ ಎಂದು ಅಶ್ವಪರವಾಗಿ ಅರ್ಥಮಾಡಿ ಈ ಅಶ್ವದ ವೇಗವು ಮನೋವೇಗದಂತೆ ವೇಗವುಳ್ಳದ್ದು. ಇಂದ್ರನ ವೇಗವು ಇದರ ವೇಗಕ್ಕಿಂದ ಕಡಿಮೆಯಾದದ್ದು ಎಂದೂ, ಎರಡನೆಯದಾಗಿ, ಈ ಪದವನ್ನು ಇಂದ್ರನಿಗೆ ವಿಶೇಷಣವನ್ನಾಗಿ ಮಾಡಿ ಅಥವಾ ಏತದಿಂದ್ರವಿಶೇಷಣಂ । ಈದೃಶಸ್ಯಾಶ್ವಸ್ಯ ಸಾಮರ್ಥ್ಯಂ ಪ್ರತಿ ಮನೋವೇಗಃ ಇಂದ್ರಃ ಅಪಿ ನಿಕೃಷ್ಟಃ ಆಸೀತ್ । ಮನೋವೇಗದಂತೆ ವೇಗವುಳ್ಳ ಇಂದ್ರನೂ ಸಹ ನಿಕೃಷ್ಟನಾಗಿ ಕಂಡು ಬಂದನು ಎಂದು ವಿವರಿಸಿದೆ.

ಯಸ್ತೇ ರಥೋ ಮನಸೋ ಜವೀಯಾನೇಂದ್ರ ತೇನ ಸೋಮಪೇಯಾಯ ಯಾಹಿ ।
ತೂಯಮಾ ತೇ ಹರಯಃ ಪ್ರ ದ್ರವಂತು ಯೇಭಿರ್ಯಾಸಿ ವೃಷಭಿರ್ಮಂದಮಾನಃ ॥
(ಋ. ಸಂ. ೧೦-೧೧೨-೨)

ಇತ್ಯಾದಿಋಕ್ಕುಗಳಲ್ಲಿ ಇಂದ್ರನ ರಥವು ಮನೋವೇಗಕ್ಕಿಂತಲೂ ಅಧಿಕವಾದ ವೇಗವುಳ್ಳದ್ದೆಂದು ವರ್ಣಿಸಿರುವುದರಿಂದ ಇಲ್ಲಿ ಎರಡನೆಯ ಅರ್ಥವೂ ಸರಿಹೋಗುತ್ತದೆ.

ಹಿರಣ್ಯಶೃಂಗಃ — ಹಿತರಮಣೀಯಶೃಂಗೋ ವಾ ಹೃದಯರಮಣಶೃಂಗಸ್ಥಾನೀಯಶಿರೋರುಹೋ ವಾ । ಸುವರ್ಣನಿರ್ಮಿತವಾದ ಶೃಂಗವೆಂದಾಗಲಿ ಅಥವಾ ಆಕರ್ಷಕವಾದುದೂ, ಶೃಂಗಸ್ಥಾನದಲ್ಲಿರುವುದೂ ಆದ ಕೇಸರವೆಂದಾಗಲಿ ಅರ್ಥವಾಗುತ್ತದೆಂದು ಹಿರಣ್ಯಶಬ್ದಕ್ಕೆ ಹಿತವಾದುದೂ ರಮಣೀಯವಾದುದೂ ಎಂದು ಅರ್ಥ ಮಾಡಿದ್ದಾರೆ. ನಿರುಕ್ತಕಾರರೂ ಸಹ ಈ ಪದಕ್ಕೆ

ಹಿರಣ್ಯಂ ಕಸ್ಮಾದ್ಧ್ರಿಯತ ಆಯಮ್ಯಮಾನಮಿತಿ ವಾ । ಹ್ರಿಯತೇ ಜನಾಜ್ಜನಮಿತಿ ವಾ । ಹಿತರಮಣಂ ಭವತೀತಿ ವಾ । ಹೃದಯರಮಣಂ ಭವತೀತಿ ವಾ । ಹರ್ಯತೇರ್ವಾ ಸ್ಯಾತ್ಪ್ರೇಪ್ಸಾಕರ್ಮಣಃ । (ನಿ. ೨-೧೦)

ಆಭರಣಾದಿರೂಪದಲ್ಲಿ ವಿಸ್ತೃತವಾಗಿ ಹರಡುವುದು ಎಂದಾಗಲಿ, ಅಥವಾ ಒಬ್ಬನಿಂದ ಇನ್ನೊಬ್ಬನಿಗೆ ಸಂಚಲಿಸುವುದು ಎಂಬುದರಿಂದಾಗಲಿ, ಉಪಯೋಗಕರವಾದುದು ಮತ್ತು ಹರ್ಷದಾಯಕವಾದುದು ಎಂಬುದರಿಂದಾಗಲಿ ಅಥವಾ ಅತ್ಯಂತ ಉತ್ಕಟವಾದ ಇಚ್ಛೆಯಿಂದ ಅಪೇಕ್ಷಿತವಾದುದು ಎಂಬುದರಿಂದಾಗಲಿ ಸುವರ್ಣಕ್ಕೆ ಈ ಹೆಸರು ಪ್ರಸಿದ್ಧವೆಂದು ನಿರ್ವಚನವನ್ನು ತೋರಿಸಿದ್ದಾರೆ. ಅದರಂತೆ ಇಲ್ಲಿಯೂ ಸಹ ನೋಟಕ್ಕೆ ಆಕರ್ಷಕವಾದುದೂ, ಶೃಂಗಸ್ಥಾನದಲ್ಲಿರುವುದೂ ಆದ ಕೇಸರವೆಂದಾದರೂ ಆಗಬಹುದು ಅಥವಾ ಸುವರ್ಣನಿರ್ಮಿತವಾದ ಶೃಂಗವೆಂದಾದರೂ ಆಗಬಹುದು. ಈ ಅಶ್ವದಿಂದಲೇ ಸುವರ್ಣವು ಸೃಷ್ಟವಾಯಿತು ಎಂಬ ವಿಷಯವೂ ಅನೇಕ ಕಡೆಗಳಲ್ಲಿ ಉಕ್ತವಾಗಿರುವುದು.

> ಅಶ್ವಸ್ಯ ವಾ ಆಲಬ್ಧಸ್ಯ । ರೇತ ಉದಕ್ರಾಮತ್ತತ್ಸುವರ್ಣಗ್ಂ ಹಿರಣ್ಯಮಭವದ್ಯತ್ಸುವರ್ಣಗ್ಂ ಹಿರಣ್ಯಂ ದದಾತ್ಯಶ್ವಮೇವ ರೇತಸಾ ಸಮರ್ಧಯತಿ ।
>
> (ಶ. ಬ್ರಾ. ೧೩-೧-೧-೩)

ಇತ್ಯಾದಿವಾಕ್ಯಗಳಲ್ಲಿ ಅಶ್ವದ ರೇತಸ್ಸಿನಿಂದ ಸುವರ್ಣವು ಸೃಷ್ಟವಾಯಿತೆಂದಿದೆ ಆದುದರಿಂದ ಅಶ್ವದ ಅವಯವಗಳು ಸುವರ್ಣರೂಪದಿಂದಿದ್ದು ಇಲ್ಲಿ ಹಿರಣ್ಯಶೃಂಗವೆಂದರೆ ಸುವರ್ಣನಿರ್ಮಿತವಾದ ಶೃಂಗವೆಂದರ್ಥವಾಗಬಹುದು

ಅದ್ಯಂ ಹವಿಃ ದೇವಾ ಇತ್ ಆಯನ್—ಭಕ್ಷಿಸಲು ಯೋಗ್ಯವಾದ ಈ ಅಶ್ವಮೇಧದ ಹವಿಸ್ಸನ್ನಪೇಕ್ಷಿಸಿ ದೇವತೆಗಳೂ ಬಂದರು ಎಂಬ ವರ್ಣನೆಗೆ ಒಂದು ಕಥಾಸನ್ನಿವೇಶವಿದೆ.

> ಪ್ರಜಾಪತಿರ್ದೇವೇಭ್ಯೋ ಯಜ್ಞಾನ್ವ್ಯಾದಿಶತ್ । ಸ ಆತ್ಮನ್ನಶ್ವಮೇಧಮಧತ್ತ ತೇ ದೇವಾಃ ಪ್ರಜಾಪತಿಮಬ್ರುವನ್ನೇಷ ವೈ ಯಜ್ಞೋ ಯದಶ್ವಮೇಧೋಽಪಿ ನೋಽತ್ರಾಸ್ತು ಭಾಗ ಇತಿ ತೇಭ್ಯ ತೇಭ್ಯ ಏತಾನನ್ನಹೋಮಾನಕಲ್ಪಯದ್ಯದನ್ನಹೋಮಾಞ್ಜುಹೋತಿ ದೇವಾನೇವ ತತ್ಪ್ರೀಣಾತಿ ।
>
> (ಶ. ಬ್ರಾ. ೧೩-೨-೧-೧)

ಪ್ರಜಾಪತಿಯು ದೇವತೆಗಳಿಗೆ ಯಜ್ಞವನ್ನು ನಿಯಮಿಸಿದನು ಆದರೆ ತಾನು ಮಾತ್ರ ಅಶ್ವಮೇಧವನ್ನಳಿಸಿಕೊಂಡನು ಆಗ ದೇವತೆಗಳು " ಈ ಅಶ್ವಮೇಧವೂ ಒಂದು ಮುಖ್ಯವಾದ ಯಜ್ಞವಾದುದರಿಂದ ಇದರಲ್ಲಿ ನಮಗೂ ಭಾಗವಿರುವಂತೆ ಮಾಡು " ಎಂದಾಗ ಪ್ರಜಾಪತಿಯು ಅನ್ನಹೋಮವನ್ನು ರಚಿಸಿದನು. ಆದುದರಿಂದ ಅಶ್ವಮೇಧದ ಕಾಲದಲ್ಲಿ ಅನ್ನಹೋಮವನ್ನು ಮಾಡುವುದರಿಂದ ದೇವತೆಗಳಿಗೆ ತೃಪ್ತಿಯಾಗುವುದು ಎಂಬ ವಿಷಯವನ್ನು " ದೇವಾ ಇದಸ್ಯ ಹವಿರದ್ಯಮಾಯನ್ " ಎಂಬ ವಾಕ್ಯದಿಂದ ತಿಳಿಸಿದೆ.

ಅರ್ವಂತಂ ಪ್ರಥಮೋಽಧ್ಯತಿಷ್ಠತ್—ಇಂದ್ರನು ಮೊದಲು ಆಕ್ರಮಿಸಿದನು ಎನ್ನುವಾಗ " ಇಂದ್ರ ಏಣಂ ಪ್ರಥಮೋಽಧ್ಯತಿಷ್ಠತ್ " ಎಂಬ ವಾಕ್ಯದಂತೆ ಇಂದ್ರನು ಮೊದಲು ಈ ಅಶ್ವವನ್ನು ಹತ್ತಿದನು ಎಂದಾಗಬಹುದು ಅಥವಾ,

> ದಿಶಸ್ಸುಷುವಾ ಣೇನಾಭಿಜಿತ್ಯಾ ಇತ್ಯಾಹುರ್ಯದೇತಾನಿ ಹವೀಗ್ಂಷಿ ನಿರ್ವಪತಿ ದಿಶಾಮಭಿಜಿತ್ಯಾ ಏತಯಾ ವಾ ಇಂದ್ರಂ ದೇವಾ ಅಯಾಜಯನ್ತಸ್ಮಾದಿಂಪ್ರಸವ ಏತಯಾ ಮನುಂ ಮನುಷ್ಯಾಸ್ತಸ್ಮಾನ್ಮನುಸವೋ ಯಥೇಂದ್ರೋ ದೇವಾನಾಂ ಯಥಾ ಮನುರ್ಮನುಷ್ಯಾಣಾಮೇವಂ ಭವತಿ ॥
>
> (ತೈ ಸಂ. ೭-೫-೧೫-೨, ೩)

ಎಂಬಲ್ಲಿ ದಿಗ್ವಿಜಯದ ಸಾಧನವಾದ ಹೋಮದಲ್ಲಿ ದೇವತೆಗಳು ಇಂದ್ರನಿಗೆ ಪ್ರಥಮಸ್ಥಾನವನ್ನು ಕೊಟ್ಟುದರಿಂದಲೂ ಅಶ್ವಮೇಧದಲ್ಲಿ ಅದು ಮುಖ್ಯವಾದ ಅಂಗವಾಗಿ ಇಂದ್ರನಿಗೆ ಅದರಲ್ಲಿ ಅಗ್ರಸ್ಥಾನವು ಲಭಿಸಿದುದರಿಂದಲೂ ಸಹ ಪ್ರಥಮೋಧ್ಯತಿಷ್ಠತ್ ಎಂದು ವರ್ಣಿಸಿರಬಹುದು. ಸಾಯಣರೂ ಸಹ ಸ್ವಹವಿಷ್ಟ್ವೇನ ಸ್ವಕೀಯತ್ವೇನ ವಾ ಆಶ್ರಿತವಾನ್ ಇತ್ಯರ್ಥಃ ಎಂದು ವಿವರಿಸಿದ್ದಾರೆ.

### ವ್ಯಾಕರಣಪ್ರಕ್ರಿಯಾ

ಹಿರಣ್ಯಶೃಂಗಃ—ಹಿರಣ್ಯೇ ಶೃಂಗೇ ಯಸ್ಯ ಸಃ-ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್ (ಪಾ. ಸೂ. ೬-೧-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಹೀಗೆಯೇ ಮನೋಜವಾಃ ಎಂಬಲ್ಲಿಯೂ ಬಹುವ್ರೀಹಿ ಸಮಾಸವಾದುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

ಆಸೀತ್—ಅಸ ಭುವಿ ಧಾತು. ಲಙ್ ಪ್ರಥಮಪುರುಷಏಕವಚನಾಂತರೂಪ. ಅತಿಙಂತದ ಪರದಲ್ಲಿರು ವುದರಿಂದ ನಿಘಾತಸ್ವರ ಬರುತ್ತದೆ.

ಹವಿರದ್ಯಮ್-ಹವಿಷಃ ಅದ್ಯಮ್ ಹವಿರದ್ಯಮ್. ಅದ ಭಕ್ಷಣೇ ಧಾತು. ಸ್ವಾರ್ಥದಲ್ಲಿ ಅಥವಾ ಯೋಗ್ಯಾರ್ಥ ದಲ್ಲಿ ಯತ್ ಪ್ರತ್ಯಯ. ಯತೋಽನಾವಃ (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ ಸಮಾಸವಾದಾಗ ಗತಿಕಾರಕೋಪಪದಾತ್ ಕೃತ್ (ಪಾ. ಸೂ. ೬-೧-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿ ಸ್ವರ ಬರುತ್ತದೆ.

ಆಯನ್—ಇಣ್ ಗತೌ ಧಾತು. ಲಙ್ ಪ್ರಥಮಪುರುಷಬಹುವಚನದಲ್ಲಿ ಝಿ ಪ್ರತ್ಯಯ. ಝೋಽಂತಃ ಎಂಬುದರಿಂದ ಅಂತಾದೇಶ. ಇತಶ್ಚ ಸೂತ್ರದಿಂದ ಅಂತ್ಯಇಕಾರಕ್ಕೆ ಲೋಪ. ಆಡಜಾದೀನಾಂ ಸೂತ್ರದಿಂದ ಅಂಗಕ್ಕೆ ಆಡಾಗಮ. ಇಣೋಯಣ್ (ಪಾ. ಸೂ. ೬-೪-೮೧) ಧಾತು ಇಕಾರಕ್ಕೆ ಯಣ್. ಅತಿಙಂತದ ಪರದಲ್ಲಿ ರುವುದರಿಂದ ನಿಘಾತಸ್ವರ ಬರುತ್ತದೆ.

ಅಧ್ಯತಿಷ್ಠತ್—ಅಧಿ ಉಪಸರ್ಗ. ಷ್ಠಾ ಗತಿನಿವೃತ್ತೌ ಧಾತು. ಲಙ್ ಪ್ರಥಮಪುರುಷಏಕವಚನಾಂತ ರೂಪ. ಯಚ್ಛಬ್ದಸಂಬಂಧವಿರುವುದರಿಂದ ಯದ್ವೃತ್ತಾನ್ನಿತ್ಯಮ್ (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತ ಸ್ವರ ಪ್ರತಿಷೇಧ ಬರುತ್ತದೆ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ. ತಿಙಿಚೋದಾತ್ತವತಿ (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಅಧಿ) ನಿಘಾತಸ್ವರ ಬರುತ್ತದೆ. ॥ ೯ ॥

———— :O: ————

ಸಂಹಿತಾಪಾಠಃ

ಈರ್ಮಾಂತಾಸಃ ಸಿಲಿಕಮಧ್ಯಮಾಸಃ ಸಂ ಶೂರಣಾಸೋ ದಿವ್ಯಾಸೋ ಅತ್ಯಾಃ ।

ಹಂಸಾ ಇವ ಶ್ರೇಣಿಶೋ ಯತಂತೇ ಯದಾಕ್ಷಿಷುರ್ದಿವ್ಯಮಜ್ಮಮಶ್ವಾಃ । ॥ ೧೦ ॥

ಪದಪಾಠಃ

ಈರ್ಮಽಅಂತಾಸಃ । ಸಿಲಿಕಽಮಧ್ಯಮಾಸಃ । ಸಂ । ಶೂರಣಾಸಃ । ದಿವ್ಯಾಸಃ । ಅತ್ಯಾಃ ।
ಹಂಸಾಃಽಇವ । ಶ್ರೇಣಿಽಶಃ । ಯತಂತೇ । ಯತ್ । ಆಕ್ಷಿಷುಃ । ದಿವ್ಯಂ । ಅಜ್ಮಂ । ಅಶ್ವಾಃ ॥ ೧೦ ॥

॥ ಸಾಯಣಭಾಷ್ಯಂ ॥

ಅತ್ರಾಶ್ವಸಮೂಹಸ್ತುತಿದ್ವಾರೇಣಾಯಂ ಸ್ತೂಯತೇ । ಈರ್ಮಾಂತಾಸ ಈರಿತಾಃ ಪ್ರೇರಿತಾ ಅಂತಾ ಯೇಷಾಂ ತೇ ತಥೋಕ್ತಾಃ । ವಿರಲಾಂತಾ ಇತ್ಯರ್ಥಃ । ಸಿಲಿಕಮಧ್ಯಮಾಸಃ ಸಂಸೃತಾಃ ಸಂಗತಾ ಮಧ್ಯಪ್ರದೇಶಾ ಯೇಷಾಂ ತೇ ತಥೋಕ್ತಾಃ । ಮಧ್ಯೇ ನಿವಿಡಾ ಇತ್ಯರ್ಥಃ । ಅಥವಾ ಶರೀರಸ್ಯೈತೇ ವಿಶೇಷಣೇ ಈರ್ಮ ಈರಿತಃ । ಪುರತೋ ನುನ್ನ ಇತ್ಯರ್ಥಃ । ತಾದೃಶಃ ಪೃಥುರಂತೋ ಜಘನಪ್ರದೇಶೋ ಯೇಷಾಂ ತೇ ತಾದೃಶಾಃ । ತಥಾ ಸಿಲಿಕಮಧ್ಯಮಾಸಃ। ಸಂಸೃತಃ ಸಂಗತಃ ಸಂಲಗ್ನೋ ಮಧ್ಯಭಾಗೋ ಯೇಷಾಂ ತೇ ತಾದೃಶಾಃ। ಪುಷ್ಟತ್ವಾತ್ಪೃಥುಪೃಷ್ಠಾಃ ಸಂಲಗ್ನಮಧ್ಯಾಶ್ಚೇತ್ಯರ್ಥಃ । ಜಘನಪುರೋಭಾಗಾವಪೇಕ್ಷ್ಯ ಸಿಲಿಕಮಧ್ಯಮಾ ಇತ್ಯುಕ್ತಂ । ಸಮಿತ್ಯಯಮುಪಸರ್ಗೋ ಯತಂತ ಇತ್ಯಾಖ್ಯಾತೇನ ಸಂಬಂಧಯಿತವ್ಯಃ । ಶೂರಣಾಸೋ ವಿಕ್ರಮಶೀಲಾ ದಿವ್ಯಾಸೋ ದಿವಿ ಭವಾ ಅತ್ಯಾ ಅತನಶೀಲಾಃ ! ಯದ್ಯಪ್ಯಯಮಶ್ವನಾಮ ತಥಾಪ್ಯಶ್ವಶಬ್ದಸ್ಯ ವಕ್ಷ್ಯಮಾಣತ್ವಾದಯಂ ಯೌಗಿಕೋಽವಗಂತವ್ಯಃ । ಈದೃಶಾಃ ಅಶ್ವಾಃ ಶ್ರೇಣಿಶಃ । ಏಕವ್ಯಾಪಾರಾಣಾಂ ಬಹೂನಾಂ ಸಮೂಹಃ ಶ್ರೇಣಿರಿತ್ಯುಚ್ಯತೇ । ಶೀಘ್ರಧಾವನಾಯ ಶ್ರೇಣಿಶಃ ಪಂಕ್ತೀಭೂಯ ಸಂ ಯತಂತೇ । ಸಮ್ಯಗ್ಯತ್ನಂ ಕುರ್ವಂತಿ । ತತ್ರ ದೃಷ್ಟಾಂತಃ । ಹಂಸಾ ಇವ । ತೇ ಯಥಾ ಶ್ರೇಣಿಭೂತಾ ಈರ್ಮಾಂತಾಸ ಇತ್ಯಾದ್ಯುಕ್ತರೂಪಾಃ ಸಂತೋಽಂತರಿಕ್ಷೇ ಗಮನಾಯ ಯತಂತೇ ತದ್ವತ್ । ಕದಾ । ಉಚ್ಯತೇ । ಯದ್ಯದಾಶ್ವಾ ದಿವ್ಯಮಜ್ಮಂ ಗಮನಂ ಗಂತವ್ಯಂ ವಾ ಮಾರ್ಗಮಾಕ್ಷಿಷುಃ ವ್ಯಾಪ್ನುವಂತಿ ತದಾ ॥ ಅಯಂ ಮಂತ್ರೋ ಯಾಸ್ಕೇನೈವಂ ವ್ಯಾಖ್ಯಾತಃ । ಈರ್ಮಾಂತಾಃ ಸಮೀರಿತಾಂತಾಃ ಪೃಥ್ವಂತಾ ವಾ ಸಿಲಕಮಧ್ಯಮಾಃ ಸಂಸೃತಮಧ್ಯಮಾಃ ಶೀರ್ಷಮಧ್ಯಮಾ ವಾ । ಅಪಿ ವಾ ಶಿರ ಆದಿತ್ಯೋ ಭವತಿ ಯದನುಶೇತೇ ಸರ್ವಾಣಿ ಭೂತಾನಿ ಮಧ್ಯೇ ಚೈಷಾಂ ತಿಷ್ಠತಿ । ಇದಮಪೀತರಚ್ಛಿರ ಏತಸ್ಮಾದೇವ ಸಮಾಶ್ರಿತಾನ್ಯೇತದಿಂದ್ರಿಯಾಣಿ ಭವಂತಿ । ಸಂ ಶೂರಣಾಸೋ ದಿವ್ಯಾಸೋ ಅತ್ಯಾಃ। ಶೂರಃ ಶವತೇ-

ರ್ಗತಿಕರ್ಮಣೋ ದಿವ್ಯಾ ದಿವಿಜಾ ಅತ್ಯಾ ಅತನಾಃ । ಹಂಸಾ ಇವ ಶ್ರೇಣಿಶೋ ಯತಂತೇ । ಹಂಸಾ ಹಂತೇರ್ಘ್ನಂತ್ಯಧ್ವಾನಂ । ಶ್ರೇಣಿಶ ಇತಿ ಶ್ರೇಣಿಃ ಶ್ರಯತೇಃ ಸಮಾಶ್ರಿತಾ ಭವಂತಿ । ಯದಾಕ್ಷಿಷುರ್ಯದಾಪುರ್ದಿವ್ಯಮಜ್ಮಮಜನಿಮಾಜಿಮಶ್ವಾಃ । ನಿ. ೪-೧೩ । ಇತಿ ॥

। ಪ್ರತಿಪದಾರ್ಥ ।

ಯತ್—ಯಾವಾಗ । ಅಶ್ವಾಃ—(ಸೂರ್ಯನ) ಕುದುರೆಗಳು । ದಿವ್ಯಂ ಅಜ್ಮಂ—ದೇವಲೋಕದ ಮಾರ್ಗವನ್ನು । ಆಕ್ಷಿಷುಃ—ವ್ಯಾಪಿಸುತ್ತವೆಯೋ (ಆಗ) । ಈರ್ಮಾಂತಾಸಃ—ಪುಷ್ಟವಾದ ತೊಡೆಕಟ್ಟುಳ್ಳವೂ । ಸಿಲಿಕಮಧ್ಯಮಾಸಃ—ಸಮವರ್ತಿಯಾದ ಸೊಂಟದ ಪಾರ್ಶ್ವವುಳ್ಳವೂ । ಶೂರಣಾಸಃ—ವೀರ್ಯವುಳ್ಳವೂ । ದಿವ್ಯಾಸಃ—ದೇವಲೋಕೋತ್ಪನ್ನವೂ ಆದ । ಅತ್ಯಾಃ—ಸಂಚಾರಶೀಲವಾದ ಅಶ್ವಗಳು । ಶ್ರೇಣಿಶಃ—ಸಾಲುಕಟ್ಟಿಕೊಂಡು । ಹಂಸಾ ಇವ—ಹಂಸಪಕ್ಷಿಗಳಂತೆ । ಸಂಯತಂತೇ—(ಹಾರಲು) ಪ್ರಯತ್ನಿಸುತ್ತವೆ.

ಭಾವಾರ್ಥ

ಸೂರ್ಯನ ಕುದುರೆಗಳು ಯಾವಾಗ ದೇವಲೋಕದ ಮಾರ್ಗವನ್ನು ವ್ಯಾಪಿಸುತ್ತವೆಯೋ ಆಗ ಪುಷ್ಟವಾದ ತೊಡೆಕಟ್ಟುಳ್ಳವೂ, ಸಮವರ್ತಿಯಾದ ಸೊಂಟದ ಪಾರ್ಶ್ವವುಳ್ಳವೂ ವೀರ್ಯವುಳ್ಳವೂ, ದೇವಲೋಕೋತ್ಪನ್ನವೂ ಆದ ಅಶ್ವಗಳು ಸಾಲುಕಟ್ಟಿಕೊಂಡು ಹಾರುತ್ತಿರುವ ಹಂಸಪಕ್ಷಿಗಳಂತೆ ಹಾರಲು ಪ್ರಯತ್ನಿಸುತ್ತವೆ.

English Translation

The full-haunched, slender-waisted, high-spirited, and celestial coursers (of the sun), gallop along like swans in rows, when the horses spread along the heavenly path.

ವಿಶೇಷವಿಷಯಗಳು

ಇಲ್ಲಿ ಆದಿತ್ಯಾಶ್ವಗಳ ದಿವ್ಯಲೋಕಸಂಚಾರವನ್ನು ಗುಂಪುಕಟ್ಟಿಕೊಂಡು ಹಾರುತ್ತಿರುವ ಹಂಸಪಕ್ಷಿಗಳ ಮಾಲೆಗೆ ಹೋಲಿಸಿ ಈ ಉಪಮಾನದಲ್ಲಿ ಅಶ್ವಗಮನದ ಸೌಂದರ್ಯವನ್ನು ವರ್ಣಿಸುವುದರ ಜೊತೆಗೆ ಅವುಗಳ ಅಲೌಕಿಕವಾದ ಸ್ವರೂಪ ಮತ್ತು ಶಕ್ತಿಗಳನ್ನೂ ವರ್ಣಿಸಿದೆ. ಈ ಋಕ್ಕಿಗೆ ನಿರುಕ್ತಕಾರರು ವ್ಯಾಖ್ಯಾನವನ್ನು ಮಾಡಿರುತ್ತಾರೆ ಅದನ್ನು ಸಾಯಣಭಾಷ್ಯದಲ್ಲಿ ಉದಹರಿಸಿದೆ. (ನಿ. ೪-೧೩).

ಈರ್ಮಾಂತಾಸಃ—ಈರ್ಮಾಂತಾಃ ಸಮೀರಿತಾಂತಾಃ ಪೃಥ್ವಂತಾ ವಾ । ಸುಪುಷ್ಟವಾಗಿ ನಿರ್ಮಿತವಾದ ಅಥವಾ ಪುಷ್ಟವಾಗಿ ಚಾಚಿರತಕ್ಕ ನಡುಕಟ್ಟೆಂದರ್ಥ.

ಸಿಲಿಕಮಧ್ಯಮಾಸಃ– ಸಂಸೃತಮಧ್ಯಮಾಃ ಶೀರ್ಷಮಧ್ಯಮಾ ವಾ ಅಪಿ ವಾ ಶಿರ ಆದಿತ್ಯೋ ಭವತಿ ಯದನುಶೇತೇ ಸರ್ವಾಣಿ ಭೂತಾನಿ ಮಧ್ಯೇ ಚೈಷಾಂ ತಿಷ್ಠತಿ ॥

ಸಮವರ್ತಿಯಾಗಿ ಒತ್ತಿಕೊಂಡಿರತಕ್ಕ ಸೊಂಟದ ಪಾರ್ಶ್ವಗಳಿಂದಾಗಲಿ ಅಥವಾ ಮಧ್ಯದಲ್ಲಿರತಕ್ಕ ಶಿರಸ್ಸುಳ್ಳವುಗಳಿಂದಾಗಲಿ ಅರ್ಥವಾಗುತ್ತದೆ. ಇಲ್ಲಿ ಶೀರ್ಷ (ಶಿರಸ್) ಎಂಬ ಪದವು ಸೂರ್ಯನಿಗೆ ಅನ್ವಯಿಸುತ್ತದೆ. ಸಕಲ ಭೂತಗಳನ್ನೂ ವ್ಯಾಪಿಸಿ ಅವುಗಳ ನಡುವೆ ಸ್ಥಿತನಾಗಿರುವುದರಿಂದ ಈ ವಿಶೇಷಣವೆಂದು ನಿರುಕ್ತಕಾರರು ವಿವರಿಸಿದ್ದಾರೆ. ಇದಕ್ಕೆ ದುರ್ಗಾಚಾರ್ಯರು ವ್ಯಾಖ್ಯಾನವನ್ನು ಮಾಡುತ್ತಾ ಯಸ್ಮಾಚ್ಚಾಸೌ ಅನುಪ್ರವಿಶ್ಯ ಪ್ರಾಣಭಾವೇನ ಸರ್ವಭೂತಾನಿ ಶೇತೇ । ಅಸ್ತೇ ತಸ್ಮಾತ್ಸರ್ವಭೂತಾಶ್ರಯೆಪಾತ್ ಶಿರ ಆದಿತ್ಯಃ । ಭೂತಗಳನ್ನೆಲ್ಲಾ ಪ್ರಾಣರೂಪದಿಂದ ಪ್ರವೇಶಿಸಿ ಎಲ್ಲವನ್ನೂ ವ್ಯಾಪಿಸಿರುವುದರಿಂದ ಶಿರಃ ಎಂಬ ವಿಶೇಷಣದಿಂದ ನಿರ್ದೇಶಿಸಿವೆ ಎಂದು ವಿವರಿಸಿದ್ದಾರೆ.

ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ।
ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥

(ಋ ಸಂ. ೧-೧೧೫-೧)

ಇತ್ಯಾದಿಋಕ್ಕುಗಳಲ್ಲಿ ಜಗತ್ತಿಗೇ ಆತ್ಮನೆಂದು ವರ್ಣಿತವಾಗಿರುವ ಸೂರ್ಯನಿಗೆ ಇಲ್ಲಿ ಶಿರಃ ಎಂಬ ಪರ್ಯಾಯನಾಮವಿದೆ. ಎಂದು ದುರ್ಗಾಚಾರ್ಯರ ವ್ಯಾಖ್ಯಾನದ ಅಭಿಪ್ರಾಯವಾಗಿದೆ. ಸ ಚೈತೇಷಾಮಶ್ವಾನಾಂ ಮಧ್ಯೇ ತಿಷ್ಠತಿ । ಶೀರ್ಷರೂಪದಲ್ಲಿರುವ ಈ ಆದಿತ್ಯನು ಅಶ್ವಗಳ ನಡುವೆ ಇರುವುದರಿಂದ ಸಿಲಿಕಮಧ್ಯಮಾಃ ಎಂದು ಅಶ್ವಗಳಿಗೆ ವಿಶೇಷಣವಾಗಿದೆಯೆಂದು ತಿಳಿಯಬೇಕು.

ಸಂಶೂರಣಾಸಃ— ಶೂರಃ ಶವತೇರ್ಗತಿಕರ್ಮಣಃ । ಗತ್ಯರ್ಥಕವಾದ ಶು ಧಾತುವಿನಿಂದ ನಿಷ್ಪನ್ನವಾಗಿದೆ.

ದಿವಿಜಾಃ—ದಿವ್ಯಾಃ ದಿವಿಜಾಃ । ದ್ಯುಲೋಕದಲ್ಲಿ ಉತ್ಪನ್ನವಾದವು.

ಅತ್ಯಾಃ—ಅಪೇಕ್ಷಿತಪ್ರದೇಶಂ ಪ್ರತಿ ಅತನಶೀಲಾಃ । ತಾನು ಇಷ್ಟಬಂದ ಪ್ರದೇಶಕ್ಕೆ ಸಂಚರಿಸುವ ಸ್ವಭಾವ ಮತ್ತು ಶಕ್ತಿಯುಳ್ಳವನು ಎಂದರ್ಥವಾಗುತ್ತದೆ. ಈ ಪದವು ಅಗ್ನಿ, ಅಶ್ವ, ಆದಿತ್ಯ ಇವರುಗಳಿಗೆ ವಿಶೇಷಣವಾಗಿರುತ್ತದೆ

ಏಷ ಪ್ರ ಪೂರ್ವೀರವ ತಸ್ಯ ಚಮ್ರಿಷೋಽತ್ಯೋ ನ ಯೋಷಾಮುದಯಂಸ್ತ ಭುರ್ವಣಿಃ ।
ದಕ್ಷಂ ಮಹೇ ಪಾಯಯತೇ ಹಿರಣ್ಯಯಂ ರಥಮಾವೃತ್ಯಾ ಹರಿಯೋಗಮೃಭ್ವಸಂ ॥

(ಋ. ಸಂ. ೧–೫೬-೧)

ಎಂಬ ಋಕ್ಕಿನಲ್ಲಿ ಅತ್ಯಃ ಎಂಬುದು ಅಶ್ವಪರ್ಯಾಯವಾಗಿಯೂ.

ಅಸ್ಯ ಶ್ಲೋಕೋ ದಿವೀಯತೇ ಪೃಥಿವ್ಯಾಮತ್ಯೋ ನ ಯಂಸದ್ಯಕ್ಷಭೃದ್ವಿಚೇತಾಃ ।
ಮೃಗಾಣಾಂ ನ ಹೇತಯೋ ಯಂತಿ ಚೇಮಾ ಬೃಹಸ್ಪತೇರಹಿಮಾಯಾಁ ಅಭಿ ದ್ಯೂನ್ ।

(ಋ. ಸಂ. ೧–೧೯೦-೪)

ಇತ್ಯಾದಿ ಋಕ್ಕುಗಳಲ್ಲಿ ಅತನಶೀಲಃ ಆದಿತ್ಯಃ ಎಂದೂ ಅರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಅಶ್ವಗಳಿಗೆ ವಿಶೇಷಣವಾಗಿದೆ.

ಅಜ್ಮಂ—ಈ ಪದಕ್ಕೆ ನಾನಾರ್ಥಗಳಲ್ಲಿ ಪ್ರಯೋಗವಿರುತ್ತದೆ. ಇದು ಸಂಗ್ರಾಮನಾಮಗಳಲ್ಲಿಯೂ (ನಿ. ೩-೯) ಗೃಹನಾಮಗಳಲ್ಲಿಯೂ (ನಿ. ೩-೧೩) ಪಠಿತವಾಗಿದೆ. ಈ ಎರಡರ್ಥಗಳಲ್ಲಿಯೂ ಇರುವ ಪ್ರಯೋಗಗಳ ಜೊತೆಗೆ—

ಉಚಥ್ಯೇಽ ವಪುಷಿ ಯಃ ಸ್ವರಾಳುತ ವಾಯೋ ಘೃತಸ್ನಾಃ ।
ಅಶ್ವೇಷಿತಂ ರಜೇಷಿತಂ ಶುನೇಷಿತಂ ಪ್ರಾಜ್ಮ ತದಿದಂ ನು ತತ್ ।

(ಋ. ಸಂ. ೮-೪೬-೨೮)

ಎಂಬಲ್ಲಿ ಅಜ್ಮ ಶಬ್ದಕ್ಕೆ ಅನ್ನವೆಂದೂ ಅರ್ಥಮಾಡಿದೆ.

ಅಚ್ಯುತಾ ಚಿದ್ವೋ ಅಜ್ಮನ್ನಾ ನಾನದತಿ ಪರ್ವತಾಸೋ ವನಸ್ಪತಿಃ। ಭೂಮಿರ್ಯಾಮೇಷು ರೇಜತೇ।

(ಋ. ಸಂ. ೮-೨೦-೫)

ಎಂಬಲ್ಲಿ ಅಜ್ಮನಿ ಗಮನೇ ಸತಿ । ಸಂಚಾರವಿರಲಾಗಿ ಎಂದು ಗಮನಾರ್ಥಕವಾದ ಪ್ರಯೋಗವೆಂದು ತಿಳಿಸಿದೆ.

ಯೇ ಪಾತಯಂತೇ ಅಜ್ಮಭಿರ್ಗಿರೀಣಾಂ ಸ್ನುಭಿರೇಷಾಂ ।
ಯಜ್ಞಂ ಮಹಿಷ್ವಣೀನಾಂ ಸುಮ್ನಂತುವಿಷ್ವಣೀನಾಂ ಪ್ರಾಧ್ವರೇ ॥

(ಋ. ಸಂ. ೮-೪೬-೧೮)

ಎಂಬಲ್ಲಿ ಅಜ್ಮಭಿಃ ಬಲೈಃ ಬಲಕರೈರುದಕೈಃ ಸಹ । ಬಲಕರವಾದ ಉದಕವೆಂದರ್ಥಮಾಡಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಅಜ್ಮಂ ಅಜನಿಂ । ಅಜ್ಯತೇಽಸ್ಯಾಂ ಗಮ್ಯತ ಇತಿ ಅಜನಿಃ ವಾಹಿಕಾಂ ಸ್ವರ್ಗಪಥ ಇತ್ಯರ್ಥಃ । ಸ್ವರ್ಗದ ಮಾರ್ಗವೆಂದು ನಿರುಕ್ತಕಾರರು ಹೇಳಿರುವ ಅಭಿಪ್ರಾಯವನ್ನು ದುರ್ಗಾಚಾರ್ಯರು ವಿವರಿಸಿದ್ದಾರೆ.

ಹಂಸಾಃ— ಹಂತೇರ್ಘ್ನಂತ್ಯಧ್ವಾನಂ । ಗುಂಪುಗಟ್ಟಿಕೊಂಡು ರಸ್ತೆಗಳನ್ನು ಸಾಗಿಸುತ್ತವೆ. ಹನ್ ಧಾತುವಿನಿಂದ ನಿಷ್ಪನ್ನವಾಗಿದೆ.

ಶ್ರೇಣಯಃ—ಒಟ್ಟಿಗೆ ಸೇರಿಸು ಎಂಬರ್ಥವನ್ನು ಕೊಡತಕ್ಕ ಶ್ರೀ ಧಾತುವಿನಿಂದ ನಿಷ್ಪನ್ನವಾಗಿ ಸಂಘಾತ್ಮಕವಾಗಿರುವುದೆಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

ಈರ್ಮಾಂತಾಸಃ—ಈರ್ಮಾಃ ಈರಿತಾಃ ಅಂತಾಃ ಯೇಷಾಂ ತೇ ಈರ್ಮಾಂತಾಸಃ ಈರ ಗತೌ ಪ್ರೇರಣೇ ಚ ಧಾತು. ಬಹುಲಗ್ರಹಣದಿಂದ ಇಷಿಯುಧೀಂಧಿ—(ಉ. ಸೂ. ೧-೧೪೨) ಎಂಬುದರಿಂದ ವಿಧಿಸಲ್ಪಡುವ ಮಕ್ ಪ್ರತ್ಯಯ ಇದಕ್ಕೂ ಬರುತ್ತದೆ. ಪ್ರತ್ಯಯಸ್ವರದಿಂದ ಈರ್ಮ ಎಂಬುದು ಅಂತೋದಾತ್ತವಾಗುತ್ತದೆ. ಬಹುವ್ರೀಹಿ ಸಮಾಸವಾದಾಗ ಪೂರ್ವಪದಪ್ರಕೃತಿಸ್ವರ ಬರುತ್ತದೆ ಇದೇ ಮೊದಲ್ಗೊಂಡು ನಾಲ್ಕು ಶಬ್ದಗಳಲ್ಲಿಯೂ ಜಸ್ ಪರವಾದಾಗ ಆಜ್ಜಸೇರಸುಕ್ (ಪಾ. ಸೂ. ೭-೧-೫೦) ಎಂಬುದರಿಂದ ಅವಕ್ಕೆ ಅಸುಕಾಗಮ. ಸಿಲಿಕಮಧ್ಯಮಾಸಃ ಎಂಬಲ್ಲಿಯೂ ಬಹುವ್ರೀಹಿಸಮಾಸವಾದುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

ದಿವ್ಯಾಸಃ—ದಿವಿ ಭವಾಃ ದಿವ್ಯಾಸಃ ದಂಡಾದಿಯಲ್ಲಿ ಸೇರಿರುವುದರಿಂದ ದಂಡಾದಿಭ್ಯೋ ಯಃ (ಪಾ.ಸೂ. ೫-೧-೬೬) ಎಂಬುದರಿಂದ ಯ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಹಿಂದಿನಂತೆ ಜಸ್ ಪರವಾದಾಗ ಅದಕ್ಕೆ ಅಸುಕಾಗಮ.

ಶ್ರೇಣಿಶಃ— ಸಂಖ್ಯೈಕವಚನಾಚ್ಚ ವೀಪ್ಸಾಯಾಮ್ (ಪಾ. ಸೂ ೫-೪-೪೩) ಎಂಬುದರಿಂದ ಶಸ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಯತಂತೇ ಯತೀ ಪ್ರಯತ್ನೇ ಧಾತು. ಲಟ್ ಪ್ರಥಮಪುರುಷಬಹುವಚನಾಂತರೂಪ. ತಿಙಂತನಿಘಾತ ಸ್ವರ ಬರುತ್ತದೆ

ಆಕ್ಷಿಷುಃ—ಅಕ್ಷೂ ವ್ಯಾಪ್ತೌ ಧಾತು. ಭ್ವಾದಿ. ಛಂದಸಿಲುಙ್‌ಲಙ್‌ಲಿಟಃ (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್. ಪ್ರಥಮಪುರುಷ ಬಹುವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

ಅಜ್ಮಮ್—ಅಜ ಗತಿಕ್ಷೇಪಣಯೋಃ ಧಾತು. ಉಣಾದಿಯಲ್ಲಿ ಬಹುಲಗ್ರಹಣವಿರುವುದರಿಂದ ಇದಕ್ಕೆ ಮನ್ ಪ್ರತ್ಯಯ. ವಲಾದಾವಾರ್ಧಧಾತುಕೇ ವೇಷ್ಯತೇ (ಕಾ. ೨-೪-೫೬-೨) ಎಂಬ ವಚನದಿಂದ ಅಜೇರ್ವ್ಯಘಞಪೋಃ (ಪಾ. ಸೂ ೨-೪-೫೬) ಎಂಬುದರಿಂದ ಬರಬೇಕಾದ ವೀಭಾವವು ಬರುವುದಿಲ್ಲ. ಞ್ನಿತ್ಯಾದಿರ್ನಿತ್ಯಮ್ (ಪಾ. ಸೂ ೬-೧-೧೯೭) ಎಂಬುದರಿಂದ ಪ್ರತ್ಯಯನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೧೦ ॥

———:o:———

ಸಂಹಿತಾಪಾಠಃ

ತವ ಶರೀರಂ ಪತಯಿಷ್ಣ್ವರ್ವನ್ತವ ಚಿತ್ತಂ ವಾತ ಇವ ಧ್ರಜೀಮಾನ್ ।
ತವ ಶೃಂಗಾಣಿ ವಿಷ್ಠಿತಾ ಪುರುತ್ರಾರಣ್ಯೇಷು ಜರ್ಭುರಾಣಾ ಚರಂತಿ ॥೧೧॥

ಪದಪಾಠಃ

ತವ । ಶರೀರಂ । ಪತಯಿಷ್ಣು । ಅರ್ವನ್ । ತವ । ಚಿತ್ತಂ । ವಾತಃಽಇವ । ಧ್ರಜೀಮಾನ್ ।
ತವ । ಶೃಂಗಾಣಿ । ವಿಽಸ್ಥಿತಾ । ಪುರುಽತ್ರಾ । ಅರಣ್ಯೇಷು । ಜರ್ಭುರಾಣಾ । ಚರಂತಿ ॥ ೧೧ ॥

### ಸಾಯಣಭಾಷ್ಯಂ

ಹೇ ಅರ್ವನ್ ತವ ಶರೀರಂ ಪತಯಿಷ್ಣು ಪತನಶೀಲಂ । ವ್ಯಾಪ್ತಮಿತ್ಯರ್ಥಃ । ತಥಾ ತವ ಚಿತ್ತಂ ಮನೋ ವಾತ ಇವ ಧ್ರುಜೀಮಾನ್ ಶೀಘ್ರಗಮನವಾಯುರಿವ । ತದ್ವಚ್ಛೀಘ್ರಗಮನಾನುಕೂಲಮಿತ್ಯ-ರ್ಥಃ । ಕಿಂಚ ತವ ಶೃಂಗಾಣಿ ಶಿರಸೋ ನಿರ್ಗತಾಃ ಶೃಂಗಸ್ಥಾನೀಯಾಃ ಕೇಶಾಃ ಪುರುತ್ರಾ ಪುರುಷು ಬಹುಷು ಪ್ರದೇಶೇಷು ವಿಷ್ಠಿತಾ ವಿಷ್ಠಿತಾನಿ ವಿವಿಧಂ ಸ್ಥಿತಾಃ । ಕಿಂಚ ತ ಏವಾರಣ್ಯೇಷು ಜರ್ಭುರಾಣಾ ಮನೋಹರಾಣಿ ಪೂರ್ಯಮಾಣಾನಿ ವಾ ಏವಂಭೂತಾಃ ಕೇಶಾಶ್ಚರಂತಿ । ಯದ್ವಾ । ಅತ್ರಾಶ್ವಸ್ಯ ಶೃಂಗಾ-ಭಾವಾತ್ ತದ್ವದುನ್ನತಾನಿ ತೇಜಾಂಸಿ ಪರಿಗೃಹ್ಯಂತೇ ॥

### ಪ್ರತಿಪದಾರ್ಥ

ಅರ್ವನ್—ಎಲೈ ಅಶ್ವವೇ । ತವ—ನಿನ್ನ । ಶರೀರಂ—ಶರೀರವು । ಪತಯಿಷ್ಣು—(ಎಲ್ಲವನ್ನೂ ವ್ಯಾಪಿಸುವಂತೆ) ಚಲನಾತ್ಮಕವಾದುದು । ತವ—ನಿನ್ನ । ಚಿತ್ತಂ—ಮನಸ್ಸು । ವಾತ ಇವ—ವಾಯುವಿನೋಪಾದಿಯಲ್ಲಿ । ಧ್ರುಜೀಮಾನ್—ಶೀಘ್ರಗಾಮಿಯಾದುದು । ತವ—ನಿನ್ನ । ಶೃಂಗಾಣಿ – ಕತ್ತಿನಮೇಲಿರುವುವೂ ಶೃಂಗಗಳಂತಿರುವುವೂ ಆದ ಕೇಸರಗಳು । ಪುರುತ್ರಾ—ಅನೇಕಪ್ರದೇಶಗಳಲ್ಲಿ । ವಿಷ್ಠಿತಾ—ವಿಸ್ತೃತವಾಗಿ ಹರಡಿವೆ (ಮತ್ತು) । ಅರಣ್ಯೇಷು—ಅರಣ್ಯಗಳಲ್ಲಿ । ಜರ್ಭುರಾಣಾ—ಆಕರ್ಷಕವಾದ ರೀತಿಯಲ್ಲಿ ವ್ಯಾಪಿಸಿ । ಚರಂತಿ—ಸಂಚರಿಸುತ್ತವೆ ॥

### ಭಾವಾರ್ಥ

ಎಲೈ ಅಶ್ವವೇ, ನಿನ್ನ ಶರೀರವು ಎಲ್ಲವನ್ನೂ ವ್ಯಾಪಿಸುವಂತೆ ಚಲನಾತ್ಮಕವಾದುದು. ನಿನ್ನ ಮನಸ್ಸು ವಾಯುವಿನೋಪಾದಿಯಲ್ಲಿ ಶೀಘ್ರಗಾಮಿಯಾದುದು. ನಿನ್ನ ಕತ್ತಿನಮೇಲಿರುವುವೂ, ಶೃಂಗಗಳಂತಿರುವುವೂ ಆದ ಕೇಸರಗಳು ಅನೇಕ ಪ್ರದೇಶಗಳಲ್ಲಿ ವಿಸ್ತೃತವಾಗಿ ಹರಡಿವೆ. ಮತ್ತು ಅರಣ್ಯಗಳಲ್ಲಿ ಆಕರ್ಷಕವಾದ ರೀತಿಯಲ್ಲಿ ವ್ಯಾಪಿಸಿ ಸಂಚರಿಸುತ್ತವೆ.

### English Translation

Your body, horse, is made for motion : your mind is rapid (in intention) as the wind : the hairs (of your mane) are tossed in manifold directions ; and spread beautiful in the forests.

### ವಿಶೇಷವಿಷಯಗಳು

ಜರ್ಭುರಾಣಾಃ—ಗತ್ಯರ್ಥಕವಾದ ಭುರ್ ಧಾತುವಿನಿಂದ ನಿಷ್ಪನ್ನವಾಗಿ ವ್ಯಾಪಿಸುವಂತೆ ಸಂಚರಿಸುವುದು ಎಂದರ್ಥವಾಗುತ್ತದೆ. ಈ ಧಾತುವಿನಿಂದ ನಿಷ್ಪನ್ನವಾದ ಪದಗಳನ್ನು ನಿರುಕ್ತಕಾರರು ಗತಿಕರ್ಮನಾಮಗಳಲ್ಲಿ ಸೇರಿಸಿದ್ದಾರೆ. (ನಿ. ೩-೯). ಆ ಗತಿಯಲ್ಲಿಯೂ ಕ್ಷಿಪ್ರವಾದ ಚಲನವನ್ನು ಸೂಚಿಸುವುದಾದುದರಿಂದ ಪಕ್ಷ್ಯಾದಿಗಳಿಗೂ ಅಗ್ನಿಗೂ ವಿಶೇಷಣವಾಗಿ ಉಪಯೋಗಿಸಲ್ಪಡುತ್ತದೆ.

ಭುರಣ್ಯುರಿತಿ ಕ್ಷಿಪ್ರನಾಮ । ಶಕುನಿರ್ಭುರಿಮಧ್ವಾನಂ ನಯತಿ ಸ್ವರ್ಗಸ್ಯ ಲೋಕಸ್ಯಾಪಿ ವೋಳ್ಹಾ ತತ್ಸಂಪಾತೀ ಭುರಣ್ಯುರನೇನ ಪಾವಕಖ್ಯಾತೇನ ।

( ನಿ. ೧೩-೨೨ )

ಬಹುದೂರಕ್ಕೆ ಹಾರಿಹೋಗುವುದರಿಂದ ಪಕ್ಷಿಗೆ ಭುರಣ್ಯುವೆಂದು ಹೆಸರು. ಸ್ವರ್ಗಕ್ಕಾದರೂ ಸಹ ಯಾರನ್ನಾದರೂ ಒಯ್ಯಬಲ್ಲುದು. ಭುರ್‌ಧಾತುವು.. ಧಾರಣಾರ್ಥಕವೂ ಪೋಷಣಾರ್ಥಕವೂ ಆಗಿರುವುದರಿಂದ ಈ ಅರ್ಥಗಳಲ್ಲಿಯೂ ಈ ಧಾತುವಿನಿಂದ ನಿಷ್ಪನ್ನವಾದ ಪದಗಳ ಪ್ರಯೋಗವಿದೆ—

ಯನ್ನಾಸತ್ಯಾ ಭುರಣ್ಯಥೋ ಯದ್ವಾ ದೇವ ಭಿಷಜ್ಯಥಃ ।
ಅಯಂ ವಾಂ ವತ್ಸೋ ಮತಿಭಿರ್ನ ವಿಂಧತೇ ಹವಿಷ್ಮಂತಂ ಹಿ ಗಚ್ಛಥಃ ।

(ಋ. ಸಂ. ೮-೯-೬)

ಎಂಬಲ್ಲಿ ಸರ್ವಂ ಜಗತ್ಪೋಷಯಥಃ ನೀವು ಸಕಲ ಜಗತ್ತನ್ನೂ ಪೋಷಿಸುತ್ತೀರಿ ಎಂದು ಅಶ್ವಿನೀದೇವತೆಗಳನ್ನು ನಿರ್ದೇಶಿಸಿದೆ. ಆದರೆ ಗತ್ಯರ್ಥಕವಾಗಿ ಉಪಯೋಗಿಸಿರುವುದೇ ಅಧಿಕವಾಗಿದೆ.

ಶೃಂಗೇವ ನಃ ಪ್ರಥಮಾ ಗಂತಮರ್ವಾಕ್‌ಛಫಾವಿವ ಜರ್ಭುರಾಣಾ ತರೋಭಿಃ ।
ಚಕ್ರವಾಕೇವ ಪ್ರತಿ ವಸ್ತೋರುಸ್ರಾರ್ವಾಂಚಾ ಯಾತಂ ರಥ್ಯೇವ ಶಕ್ರಾ ॥

(ಋ. ಸಂ. ೨-೩೯-೩)

ಎಂಬಲ್ಲಿಯೂ ಸಹ ಜರ್ಭುರಾಣಾ ಎಂಬ ಪದವು ಅಶ್ವಿನೀದೇವತೆಗಳ ಪರವಾಗಿಯೇ ಇದೆ. ಆದರೆ ಇಲ್ಲಿ ವೇಗವಾದ ಗಮನವೆಂದರ್ಥ.

ಆ ವಿಶ್ವತಃ ಪ್ರತ್ಯಂಚಂ ಜಿಘರ್ಮ್ಯರಕ್ಷಸಾ ಮನಸಾ ತಜ್ಜುಷೇತ ।
ಮರ್ಯಶ್ರೀಃ ಸ್ಪೃಹಯದ್ವರ್ಣೋ ಅಗ್ನಿರ್ನಾಭಿಮೃಶೇ ತನ್ವಾ ಜರ್ಭುರಾಣಃ ॥

(ಋ. ಸಂ ೨-೧೦-೫)

ಎಂಬಲ್ಲಿ ಅಗ್ನಿಯು ಎಲ್ಲವನ್ನೂ ವ್ಯಾಪಿಸುವ ಶೀಘ್ರಗಾಮಿಯಾಗಿರುವನೆಂದು ವರ್ಣಿಸಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅಶ್ವದ ತೇಜಸ್ಸು ಆಕರ್ಷಕವಾದ ರೀತಿಯಲ್ಲಿ ಅರಣ್ಯದಲ್ಲೆಲ್ಲಾ ವ್ಯಾಪಿಸಿ ಸಂಚರಿಸುತ್ತದೆಯೆಂದರ್ಥ

ಧ್ರಜೀಮಾನ್—ಧ್ರಜತಿ ಎಂಬ ಪದವೂ ಗತಿಕರ್ಮನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯).

ಹಿರಣ್ಯಕೇಶೋ ರಜಸೋ ವಿಸಾರೇಽಹಿರ್ಧುನಿರ್ವಾತ ಇವ ಧ್ರಜೀಮಾನ್ ।
ಶುಚಿಭ್ರಾಜಾ ಉಷಸೋ ನವೇದಾ ಯಶಸ್ವತೀರಪಸ್ಯುವೋ ನ ಸತ್ಯಾಃ ॥

(ಋ. ಸಂ. ೧-೭೯-೧)

ಎಂಬಲ್ಲಿಯೂ ವಾತ ಇವ ಧ್ರಜೀಮಾನ್ ಎಂದು ಅಗ್ನಿಯ ಗಮನದ ವೇಗವನ್ನು ವಾತದ ವೇಗಕ್ಕೆ ಹೋಲಿಸಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅಶ್ವದ ಗಮನವೇಗವನ್ನು ವಾತದ ವೇಗಕ್ಕೆ ಹೋಲಿಸಿದೆ

ಪುರುತ್ರಾ—ಈ ಪದಕ್ಕೆ ಬಹುಪ್ರದೇಶಗಳಲ್ಲಿರತಕ್ಕದ್ದು ಎಂದಾಗಲಿ ಅಥವಾ ಬಹುವಿಧವಾಗಿರತಕ್ಕದ್ದು ಎಂದಾಗಲಿ ಅರ್ಥವಾಗುತ್ತದೆ.

ಶೃಂಗಾಣಿ—ಶಿರಸೋ ನಿರ್ಗತಾಃ ಶೃಂಗಸ್ಥಾನೀಯಾಃ ಕೇಶಾಃ ಶಿರಸ್ಸಿನಿಂದ ಹೊರಹೊರಟಿರುವುದೂ ಶೃಂಗದ ಸ್ಥಾನದಲ್ಲಿರುವುದೂ ಆದ ಕೇಶವೆಂದರ್ಥಮಾಡಿದೆ. ಅಥವಾ ಅಶ್ವಸ್ಯ ಶೃಂಗಾಭಾವಾತ್ ತದ್ವದುನ್ನತಾನಿ ತೇಜಾಂಸಿ ಪರಿಗೃಹ್ಯಂತೇ । ಅಶ್ವಕ್ಕೆ ಶೃಂಗಗಳಿಲ್ಲದಿರುವುದರಿಂದ ಅದರಂತಿರುವ ಅಶ್ವದ ತೇಜಸ್ಸುಗಳೆಂದು ತಾತ್ಪರ್ಯವಾಗಬಹುದು.

### ವ್ಯಾಕರಣಪ್ರಕ್ರಿಯಾ

ಶರೀರಮ್—ಶೄ ಹಿಂಸಾಯಾಮ್ ಧಾತು. ಕೄ ಶೄ ಪೄ ಕಟಿ (ಉ. ಸೂ. ೪-೪೭೦) ಎಂಬುದರಿಂದ ಈರನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಪತಯಿಷ್ಣು—ಪತ್ಲೃ ಗತೌ ಧಾತು. ಇದಕ್ಕೆ ಣಿಚ್ ಬಂದಾಗ ಛಂದಸಿ (ಪಾ. ಸೂ. ೩-೨-೧೩೭) ಎಂಬುದರಿಂದ ಇಷ್ಣುಚ್ ಪ್ರತ್ಯಯ ಬರುತ್ತದೆ. ಪ್ರತ್ಯಯನಿಮಿತ್ತವಾಗಿ ಣಿಚಿಗೆ ಗುಣ. ಅಯಾದೇಶ. ಪ್ರತ್ಯಯ ಚಿತ್ತಾದುದರಿಂದ ಚಿತಃ (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ಧ್ರಜೀಮಾನ್—ಧ್ರಜ ಗತೌ ಧಾತು. ಇನ್ ಸರ್ವಧಾತುಭ್ಯಃ ಎಂಬುದರಿಂದ ಇನ್ ಪ್ರತ್ಯಯ. ಇದರ ಮೇಲೆ ಮತುಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಇನ್ ನಿತ್ತಾದುದರಿಂದ ಆದ್ಯುದಾತ್ತ ಸ್ವರ ಬರುತ್ತದೆ.

ಶೃಂಗಾಣಿ—ಶೄ ಹಿಂಸಾಯಾಂ ಧಾತು. ಶೃಣಾತೇರ್ಹ್ರಸ್ವಶ್ಚ (ಉ. ಸೂ. ೧-೧೨೬) ಎಂಬುದರಿಂದ ಗನ್ ಪ್ರತ್ಯಯ, ಧಾತುವಿಗೆ ಹ್ರಸ್ವ. ಪ್ರತ್ಯಯಕ್ಕೆ ನುಡಾಗಮ ಕಿತ್ವಾದೇಶವೂ ಬರುತ್ತದೆ.

ವಿಷ್ಠಿತಾ—ವಿ ಉಪಸರ್ಗ. ಷ್ಠಾ ಗತಿನಿವೃತ್ತೌ ಧಾತು. ಕ್ತ ಪ್ರತ್ಯಯ. ದ್ಯತಿಸ್ಯತಿಮಾ—(ಪಾ. ಸೂ. ೭-೪-೪೦) ಎಂಬುದರಿಂದ ಧಾತುವಿಗೆ ಇತ್ವ. ನಪುಂಸಕದಲ್ಲಿ ಶೇಶ್ಛಂದಸಿ ಬಹುಲಂ (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

ಪುರುತ್ರಾ—ದೇವಮನುಷ್ಯ-(ಪಾ ಸೂ. ೫-೪-೫೬.)ಎಂಬುದರಿಂದ ಸಪ್ತಮ್ಯರ್ಥದಲ್ಲಿ ತ್ರಾ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ

ಜರ್ಭುರಾಣಾ—ನಪುಂಸಕಪ್ರಥಮಾಬಹುವಚನದಲ್ಲಿ ರೂಪವಾದಾಗ ಶೇಶ್ಛಂದಸಿ ಬಹುಲಂ (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

ಚರಂತಿ—ಚರ ಗತಿಭಕ್ಷಣಯೋಃ ಧಾತು. ಲಟ್ ಪ್ರಥಮಪುರುಷಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೧ ॥



ಸಂಹಿತಾಪಾಠಃ

ಉಪ ಪ್ರಾಗಾಚ್ಛಸನಂ ವಾಜ್ಯರ್ವಾ ದೇವದ್ರೀಚಾ ಮನಸಾ ದೀಧ್ಯಾನಃ ।
ಅಜಃ ಪುರೋ ನೀಯತೇ ನಾಭಿರಸ್ಯಾನು ಪಶ್ಚಾತ್ಕವಯೋ ಯಂತಿ ರೇಭಾಃ ॥ ೧೨ ॥

। ಪದಪಾಠಃ ।

ಉಪ । ಪ್ರ । ಅಗಾತ್ । ಶಸನಂ । ವಾಜೀ । ಅರ್ವಾ । ದೇವದ್ರೀಚಾ । ಮನಸಾ । ದೀಧ್ಯಾನಃ ।
ಅಜಃ । ಪುರಃ । ನೀಯತೇ । ನಾಭಿಃ । ಅಸ್ಯ । ಅನು । ಪಶ್ಚಾತ್ । ಕವಯಃ । ಯಂತಿ । ರೇಭಾಃ ॥೧೨॥

ಸಾಯಣಭಾಷ್ಯಂ

ಆಶ್ವಮೇಧಿಕೇ ಮಧ್ಯಮೇಽಹನ್ಯಧ್ರಿಗುಪ್ರೈಷೇ ಮಾ ನೋ ಮಿತ್ರ ಇತಿ ಸೂಕ್ತಾನಂತರಮುಪ ಪ್ರಾಗಾಚ್ಛಸನಮಿತಿ ದ್ವೇ ಋಚೌ ಶಂಸನೀಯೇ । ಸೂತ್ರಿತಂ ಚ । ಉಪಪ್ರಾಗಾಚ್ಛಸನಮಿತಿ ದ್ವೇ । ಆ. ೧೦-೮ । ಇತಿ ॥

ಅಯಮರ್ವಾರಣಕುಶಲೋ ವಾಜ್ಯಶ್ವಃ ಶಸನಂ ವಿಶಸನಸ್ಥಾನಮುಪ ಪ್ರಾಗಾತ್ । ಉಪಪ್ರೈತಿ । ಕಿಂ ಕುರ್ವನ್ । ದೇವದ್ರೀಚಾ ಮನಸಾ ದೇವಾನ್ಗಚ್ಛತಾ ಮನಸಾ ದೀಧ್ಯಾನೋ ಧ್ಯಾಯನ್ । ಕದಾ ದೇವಾನಸ್ಮದವಯವೇನಾರ್ಚಾಮಿ ದೇವತ್ವಂ ಪ್ರಾಪ್ನೋಮೀತಿ ವಾ ಮನಸಿ ಧ್ಯಾಯನ್ । ಕಿಂಚಾಸ್ಯ ಪುರಃ ಪುರಸ್ತಾನ್ನಾಭಿರ್ನಹನಂ । ಬಂಧುಭೂತ ಇತ್ಯರ್ಥಃ । ಯದ್ವಾ । ಅಸ್ಯ ಬಂಧನಸ್ಥಾನೀಯೋಽವಿಮುಕ್ತತ್ವಾತ್ । ಏವಂಭೂತೋಽಜಃ ಪುರೋ ನೀಯತೇ । ಪುರತಃ ಪ್ರಾಪ್ಯತೇ । ಅನ್ವನುಸೃತ್ಯ ಪಶ್ಚಾದನಂತರಂ । ಅತ್ರ ಯದ್ಯಪ್ಯುಭಯೋಃ ಪರ್ಯವಸಿತೋಽರ್ಥ ಏಕ ಏವ ತಥಾಪ್ಯಜಾಶ್ವೋಭಯಾನಂತರ್ಯತ್ವಪ್ರಕಟನಾಯ ಪದದ್ವಯಂ । ಯದ್ವಾ । ಅನ್ವಿತಿ ಕ್ರಿಯಯಾ ಸಂಬಧ್ಯತೇ । ಕವಯೋಽನೂಚಾನಾ ರೇಭಾಃ ಸ್ತೋತಾರ ಋತ್ವಿಜೋ ಯಂತಿ । ಗಚ್ಛಂತಿ । ಯೇ ವಾ ಅನೂಚಾನಾಸ್ತೇ ಕವಯ ಇತಿ ಶ್ರುತೇಃ । ಯದ್ವಾ । ಕವಯ ಇತಿ ಮೇಧಾವಿನಾಮ ಕವಿರ್ಮನೀಷೀತಿ ತನ್ನಾಮಸು ಪಠಿತತ್ವಾತ್ । ರೇಭ ಇತಿ ಸ್ತೋತೃನಾಮ ರೇಭೋ ಜರಿತೇತಿ ತತ್ರ ಪಾಠಾತ್ ॥

ಪ್ರತಿಪದಾರ್ಥ

ಅರ್ವಾ—(ರಮ್ಯವಾದ) ನಡಿಗೆಯುಳ್ಳ । ವಾಜೀ—ಅಶ್ವವು । ದೇವದ್ರೀಚಾ—ದೇವತೆಗಳನ್ನು ಸಮೀಪಿಸತಕ್ಕ । ಮನಸಾ—ಮನಸ್ಸಿನಿಂದ । ದೀಧ್ಯಾನಃ—ಧ್ಯಾನಮಾಡುತ್ತಾ । ಶಸನಂ—ವಧ್ಯಸ್ಥಾನವನ್ನು । ಉಪ ಪ್ರಾಗಾತ್—ಸಮೀಪಿಸುತ್ತದೆ । ಅಸ್ಯ—ಇದರ । ನಾಭಿಃ—ಬಂಧುಭೂತವಾದ । ಅಜಃ—ಅಜವು । ಪುರಃ—

ಇದರ ಮುಂಭಾಗದಲ್ಲಿ | ನೀಯತೇ—ಕರೆದೊಯ್ಯಲ್ಪಡುತ್ತದೆ | ಅನು—ಇವೆರಡನ್ನೂ ಅನುಸರಿಸಿ | ಪಶ್ಚಾತ್—ಅನಂತರ | ಕವಯಃ—ಪ್ರಾಜ್ಞರಾದ | ರೇಭಾಃ—ಸ್ತೋತೃಗಳು (ಋತ್ವಿಕ್ಕುಗಳು) | ಯಂತಿ—ಹೋಗುತ್ತಾರೆ.

### ಭಾವಾರ್ಥ

ರಮ್ಯವಾದ ನಡಿಗೆಯುಳ್ಳ ಅಶ್ವವು ದೇವತೆಗಳನ್ನು ಸಮೀಪಿಸತಕ್ಕ ಮನಸ್ಸಿನಿಂದ ಧ್ಯಾನಮಾಡುತ್ತಾ ವಧ್ಯಸ್ಥಾನವನ್ನು ಸಮೀಪಿಸುತ್ತದೆ. ಇದರ ಬಂಧುಭೂತವಾದ ಅಜವು ಇದರ ಮುಂಭಾಗದಲ್ಲಿ ಕರೆದೊಯಲ್ಪಡುತ್ತದೆ ಇವೆರಡನ್ನೂ ಅನುಸರಿಸಿ ಇವುಗಳ ಹಿಂದೆ ಪ್ರಾಜ್ಞರಾದ ಋತ್ವಿಕ್ಕುಗಳು ಹೋಗುತ್ತಾರೆ.

### English Translation

The swift horse approaches the place of immolation, meditating with mind intent upon the gods: the goat bound to him is led before him; after him follow the priests and the singers.

### ವಿಶೇಷವಿಷಯಗಳು

ಅಶ್ವಮೇಧಯಜ್ಞದ ಮಧ್ಯದದಿವಸದಲ್ಲಿ ಅಧ್ರಿಗುಪ್ರೈಷಮಂತ್ರವನ್ನು ಪಠಿಸುವಾಗ ಮಾ ನೋ ಮಿತ್ರ ಎಂಬ ಸೂಕ್ತವನ್ನು ಪಠಿಸಿದನಂತರ ಉಪ ಪ್ರಾಗಾಚ್ಛಸನಂ ಎಂದು ಮೊದಲಾಗುವ ಎರಡು ಋಕ್ಕುಗಳನ್ನು (ಈ ಸೂಕ್ತದ ೧೨ ಮತ್ತು ೧೩ನೆಯ ಋಕ್ಕುಗಳನ್ನು) ಪಠಿಸಬೇಕೆಂದು ಅಶ್ವಲಾಯನಶ್ರೌತಸೂತ್ರದ ಉಪ ಪ್ರಾಗಾಚ್ಛಸನಮಿತಿ ದ್ವೇ ಎಂಬ ಸೂತ್ರದಿಂದ ವಿವೃತವಾಗಿರುವುದು. (೮ ೧೦-೮).

ಅಶ್ವವು ವಧಸ್ಥಾನಕ್ಕೆ ಹೋಗತಕ್ಕ ರೀತಿಯನ್ನು ಈ ಋಕ್ಕಿನಲ್ಲಿ ವರ್ಣಿಸಿದೆ. ಅದು ದೇವತೆಗಳ ಸಾನ್ನಿಧ್ಯಕ್ಕೆ ಹೋಗತಕ್ಕದಾದ್ದರಿಂದ ಅದು ಧ್ಯಾನಾಸಕ್ತವಾಗಿದೆಯೆಂದು ಅವರ ಗಭೀರವಾದುದೂ, ಪವಿತ್ರಾತ್ಮಕವಾದುದೂ ಆದ ನಡಿಗೆಯನ್ನೂ, ಅದರ ಮುಂಭಾಗದಲ್ಲಿರುವ ಅಜದ ಸ್ವರೂಪವನ್ನೂ ಮತ್ತು ಇವೆರಡನ್ನೂ ಹಿಂಬಾಲಿಸಿ ಹೋಗುತ್ತಿರುವ ಋತ್ವಿಕ್ಕುಗಳನ್ನೂ ವರ್ಣಿಸಿದೆ. ಇಲ್ಲಿ, ನಾಭಿಃ ಎಂಬ ಪದಕ್ಕೆ ಅರ್ಥವನ್ನು ಹೇಳುವಾಗ ಅಶ್ವಕ್ಕೂ ಅಜಕ್ಕೂ ಇರತಕ್ಕ ನಿಕಟವಾದ ಸಂಬಂಧವು ತಿಳಿಯುತ್ತದೆ. ಈ ಪದಕ್ಕೆ ಎರಡುವಿಧವಾದ ಅರ್ಥವನ್ನು ಮಾಡಿದೆ. ನಾಭಿಃ ನಹನಂ ಬಂಧುಭೂತಃ | ಯದ್ವಾ ಅಸ್ಯ ಬಂಧನಸ್ಥಾನೀಯಃ ಅವಿಮುಕ್ತತ್ವಾತ್ | ಬಂಧಕವಾದುದು ಎಂದರ್ಥವಾದರೆ ಬಂಧುಭೂತವಾದುದರಿಂದ ಬಾಂಧವ್ಯರೂಪವಾದ ಬಂಧಕನೆಂದು ಒಂದರ್ಥವೂ ಅಥವಾ ಆಹುತ್ಯರ್ಪಣದ ಕಾಲದಲ್ಲಿ ಅಶ್ವಕ್ಕೆ ಮೊದಲು ಅಜದ ಆಹುತಿಯಾಗಬೇಕಾದುದರಿಂದ ಅದರ ಬಂಧನವೆಂದು ಇನ್ನೊಂದರ್ಥವೂ ಸಾಧ್ಯವಾಗುತ್ತದೆ.

> ಅಥ ಯಃ ಕಪಾಲೇ ರಸೋ ಲಿಪ್ತ ಆಸೀತ್ಸೋಽಜೋಽಭವದಥ ಯತ್ಕಪಾಲಮಾಸೀತ್ಸಾ ಪೃಥಿವ್ಯಭವತ್ |
>
> (ಶ. ಬ್ರಾ. ೬-೧-೧-೧೧)

ಪ್ರಜಾಪತಿಯು ಜಗತ್ಸೃಷ್ಟಿರೂಪದಿಂದ ವೃದ್ಧನಾಗಬೇಕೆಂದಿಚ್ಛಿಸಿದಾಗ ಅಪ್ಪಿನಿಂದ ಅಂಡವೂ ಅದರಿಂದ ಬ್ರಹ್ಮವೂ ಉತ್ಪನ್ನವಾಗಿ ಜಗದಾದಿಗೆ ಈ ಬ್ರಹ್ಮವೇ ಮೂಲವಾದುದೂ, ಅಂಡದ ಸುತ್ತಲೂ ವ್ಯಾಪಿಸಿದ್ದ ಅಶ್ರುವನ್ನೇ ದೇವತೆ

ಗಳು ಅಶ್ವವೆಂದು ಕರೆದುದೂ, ಅಂಡದ ಕಪಾಲದಲ್ಲಿ ಲಿಪ್ತವಾಗಿದ್ದ ರಸವು ಅಜವಾದುದೂ (ಜನ್ಮವಿಲ್ಲದ್ದು) ಹಿಂದೆ ಉದಾಹರಣೆಗಳೊಡನೆ ವಿವರಿಸಲ್ಪಟ್ಟಿದೆ. ಅಲ್ಲದೆ,

ಅಥಾ ಜರ್ಷಭಸ್ಯಾಜಿನಮಾಸ್ತೃಣಾತಿ । ಪ್ರಜಾಪತಿರ್ವಾ ಏಷ ಯದಜಃ ।
(ಶ. ಬ್ರಾ ೫-೨-೧-೨೪)

ಇತ್ಯಾದಿವಾಕ್ಯಗಳಲ್ಲಿ ಪ್ರಜಾಪತಿಗೂ ಅಜಕ್ಕೂ ತಾದಾತ್ಮ್ಯವನ್ನೇ ಹೇಳಿದೆ. ಹೀಗೆ ಅಶ್ವಕ್ಕೆ ಪ್ರಭವಸ್ಥಾನವಾದ ಪ್ರಜಾಪತಿಗೂ ಮತ್ತು ಅಜಕ್ಕೂ ಸಂಬಂಧವಿರುವುದರಿಂದಲೂ, ಅಶ್ವಕ್ಕೇ ಸಾಕ್ಷಾತ್ತಾಗಿ ಅಜದೊಡನೆ ಸಂಬಂಧವಿರುವುದರಿಂದಲೂ ನಾಭಿಪದಕ್ಕೆ ಮೊದಲನೆಯ ಅರ್ಥವು ಸರಿಹೋಗುತ್ತದೆ. ಹೀಗೆಯೇ,

ಅತ್ರಾ ಪೂಷ್ಣಃ ಪ್ರಥಮೋ ಭಾಗ ಏತಿ ಯಜ್ಞಂ ದೇವೇಭ್ಯಃ ಪ್ರತಿವೇದಯನ್ನಜಃ ।
(ಋ ಸಂ. ೧-೧೬೨-೪)

ಅಜಾ ಅನ್ಯಸ್ಯ ವಹ್ನಯೋ ಹರೀ ಅನ್ಯಸ್ಯ ಸಂಭೃತಾ । ತಾಭ್ಯಾಂ ವೃತ್ರಾಣಿ ಜಿಘ್ನತೇ ।
( ಋ. ಸಂ. ೬-೫೭-೩ )

ಇತ್ಯಾದಿಋಕ್ಕುಗಳಲ್ಲಿ ಅಶ್ವದ ಆಹುತಿಗೆ ಮೊದಲು ಪೂಷದೇವತೆಗೆ ಅಜವನ್ನು ಆಹುತಿಯನ್ನಾಗಿ ಕೊಡಲೇಬೇಕೆಂಬ ನಿಯಮದಿಂದ ಬಂಧಿಸತಕ್ಕದ್ದೆಂದು ವಿಧಿಯಿರುವುದರಿಂದಲೂ ಸಹ ಎರಡನೆಯ ಅರ್ಥವು ಸಾಧ್ಯವಾಗುತ್ತದೆ.

ಶಸನಂ—ವಿಶಸನಸ್ಥಾನಂ । ಯಜ್ಞದಲ್ಲಿ ಪಶುವನ್ನು ವಧಮಾಡತಕ್ಕ ಸ್ಥಳವು.

ದೇವದ್ರೀಜಾ—ದೇವಾನ್ ಅಂಚತಾ ದೇವತಾಪರಾಯಣೇನ ಶ್ರದ್ಧಾಯುಕ್ತೇನ । ಅನನ್ಯಮನಸ್ಕನಾಗಿ ದೇವತೆಗಳಲ್ಲಿಯೇ ಶ್ರದ್ಧಾಭಕ್ತಿಗಳನ್ನಿಟ್ಟು ಅವರ ಸೇವೆಯಲ್ಲಿಯೇ ತತ್ಪರವಾಗಿ ಅವರನ್ನೇ ಸೇರುವ ಮನಸ್ಸಿನಿಂದ ಎಂದರ್ಥವು. ದೇವಯಂತಃ, ದೇವದ್ರೀಚೀ ಇತ್ಯಾದಿಪದಗಳು ಒಂದೇ ಅರ್ಥವನ್ನು ಕೊಡುತ್ತವೆ.

ಕವಯಃ—ಈ ಪದಕ್ಕೆ ಇಲ್ಲಿ ಎರಡುವಿಧವಾದ ಅರ್ಥವನ್ನು ಮಾಡಿದ್ದಾರೆ, ಮೊದಲು, ಯೇ ವಾ ಅನೂಚಾನಾಸ್ತೇ ಕವಯಃ ।

ಎಂಬ ಶ್ರುತಿವಾಕ್ಯವನ್ನುದಹರಿಸಿ ವೇದಾಂಗಸಹಿತವಾದ ವೇದಾಭ್ಯಾಸವನ್ನು ಮಾಡಿದ ಶಾಸ್ತ್ರಜ್ಞರೆಂದು ಒಂದು ವಿಧವಾಗಿಯೂ, ಎರಡನೆಯದಾಗಿ ಕವಿಃ, ಮನೀಷೀ (ನಿ. ೩-೧೫) ಎಂಬ ನಿರುಕ್ತದ ವಾಕ್ಯವನ್ನುದಹರಿಸಿ ಮೇಧಾವಿಯೆಂದು ಇನ್ನೊಂದು ವಿಧವಾಗಿಯೂ ಅರ್ಥಮಾಡಿದ್ದಾರೆ. ಮೇಧಾವೀ ಕವಿಃ ಕ್ರಾಂತದರ್ಶನೋ ಭವತಿ ಕವತೇರ್ವಾ (ನಿ. ೧೨-೧೩) ಸ್ಫೂರ್ತಿಯನ್ನುಂಟುಮಾಡತಕ್ಕ ದರ್ಶನವಿರುವುದರಿಂದಾಗಲಿ ಅಥವಾ ಸ್ತುತಿಕಾರನಾದುದರಿಂದಾಗಲಿ ಈ ಹೆಸರು ಪ್ರಸಿದ್ಧವಾಗಿದೆಯೆಂದು ನಿರುಕ್ತಕಾರರು ಈ ಪದವನ್ನು ವಿವರಿಸಿದ್ದಾರೆ.

ರೇಭಃ—ರೇಭಃ, ಜರಿತಾ (ನಿ. ೩-೧೬) ಈ ಪದಗಳು ಸ್ತೋತೃನಾಮಗಳಲ್ಲಿ ಪಠಿತವಾಗಿವೆ.

### ವ್ಯಾಕರಣಪ್ರಕ್ರಿಯಾ

ಅಗಾತ್—ಇಣ್ ಗತೌ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲುಙ್. ಇಣೋ ಗಾ ಲುಙಿ (ಪಾ. ಸೂ. ೨-೪-೪೫) ಎಂಬುದರಿಂದ ಧಾತುವಿಗೆ ಗಾದೇಶ. ತಿಙಂತನಿಘಾತಸ್ವರ ಬರುತ್ತದೆ.

ಶಸನಮ್—ಕರಣಾಧಿಕರಣಯೋಶ್ಚ (ಪಾ. ಸೂ. ೩-೩-೧೧೭) ಎಂಬುದರಿಂದ ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ. ಯುವೋರನಾಕೌ (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. ಲಿತಿ (ಪಾ ಸೂ ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

ದೇವದ್ರೀಚಾ—ದೇವಾನ್ ಅಂಚತಿ ಇತಿ ದೇವದ್ರ್ಯಜ್. ದೇವಶಬ್ದಕ್ಕೆ ಅ ಪ್ರತ್ಯಯಾಂತವಾದ ಅಂಚು ಧಾತುವು ಪರದಲ್ಲಿರುವಾಗ ವಿಷ್ವಗ್ದೇವಯೋಶ್ಚ—(ಪಾ. ಸೂ. ೬-೩-೯೨) ಎಂಬುದರಿಂದ ದೇವಶಬ್ದದ ಟಿಗೆ ಅದ್ರಿ ಎಂಬ ಆದೇಶ ಬರುತ್ತದೆ. ತೃತೀಯಾಏಕವಚನ ಪರವಾದಾಗ ಅಚಃ ಎಂಬ ಸೂತ್ರದಿಂದ ಅಂಚುಧಾತುವಿನ ಅಕಾರಕ್ಕೆ ಲೋಪ ಚೌ ಎಂಬ ಸೂತ್ರದಿಂದ ಪೂರ್ವಕ್ಕೆ ದೀರ್ಘ. ಕೃದುತ್ತರಪದಪ್ರಕೃತಿಸ್ವರಕ್ಕೆ ಅಪವಾದವಾಗಿ ಅದಿ-ಸಧ್ರ್ಯೋರಂತೋದಾತ್ತನಿಪಾತನಂ ಕೃತ್‌ಸ್ವರನಿವೃತ್ತ್ಯರ್ಥಮ್ (ಪಾ. ಸೂ. ೬-೩-೯೫-೧)) ಎಂಬ ವಚನದಿಂದ ಅದ್ರ್ಯಾದೇಶವು ಅಂತೋದಾತ್ತವಾಗುವುದರಿಂದ ಈಕಾರವು ಉದಾತ್ತವಾಗುತ್ತದೆ.

ದೀಧ್ಯಾನಃ—ದಿಧೀಙ್ ದೀಪ್ತಿದೇವನಯೋಃ ಧಾತು. ಅದಾದಿ. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ತಾಸ್ಯನುದಾತ್ತೇತ್-(ಪಾ. ಸೂ. ೬-೧-೧೮೬) ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ

ನೀಯತೇ—ಣೀಞ್ ಪ್ರಾಪಣೇ ಧಾತು. ಕರ್ಮಣಿಯಲ್ಲಿ ಲಟ್. ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಯಂತಿ—ಇಣ್ ಗತೌ ಧಾತು. ಲಟ್ ಪ್ರಥಮಪುರುಷಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ರೇಭಾ—ರೇಭೃ ಶಬ್ದೇ ಧಾತು. ನಂದಿಗ್ರಹಿಪಚಾದಿಭ್ಯಃ—(ಪಾ. ಸೂ. ೩-೧-೧೩೪) ಎಂಬುದರಿಂದ ಕರ್ತರಿಯಲ್ಲಿ ಅಚ್ ಪ್ರತ್ಯಯ. ಚಿತಃ (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.



ಸಂಹಿತಾಪಾಠಃ

ಉಪ ಪ್ರಾಗಾತ್ಪರಮಂ ಯತ್ಸಧಸ್ಥಮರ್ವಾ ಅಚ್ಛಾ ಪಿತರಂ ಮಾತರಂ ಚ।
ಅದ್ಯಾ ದೇವಾಞ್ಜುಷ್ಟತಮೋ ಹಿ ಗಮ್ಯಾ ಅಥಾ ಶಾಸ್ತೇ ದಾಶುಷೇ ವಾರ್ಯಾಣಿ ॥ ೧೩ ॥

ಪದಪಾಠಃ

ಉಪ । ಪ್ರ । ಅಗಾತ್ । ಪರಮಂ । ಯತ್ । ಸಧ॒ಸ್ಥಂ । ಅರ್ವಾನ್ । ಅಚ್ಛ । ಪಿತರಂ । ಮಾತರಂ । ಚ ।
ಅದ್ಯ । ದೇವಾನ್ । ಜುಷ್ಟತಮಃ । ಹಿ । ಗಮ್ಯಾಃ । ಅಥ । ಆ । ಶಾಸ್ತೇ । ದಾಶುಷೇ । ವಾರ್ಯಾಣಿ ।
॥ ೧೩ ॥

ಸಾಯಣಭಾಷ್ಯಂ

ಅರ್ವಾನರಣಕುಶಲೋಽಯಮಶ್ವ ಉಪ ಪ್ರಾಗಾತ್ । ಉಪಗಚ್ಛತಿ । ಕಿಂ । ಯತ್ಪರಮಮುತ್ಕೃಷ್ಟಂ ಸಧಸ್ಥಂ ಸಹಸ್ಥಾನಂ ಸುಕೃತಿಭಿರೇಕತ್ರನಿವಾಸಯೋಗ್ಯಂ ಸ್ವರ್ಗಾಖ್ಯಂ ಯದಸ್ತಿ ತತ್ । ಕಿಮರ್ಥಂ । ಪಿತರಂ ಮಾತರಂ ಚಾಚ್ಛಾಭಿಮುಖ್ಯೇನ ಪ್ರಾಪ್ತುಂ । ಹೇ ಅಶ್ವ ಅದ್ಯಾಸ್ಮಿನ್ಕಾಲೇ ಜುಷ್ಟತಮಃ ಪ್ರೀತತಮಃ । ಸ್ವರ್ಗಂ ಪ್ರಾಪ್ಸ್ಯೋಮೀತಿ ಹರ್ಷಯುಕ್ತ ಇತ್ಯರ್ಥಃ । ಏವಂಭೂತೋ ದೇವಾನ್ ಗಮ್ಯಾಃ । ಗಚ್ಛೇರ್ದೇವಾನ್ । ಹಿಶಬ್ದೋ ಯಜ್ಞ ಉಪಯುಕ್ತಸ್ಯ ಪಶೋಃ ಸ್ವರ್ಗಪ್ರಾಪ್ತೇಃ ಸಗರ್ಭ್ಯಾಯನು ಸಖಾ ಸಯೂಥ್ಯಃ । ತೈ. ಸಂ ೧-೨-೪-೨ । ಇತ್ಯಾದಿಮಂತ್ರಾಂತರಪ್ರಸಿದ್ಧಿದ್ಯೋತನಾರ್ಥಃ । ಅಥಾನಂತರಂ ಯಜಮಾನ ಆ ಶಾಸ್ತೇ । ಕಸ್ಮೈ । ದಾಶುಷೇ ಹವಿರ್ದತ್ತವತೇ ಸ್ವಸ್ಮೈ । ಕಾನಿ । ವಾರ್ಯಾಣಿ ವರಣೀಯಾನಿ ಧನಾನಿ । ಯದ್ವಾ ॥ ಪುರುಷಸ್ಯ ವ್ಯತ್ಯಯಃ ॥ ಆ ಶಾಸ್ತೇ ಪ್ರಾರ್ಥಯೇ ಯಜಮಾನಾರ್ಥಂ ॥

ಪ್ರತಿಪದಾರ್ಥ

ಅರ್ವಾನ್—ಈ ಅಶ್ವವು । ಪಿತರಂ—ಪಿತೃವಾದ ದ್ಯುಲೋಕವನ್ನೂ । ಮಾತರಂ—ಮಾತೃವಾದ ಪೃಥ್ವಿಯನ್ನೂ । ಅಚ್ಛ—ಅಭಿಮುಖವಾಗಿ ಹೋಗಿ ಸೇರಲು । ಯತ್—ಯಾವುದು । ಪರಮಂ—ಉತ್ಕೃಷ್ಟವಾದುದೂ । ಸಧಸ್ಥಂ—ಸುಕೃತಿಗಳೆಲ್ಲರೂ ಒಟ್ಟಿಗೆ ಸೇರುವುದೂ ಆಗಿರುವುದೋ ಅಂತಹ ಸ್ವರ್ಗಸ್ಥಾನವನ್ನು । ಉಪ ಪ್ರಾಗಾತ್—ಸಮೀಪಿಸುತ್ತದೆ । (ಅಶ್ವ—ಎಲೈ ಅಶ್ವವೇ) । ಅದ್ಯ—ಈಗ । ಜುಷ್ಟತಮಃ—(ಸ್ವರ್ಗವನ್ನು ಸೇರುತ್ತೇನೆಂದು) ಅತ್ಯಂತ ಹರ್ಷಯುಕ್ತನಾಗಿ । ದೇವಾನ್—ದೇವತೆಗಳನ್ನುದ್ದೇಶಿಸಿ । ಗಮ್ಯಾ (ಹಿ)—ಹೋಗತಕ್ಕದ್ದು । ಅಥ—ಅನಂತರ । ದಾಶುಷೇ—ಯಜಮಾನನಿಗೆ । ವಾರ್ಯಾಣಿ—ಅಪೇಕ್ಷಿತಗಳಾದ ವಸ್ತುಗಳನ್ನು । ಆ ಶಾಸ್ತೇ—ಪ್ರಾರ್ಥಿಸುತ್ತೇನೆ.

ಭಾವಾರ್ಥ

ಈ ಮೇಧ್ಯಾಶ್ವವು ಪಿತೃವಾದ ದ್ಯುಲೋಕವನ್ನೂ ಮಾತೃವಾದ ಪೃಥ್ವಿಯನ್ನೂ ಅಭಿಮುಖವಾಗಿ ಹೋಗಿ ಸೇರಲು ಉತ್ಕೃಷ್ಟವಾದುದೂ, ಸುಕೃತಿಗಳೆಲ್ಲರೂ ಒಟ್ಟಿಗೆಹೋಗಿ ಸೇರತಕ್ಕದ್ದೂ ಆದ ಸ್ವರ್ಗಸ್ಥಾನವನ್ನು ಸಮೀಪಿಸುತ್ತದೆ. ಎಲೈ ಅಶ್ವವೇ, ನೀನು ಈಗ ಸ್ವರ್ಗವನ್ನು ಸೇರುತ್ತೇನೆಂದು ಅತ್ಯಂತ ಹರ್ಷಯುಕ್ತನಾಗಿ ದೇವತೆಗಳನ್ನುದ್ದೇಶಿಸಿ ಹೋಗತಕ್ಕದ್ದು. ಅನಂತರ ಯಜಮಾನನಿಗೆ ಅಪೇಕ್ಷಿತಗಳಾದ ವಸ್ತುಗಳನ್ನು ಪ್ರಾರ್ಥಿಸುತ್ತೇನೆ.

## English Translation

The horse proceeds to that assembly which is most excellent: to the presence of his father and his mother, (heaven and earth). Go, (Horse), to-day rejoicing to the gods, that (the sacrifice) may yield blessings to the donor.

### ವಿಶೇಷವಿಷಯಗಳು

ಸಧಸ್ಥಂ—ಸಹಸ್ಥಾನಂ ಸುಕೃತಿಭಿರೇಕತ್ರ ನಿವಾಸಯೋಗ್ಯಂ ಸ್ವರ್ಗಾಖ್ಯಂ ಯದಸ್ತಿ ತತ್ । ಯಜ್ಞಯಾಗಾದಿ ಸತ್ಕರ್ಮಗಳನ್ನು ಮಾಡಿರತಕ್ಕವರೆಲ್ಲರೂ ಒಟ್ಟಿಗೆ ಸೇರತಕ್ಕ ಸ್ವರ್ಗವೆಂಬ ಸ್ಥಾನವೆಂದು ಸಾಯಣರು ವಿವರಿಸಿದ್ದಾರೆ. ಕೆಲವು ಸಂದರ್ಭಗಳಲ್ಲಿ ಈ ಪದವು ಅಂತರಿಕ್ಷಪರ್ಯಾಯವಾಗಿಯೂ ಇರುತ್ತದೆ. ಋತ್ವಿಕ್ಕುಗಳೆಲ್ಲರೂ ಒಟ್ಟುಗೂಡಿ ಸೇರುವ ವೇದಾದಿರೂಪವಾದ ಸ್ಥಾನಕ್ಕೆ ಸಧಸ್ಥವೆಂದು ಹೇಳುವ ರೂಢಿಯಿದೆ ನಿರುಕ್ತಕಾರರು. (ನಿ. ೩-೧೩)

ಕುಹ ಸ್ವಿದ್ದೋಷಾ ಕುಹ ವಸ್ತೋರಶ್ವಿನಾ ಕುಹಾಭಿಪಿತ್ವಂ ಕರತಃ ಕುಹೋಷತುಃ ।
ಕೋ ವಾಂ ಶಯುತ್ರಾ ವಿಧವೇವ ದೇವರಂ ಮರ್ಯಂ ನ ಯೋಷಾ ಕೃಣುತೇ ಸಧಸ್ಥ ಆ ॥
(ಋ. ಸಂ. ೧೦-೪೦-೨)

ಎಂಬ ಋಕ್ಕನ್ನುದಹರಿಸಿ ಅಲ್ಲಿ ಸಧಸ್ಥಶಬ್ದಕ್ಕೆ ಸಹಸ್ಥಾನವೆಂದರ್ಥ ಮಾಡಿದ್ದಾರೆ. ಉದಹರಿಸಿರುವ ಋಕ್ಕಿನಲ್ಲಿರುವ ಪದಕ್ಕೆ ವೇದಿರೂಪವಾದ ಸಧಸ್ಥವೆಂದು ಸಾಯಣರೂ ಸಾಧಾರಣವಾಗಿ ಎಲ್ಲರೂ ಒಟ್ಟಿಗೆ ವಾಸಿಸುವ ಗೃಹರೂಪವಾದ ವಾಸಸ್ಥಾನವೆಂದು ನಿರುಕ್ತಕಾರರೂ ಅಭಿಪ್ರಾಯಪಟ್ಟಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಸಾಯಣರ ವಿವರಣೆಯು ಸಂದರ್ಭಕ್ಕೆ ಉಚಿತವಾಗಿರುತ್ತದೆ. ಮೇಧ್ಯಾಶ್ವವೂ ಸಹ ಸತ್ಕರ್ಮದಲ್ಲಿ ಭಾಗವನ್ನು ವಹಿಸುವುದರಿಂದ ಸುಕೃತಿಗಳು ಹೋಗತಕ್ಕ ಸ್ವರ್ಗವನ್ನು ಸೇರುತ್ತದೆಂಬುದು ಸರಿಯಾಗಿರುತ್ತದೆ.

ಪಿತರಂ ಮಾತರಂ ಚ— ಈ ಅಶ್ವಕ್ಕೆ ಪಿತೃವಾರು, ಮಾತೃವಾರು ಎಂಬುದನ್ನು ಸಾಯಣರು ಭಾಷ್ಯದಲ್ಲಿ ತಿಳಿಸಿಲ್ಲ. ಆದರೆ ಶತಪಥ ಬ್ರಾಹ್ಮಣದಲ್ಲಿ ಇದನ್ನು ವಿಶದವಾಗಿ ತಿಳಿಸಿದೆ.

ವಿಭೂರ್ಮಾತ್ರಾ ಪ್ರಭೂಃ ಪಿತ್ರೇತಿ । ಇಯಂ ವೈ ಮಾತಾಸೌ ಪಿತಾಭ್ಯಾಮೇವೈನಂ ಪರಿದದಾತ್ಯಶ್ವೋಽಸಿ ಹಯೋಽಸೀತಿ ಶಾಸ್ತ್ರ್ಯೇವೈನಂ ತತ್ತಸ್ಮಾಚ್ಛಿಷ್ಟಾಃ ಪ್ರಜಾ ಜಾಯಂತೇಽತ್ಯೋಽಸಿ ।
(ಶ. ಬ್ರಾ. ೧೩-೧-೬ ೧)

ಮಾತೃವಿನಿಂದ ವಿಭುರೂಪವನ್ನೂ, ಪಿತೃವಿನಿಂದ ಪ್ರಭುಶಕ್ತಿಯನ್ನೂ ಪಡೆದಿರುವ ಈ ಅಶ್ವಕ್ಕೆ ಪೃಥ್ವಿಯು ಮಾತೆಯೆಂದೂ ಮತ್ತು ದ್ಯುಲೋಕವು ಪಿತೃವೆಂದೂ ಹೇಳಿದೆ ಆ ಆಧಾರದಮೇಲೆ ಇಲ್ಲಿಯೂ ಸಹ ಪಿತರಂ, ಮಾತರಂ ಎಂಬುದಕ್ಕೆ ದ್ಯಾವಾಪೃಥಿಗಳೆಂದು ಅರ್ಥವನ್ನು ಮಾಡಬಹುದು.

ದೇವಾನ್ ಗಮ್ಯಾ ಹಿ ಎನ್ನುವಾಗ ಹಿ ಶಬ್ದದ ಆವಶ್ಯಕತೆಯನ್ನು ವಿವರಿಸುತ್ತಾ ಹಿ ಶಬ್ದೋ ಯಜ್ಞೇ ಉಪಯುಕ್ತಸ್ಯ ಪಶೋಃ ಸ್ವರ್ಗಪ್ರಾಪ್ತೇಃ " ಸಗರ್ಭ್ಯೋಽನು ಸಖಾ ಸಯೂಥ್ಯಃ (ತೈ. ಸಂ. ೧-೩-೪-೨) "

ಇತ್ಯಾದಿ ಮಂತ್ರಾಂತರಪ್ರಸಿದ್ಧಿದ್ಯೋತನಾರ್ಥಃ । ಎಂಬ ತೈತ್ತಿರೀಯಸಂಹಿತಾವಾಕ್ಯವನ್ನುದಹರಿಸಿ ದೇವತೆಗಳನ್ನು ಸಮೀಪಿಸಿ ಅವರ ಸಾನ್ನಿಧ್ಯವನ್ನು ಪಡೆಯುವದರಲ್ಲಿ ಸಂಶಯವಿಲ್ಲವೆಂದು ತೋರಿಸಿದೆಯೆಂದು ತಿಳಿಸಿದ್ದಾರೆ

ವ್ಯಾಕರಣಪ್ರಕ್ರಿಯಾ

ಸಧಸ್ಥಮ್—ಸಹ ಸ್ಥಾನಂ ಸಧಸ್ಥಮ್. ಷ್ಠಾ ಗತಿನಿವೃತ್ತೌ ಧಾತು. ಸುಪಿಸ್ಥಃ ಎಂಬುದರಿಂದ ಕ ಪ್ರತ್ಯಯ. ಆತೋ ಲೋಪ ಇಟಿ ಚ (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಸಧಮಾಧಸ್ಥಯೋಶ್ಛಂದಸಿ (ಪಾ. ಸೂ. ೬-೩-೯೬) ಎಂಬುದರಿಂದ ಸಹ ಎಂಬುದಕ್ಕೆ ಸಧಾದೇಶ.

ಅದ್ಯ, ಅಚ್ಛ, ಅಥ—ನಿಪಾತಸ್ಯಚ ಎಂಬುದರಿಂದ ಇವುಗಳಿಗೆ ಸಂಹಿತಾದಲ್ಲಿ ದೀರ್ಘ ಬರುತ್ತದೆ.

ಜುಷ್ಟತಮಃ—ಜುಷೀ ಪ್ರೀತಿಸೇವನಯೋಃ ಧಾತು. ಕ್ತ ಪ್ರತ್ಯಯ. ಅತಿಶಾಯನೇ ತಮಬಿಷ್ಠನೌ ಎಂಬುದರಿಂದ ಇದರಮೇಲೆ ತಮಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

ಗಮ್ಯಾಃ—ಗಮಲೃ ಗತೌ ಧಾತು. ಲಿಙ್ ಮಧ್ಯಮಪುರುಷಏಕವಚನದಲ್ಲಿ ಸಿಪ್. ಇತಶ್ಚ ಸೂತ್ರದಿಂದ ಇಕಾರ ಲೋಪ. ಯಾಸುಟ್‌ಪರಸ್ಮೈ-(ಪಾ. ಸೂ. ೩-೪-೧೦೩) ಎಂಬುದರಿಂದ ಲಿಙಗೆ ಯಾಸುಟಾಗಮ. ಬಹುಲಂ ಛಂದಸಿ ಎಂಬುದರಿಂದ ವಿಕರಣಕ್ಕೆ ಲೋಪ. ಹಿಚ (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತ ಸ್ವರಪ್ರತಿಷೇಧ ಬರುವುದರಿಂದ ಯಾಸುಟಾಗಮ ಉದಾತ್ತವೆಂದುದರಿಂದ ಆಕಾರ ಉದಾತ್ತವಾಗುತ್ತದೆ.

ಶಾಸ್ತೇ—ಶಾಸು ಅನುಶಿಷ್ಟೌ ಧಾತು. ಅದಾದಿ. ಲಟ್ ಪ್ರಥಮಪುರುಷಏಕವಚನಾಂತರೂಪ. ಎರಡನೇ ವ್ಯಾಖ್ಯಾನದಲ್ಲಿ ವ್ಯತ್ಯಯದಿಂದ ಉತ್ತಮಪುರುಷಏಕವಚನಪ್ರತ್ಯಯ ಬಂದಿದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ದಾಶುಷೇ—ದಾಶೃ ದಾನೇ ಧಾತು. ದಾಶ್ವಾನ್ ಸಾಹ್ವಾನ್-(ಪಾ. ಸೂ. ೬-೧-೧೨) ಎಂಬುದರಿಂದ ಕ್ವಸುಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಚತುರ್ಥೀಏಕವಚನಪರವಾದಾಗ ವಸೋಃ ಸಂಪ್ರಸಾರಣಮ್ ಎಂಬುದರಿಂದ ಸಂಪ್ರಸಾರಣ. ಪೂರ್ವರೂಪ. ಶಾಸಿವಸಿಘಸೀನಾಂ ಚ (ಪಾ. ಸೂ. ೮-೩-೬೦) ಎಂಬುದರಿಂದ ಷತ್ವ. ಪ್ರತ್ಯಯಸ್ವರ ಬರುತ್ತದೆ.

ಇಲ್ಲಿಗೆ ೧೬೩ನೇ ಸೂಕ್ತವು ಮುಗಿದುದು.

———:o:———

## ೧೬೨ ಮತ್ತು ೧೬೩ ನೇ ಸೂಕ್ತಗಳ ಉಪಸಂಹಾರ

### ಅಶ್ವಮೇಧಯಾಗದ ಸ್ವರೂಪವಿವರಣೆ

———

ಅಶ್ವಮೇಧವು ರಾಷ್ಟ್ರೀಯವಾದ ಯಜ್ಞವೆಂದೂ, ಕೇವಲ ಸಾರ್ವಭೌಮನಾಗಿರತಕ್ಕವನು ಮಾತ್ರ ಅದನ್ನು ನಿರ್ವಹಿಸಲು ಸಾಧ್ಯವೆಂದೂ ಇತರ ಸಾಧಾರಣವಾದ ರಾಜರಿಂದ ಅದು ಅಸಾಧ್ಯವಾದುದೆಂದೂ ಬ್ರಾಹ್ಮಣಾದಿಗಳಲ್ಲಿ

ಉಕ್ತವಾಗಿರುವ ವಿಷಯವನ್ನು ಹಿಂದೆ ತಿಳಿಸಿದೆ. ಅದರ ಮಹಿಮೆಯ ವಿಷಯದಲ್ಲಿ ಎಲ್ಲಾ ಶ್ರುತಿವಾಕ್ಯಗಳೂ ಒಂದೇ ಅಭಿಪ್ರಾಯವನ್ನು ಕೊಟ್ಟರೂ ಸಹ ಅದರ ನಿರ್ವಹಣಕ್ರಮದಲ್ಲಿ ಒಂದೊಂದು ಶಾಖೆಯಲ್ಲಿ ಒಂದೊಂದು ವಿಧವಾಗಿ ತಿಳಿಸಿದೆ.

ತೈತ್ತಿರೀಯಸಂಹಿತಾ ಮತ್ತು ಬ್ರಾಹ್ಮಣ, ವಾಜಸನೇಯ ಸಂಹಿತಾ ಮತ್ತು ಶತಪಥಬ್ರಾಹ್ಮಣ ಇವುಗಳಲ್ಲಿ ಅಶ್ವಮೇಧದ ವಿಷಯವನ್ನು ವಿಸ್ತೃತವಾಗಿ ತಿಳಿಸಿದೆ. ಐತರೇಯಬ್ರಾಹ್ಮಣದಲ್ಲೂ ಕೌಷೀತಕೀ ಬ್ರಾಹ್ಮಣದಲ್ಲೂ ಸಹ ಅಧಿಕವಾದ ಪ್ರಾಶಸ್ತ್ಯವನ್ನು ಹೇಳಿಲ್ಲ. ಪಂಚವಿಂಶಬ್ರಾಹ್ಮಣದಲ್ಲೂ ಇದರ ಮಹತ್ತ್ವವನ್ನು ಸ್ತುತಿಸಿದೆ. ಈ ಕರ್ಮವನ್ನು ನೆರವೇರಿಸುವ ಕ್ರಮವನ್ನು ಆಯಾಯ ಶಾಖಾನುವರ್ತಿಗಳಾದ ಶ್ರೌತಸೂತ್ರಗಳಲ್ಲಿ ವಿಶದವಾಗಿ ವಿವರಿಸಿದೆ. ಇಲ್ಲಿ ಮುಖ್ಯವಾಗಿ ಅಪಸ್ತಂಬ, ಕಾತ್ಯಾಯನ ಮತ್ತು ಶಾಂಖಾಯನ ಇವರುಗಳ ಶ್ರೌತಸೂತ್ರಗಳಲ್ಲಿ ವಿವರಿಸಿರುವ ವಿಧಿಗಳನ್ನೂ ಕೆಲವು ಮುಖ್ಯವಾದ ಸನ್ನಿವೇಶಗಳಲ್ಲಿ ಪರಸ್ಪರ ಇರತಕ್ಕ ವ್ಯತ್ಯಾಸಗಳನ್ನೂ ತಿಳಿಸಿ ಅನಂತರ ಪ್ರಕೃತವಾದ ಋಗ್ವೇದಸೂಕ್ತಗಳಲ್ಲಿರುವ ಅಶ್ವಮೇಧದ ವರ್ಣನೆಗೂ ಶತಪಥಾದಿಗಳಲ್ಲಿರುವ ವರ್ಣನೆಗೂ ಇರುವ ಸಾದೃಶ್ಯವನ್ನೂ ವ್ಯತ್ಯಾಸವನ್ನೂ ವಿವರಿಸಲಾಗುತ್ತದೆ.

ಅಶ್ವಮೇಧ ವಿಧಿಯು ಅಪಸ್ತಂಬಶ್ರೌತಸೂತ್ರದ ೨೦ನೇ ಪ್ರಶ್ನದಲ್ಲಿ ವಿವರಿಸಲ್ಪಟ್ಟಿದೆ. ಸೂತ್ರಕಾರರು ತೈತ್ತಿರೀಯಬ್ರಾಹ್ಮಣದ ವಾಕ್ಯವನ್ನುದಹರಿಸಿ ಮೊದಲು ಈ ಯಜ್ಞವನ್ನು ಸಾರ್ವಭೌಮನು ಮಾತ್ರ ನೆರವೇರಿಸಬೇಕೆಂದು ತಿಳಿಸಿ ಅನಂತರ ಸಾಧಾರಣವಾದ ರಾಜನೂ ಸಹ ಇದನ್ನು ಆಚರಿಸಬಹುದೆಂದು ಹೇಳಿದ್ದಾರೆ. (ರಾಜಾ ಸಾರ್ವಭೌಮೋ ಅಶ್ವಮೇಧೇನ ಯಜೇತ| ಅಸಾರ್ವಭೌಮೋ ವಾ| (ಆಪ.ಶ್ರೌ.ಸೂ. ೨೦-೫-೨). ಈ ಯಾಗವು ವೈಶಾಖಮಾಸದ ಪೂರ್ಣಿಮೆಯ ದಿನ ಆರಂಭಿಸಲ್ಪಡಬೇಕು. ಅದರ ಮುಂದಿನ ಅಮಾವಾಸ್ಯೆಯ ದಿನ ಪ್ರಾಜಾಪತ್ಯ-ಋಷಭ ಅಥವಾ ಯಜ್ಞದಿಂದ ಇದರ ಪ್ರಾರಂಭವಿಧಿಯನ್ನಾಚರಿಸಬೇಕು. ಋತ್ವಿಗಾದಿಗಳ ಯೋಗ್ಯತೆಯೂ, ಯಜ್ಞಕ್ಕಾಗಿ ಆರಿಸಲ್ಪಡಬೇಕಾದ ಅಶ್ವದ ವರ್ಣ ಮತ್ತು ಇತರ ಸ್ವರೂಪಗಳೂ ವರ್ಣಿತವಾಗಿವೆ. ವಿಜಯಯಾತ್ರೆಗೆ ಅಶ್ವವು ಸಿದ್ಧವಾದ ಕಾಲದಲ್ಲಿ ಅದರ ಕಿವಿಯ ಹತ್ತಿರ ಒಂದು ನಾಯಿಯನ್ನು ಆಹುತಿಯಾಗಿ ಬಲಿಕೊಡಬೇಕು. ಅನಂತರ ಅಧ್ವರ್ಯುವಿನೊಂದಿಗೆ ನೂರು ರಾಜ ಪುತ್ರರೂ, ಬ್ರಹ್ಮನೊಂದಿಗೆ ರಾಜರಲ್ಲದೇ ಇರತಕ್ಕ ನೂರುಮಂದಿ ಉಗ್ರರೂ (ರಾಜಭಿರುಗ್ರೈಃ), ಹೋತೃವಿನೊಂದಿಗೆ ನೂರುಮಂದಿ ಸೂತಗ್ರಾಮಣಿಗಳೂ, ಉದ್ಗಾತೃವಿನೊಂದಿಗೆ ನೂರು ಮಂದಿ ಕ್ಷತ್ರಿಸಂಗ್ರಹೀತೃಗಳೂ ಅಶ್ವದ ನಾಲ್ಕು ಭಾಗಗಳಲ್ಲೂ ರಕ್ಷಣೆಗಾಗಿ ಸಿದ್ಧರಾಗಿರಬೇಕು. ವಿಜಯಯಾತ್ರೆಗಾಗಿ ಹೊರಟ ಅಶ್ವವು ರಥಕಾರನ ಗೃಹದಲ್ಲಿಳಿಯಬೇಕು. ಈ ಯಾತ್ರಾಕಾಲವಾದ ಒಂದು ವರ್ಷದೊಳಗೆ ಯಜ್ಞಗೃಹದಲ್ಲಿ ವೀಣಾಗಾನದೊಡನೆಯೂ, ಹೋತೃವಿನಿಂದ ಪಠಿತವಾಗಬೇಕಾದ ಪಾರಿಪ್ಲವಮಂತ್ರಗಳೊಡನೆಯೂ, ಇತರ ದೀಕ್ಷಾ ಕಾರ್ಯಗಳು ನೆರವೇರಲ್ಪಡುತ್ತವೆ. ಅಶ್ವಕ್ಕೇನಾದರೂ ಮಾರ್ಗದಲ್ಲಿ ಅಪಾಯವಾದರೆ ಬೇರೆ ಅಶ್ವವನ್ನು ಸಂಪಾದಿಸಬೇಕು. ಶತ್ರುರಾಜರು ಇದನ್ನು ತಡದು ಅಟ್ಟಿಕೊಂಡು ಹೋದರೆ ಅಶ್ವಮೇಧವು ಹತವಾದಂತೆ (ಅಮಿತ್ರಾ ಅಶ್ವಂ ವಿಂದೇರನ್ ಹನ್ಯೇತಾಸ್ಯ ಯಜ್ಞಃ (೨೦-೮-೧). ಅದು ಹಿಂತಿರುಗಿದನಂತರ ವರ್ಷದ ಅಂತ್ಯದ ಅಮಾವಾಸ್ಯೆಯ ದಿನ ಅನೇಕ ಪ್ರಾಣಿಗಳ ಬಲಿಗಳನ್ನೊಳಗೊಂಡ ಉಖಾನಾಮಕವಾದ ಕರ್ಮವು ನೆರವೇರಿಸಲ್ಪಡುತ್ತದೆ. ಪೀಠಿಕಾರೂಪವಾದ ಕರ್ಮಗಳೆಲ್ಲಾ ನೆರವೇರಿದನಂತರ ರಾಜಮಹಿಷಿಯರಿಂದ ಅಲಂಕೃತವಾದ ಅಶ್ವವು ತರಲ್ಪಡುತ್ತದೆ. ಮಹಿಷೀ, ವಾವಾತಾ, ಪರಿವೃಕ್ತಾ ಎಂಬುದು ಈ ಮಹಿಷಿಯರ ಹೆಸರುಗಳು. ಅಲಂಕಾರದ ಕಾಲದಲ್ಲಿ ಇವರು ನೂರು ರಾಜ

ಪುತ್ರಿಯರಿಂದಲೂ, ನೂರುಮಂದಿ ಉಗ್ರಪತ್ನಿಯರಿಂದಲೂ, ನೂರುಮಂದಿ ಸೂತಗ್ರಾಮಣಿಗಳ ಪತ್ನಿಯರಿಂದಲೂ ರಕ್ಷಿತರಾಗಿರುತ್ತಾರೆ. ಮಹಿಷಿಯು ಸುವರ್ಣದ ಆಭರಣಗಳಿಂದಲೂ, ವಾವಾತೆಯು ರಜತದ ಆಭರಣಗಳಿಂದಲೂ, ಪರಿವೃಕ್ತೆಯು ಪ್ರವಾಳಾದಿಗಳಿಂದಲೂ ಸಹ ಅಶ್ವವನ್ನು ಅಲಂಕರಿಸುತ್ತಾರೆ ಅನಂತರ ರಾಜನು ತನ್ನ ಬಿಲ್ಲುಬಾಣ ಗಳ ಸಹಿತವಾಗಿ ಅಶ್ವವನ್ನು ಜಲಪಾನಾರ್ಥವಾಗಿ ಸರಸ್ಸಿಗೆ ಕರೆದುಕೊಂಡು ಹೋಗುತ್ತಾನೆ. ನಿರ್ದಿಷ್ಟವಾದ ಮಂತ್ರಗ ಳನ್ನು ಪಠಿಸತಕ್ಕ ಕಾಲದಲ್ಲಿ ಅಶ್ವವು ಜಲಪಾನವನ್ನು ಮಾಡುತ್ತದೆ. ಅನಂತರ ಅಶ್ವವು ಯಜ್ಞಸ್ಥಾನಕ್ಕೆ ಕರೆತರಲ್ಪಟ್ಟು ತೂಪರ ಮತ್ತು ಗೋಮೃಗಗಳೊಂದಿಗೆ ವಧನೂಡಲ್ಪಡುತ್ತದೆ. ಅದರ ಕ್ರಮವು ಹೀಗಿದೆ.

ವೇತಸಶಾಖಾಯಾಂ ತಾರ್ಪ್ಯಂ ಕೃತ್ತ್ಯಧೀವಾಸಂ ಹಿರಣ್ಯಕಶಿಪುಂ ಚಾಸ್ತೀರ್ಯ ಸೌವರ್ಣಂ ರುಕ್ಮಮುಪರಿಷ್ಟಾತ್ಕೃತ್ವಾ ತಸ್ಮಿನ್ನಶ್ವತೂಪರಗೋಮೃಗಾನ್ನಿಘ್ನಂತಿ । ಪ್ಲಕ್ಷಶಾಖಾಯಾಸ್ತ್ವಿತರಾನ್ಪಶೂನ್. (೨೦-೧೭-೮) ಶ್ಯಾಮಲೇನ ಕ್ಷೌಮೇಣ ವಾಶ್ವಂ ಸಂಜ್ಞಪಯಂತಿ ॥ (೨೦-೧೭-೯). ಇತ್ಯಾದಿಯಾಗಿ ಅಶ್ವ, ಗೋಮೃಗ, ತೂಪರ ಮತ್ತು ಇತರ ವಧ್ಯಮೃಗಗಳಿಗಾಗಿ ಸಿದ್ಧಪಡಿಸಬೇಕಾದ ಆಸನಗಳ ವರ್ಣನೆಯಿದೆ. ಈ ಸಂದರ್ಭದಲ್ಲಿ ಸೂತ್ರಕಾರರು ವಾಲ್ಮೀಕಿರಾಮಾಯಣದಲ್ಲಿ ವರ್ಣಿತವಾದ ದಶರಥನ ಅಶ್ವಮೇಧ ಯಾಗದ ವಿಧಿಯಂತೆ ಎಂದು ಕೌಸಲ್ಯೆಯು ಅಶ್ವವನ್ನು ವಧಿಸಿದ ಸಂದರ್ಭವನ್ನು ತಿಳಿಸುತ್ತಾರೆ.

ಕೌಸಲ್ಯಾ ತಂ ಹಯಂ ತತ್ರ ಪರಿಚರ್ಯ ಸಮಂತತಃ ।
ಕೃಪಾಣೈರ್ವಿಶಶಾಸೈನಂ ತ್ರಿಭಿಃ ಪರಮಯಾ ಮುದಾ ॥

(ವಾಲ್ಮೀಕಿ ರಾಮಾಯಣ. ೧-೨೪-೩೩)

ಈ ಕಲಾಪಗಳೆಲ್ಲವೂ ಆದನಂತರ ಇನ್ನೂ ಅನೇಕ ಪ್ರಾಣಿಗಳ ಬಲಿಯೊಡನೆ ಅವಭೃಥವು ನೆರವೇರಲ್ಪಟ್ಟು ಯಜ್ಞವು ಸಮಾಪಿತವಾಗುತ್ತದೆ.

ಕಾತ್ಯಾಯನರ ಸೂತ್ರದಲ್ಲಿ ಶತಪಥಬ್ರಾಹ್ಮಣೋಕ್ತವಾದ ರೀತಿಯಲ್ಲಿ ಅಶ್ವಮೇಧದ ಕ್ರಮವು ಈ ರೀತಿಯಲ್ಲಿ ವಿವರಿಸಲ್ಪಟ್ಟಿದೆ. ಆಪಸ್ತಂಬದ ವಿವರಣೆಗೂ ಇದಕ್ಕೂ ಇರತಕ್ಕ ವ್ಯತ್ಯಾಸವನ್ನು ಮಾತ್ರ ಇಲ್ಲಿ ತಿಳಿಸಲಾಗುತ್ತದೆ. ಇದರ ಪ್ರಕಾರ ಅಶ್ವಮೇಧವು ಫಾಲ್ಗುಣಶುದ್ಧ ಅಷ್ಟಮೀ ಅಥವಾ ನವಮಿಯ ದಿನ ಆರಂಭವಾಗಬೇಕು. (ಎಂದರೆ ಪೂರ್ಣಿಮೆಗೆ ಷಡಹದ ಮೊದಲಿರಬೇಕು.) ಆಪಸ್ತಂಬದಲ್ಲಿ ಹೇಳಿರುವ ಮಹಿಷೀ, ವಾವಾತಾ, ಪರಿವೃಕ್ತಾ ಎಂಬ ರಾಜಪತ್ನಿಯರೊಂದಿಗೆ ಪಾಲಾಗಲೀ ಎಂಬ ನಾಲ್ಕನೆಯ ಹೆಸರೂ ಸೂಚಿತವಾಗಿದೆ. ವ್ಯಾಖ್ಯಾಕಾರರು ಇವಳನ್ನು ದೂತಪುತ್ರಿಯೆಂದು ಕರೆದಿದ್ದಾರೆ. (ಶ ಬ್ರಾ. ೧೩-೪-೧-೮) ಉಳಿದ ನಾಯಿಯ ಬಲಿಯೂ, ಅಶ್ವದ ರಕ್ಷ ಣೆಯೂ ಅಶ್ವದ ಯಾತ್ರಾವರ್ಣನವೂ, ಅಶ್ವದ ವರ್ಣದ ವಿವರಣೆಯೂ ಆಪಸ್ತಂಬರ ವಿವರಣೆಯಂತೆಯೇ ಇದೆ. ಅಶ್ವದ ಯಾತ್ರೆಯು ಮುಗಿದ ನಂತರ ಫಾಲ್ಗುಣಪೌರ್ಣಿಮಿಯ ದಿನ ಮುಖ್ಯಕರ್ಮವು ನೆರವೇರಿಸಲ್ಪಡುತ್ತದೆ. ಹಿರಣ್ಯ-ವಾಸೋಽಧಿವಾಸೇಷ್ವಶ್ವಸಂಜ್ಞಪನಂ .ಎಂಬ ವರ್ಣನದಿಂದ ಬಲಿಯಾಗಿ ಅರ್ಪಿತವಾದ ಇತರ ಪ್ರಾಣಿಗಳಂತೆಯೇ ಅಶ್ವಕ್ಕೂ ಸಹ ಉಸಿರನ್ನು ಕಟ್ಟಿ ಸಾಯಿಸುತ್ತಾರೆಂದು ತಿಳಿಯುತ್ತದೆ. ಈ ಸಂದರ್ಭದಲ್ಲಿ ಋತ್ವಿಕ್ಕುಗಳಲ್ಲಿ ಬ್ರಹ್ಮೋದ್ಯವೆಂಬ ಸಂಭಾಷಣೆಯು ನಡೆಯುತ್ತದೆ. ಇಲ್ಲಿರುವ ಮುಖ್ಯ ವ್ಯತ್ಯಾಸವೇನೆಂದರೆ ಮುಖ್ಯ ಮಹಿಷಿಯರು ಅಶ್ವದ ಹನನಕ್ಕೆ ಸಹಾಯ ಮಾಡುವರೇ ಹೊರತು ತಾವೇ ವಧನೂಡುವುದಿಲ್ಲ. ಅವರು ಗುರುತುಗಳನ್ನು ತೋರಿಸಿ ಕೊಟ್ಟನಂತರ ಅವರ ಅನುಚರಿಯರು ಅಶ್ವದ ಹನನವನ್ನು ಮಾಡುತ್ತಾರೆ

ಶಾಂಖಾಯನಶ್ರೌತಸೂತ್ರದಲ್ಲಿ (ಅಧ್ಯಾಯ ೧೬) ಇನ್ನೂ ಕೊಂಚ ವ್ಯತ್ಯಸ್ತವಾದ ವಿವರಣೆಯಿದೆ. ಅದರಂತೆ ಪ್ರಜಾಪತಿಯು ಅಶ್ವಮೇಧದ ಸ್ವರೂಪವನ್ನು ತನ್ನ ದಿವ್ಯದೃಷ್ಟಿಯಿಂದ ತಿಳಿದು ತನ್ನ ಇಷ್ಟಾರ್ಥಗಳನ್ನು ನೆರವೇರಿಸಿಕೊಳ್ಳುವುದಕ್ಕಾಗಿ ಅಶ್ವಮೇಧವನ್ನು ನೆರವೇರಿಸಿದನು. ಅದು ತ್ರಿರಾತ್ರಾತ್ಮಕವಾದುದು. ಅಲ್ಲದೆ ಅಶ್ವಮೇಧವನ್ನು ನೆರವೇರಿಸಿದ ಇತರ ಕೆಲವು ರಾಜರ ಹೆಸರೂ ನಿರ್ದಿಷ್ಟವಾಗಿದೆ. ಜನಮೇಜಯಪಾರೀಕ್ಷಿತನಿಗಾಗಿ ಇಂದ್ರೋತ ಶೌನಕನು ಈ ಯಾಗವನ್ನು ಮಾಡಿದನೆಂದೂ ಉಗ್ರಸೇನ, ಭೀಮಸೇನ ಮತ್ತು ಶತ್ರುಸೇನ ಈ ಮೂವರು ಸಹೋದರರೂ ಈ ಕಾಲದಲ್ಲಿ ಸಹಾಯಮಾಡಿದರೆಂದೂ ಹೇಳಿದೆ. ಈ ವರ್ಣನೆಗಳು ಕೆಲವು ವಿಷಯಗಳಲ್ಲಿ ಶತಪಥಬ್ರಾಹ್ಮಣವನ್ನು ಅನುಸರಿಸುತ್ತವೆಯೇ ವಿನಹ ಉಳಿದೆಡೆಗಳಲ್ಲಿ ಪ್ರಾಚೀನವಾದ ಸಂಪ್ರದಾಯಕ್ಕೆ ವಿರುದ್ಧವಾಗಿವೆ. ಮೇಧ್ಯಾಶ್ವದ ಜೊತೆಯಲ್ಲಿ ಬಲಿಗೆ ಸಿದ್ಧವಾಗಬೇಕಾದ ಪ್ರಾಣಿಗಳ ಪಟ್ಟಿಯು ತೈತ್ತಿರೀಯ ಸಂಹಿತಾದಿಗಳಲ್ಲಿ ಬಹಳವಾಗಿ ಹೇಳಲ್ಪಟ್ಟಿದೆ.

ಇಂದ್ರಾಯ ರಾಜ್ಞೇ ಸೂಕರೋ, ವರುಣಾಯ ರಾಜ್ಞೇ ಕೃಷ್ಣೋ, ಯಮಾಯ ರಾಜ್ಞ ಋಶ್ಯ ಋಷಭಾಯ ರಾಜ್ಞೇ ಗವಯಃ .... .... .... ||

(ತೈ. ಸಂ. ೫-೫-೧೧)

ರೋಹಿತೋ ಧೂಮ್ರರೋಹಿತಃ ಕರ್ಕಂಧುರೋಹಿತೆಸ್ತೇ ಪ್ರಾಜಾಪತ್ಯಾ ಬಭ್ರುರರುಣಬಭ್ರುಶ್ಶುಕಬಭ್ರುಸ್ತೇ ರೌದ್ರಾಃ .... .... .... ||

(ತೈ. ಸಂ. ೫-೬-೧೧)

ಇಂದ್ರನಿಗೆ ವರಾಹವು, ವರುಣನಿಗೆ ಕೃಷ್ಣಮೃಗವು ಇತ್ಯಾದಿಯಾಗಿ ಆಯಾ ದೇವತೆಗಳ ಸ್ವರೂಪಗಳನ್ನುದ್ದೇಶಿಸಿ ಅದಕ್ಕನುಗುಣವಾದ ಪ್ರಾಣಿಯು ಅರ್ಪಿತವಾಗಬೇಕೆಂಬ ದೊಡ್ಡ ಪಟ್ಟಿಯನ್ನು ಹೇಳಿದೆ. ಆದರೆ ಋಕ್ಸಂಹಿತೆಯಲ್ಲಿ—

ಏಷ ಚ್ಛಾಗಃ ಪುರೋ ಅಶ್ವೇನ ವಾಜಿನಾ ಪೂಷ್ಣೋ ಭಾಗೋ ನೀಯತೇ ವಿಶ್ವದೇವ್ಯಃ |

(ಋ. ಸಂ. ೧-೧೬೨-೩)

ಎಂದು ಕೇವಲ ಛಾಗವು ಮಾತ್ರ ಅಶ್ವದೊಂದಿಗೆ ಸಂಬಂಧಿಸಿದೆ. ಇದು ಪೂಷನನ್ನುದ್ದೇಶಿಸಿದ ಪಶುವೆಂದು ಹೇಳಿದೆ. ಮತ್ತು ಈ ಅಜವು ದೇವತೆಗಳಿಗೆ ಅಶ್ವಮೇಧವನ್ನು ಪ್ರಕಟಿಸುವುದಕ್ಕಾಗಿ ಅಶ್ವಕ್ಕಿಂತಲೂ ಮೊದಲು ಹೋಗುತ್ತದೆಂದು ವರ್ಣಿಸಿದೆ.

ಆಗ್ನೇಯಂ ಕೃಷ್ಣಗ್ರೀವಂ ಪುರಸ್ತಾಲ್ಲಲಾಟೇ | ಪೂರ್ವಾಗ್ನಿಮೇವ ತಂ ಕುರುತೇ ||

(ತೈ. ಬ್ರಾ ೩-೮-೨೩-೧)

ಇತ್ಯಾದಿಯಾಗಿ ತೈತ್ತಿರೀಯಬ್ರಾಹ್ಮಣದಲ್ಲಿ ಇದು ಅಗ್ನಿದೇವತಾಕವಾದುದೆಂದೂ ಹೀಗೆಯೇ ಇತರ ಕಡೆಗಳಲ್ಲಿ ಇಂದ್ರಾಪೂಷರಿಗೆ ಸೇರಿದುದೆಂದೂ ತಿಳಿಸಿದೆ.

ಅಶ್ವಮೇಧದಿಂದ ಲಭಿಸತಕ್ಕ ಫಲವನ್ನು ಅನೇಕವಿಧಗಳಲ್ಲಿ ವರ್ಣಿಸಿದೆ. ಕ್ಷತ್ರಿಯನ ಮಹತ್ತ್ವವನ್ನು ಸಂಪಾದಿಸುವುದು ಮತ್ತು ಅದನ್ನು ಪ್ರಕಾಶಪಡಿಸುವುದು ಇದರ ಮುಖ್ಯವಾದ ಉದ್ದಿಷ್ಟವಾಗಿದೆ. ಯಜ್ಞಕಾಲದಲ್ಲಿ ಬ್ರಾಹ್ಮಣನ ವೀಣಾಗಾನವೂ ಇತರ ಸ್ತುತಿಗಳೂ ಸಹ ಕ್ಷತ್ರಿಯನ ಶೌರ್ಯವನ್ನು ಸ್ತುತಿಸುವುವೇ ಆಗಿದೆ.

ಜೀಮೂತಸ್ಯೇವ ಭವತಿ ಪ್ರತೀಕಂ ಯದ್ವರ್ಮೀ ಯಾತಿ ಸಮದಾಮುಪಸ್ಥೇ ।
ಅನಾವಿದ್ಧಯಾ ತನ್ವಾ ಜಯ ತ್ವಂ ಸ ತ್ವಾ ವರ್ಮಣೋ ಮಹಿಮಾ ಪಿಪರ್ತು ।

(ತೈ. ಸಂ. ೪-೬-೬)

ಇತ್ಯಾದಿಯಾಗಿ ಪ್ರಶಂಸಿಸಿ ಅಶ್ವವನ್ನು ಅಲಂಕರಿಸುವಾಗಲೂ ಸಹ ಕ್ಷಾತ್ರವೀರ್ಯದ ಮಹಿಮೆಯನ್ನೂ ಸ್ತುತಿಸಿ ಅಶ್ವವು ತನಗೂ, ತನ್ನ ಯಜಮಾನನಿಗೂ ಪೂರ್ಣವಾದ ಜಯವನ್ನು ಸಂಪಾದಿಸಬೇಕೆಂದು ಪ್ರಾರ್ಥಿಸಿದೆ ಈ ಯಜ್ಞವನ್ನು ಮಾಡುವುದರಿಂದ ಯಜಮಾನನು ಪಾಪರಹಿತನಾಗಿ ತನ್ನ ಪೂರ್ಣವಾದ ಸತ್ತ್ವವನ್ನು ಸಂಪಾದಿಸುವನೆಂದು ತಿಳಿಸಲು ಇದರ ಮೂಲರೂಪವನ್ನೇ ವರ್ಣಿಸಿದೆ.

ತದ್ದೇವಾ ಅಶ್ವಮೇಧೇನೈವ ಪ್ರತ್ಯದಧುರೇಷ ವೈ ಪ್ರಜಾಪತಿಗ್ಂ ಸರ್ವಂ ಕರೋತಿ ಯೋಽಶ್ವಮೇಧೇನ ಯಜತೇ ಸರ್ವ ಏವ ಭವತಿ ಸರ್ವಸ್ಯ ವಾ ಏಷಾ ಪ್ರಾಯಶ್ಚಿತ್ತಿಸ್ಸರ್ವಸ್ಯ ಭೇಷಜಗ್ಂ ಸರ್ವಂ ವಾ ಏತೇನ ಪಾಪ್ಮಾನಂ ದೇವಾ ಅತರನ್ನಪಿ ವಾ ಏತೇನ ಬ್ರಹ್ಮಹತ್ಯಾಮತರನ್ತ್ಸರ್ವಂ ಪಾಪ್ಮಾನಂ ತರತಿ ತರತಿ ಬ್ರಹ್ಮಹತ್ಯಾಂ ಯೋಽಶ್ವಮೇಧೇನ ಯಜತೇ ಯ ಉ ಚೈನಮೇವಂ ವೇದ ॥

(ತೈ. ಸಂ. ೫-೩-೧೨)

ಅಶ್ವಮೇಧವನ್ನು ಯಾವನು ನೆರವೇರಿಸುತ್ತಾನೋ ಅವನು ಪ್ರಜಾಪತಿಯನ್ನು ಪೂರ್ಣವಾಗಿ ಉದ್ದೇಶಿಸಿ ಯಜ್ಞ ಮಾಡುತ್ತಾನೆ. (ಇಲ್ಲಿ ಯಜ್ಞಾಶ್ವಕ್ಕೂ, ಯಜ್ಞಕ್ಕೂ ಮತ್ತು ಪ್ರಜಾಪತಿಗೂ ಒಟ್ಟಿಗೆ ತಾದಾತ್ಮ್ಯವನ್ನು ಹೇಳಿದೆ). ತಾನೂ ಪೂರ್ಣನಾಗುತ್ತಾನೆ. ಇದು ಸರ್ವವಿಧವಾದ ದೋಷಗಳಿಗೂ ಪ್ರಾಯಶ್ಚಿತ್ತರೂಪವಾಗಿರುತ್ತದೆ. ದೇವತೆಗಳು ಈ ಯಾಗವನ್ನು ನೆರವೇರಿಸಿ ಎಲ್ಲವನ್ನೂ ಜಯಿಸಿದರು. ಅವರು ಇದರಿಂದ ಬ್ರಹ್ಮಹತ್ಯೆಯ ದೋಷವನ್ನೂ ನಾಶ ಮಾಡಿಕೊಂಡರು- ಯಾವನು ಈ ತತ್ತ್ವವನ್ನು ತಿಳಿಯುತ್ತಾನೆಯೋ, ಮತ್ತು ಯಾವನು ಈ ಜ್ಞಾನದಿಂದ ಈ ಯಾಗ ವನ್ನು ನೆರವೇರಿಸುತ್ತಾನೆಯೋ ಅವನು ಬ್ರಹ್ಮಹತ್ಯಾದಿದೋಷಗಳಿಂದ ಮುಕ್ತನಾಗುತ್ತಾನೆಂದು ತರತಿ ಬ್ರಹ್ಮ ಹತ್ಯಾಂ ಎಂದು ಘೋಷಿಸಿ ಹೇಳಿದೆ. (ಇದೇ ವಿಷಯವನ್ನು ಶತಪಥಬ್ರಾಹ್ಮಣದಲ್ಲಿಯೂ ಸಹ ೧೩-೩-೧-೧ ರಲ್ಲಿ ಇದೇ ಅನುಪೂರ್ವಿಯಿಂದ ಹೇಳಿದೆ)-ಆದುದರಿಂದಲೇ ಅಶ್ವಮೇಧಸಂಬಂಧಿನ್ಯೋ ಯಾಜ್ಯಾನುವಾಕ್ಯಾ ಉಚ್ಯಂತೇ ಎಂದು,

ಅಗ್ನೇರ್ಮನ್ವೇ ಪ್ರಥಮಸ್ಯ ಪ್ರಚೇತಸೋ ಯಂ ಪಾಂಚಜನ್ಯಂ ಬಹವಃ ಸಮಿಂಧತೇ ।
ವಿಶ್ವಸ್ಯಾಂ ವಿಶಿ ಪ್ರವಿವಿಶಿವಾಗ್ಂ ಸಮೀಮಹೇ ಸ ನೋ ಮುಂಚತ್ವಗ್ಂಹಸಃ ॥
ಇಂದ್ರಸ್ಯ ಮನ್ವೇ — .... .... .... .... ಸ ನೋ ಮುಂಚತ್ವಗ್ಂಹಸಃ ।

(ತೈ. ಸಂ. ೪-೧೫-೭)

ಇತ್ಯಾದಿಯಾಗಿ ಇದಕ್ಕೆ ಸಂಬಂಧಿಸಿದ ಪ್ರತಿಯೊಂದು ದೇವತೆಯನ್ನೂ ಉದ್ದೇಶಿಸಿ ತನ್ನನ್ನು ಪಾಪದಿಂದ ಮುಕ್ತ ನನ್ನಾಗಿ ಮಾಡಲಿ ಎಂದು ಪ್ರಾರ್ಥಿಸಿದೆ.

ಅಶ್ವಮೇಧದ ಮಹತ್ತ್ವವನ್ನು ಶತಪಥದಲ್ಲಿ ಈರೀತಿ ವರ್ಣಿಸಿದೆ.

ಏಷ ವೈ ಪ್ರಭೂರ್ನಾಮ ಯಜ್ಞಃ। ಯತ್ರೈತೇನ ಯಜ್ಞೇನ ಯಜಂತೇ ಸರ್ವಮೇವ ಪ್ರಭೂತಂ ಭವತಿ ॥ ಏಷ ವೈ ವಿಭೂರ್ನಾಮ ಯಜ್ಞಃ। ಯತ್ರೈತೇನ ಯಜ್ಞೇನ ಯಜಂತೇ ಸರ್ವಮೇವ ವಿಭೂತಂ ಭವತಿ ॥ ಏಷ ವೈ ವ್ಯಷ್ಟಿರ್ನಾಮ ಯಜ್ಞಃ। ಯತ್ರೈತೇನ ಯಜ್ಞೇನ ಯಜಂತೇ ಸರ್ವಮೇವ ವ್ಯಷ್ಟಂ ಭವತಿ ॥ ಏಷ ವೈ ವಿಧೃತಿರ್ನಾಮ ಯಜ್ಞಃ ಯತ್ರೈತೇನ ಯಜ್ಞೇನ ಯಜಂತೇ। ಸರ್ವಮೇವ ವಿಧೃತಂ ಭವತಿ। ಏಷ ವಾ ಊರ್ಜಸ್ವಾನ್ನಾಮ ಯಜ್ಞಃ। ಯತ್ರೈತೇನ ಯಜ್ಞೇನ ಯಜಂತೇ। ಸರ್ವಮೇವೋರ್ಜಸ್ವದ್ಭವತಿ ॥ ............... ಏಷ ವೈ ಬ್ರಹ್ಮವರ್ಚಸೀ ನಾಮ ಯಜ್ಞಃ। ಯತ್ರೈತೇನ ಯಜ್ಞೇನ ಯಜಂತ ಆ ಬ್ರಾಹ್ಮಣೋ ಬ್ರಹ್ಮವರ್ಚಸೀ ಜಾಯತೇ ॥ ಏಷ ವೈ ಪ್ರತಿಷ್ಠಾ ನಾಮ ಯಜ್ಞಃ। ಯತ್ರೈತೇನ ಯಜ್ಞೇನ ಯಜಂತೇ। ಸರ್ವಮೇವ ಪ್ರತಿಷ್ಠಿತಂ ಭವತಿ ॥

( ಶ. ಬ್ರಾ. ೧೩-೩-೭ )

ಈ ಯಜ್ಞವು ಶಕ್ತ್ಯಾತ್ಮಕವೂ, ವಿಭ್ವಾತ್ಮಕವೂ ಆದುದು. ಆದುದರಿಂದ ಇದನ್ನು ನೆರವೇರಿಸುವವನು ಪ್ರಭುವೂ, ಪ್ರಭೂತವಾದ ಸಂಪತ್ತುಳ್ಳವನೂ ಆಗುತ್ತಾನೆ. ಇದರಂತೆಯೇ ಈ ಯಜ್ಞವು ಊರ್ಜಸ್ವಿಯೂ, ಬ್ರಹ್ಮವರ್ಚಸ್ವಿಯೂ, ಪ್ರತಿಷ್ಠೆಯೂ ಆಗಿರುವುದರಿಂದ ಇದನ್ನು ನೆರವೇರಿಸತಕ್ಕವರು ಊರ್ಜಸ್ವಿಗಳೂ, ಬ್ರಹ್ಮವರ್ಚಸ್ಸನ್ನು ಪಡೆಯುವವರೂ ಮತ್ತು ಪ್ರತಿಷ್ಠೆಯನ್ನು ಪಡೆಯತಕ್ಕವರು ಆಗುತ್ತಾರೆ ಎಂದು ಅಶ್ವಮೇಧದ ಫಲದ ವಿಷಯದಲ್ಲಿ ಬಹಳವಾಗಿ ಹೇಳಿದೆ.

ಅಶ್ವಮೇಧವನ್ನು ಕೇವಲ ಕರ್ಮದೃಷ್ಟಿಯಿಂದ ನೋಡುವುದು ಒಂದು ವಿಧವಾದರೆ ಇದನ್ನು ಆಧ್ಯಾತ್ಮಿಕವಾದ ದೃಷ್ಟಿಯಿಂದಲೂ ಪರಿಶೀಲಿಸಿದೆ. ಆಗ ಅಶ್ವ, ಅಶ್ವದ ಒಡನಾಡಿಯಾದ ಅಜ, ಯಜ್ಞದ ಫಲ ಇವುಗಳಿಗೆಲ್ಲಾ ಅರ್ಥವು ಬಹಳ ವಿಸ್ತೃತವಾಗುತ್ತದೆ, ಇದರಲ್ಲಿ ಅಶ್ವವು ವಿಶ್ವಾತ್ಮಕವಾಗಿದೆ. ವಿಶ್ವದ ಚಂದ್ರಸೂರ್ಯಾದಿಭಾಗಗಳೆಲ್ಲಾ ಈ ಅಶ್ವದ ಅವಯವಗಳು. ಧ್ಯಾನಾತ್ಮಕವಾದ ಸಾಧನದಿಂದಲೂ, ತತ್ತ್ವಜ್ಞಾನದಿಂದಲೂ ಈ ಅಶ್ವಮೇಧವನ್ನು ನೆರವೇರಿಸಿ ಆಧ್ಯಾತ್ಮಿಕವಾದ ಫಲವನ್ನು ಪಡೆಯಬಹುದೆಂದು ಹೇಳಿದೆ. ಇದನ್ನು ಬೃಹದಾರಣ್ಯಕದಲ್ಲಿ ಹೀಗೆ ಹೇಳಿದೆ. [ಉಷಾ ವಾ ಅಶ್ವಸ್ಯ ಮೇಧ್ಯಸ್ಯ ಶಿರಃ ಎಂದು ಮುಂತಾಗಿ ಬೃಹದಾರಣ್ಯಕದಲ್ಲಿರುವ ಅಶ್ವದ ವಿಶ್ವಾತ್ಮಕವಾದ ವರ್ಣನೆಯನ್ನು ಹಿಂದೆ ತಿಳಿಸಿದೆ].

ಸೋಽಕಾಮಯತ ಮೇಧ್ಯಂ ಮ ಇದಂ ಸ್ಯಾದಾತ್ಮನ್ವ್ಯನೇನ ಸ್ಯಾಮಿತಿ। ತತೋಽಶ್ವಃ ಸಮಭವದ್ಯದಶ್ವತ್ತನ್ಮೇಧ್ಯಮಭೂದಿತಿ ತದೇವಾಶ್ವಮೇಧಸ್ಯಾಶ್ವಮೇಧತ್ವಂ। ಏಷ ಹ ವಾ ಅಶ್ವಮೇಧಂ ವೇದ ಯ ಏನಮೇವಂ ವೇದ। ತಮನವರುಧ್ಯೈವಾಮನ್ಯತ। ತಂ ಸಂವತ್ಸರಸ್ಯ ಪರಸ್ತಾದಾತ್ಮನ ಆಲಭತ। ಪಶೂನ್ದೇವತಾಭ್ಯಃ ಪ್ರತ್ಯೌಹತ್। ತಸ್ಮಾತ್ಸರ್ವದೇವತ್ಯಂ ಪ್ರೋಕ್ಷಿತಂ ಪ್ರಾಜಾಪತ್ಯಮಾಲಭಂತೇ। ಏಷ ಹ ವಾ ಅಶ್ವಮೇಧೋ ಯ ಏಷ ತಪತಿ ತಸ್ಯ ಸಂವತ್ಸರ ಆತ್ಮಾಯಮಗ್ನಿರರ್ಕಸ್ತಸ್ಯೇಮೇ ಲೋಕಾ ಆತ್ಮಾನಸ್ತಾವೇತಾವರ್ಕಾಶ್ವಮೇಧೌ ॥

(ಬೃ. ಉ. ೧-೨-೬ ರಿಂದ ೭)

ಪ್ರಜಾಪತಿಯು ತಾನು ವಿಸ್ತೃತವಾಗಿ ಬೆಳೆದು ಯಜ್ಞವನ್ನು ನೆರವೇರಿಸಬೇಕೆಂದಪೇಕ್ಷಿಸಿದನು. ತನ್ನ ತಪಸ್ಸಿನಿಂದ ಅಭಿವೃದ್ಧಿಯನ್ನು ಪಡೆದು ( ಅಶ್ವಃ ) ಅಶ್ವವೆಂದು ಪ್ರಸಿದ್ಧನಾದನು. ಆಗ ತಾನು ಯಜ್ಞಕ್ಕೆ

ಯೋಗ್ಯನೆಂದು ಭಾವಿಸಿದುದರಿಂದ ಆ ಯಜ್ಞಕ್ಕೆ ಅಶ್ವಮೇಧವೆಂಬ ಹೆಸರು ಬಂದಿತು. ಈ ತತ್ತ್ವವನ್ನು ತಿಳಿದವನು ಅಶ್ವಮೇಧದ ತತ್ತ್ವವನ್ನು ತಿಳಿದಂತೆ. ತಾನು ಅಶ್ವರೂಪಿಯಾದ ಆಕಾರವನ್ನು ಒಂದು ಸಂವತ್ಸರದ ವರೆಗೆ ಯಾವ ತಡೆಯೂ ಇಲ್ಲದೆ ಹಾಗೆಯೇ ಸ್ವತಂತ್ರವಾದ ರೀತಿಯಲ್ಲಿ ಧ್ಯಾನಿಸುತ್ತಿದ್ದನು. ಒಂದು ಸಂವತ್ಸರಾನಂತರ ಯಜ್ಞವನ್ನು ನೆರವೇರಿಸಿದನು. ಮತ್ತು ಅದನ್ನು ತನಗೇ ಅರ್ಪಿಸಿಕೊಂಡನು. ಇತರ ಪಶುಗಳನ್ನು ಇತರ ದೇವತೆಗಳಿಗೆ ಹಂಚಿದನು. ಆದುದರಿಂದಲೇ ಅಶ್ವಮೇಧವು ವಿಶ್ವಾತ್ಮನಾದ ಪ್ರಜಾಪತಿಯನ್ನುದ್ದೇಶಿಸಿದೆ ಎಂಬುದಾಗಿ ಆಧ್ಯಾತ್ಮಿಕವಾದ ದೃಷ್ಟಿಯಿಂದ ಅಶ್ವಮೇಧದ ವರ್ಣನೆಯಿದೆ.

---

## ನೂರ ಅರವತ್ತನಾಲ್ಕನೆಯ ಸೂಕ್ತವು

---

ಅಸ್ಯ ವಾಮಸ್ಯೇತಿ ದ್ವಿಪಂಚಾಶದೃಚಮಷ್ಟಮಂ ಸೂಕ್ತಂ ದೈರ್ಘತಮಸಂ । ಅತ್ರೇಯಮನುಕ್ರಮಣಿಕಾ । ಅಸ್ಯ ದ್ವಿಪಂಚಾಶದಲ್ಪಸ್ತವಂ ಶ್ವೇತತ್ಸಂಶಯೋತ್ಥಾಪನಪ್ರಶ್ನಪ್ರತಿವಾಕ್ಯಾನ್ಯತ್ರ ಪ್ರಾಯೇಣ ಜ್ಞಾನಮೋಕ್ಷಾಕ್ಷರಪ್ರಶಂಸಾ ಚ ಪಂಚಪಾದಂ ಸಾಕಂಜಾನಾಂ ಯದ್ವಾಯತ್ರೇಽಯಂ ಸ ಶಿಂಕ್ತೇ ಸಪ್ತಾರ್ಧಗರ್ಭಾ ಗೌರೀರಿತಿ ಜಗತ್ಯಃ । ಏತದಂತಂ ತು ವೈಶ್ವದೇವಂ ತಸ್ಯಾಃ ಸಮುದ್ರಾ ಇತಿ ವಾಚಃ ಸಮುದ್ರಾ ಆಪೋಽಕ್ಷರಂ ಸಾ ಪ್ರಸ್ತಾರಪಂಕ್ತಿಃ ಶಕಮಯಮಿತಿ ಶಕಧೂಮ ಉಕ್ಷಾಣಂ ಪೃಶ್ನಿಮಿತಿ ಸೋಮಸ್ತ್ರಯಃ ಕೇಶಿನ ಇತ್ಯಗ್ನಿಃ ಸೂರ್ಯೋ ವಾಯುಶ್ಚ ಕೇಶಿನಶ್ಚತ್ವಾರಿ ವಾಗ್ವಾಚ ಇಂದ್ರಂ ಮಿತ್ರಂ ಸೌರ್ಯಾ ದ್ವಾದಶೇತಿ ಸಂವತ್ಸರಸಂಸ್ಥಂ ಕಾಲಚಕ್ರವರ್ಣನಂ ಯಸ್ತೇ ಸರಸ್ವತ್ಯೈ ಯಜ್ಞೇನ ಸಾಧ್ಯೇಭ್ಯಃ ಪರಾನುಷ್ಟುಪ್ಸೌರೀ ಪರ್ಜನ್ಯಾಗ್ನಿದೇವತಾ ವಾಂತ್ಯಾ ಸರಸ್ವತೇ ಸೂರ್ಯಾಯ ವೇತಿ । ಅತ್ರ ಶ್ರುತ್ಯಾಬಹುಶ್ವೇನ ಸ್ತುತಿಭಾಗಸ್ಯಾಲ್ಪೀಯಸ್ತ್ವಾದಿದಂ ಸೂಕ್ತಮಲ್ಪಸ್ತವನಂ । ನ ಸೂಕ್ತಾಂತರವದ್ಬಹುಸ್ತವಂ । ಇದಮೇವ ವೈಲಕ್ಷಣ್ಯಂ ತುಶಬ್ದೇನ ದ್ಯೋತ್ಯತೇ । ಅಸ್ಮಿನ್ಸೂಕ್ತೇ ಪ್ರಾಯೇಣ ಸಂಶಯೋತ್ಥಾಪನಾದಯೋ ಬಹವೋಽರ್ಥಾಃ ಪ್ರತಿಪಾದ್ಯಂತೇ । ಅಚಿಕಿತ್ವಾಞ್ಚಿಕಿತುಷ ಇತ್ಯನಯಾ ಸಂಶಯ ಉತ್ಥಾಪ್ಯತೇ । ಪೃಚ್ಛಾಮಿ ತ್ವೇತ್ಯತ್ರ ಪ್ರಶ್ನಃ ಪ್ರತೀಯತೇ । ಇಯಂ ವೇದಿರಿತ್ಯತ್ರ ಪ್ರತಿವಚನಂ । ಯ ಈಂ ಚಕಾರೇತ್ಯಾದಿನಾ ಜ್ಞಾನಪ್ರಶಂಸಾ ಪ್ರತಿಪಾದ್ಯತೇ । ಅಪಶ್ಯಂ ಗೋಪಾಮಿತ್ಯಾದಿನಾ ಬ್ರಹ್ಮಸಾಕ್ಷಾತ್ಕಾರರೂಪಸ್ಯ ಪ್ರಶಂಸಾ । ನ ಕ್ಷರತೀತ್ಯಕ್ಷರಂ ಬ್ರಹ್ಮ । ದ್ವಾ ಸುಪರ್ಣೇತ್ಯಾದಿನಾ ತಸ್ಯ ಪ್ರಶಂಸಾ । ಪಂಚಪಾದಂ ಪಿತರಂ ಸಾಕಂಜಾನಾಂ ಸಪ್ತಥಂ ಯದ್ವಾಯತ್ರೇ ಅಧಿ ಅಯಂ ಸ ಶಿಂಕ್ತೇ ಸಪ್ತಾರ್ಧಗರ್ಭಾ ಗೌರೀರ್ಮಿಮಾಯೇತಿ ಷಡ್ಜಗತ್ಯಃ । ಸಮಾನಮೇತದಿತ್ಯನುಷ್ಟುಪ್ । ತಸ್ಯಾಃ ಸಮುದ್ರಾ ಇತಿ ಪ್ರಸ್ತಾರಪಂಕ್ತಿಃ । ತಲ್ಲಕ್ಷಣಂ ಛಂದೋಗ್ರಂಥೇ ಸೂತ್ರಿತಂ । ಪ್ರಸ್ತಾರಪಂಕ್ತಿಃ ಪುರತಃ । ಪಿ. ೩-೪೦ । ಇತಿ । ಪುರತಃ ಪೂರ್ವಾರ್ಧೇ ದ್ವಾದಶಾಕ್ಷರೌ ಜಾಗತೌ ಪಾದೌ ತತೋ ದ್ವಾವಷ್ಟಾಕ್ಷರೌ ಗಾಯತ್ರೌ ಸಾ ಪ್ರಸ್ತಾರಪಂಕ್ತಿರಿತಿ ಸೂತ್ರಾರ್ಥಃ। ಅನುಕ್ರಮಣ್ಯಾಮಪ್ಯುಕ್ತಂ । ಆದ್ಯೌ ಚೇತ್ಪ್ರಸ್ತಾರಪಂಕ್ತಿಃ । ಅನು. ೮-೬ । ಇತಿ । ಶಿಷ್ಟಾ ಅನಾದೇಶಪರಿಭಾಷಯಾ ತ್ರಿಷ್ಟುಭಃ । ಗೌರೀರ್ಮಿಮಾಯೇತ್ಯೇತದಂತಾನಾಂ ವಿಶ್ವೇ ದೇವಾ ದೇವತಾ । ತಸ್ಯಾಃ ಸಮುದ್ರಾ ಇತ್ಯಸ್ಯಾಃ ಪೂರ್ವಾರ್ಧಸ್ಯ ವಾಗ್ದೇವತಾ । ಉತ್ತರಾರ್ಧಸ್ಯಾಪಃ ಶಕಮಯಮಿತ್ಯಸ್ಯಾಃ

ಪೂರ್ವಾರ್ಧಸ್ಯ ಶಕಧೂಮಃ । ಉಕ್ಷಾಣಂ ಪೃಶ್ನಿಮಿತ್ಯುತ್ತರಾರ್ಧಸ್ಯ ಸೋಮೋ ದೇವತಾ । ತ್ರಯಃ ಕೇಶಿನ ಇತ್ಯಸ್ಯಾ ಅಗ್ನಿಸೂರ್ಯವಾಯವಃ । ಚತ್ವಾರಿ ವಾಗಿತ್ಯೇಷಾ ವಾಗ್ದೇವತಾಕಾ । ಇಂದ್ರಂ ಮಿತ್ರಂ ವರುಣಂ ಕೃಷ್ಣಂ ನಿಯಾನಮಿತ್ಯೇತೇ ಸೂರ್ಯದೇವತ್ಯೇ । ದ್ವಾದಶ ಪ್ರಧಯ ಇತ್ಯಸ್ಯಾಃ ಸಂವತ್ಸರಾತ್ಮಾ ಕಾಲೋ ದೇವತಾ । ಯಸ್ತೇ ಸ್ತನ ಇತ್ಯಸ್ಯಾಃ ಸರಸ್ವತೀ । ಯಜ್ಞೇನೇತ್ಯಸ್ಯಾಃ ಸಾಧ್ಯಾ ದೇವತಾ । ಸಮಾನಮೇತದಿತ್ಯಸ್ಯಾಃ ಸೂರ್ಯಃ ಪರ್ಜನ್ಯೋ ವಾಗ್ನಯೋ ವಾ ದೇವತಾ । ದಿವ್ಯಂ ಸುಪರ್ಣಮಿತ್ಯಸ್ಯಾಃ ಸರಸ್ವಾನ್ ಸೂರ್ಯೋ ವಾ ದೇವತಾ ॥ ಕೃತ್ಸ್ನಸೂಕ್ತಸ್ಯ ವಿನಿಯೋಗಂ ಶೌನಕ ಆಹ । ಸ್ತ್ರೇಯಂ ಕೃತ್ವಾ ದ್ವಿಜೋ ಮೋಹಾತ್ತ್ರಿರಾತ್ರೋಪೋಷಿತಃ ಶುಚಿಃ । ಸೂಕ್ತಂ ಜಪ್ತ್ವಾಸ್ಯ ವಾಮೀಯಂ ಕ್ಷಿಪ್ರಂ ಮುಚ್ಯೇತ ಕಿಲ್ಬಿಷಾದಿತಿ । ಋಗ್ವಿ. ೧-೨೬ ॥ ಮಹಾವ್ರತೇ ವೈಶ್ವದೇವಶಸ್ತ್ರೇ ವೈಶ್ವದೇವಂ ನಿವಿದ್ಧಾನಂ ದ್ವಿಪ್ರತೀಕಂ । ತತ್ರಾಸ್ಯ ವಾಮಸ್ಯೇತ್ಯಾದಿಕಮೇಕಚತ್ವಾರಿಂಶದೃಚಂ ಪ್ರಥಮಂ ಪ್ರತೀಕಂ । ಪಂಚ-ಮಾರಣ್ಯಕೇ ಸೂತ್ರಿತಂ । ಅಸ್ಯ ವಾಮಸ್ಯ ಪಲಿತಸ್ಯ ಹೋತುರಿತಿ ಸಲಿಲಸ್ಯ ದೈರ್ಘತಮಸ ಏಕ-ಚತ್ವಾರಿಂಶತಂ । ಐ. ಆ ೫-೩-೨ । ಇತಿ ॥

ಅನುವಾದವು— ಅಸ್ಯ ವಾಮಸ್ಯ ಎಂಬ ಈ ಸೂಕ್ತವು ಇಪ್ಪತ್ತೆರಡನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು ಇದರಲ್ಲಿ ಐವತ್ತೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ಉಚಥ್ಯಪುತ್ರನಾದ ದೀರ್ಘತಮಸ್ಸೆಂಬುವನು ಋಷಿಯು. ಅನುಕ್ರಮಣಿಕೆಯಲ್ಲಿ -- ಅಸ್ಯ ದ್ವಿಪಂಚಾಶದಲ್ಪಸ್ತವಂ ತ್ವೇತತ್ಸಂಶಯೋತ್ಥಾಪನಪ್ರಶ್ನಪ್ರತಿ-ವಾಕ್ಯಾನ್ಯತ್ರ ಪ್ರಾಯೇಣ ಜ್ಞಾನಮೋಕ್ಷಾಕ್ಷರಪ್ರಶಂಸಾ ಚ ಪಂಚಪಾದಂ ಸಾಕಂಜಾನಾಂ ಯದ್ಗಾಯ-ತ್ರೇಯಂ ಸ ಶಿಂಕ್ತೇ ಸಪ್ತಾರ್ಧಗರ್ಭಾ ಗೌರೀರಿತಿ ಜಗತ್ಯಃ । ಏತದಂತಂ ಹ ವೈಶ್ವದೇವಂ ತಸ್ಯಾಃ ಸಮುದ್ರಾ ಇತಿ ವಾಚಃ ಸಮುದ್ರಾ ಆಪೋಽಕ್ಷರಂ ಸಾ ಪ್ರಸ್ತಾರಪಂಕ್ತಿಃ ಶಕಮಯಮಿತಿ ಶಕಧೂಮ ಉಕ್ಷಾಣಂ ಪೃಶ್ನಿಮಿತಿ ಸೋಮಸ್ತ್ರಯಃ ಕೇಶಿನ ಇತ್ಯಗ್ನಿಃ ಸೂರ್ಯೋ ವಾಯುಶ್ಚ ಕೇಶಿನಶ್ಚತ್ವಾರಿ ವಾಗ್ವಾಚ ಇಂದ್ರಂ ಮಿತ್ರಂ ಸೌರ್ಯೌ ದ್ವಾದಶೇತಿ ಸಂವತ್ಸರಸಂಸ್ಥಂ ಕಾಲಚಕ್ರವರ್ಣನಂ ಯಸ್ತೇ ಸರಸ್ವತ್ಯೈ ಯಜ್ಞೇನ ಸಾಧ್ಯೇಭ್ಯಃ ಪರಾನುಷ್ಟುಷ್ಟೌ ಪರ್ಜನ್ಯಾಗ್ನಿದೇವತಾ ವಾಂತ್ಯಾ ಸರಸ್ವತೇ ಸೂರ್ಯಾಯ ವೇತಿ । ಈ ಸೂಕ್ತದಲ್ಲಿ ಸ್ತೋತ್ರಭಾಗವು ಬಹಳ ಕಡಮೆಯಾಗಿರುವುದರಿಂದ ಈ ಸೂಕ್ತವು ಅಲ್ಪಸ್ತವನವೆಂದು ಪ್ರಸಿದ್ಧಿಯಾಗಿರುವುದು. ಇತರ ಸೂಕ್ತಗಳಲ್ಲಿರುವಂತೆ ಈ ಸೂಕ್ತದಲ್ಲಿ ದೇವತಾಸಂಬಂಧವಾದ ಸ್ತುತಿಯು ವಿಶೇಷವಾಗಿಲ್ಲ. ಈ ವಿಷಯವನ್ನೇ ಅನುಕ್ರಮಣಿಕೆಯಲ್ಲಿರುವ ತುಶಬ್ದಪ್ರಯೋಗವು ನಿರ್ದೇಶಿಸುವುದು. ಇದಲ್ಲದೆ ಈ ಸೂಕ್ತದಲ್ಲಿ ಪ್ರತಿಪಾದಿತವಾಗಿರುವ ವಿಷಯಗಳು ಅನೇಕಾರ್ಥಗಳುಳ್ಳದ್ದಾಗಿ ಸಂಶಯಕ್ಕೆ ಆಸ್ಪದವಾಗಿರುವುದು. ಎಂದರೆ, ಋಕ್ಕಿನ ಅರ್ಥವು ಅಥವಾ ಅಭಿಪ್ರಾಯವು ಹೀಗೆಯೇ ಸರಿ ಎಂದು ನಿಷ್ಕೃಷ್ಟವಾಗಿ ಹೇಳಲಾಗುವುದಿಲ್ಲ ಅನೇಕಾರ್ಥಗಳಿಗೆ ಅವಕಾಶವಿರುವುದರಿಂದ ಋಷಿಯ ಆಶಯವು ಯಾವುದು ಎಂಬುದನ್ನು ಹೇಳುವುದು ಸುಲಭಸಾಧ್ಯವಲ್ಲ. ಅಚಿಕಿತ್ವಾಞ್ಚಿಕಿತುಷಃ ಎಂಬ ಆರನೆಯ ಋಕ್ಕಿನ ಅರ್ಥವು ಸಂಶಯಾಸ್ಪದವಾಗಿದೆ. ಪೃಚ್ಛಾಮಿ ತ್ವಾ ಎಂಬ ಮೂವತ್ತನಾಲ್ಕನೆಯ ಋಕ್ಕು ಪ್ರಶ್ನರೂಪವಾಗಿದೆ. ಇಯಂ ವೇದಿಃ ಎಂಬ ಮೂವತ್ತೈದನೆಯ ಋಕ್ಕು ಇದಕ್ಕೆ ಪ್ರತ್ಯುತ್ತರರೂಪವಾಗಿದೆ. ಯ ಈಂ ಚಕಾರ ಎಂಬ ಮೂವತ್ತೆರಡನೆಯ ಋಕ್ಕಿನಲ್ಲಿ ಜ್ಞಾನಪ್ರಶಂಸೆಯು ಪ್ರತಿಪಾದಿತವಾಗಿದೆ. ಅಪಶ್ಯಂ ಗೋಪಾಂ ಎಂಬ ಮೂವತ್ತೊಂದನೆಯ ಋಕ್ಕು ಬ್ರಹ್ಮಸಾಕ್ಷಾತ್ಕಾರರೂಪವನ್ನು ಪ್ರಶಂಸೆ

ಮಾಡುವುದಾಗಿದೆ. ನ ಕ್ಷರತೀತ್ಯಕ್ಷರಂ ಬ್ರಹ್ಮ-ನಾಶವಾಗುವುದಿಲ್ಲವಾದ್ದರಿಂದ ಬ್ರಹ್ಮವಸ್ತುವು ಅಕ್ಷರಶಬ್ದವಾಚ್ಯವೆಂಬ ತತ್ತ್ವಾರ್ಥವು ದ್ವಾಸುಪರ್ಣಾ ಎಂಬ ಇಪ್ಪತ್ತನೆಯ ಋಕ್ಕು ಮೊದಲಾದುವುಗಳಲ್ಲಿ ಪ್ರತಿಪಾದಿತವಾಗಿರುವುದು. ಈ ಸೂಕ್ತದ ಛಂದಸ್ಸಿನ ವಿಷಯದಲ್ಲಿ—ಪಂಚಪಾದಂ ಪಿತರಂ (೧೨ ನೆಯ ಋಕ್ಕು), ಸಾಕಂಜಾನಾಂ ಸಪ್ತಥಂ (೧೫ ನೆಯ ಋಕ್ಕು), ಯದ್ಗಾಯತ್ರೇ ಅಧಿ (೨೩ ನೆಯ ಋಕ್ಕು), ಅಯಂ ಸ ಶಿಂಕ್ತೇ (೨೯ನೆಯ ಋಕ್ಕು), ಸಪ್ತಾರ್ಧಗರ್ಭಾ (೩೬ ನೆಯ ಋಕ್ಕು), ಗೌರೀರ್ಮಿಮಾಯ (೪೧ ನೆಯ ಋಕ್ಕು) ಎಂಬ ಆರು ಋಕ್ಕುಗಳೂ ಜಗತೀಛಂದಸ್ಕವು, ಸಮಾನಮೇತತ್ (೫೧ನೇ ಋಕ್ಕು) ಎಂಬ ಋಕ್ಕು ಅನುಷ್ಟುಪ್‌ಛಂದಸ್ಕವು. ತಸ್ಯಾಃ ಸಮುದ್ರಾಃ (೪೨ನೆಯ ಋಕ್ಕು) ಎಂಬ ಋಕ್ಕು ಪ್ರಸ್ತಾರಪಂಕ್ತಿ ಎಂಬ ಛಂದಸ್ಸಿನದು, ಈ ಪ್ರಸ್ತಾರಪಂಕ್ತಿ ಎಂಬ ಛಂದಸ್ಸಿನ ಲಕ್ಷಣವು ಛಂದೋಗ್ರಂಥದಲ್ಲಿ ಪ್ರಸ್ತಾರಪಂಕ್ತಿಃ ಪುರತಃ (ಪಿ. ೩-೪೦) ಎಂದು ಹೇಳಲ್ಪಟ್ಟಿರುವುದು. ಎಂದರೆ ಪೂರ್ವಾರ್ಧದಲ್ಲಿ ಜಗತೀಛಂದಸ್ಸಿನಂತೆ ಹನ್ನೆರಡು ಅಕ್ಷರಗಳುಳ್ಳ ಎರಡುಪಾದಗಳೂ ಉತ್ತರಾರ್ಧದಲ್ಲಿ ಗಾಯತ್ರೀ ಛಂದಸ್ಸಿನಂತೆ ಎಂಟು ಅಕ್ಷರಗಳುಳ್ಳ ಎರಡುಪಾದಗಳೂ ಇರತಕ್ಕ ಋಕ್ಕಿಗೆ ಪ್ರಸ್ತಾರಪಂಕ್ತಿಯೆಂದು ಹೆಸರು. ಅನುಕ್ರಮಣಿಕೆಯಲ್ಲಿಯೂ— ಆದ್ಯೌ ಚೇತ್ಪ್ರಸ್ತಾರಪಂಕ್ತಿಃ (ಅನು ೮-೬) ಎಂದು ಹೇಳಿರುವುದು. ಉಳಿದ ಋಕ್ಕುಗಳೆಲ್ಲಾ ತ್ರಿಷ್ಟುಪ್‌ಛಂದಸ್ಸಿನವು. ಈ ಸೂಕ್ತದ ದೇವತೆಗಳ ವಿಷಯದಲ್ಲಿ—ಸೂಕ್ತದ ಪ್ರಾರಂಭದಿಂದ ಗೌರೀರ್ಮಿಮಾಯ (೪೧ನೆಯ ಋಕ್ಕು) ಎಂಬ ಋಕ್ಕಿನವರೆಗೆ ವಿಶ್ವೇದೇವತೆಗಳು ದೇವತೆಯು. ತಸ್ಯಾಃ ಸಮುದ್ರಾಃ (೪೨ನೆಯ ಋಕ್ಕು) ಎಂಬ ಋಕ್ಕಿನ ಪೂರ್ವಾರ್ಧಕ್ಕೆ ವಾಕ್ ದೇವತೆಯು. ಉತ್ತರಾರ್ಧಕ್ಕೆ ಆಪಃ ದೇವತೆಯು. ಶಕಮಯಂ (೪೩ನೆಯ ಋಕ್ಕು) ಎಂಬ ಋಕ್ಕಿನ ಪೂರ್ವಾರ್ಧಕ್ಕೆ ಶಕಧೂಮವು ದೇವತೆಯು ಉಕ್ಷಾಣಂ ಪೃಶ್ನಿಂ ಎಂಬ ಆ ಋಕ್ಕಿನ ಉತ್ತರಾರ್ಧಕ್ಕೆ ಸೋಮವು ದೇವತೆಯು. ತ್ರಯಃ ಕೇಶಿನಃ (೪೪ನೆಯ ಋಕ್ಕು) ಎಂಬ ಋಕ್ಕಿಗೆ ಅಗ್ನಿ, ಸೂರ್ಯ, ವಾಯುಗಳು ದೇವತೆಯು. ಚತ್ವಾರಿ ವಾಕ್ ಎಂಬ (೪೫ನೆಯ) ಋಕ್ಕು ವಾಗ್ದೇವತಾಕವು. ಇಂದ್ರಂ ಮಿತ್ರಂ ವರುಣಂ (೪೬ನೆಯ ಋಕ್ಕು) ಮತ್ತು ಕೃಷ್ಣಂ ನಿಯಾನಂ (೪೭ನೆಯ ಋಕ್ಕು) ಎಂಬ ಈ ಎರಡು ಋಕ್ಕುಗಳೂ ಸೂರ್ಯದೇವತಾಕವು. ದ್ವಾದಶ ಪ್ರಧಯಃ (೪೮ನೆಯ ಋಕ್ಕು) ಎಂಬ ಋಕ್ಕಿಗೆ ಸಂವತ್ಸರಾತ್ಮಕವಾದ ಕಾಲವೇ ದೇವತೆಯು ಯಸ್ತೇ ಸ್ತನ (೪೯ನೆಯ ಋಕ್ಕು) ಎಂಬ ಋಕ್ಕಿಗೆ ಸರಸ್ವತಿಯೇ ದೇವತೆಯು. ಯಜ್ಞೇನ ಯಜ್ಞಂ (೫೦ನೆಯ ಋಕ್ಕು) ಎಂಬ ಋಕ್ಕಿಗೆ ಸಾಧ್ಯರು ದೇವತೆಯು- ಸಮಾನಮೇತತ್ (೫೧ನೆಯ ಋಕ್ಕು) ಎಂಬ ಋಕ್ಕಿಗೆ ಸೂರ್ಯ, ಅಥವಾ ಪರ್ಜನ್ಯ ಅಥವಾ ಅಗ್ನಿಯು ದೇವತೆಯು. ದಿವ್ಯಂ ಸುಪರ್ಣಂ (೫೨ನೆಯ ಋಕ್ಕು) ಎಂಬ ಋಕ್ಕಿಗೆ ಸರಸ್ವಾನ್ ಅಥವಾ ಸೂರ್ಯನು ದೇವತೆಯು- ಈ ಒಟ್ಟು ಸೂಕ್ತದ ವಿನಿಯೋಗವನ್ನು ಶೌನಕ ಮಹರ್ಷಿಗಳು ತಮ್ಮ ಋಗ್ವಿಧಾನವೆಂಬ ಗ್ರಂಥದಲ್ಲಿ—

ಸ್ತೇಯಂ ಕೃತ್ವಾ ದ್ವಿಜೋ ಮೋಹಾತ್ತ್ರಿರಾತ್ರೋಪೋಷಿತಃ ಶುಚಿಃ ।
ಸೂಕ್ತಂ ಜಪ್ತ್ವಾಸ್ಯವಾಮೀಯಂ ಕ್ಷಿಪ್ರಂ ಮುಚ್ಯೇತ ಕಿಲ್ಬಿಷಾತ್ ॥ ಇತಿ ॥

(ಋಗ್ವಿಧಾನ. ೧-೨೬)

ಎಂದು ಹೇಳಿರುವರು ಎಂದರೆ ದ್ವಿಜನಾದವನು ಅಜ್ಞಾನದಿಂದಾಗಲಿ, ಲೋಭದಿಂದಾಗಲಿ ಕಳ್ಳತನವನ್ನು ಮಾಡಿದರೆ ಆಗ ಅವನು ಮೂರುರಾತ್ರಿಗಳವರೆಗೆ (ಮೂರು ದಿವಸಗಳು) ಉಪವಾಸಮಾಡಿ ಶುಚಿಭೂರ್ತನಾಗಿ ಅಸ್ಯ ವಾಮಸ್ಯ ಎಂಬ ಈ ಸೂಕ್ತವನ್ನು ಜಪಮಾಡಿದರೆ ಪಾಪಪರಿಹಾರವಾಗುವುದು, ಎಂದು ಹೇಳಿದಾರೆ. ಮತ್ತು

ಮಹಾವ್ರತದಲ್ಲಿ ವೈಶ್ವದೇವಶಸ್ತ್ರಮಂತ್ರಪಠನಮಾಡುವಾಗ ವಿಶ್ವೇದೇವತೆಗಳ ಸಂಬಂಧವಾದ ನಿವಿದ್ಧಾನಮಂತ್ರಗಳನ್ನು ಎರಡು ಪ್ರತೀಕವನ್ನಾಗಿ (ಭಾಗ) ಪಠಿಸಬೇಕು. ಆಗ ಅಸ್ಯ ವಾಮಸ್ಯ ಎಂಬ ಈ ಸೂಕ್ತದ ಮೊದಲಿನ ನಲವತ್ತೊಂದು ಋಕ್ಕುಗಳನ್ನು ಪ್ರಥಮಪ್ರತೀಕದಲ್ಲಿ ಪಠಿಸಬೇಕೆಂದು ಐತರೇಯಾರಣ್ಯಕದ ಐದನೆಯ ಅರಣ್ಯಕದಲ್ಲಿ–ಅಸ್ಯ ವಾಮಸ್ಯ ಪಲಿತಸ್ಯ ಹೋತುರಿತಿ ಸಲಿಲಸ್ಯ ದೈರ್ಘತಮಸ ಏಕಚತ್ವಾರಿಂಶತಂ ಎಂಬ ಸೂತ್ರವಾಕ್ಯ ದಿಂದ ನಿರ್ದಿಷ್ಟವಾಗಿರುವುದು. (ಐ. ಆ. ೫-೩-೨).

---

॥ ಓಂ ॥

## ಸೂಕ್ತ—೧೬೪

॥ ಮಂಡಲ—೧ ॥ ಅನುವಾಕ—೨೨ ॥ ಸೂಕ್ತ—೧೬೪ ॥

॥ ಅಷ್ಟಕ-–೨ ॥ ಅಧ್ಯಾಯ—೩ ॥ ವರ್ಗ—೧೪, ೧೫, ೧೬, ೧೭, ೧೮, ೧೯, ೨೦, ೨೦, ೨೨, ೨೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫೨ ॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—೧-೪೧. ವಿಶ್ವೇದೇವಾಃ । ೪೨. ಪೂರ್ವಾರ್ಧಾ ವಾಕ್ । ೪೨. ಉತ್ತರಾರ್ಧಾ ಆಪಃ । ೪೩ ಪೂರ್ವಾರ್ಧಾ. ಶಕಧೂಮಃ । ೪೩ ಉತ್ತರಾರ್ಧಾ. ಸೋಮಃ । ೪೪. ಅಗ್ನಿಃ ಸೂರ್ಯೋ ವಾಯುಶ್ಚ । ೪೫. ವಾಕ್ । ೪೬, ೪೭. ಸೂರ್ಯಃ । ೪೮- ಸಂವತ್ಸರಸಂಸ್ಥಂ ಕಾಲಚಕ್ರವರ್ಣನಂ । ೪೯. ಸರಸ್ವತೀ । ೫೦. ಸಾಧ್ಯಾಃ । ೫೧. ಸೂರ್ಯಃ ಪರ್ಜನ್ಯಾಅಗ್ನಯೋ ವಾ । ೫೨. ಸರಸ್ವಾನ್ ಸೂರ್ಯೋ ವಾ ॥

॥ ಛಂದಃ—೧-೧೧, ೧೩, ೧೪, ೧೬-೨೨, ೨೪-೨೮, ೩೦-೩೫, ೩೭-೪೦, ೪೩-೫೦, ೫೨. ತ್ರಿಷ್ಟುಪ್ । ೧೨, ೧೫, ೨೩, ೨೯, ೩೬, ೪೧, ಜಗತೀ । ೪೨. ಪ್ರಸ್ತಾರಪಂಕ್ತಿಃ । ೫೧. ಅನುಷ್ಟುಪ್ ॥

। ಸಂಹಿತಾಪಾಠಃ ।

ಅಸ್ಯ ವಾಮಸ್ಯ ಪಲಿತಸ್ಯ ಹೋತುಸ್ತಸ್ಯ ಭ್ರಾತಾ ಮಧ್ಯಮೋ ಅಸ್ತ್ಯಶ್ನಃ ।
ತೃತೀಯೋ ಭ್ರಾತಾ ಘೃತಪೃಷ್ಠೋ ಅಸ್ಯಾತ್ರಾಪಶ್ಯಂ ವಿಶ್ಪತಿಂ ಸಪ್ತಪುತ್ರಂ ।
॥ ೧ ॥

ಪದಪಾಠಃ

ಅಸ್ಯ । ವಾಮಸ್ಯ । ಪಲಿತಸ್ಯ । ಹೋತುಃ । ತಸ್ಯ । ಭ್ರಾತಾ । ಮಧ್ಯಮಃ । ಅಸ್ತಿ । ಅಶ್ನಃ ।

ತೃತೀಯಃ । ಭ್ರಾತಾ । ಘೃತಽಪೃಷ್ಠಃ । ಅಸ್ಯ । ಅತ್ರ । ಅಪಶ್ಯಂ । ವಿಶ್ಪತಿಂ । ಸಪ್ತಽಪುತ್ರಂ ॥ ೧ ॥

॥ ಸಾಯಣಭಾಷ್ಯಂ ॥

ಅತ್ರ ದ್ವಿತೀಯಪಾದೇ ತಚ್ಛಬ್ದಶ್ರುತೇಃ ಪ್ರಥಮಪಾದೇ ಪ್ರತಿನಿಶೇಷಣಂ ಯೋಗ್ಯಕ್ರಿಯಾರ್ಥ-ಸಂಬದ್ಧೋ ಯಚ್ಛಬ್ದೋಽಧ್ಯಾಹಾರ್ಯಃ । ಯೋಽಯಂ ದಿವಿ ದ್ಯೋತತೇ ತಸ್ಯಾಸ್ಯ ವಾಮಸ್ಯ ವನನೀಯಸ್ಯ ಸಂಭಜನೀಯಸ್ಯಾರೋಗ್ಯಾರ್ಥಿಭಿಃ ಸರ್ವೈಃ ಸೇವನೀಯಸ್ಯ ಪಲಿತಸ್ಯ ಪಾಲಯಿತುಃ ಪ್ರಕಾಶವೃಷ್ಟ್ಯಾದಿಪ್ರದಾನೇನ ಪಾಲಕಸ್ಯ ತಥಾ ಯೋಽಯಂ ದಿವಿ ದ್ಯೋತತೇ ತಸ್ಯಾಸ್ಯ ಹೋತುರ್ಹ್ವಾ-ತವ್ಯಸ್ಯಾಹ್ವಾನಾರ್ಹಸ್ಯಾದಿತ್ಯಸ್ಯ ಮಧ್ಯಮೋ ಮಧ್ಯಮಸ್ಥಾನಃ । ಮಧ್ಯೇ ಭವೋ ವಾಯುರುಚ್ಯತೇ । ಆದಿತ್ಯಾಗ್ನೀ ಅಪೇಕ್ಷ್ಯಾಸ್ಯ ಮಧ್ಯಮತ್ವಂ । ಸ ಚಾಶ್ನಃ ಸರ್ವತ್ರ ವ್ಯಾಪ್ತಃ । ನ ಹಿ ವಾಯುರಹಿತಃ ಕಶ್ಚಿತ್ಪ್ರದೇಶೋಽಸ್ತಿ । ತಾದೃಶೋ ಭ್ರಾತಾಸ್ತಿ । ಭಾತೃಸ್ಥಾನೀಯೋ ಭವತಿ । ಯಥಾ ಲೋಕೇ ಭ್ರಾತಾ ಪಿತೃಧನಸ್ಯ ಭಾಗಂ ಹರತಿ ತದ್ವತ್ । ಮಧ್ಯಸ್ಥಾನಮಂತರಿಕ್ಷಲೋಕಂ ಹರತೀತಿ ವಾ । ವೃಷ್ಟ್ಯರ್ಥಂ ರಶ್ಮಿಭಿರಾಹೃತಾನಾಂ ಭೌಮಾನಾಂ ರಸಾನಾಂ ಹರಣಾದ್ವಾ ಭ್ರಾತೇತ್ಯುಚ್ಯತೇ । ಪಿತ್ರ್ಯೇಣ ಧನೇನ ಸ್ವಾರ್ಜಿತೇನ ವಾ ಭರ್ತವ್ಯೋ ಭವತೀತಿ ಭ್ರಾತಾ । ಮಧ್ಯಮೋ ವಾಯುರಪಿ ವೃಷ್ಟ್ಯರ್ಥಂ ರಸೈರ್ಭರ್ತ-ವ್ಯೋ ಭವತಿ । ಕಿಂಚ ಘೃತಪೃಷ್ಠಃ ಘೃತಮಾಹುತಿಲಕ್ಷಣಂ ಪೃಷ್ಠೇ ಯಸ್ಯ ತಾದೃಶೋ ಭ್ರಾತಾ ತಸ್ಯ ತೃತೀಯೋಽಸ್ತಿ । ಭವತಿ । ತ್ರಯಾಣಾಂ ಪೂರಣಸ್ತೃತೀಯಃ । ಉಕ್ತೋಭಯಾಪೇಕ್ಷಯಾ ತೃತೀಯತ್ವಂ । ಭ್ರಾತೃತ್ವಂ ಪ್ರತಿಪಾದಿತಪ್ರಕಾರೇಣಾತ್ರಾಪಿ ದ್ರಷ್ಟವ್ಯಂ । ರಾತ್ರೌ ಸವಿತುಸ್ತೇಜೋಭಾಗಸ್ಯ ಹರಣಾತ್ । ದಿವಾ ಸ್ವಕೀಯತೇಜಸೋ ಭಾಗಸ್ಯ ತದರ್ಥಮೇವ ಭಕ್ತವ್ಯತ್ವಾದ್ವಾ ಭ್ರಾತೃತ್ವಂ । ಅತ್ರೈಷು ಭಾತೃಷು ಮಧ್ಯೇ ಪುರೋದೇಶೇ ವಾ ವಿಶ್ಪತಿಂ ವಿಶಾಂ ಪ್ರಜಾನಾಂ ಪಾಲಯಿತಾರಂ ಸಪ್ತಪುತ್ರಂ ಸರ್ಪಣರಶ್ಮಿ-ಪುತ್ರೋಪೇತಂ । ಐತಿಹಾಸಿಕಪಕ್ಷೇಽದಿತಿಃ ಪುತ್ರಕಾಮೇತಿ ಪ್ರಸ್ತುತೇ ಮಿತ್ರವರುಣಾದಿಷ್ವದಿತಿಪುತ್ರೇಷ್ವ-ಸ್ಯಾದಿತ್ಯಸ್ಯ ಸಪ್ತಮಪುತ್ರತ್ವಂ । ಈದೃಶಂ ಮಹಾನುಭಾವಮಾದಿತ್ಯಮಪಶ್ಯಂ । ಅದ್ರಾಕ್ಷಂ । ಭಾವನಯಾ-ತ್ಮತ್ವೇನ ಸಾಕ್ಷಾತ್ಕರೋಮೀತ್ಯರ್ಥಃ । ತದ್ಯೋಽಹಂ ಸೋಽಸೌ ಯೋಽಸೌ ಸೋಽಹಮಿತಿ ಶ್ರುತಿಃ ॥ ಏವಂ ವಾ । ಅಸ್ಯ ವಾಮಸ್ಯ ವಿಶ್ವಸ್ಯೋದ್ಗರಿತುಃ । ಸ್ರಷ್ಟುರಿತ್ಯರ್ಥಃ । ಪಲಿತಸ್ಯ ಪಾಲಯಿತುಃ ಸ್ವಸೃಷ್ಟಜಗತ್ಪಾಲನಶೀಲಸ್ಯ ಹೋತುರಾದಾತುಃ । ಸ್ವಸ್ಮಿನ್ಸಂಹರ್ತುರಿತ್ಯರ್ಥಃ । ಪರಮೇಶ್ವರಸ್ಯ ಸೃಷ್ಟ್ಯಾ-ದಿಕರ್ತೃತ್ವಂ ಶ್ರುತಿಸ್ಮೃತಿಪುರಾಣಾದಿಷು ಪ್ರಸಿದ್ಧಂ । ತಸ್ಯ ತಾದೃಶಸ್ಯ ಪರಮೇಶ್ವರಸ್ಯ ಭ್ರಾತಾ ತದ್ಭಾಗ-ಹಾರೀ ತದಂಶಭೂತಃ ಸೂತ್ರಾತ್ಮಾ ಮಧ್ಯಮಃ ಸರ್ವತ್ರ ಮಧ್ಯೇ ವರ್ತಮಾನೋಽಸ್ತಿ । ಜಗದ್ಧಾರಕತ್ವೇನ ವರ್ತತೇ । ಸ ಚಾಶ್ನೋ ವ್ಯಾಪನಶೀಲಃ । ವಾಯುರ್ವೈ ಗೌತಮ ಸೂತ್ರೇಣಾಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ಸಂರಬ್ಧಾನಿ । ಬೃ. ಉ. ೩-೭-೨ । ಇತಿ ಶ್ರುತೇಃ । ವಕ್ಷ್ಯಮಾಣವಿರಾಡ-ಪೇಕ್ಷಯಾ ವಾ ಮಧ್ಯಮತ್ವಂ । ಕಿಂಚಾಸ್ಯ ಪರಮೇಶ್ವರಸ್ಯ ತೃತೀಯೋ ಘೃತಪೃಷ್ಠಃ ಘೃತನಿಮಿತ್ತಮುದಕ-

ನಾಮ । ತೇನ ತತ್ಕಾರ್ಯಂ ಶರೀರಮುಚ್ಯತೇ । ತದೇವ ಪೃಷ್ಠಂ ಸ್ಪರ್ಶಕಂ ವಾ ಯಸ್ಯ ಸ ತಾದೃಶಃ । ಪೃಷ್ಠಂ ಸ್ಪೃಶತೇರಿತಿ ನಿರುಕ್ತಂ । ೪-೩ । ಯದ್ವಾ । ಪ್ರದೀಪ್ತಪೃಷ್ಠಃ । ಪೃಷ್ಠಶಬ್ದಃ ಕೃತ್ಸ್ನಶರೀರೋಪಲಕ್ಷಕಃ । ಪ್ರಕಾಶಿತಶರೀರಾಭಿಮಾನೀತ್ಯರ್ಥಃ । ನ ತ್ವಯಂ ಸೂಕ್ಷ್ಮಶರೀರಾಭಿಮಾನಿಸೂತ್ರಾತ್ಮವತ್ಸ್ಪರ್ಶನಾವಿಷಯೋ ಭವತಿ । ಅತ್ರೈಷು ಮಧ್ಯೇ ವಿಶ್ಪತಿಂ ವಿಶಾಂ ಪ್ರಜಾನಾಂ ಪತಿಂ । ಉಪಲಕ್ಷಣಮೇತತ್ । ಸರ್ವಸ್ಯ ಪತಿಮಿತ್ಯರ್ಥಃ । ಸರ್ವಸ್ಯ ಪತಿಃ ಸರ್ವಸ್ಯೇಶಾನ ಇತಿ ಶ್ರುತೇಃ । ಸಪ್ತಪುತ್ರಂ ಸಪ್ತ ಲೋಕಾಃ ಪುತ್ರಾ ಯಸ್ಯ ತಾದೃಶಂ । ಸ್ವಮಾಯಯಾ ಸೃಷ್ಟಸರ್ವಲೋಕಮಿತ್ಯರ್ಥಃ । ಅಪಶ್ಯಂ । ಪಶ್ಯೇಯಂ । ಸಾಕ್ಷಾತ್ಕರೋಮೀತ್ಯರ್ಥಃ ॥ ಅಯಮರ್ಥಃ । ಸ್ವಾಧೀನಮಾಯಾಜಗತ್ಕಾರಣಭೂತಃ ಪರಮೇಶ್ವರಃ ಏಕಃ । ತತ ಉತ್ಪನ್ನೌ ಸ್ಥೂಲಸೂಕ್ಷ್ಮಶರೀರಾಭಿಮಾನಿನೌ ದ್ವೌ ವಿರಾಟ್ಸೂತ್ರಾತ್ಮಾನೌ । ತೇಷು ಮಧ್ಯೇ ದ್ವಯೋಃ ಸಾಕ್ಷಾತ್ಕಾರೇಣ ಮೋಕ್ಷಾಭಾವಾತ್ ಸೃಷ್ಟ್ಯಾದಿಕಾರಣಂ ಪರಮೇಶ್ವರಂ ಜ್ಞೇಯತ್ವೇನ ಪ್ರಸಿದ್ಧಂ ಶ್ರವಣಮನನಾದಿಸಾಧನೇನ ಸಾಕ್ಷಾತ್ಕರೋಮೀತ್ಯರ್ಥಃ ॥ ಏವಮುತ್ತರತ್ರಾಪ್ಯಧ್ಯಾತ್ಮಪರತಯಾ ಯೋಜಯಿತುಂ ಶಕ್ಯಂ । ತಥಾಪಿ ಸ್ವರಸತ್ವಾಭಾವಾದ್ಗ್ರಂಥವಿಸ್ತರಭಯಾಚ್ಚ ನ ಲಿಖ್ಯತೇ ॥ ಯತ್ರ ದ್ವಾ ಸುಪರ್ಣೇತ್ಯಾದೌ ಸ್ಫುಟಮಾಧ್ಯಾತ್ಮಿಕೋ ಹ್ಯರ್ಥಃ ಪ್ರತೀಯತೇ ತತ್ರ ತತ್ರ ಪ್ರತಿಪಾದಯಾಮಃ । ಅಯಂ ಮಂತ್ರೋ ಯಾಸ್ಕೇನ ವ್ಯಾಖ್ಯಾತಃ । ಅಸ್ಯ ವಾಮಸ್ಯ ವನನೀಯಸ್ಯ ಪಲಿತಸ್ಯ ಪಾಲಯಿತುರಿತ್ಯಾದಿನಾ । ನಿ. ೪-೨೬ । ತಚ್ಚ ವ್ಯಾಖ್ಯಾನಮತ್ರಾನುಸಂಧೇಯಂ ॥

### । ಪ್ರತಿಪದಾರ್ಥ ।

ವಾಮಸ್ಯ—(ಎಲ್ಲರಿಂದಲೂ) ಸೇವಿಸಲ್ಪಡುವವನೂ । ಪಲಿತಸ್ಯ—(ವಿಶ್ವದ) ಪಾಲಕನೂ । ಹೋತುಃ—ಆಹ್ವಾನಾರ್ಹನಾದವನೂ ಆದ । ಅಸ್ಯ—ಯಾವ ಈ ಆದಿತ್ಯನುಂಟೋ । ತಸ್ಯ—ಅವನಿಗೆ । ಮಧ್ಯಮಃ—ಮಧ್ಯಮಸ್ಥಾನೀಯನಾದವನೂ । ಅಶ್ನಃ—ಎಲ್ಲವನ್ನೂ ವ್ಯಾಪಿಸಿರುವವನೂ ಆದ ವಾಯುವು । ಭ್ರಾತಾ—ಭ್ರಾತೃಸ್ಥಾನದಲ್ಲಿ । ಅಸ್ತಿ—ಇದ್ದಾನೆ (ಮತ್ತು) । ಘೃತಪೃಷ್ಠಃ—ಆಹುತಿರೂಪವಾದ ಘೃತದಿಂದ ವ್ಯಾಪ್ತವಾದ ದೇಹವುಳ್ಳ । ತೃತೀಯಃ ಭ್ರಾತಾ—ಮೂರನೆಯ ಭ್ರಾತೃವೂ ಇದ್ದಾನೆ । ಅತ್ರ—ಇವರುಗಳ ನಡುವೆ । ವಿಶ್ಪತಿಂ—ಮಾನವರಿಗೆ ಒಡೆಯನಾದವನೂ । ಸಪ್ತಪುತ್ರಂ—ರಶ್ಮಿರೂಪವಾದ ಸಪ್ತಪುತ್ರರಿಂದೊಡಗೂಡಿದವನೂ ಆದ ಅಸ್ಯ—ಈ ಆದಿತ್ಯನನ್ನು । ಅಪಶ್ಯಂ—ನೋಡುತ್ತಿದ್ದೇನೆ.

### ಭಾವಾರ್ಥ

ಸಕಲರಿಂದಲೂ ಸೇವಿಸಲ್ಪಡುವವನೂ, ವಿಶ್ವದ ಪಾಲಕನೂ, ಆಹ್ವಾನಾರ್ಹನಾದವನೂ ಆದ ಯಾವ ಈ ಆದಿತ್ಯನುಂಟೋ ಅವನಿಗೆ ಮಧ್ಯಮಸ್ಥಾನೀಯನಾದವನೂ, ಸಕಲವನ್ನೂ ವ್ಯಾಪಿಸಿರುವವನೂ ಆದ ವಾಯುವು ಭ್ರಾತೃಸ್ಥಾನದಲ್ಲಿದ್ದಾನೆ ಮತ್ತು ಆಹುತಿರೂಪವಾದ ಘೃತದಿಂದ ವ್ಯಾಪ್ತವಾದ ದೇಹವುಳ್ಳ ಮೂರನೆಯ ಭ್ರಾತೃವೂ ಇದ್ದಾನೆ, ಇವರುಗಳ ನಡುವೆ ಮಾನವರಿಗೆ ಒಡೆಯನಾದವನೂ ರಶ್ಮಿರೂಪವಾದ ಸಪ್ತಪುತ್ರರಿಂದೊಡಗೂಡಿದವನೂ ಆದ ಈ ಆದಿತ್ಯನು ನನ್ನ ಎದುರಿಗೆ ಗೋಚರವಾಗಿದ್ದಾನೆ.

### English Translation

I have beheld the Lord of Men with seven sons; of which delightful and benevolent (deity), who is the object of our invocation, there is an all-pervading middle brother, and a third brother, well fed with (oblations of) ghee.

**ವಿಶೇಷವಿಷಯಗಳು**

ಸೂಕ್ತಂ ಯದಸ್ಯ ವಾಮೀಯಂ ವೈಶ್ವದೇವಂ ತದುಚ್ಯತೇ ।
ಪ್ರವಾದಾ ವಿವಿಧಾಸ್ತತ್ರ ದೇವಾನಾಂ ಚಾತ್ರ ಕೀರ್ತನಂ ॥
ಸೂಕ್ತೇಽಸ್ಯರ್ಚಿ ಪರೋಕ್ಷೋಕ್ತಾ ವಕ್ಷ್ಯಾಮಿ ಭ್ರಾತರಸ್ತ್ರಯಃ ।
ಅಗ್ನಿಸ್ತು ವಾಮಃ ಪಲಿತೋ ವಾಯುರ್ಭ್ರಾತಾ ತು ಮಧ್ಯಮಃ ।
ಘೃತಪೃಷ್ಠಸ್ತೃತೀಯೋಽತ್ರ ಸಪ್ತ ವೈ ರಶ್ಮಯಸ್ಸುತಾಃ ॥

(ಬೃಹದ್ದೇವತಾ. ೪-೩೧ ರಿಂದ ೩೩)

ಅಸ್ಯ ವಾಮಸ್ಯ ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವು ವಿಶ್ವೇದೇವರನ್ನುದ್ದೇಶಿಸಿದೆ. ಇದರಲ್ಲಿ ನಾನಾ ವಿಧವಾದ ತತ್ತ್ವಾರ್ಥಗಳೂ ಅಡಗಿವೆ. ದೇವತೆಗಳನ್ನು ಆಯಾ ಸಂದರ್ಭಕ್ಕನುಸಾರವಾಗಿ ಉದ್ದೇಶಿಸಿದೆ. ಪ್ರಕೃತವಾದ ಈ ಋಕ್ಕಿನಲ್ಲಿ (೧-೧೬೪-೧) ಮೂರುಭಾತೃಗಳು ಪ್ರಥಮಪುರುಷದಲ್ಲಿ ನಿರ್ದೇಶಿಸಲ್ಪಟ್ಟಿದ್ದಾರೆ. ಅವರಾರೆಂದರೆ, ಲೋಕೋಪಕಾರಕನಾದ ಅಗ್ನಿಯೂ, ವಾಯುವೂ, ಆದಿತ್ಯನೂ ಆಗಿದ್ದಾರೆ. ಮತ್ತು ಆದಿತ್ಯನ ಸಪ್ತರಶ್ಮಿಗಳೂ ಸ್ತುತಿಸಲ್ಪಟ್ಟಿವೆ.

ಈ ಋಕ್ಕಿಗೆ ಆದಿತ್ಯಪರವಾದ ಒಂದರ್ಥವನ್ನೂ ಪರಬ್ರಹ್ಮನಪರವಾದ ಇನ್ನೊಂದರ್ಥವನ್ನೂ ಮಾಡಿದೆ. ಇದಕ್ಕೆ ನಿರುಕ್ತಕಾರರ ನಿರ್ವಚನವು ಈರೀತಿಯಲ್ಲಿದೆ. ಅದು ಆದಿತ್ಯಪರವಾಗಿದೆ. (ನಿ. ೪-೨೬)

ತಸ್ಯ ಭ್ರಾತಾ ಮಧ್ಯಮೋ ಅಸ್ತ್ಯಶನಃ—ಸರ್ವವ್ಯಾಪಿಯಾದ ವಾಯುವು ಈ ಆದಿತ್ಯನಿಗೆ ಮಧ್ಯಸ್ಥಾನದ ಭ್ರಾತೃವು.

ಅಥಾತೋ ಮಧ್ಯಸ್ಥಾನಾ ದೇವತಾಃ । ತಾಸಾಂ ವಾಯುಃ ಪ್ರಥಮಾಗಾಮೀ ಭವತಿ ॥

(ನಿ. ೧೦-೧)

ಎಂದು ಮಧ್ಯಸ್ಥಾನದಲ್ಲಿರುವ ವಾಯುವು ಆದಿತ್ಯನಿಗೆ ಭ್ರಾತೃವೆಂದು ಹೇಳಿದೆ. ವಾಯುವಿಗೆ ಇಲ್ಲಿ ಅಶ್ನಃ- ಅಶನಃ ಎಂಬ ವಿಶೇಷಣವಿದೆ. ಎಲ್ಲಾ ಕಡೆಗಳಲ್ಲಿಯೂ ವ್ಯಾಪಿಸುವನೆಂದರ್ಥ. ಆದಿತ್ಯನಿಗೆ ವಾಮಸ್ಯ, ಪಲಿತಸ್ಯ ಎಂಬ ಎರಡು ವಿಶೇಷಣಗಳಿವೆ.

ವಾಮಸ್ಯ—ವನನೀಯಸ್ಯ—ಸರ್ವರಿಂದಲೂ ಅಪೇಕ್ಷಿತನಾಗಿ ಸೇವಿಸಲ್ಪಡುವನೆಂದೂ ; ಪಲಿತಸ್ಯ ಎಂಬುದಕ್ಕೆ ಪಾಲಯಿತುಃ । ವೃಷ್ಟ್ಯಾದಿಪ್ರದಾನೇನ ಪಾಲಕಸ್ಯ । ವೃಷ್ಟ್ಯಾದಿಗಳನ್ನು ಸುರಿಸುವುದರಿಂದ ಲೋಕ

ಪಾಲಕನು ಎಂದೂ ಅರ್ಥವಾಗುತ್ತದೆ. ಇಂತಹ ಆದಿತ್ಯನೊಂದಿಗೆ ವಾಯುವಿಗೆ ಭ್ರಾತೃತ್ವವು ಹೇಗೆ ಪ್ರಾಪ್ತವಾಯಿತೆಂದರೆ;

ಭ್ರಾತಾ—ಭರತೇರ್ಹರತಿಕರ್ಮಣೋ ಹರತೇ ಭಾಗಂ ಭರ್ತವ್ಯೋ ಭವತೀತಿ ವಾ। ಪಿತ್ರಾರ್ಜಿತವಾದ ಆಸ್ತಿಯಲ್ಲಿ ಭಾಗವನ್ನು ವಹಿಸುತ್ತಾನೆಂಬುದರಿಂದಾಗಲಿ ಅಥವಾ ಅದರಿಂದ ಪೋಷಿಸಲ್ಪಡುತ್ತಾನೆ ಎಂಬುದರಿಂದಾಗಲಿ ಈ ಹೆಸರೆಂದು ವಿವರಿಸಿದೆ. ಆದರೆ ಇಲ್ಲಿ ವಾಯುವು ಆದಿತ್ಯನಿಗೆ ಸಂಬಂಧಿಸಿದ ಸ್ವತ್ತಿನಲ್ಲಿ ಯಾವ ರೀತಿಯಲ್ಲಿ ಭಾಗವನ್ನು ವಹಿಸುತ್ತಾನೆಂಬುದನ್ನು ಸಾಯಣರು ಈರೀತಿ ವಿವರಿಸಿದ್ದಾರೆ.

ವೃಷ್ಟ್ಯರ್ಥಂ ರಶ್ಮಿಭಿರಾಹೃತಾನಾಂ ಭೌಮಾನಾಂ ರಸಾನಾಂ ಹರಣಾದ್ವಾ ಭ್ರಾತೇತ್ಯುಚ್ಯತೇ। ಪಿತ್ರ್ಯೇಣ ಧನೇನ ಸ್ವಾರ್ಜಿತೇನ ವಾ ಭರ್ತವ್ಯಃ ಭವತೀತಿ ಭ್ರಾತಾ। ಮಧ್ಯಮೋ ವಾಯುಃ ಅಪಿ ವೃಷ್ಟ್ಯರ್ಥಂ ರಸೈಃ ಭರ್ತ್ತವ್ಯಃ ಭವತಿ।

ವೃಷ್ಟ್ಯರ್ಥವಾಗಿ ರಶ್ಮಿಗಳಿಂದ ಹೀರಲ್ಪಟ್ಟ ರಸದ ಭಾಗವನ್ನು ತಾನೂ ಹರಿಸಿ ಅದರಲ್ಲಿ ಭಾಗವಹಿಸುವುದರಿಂದ ಸೂರ್ಯನ ಭ್ರಾತೃವಾಗಬಹುದು. ಅಥವಾ ವೃಷ್ಟ್ಯರ್ಥವಾಗಿ ರಸದಿಂದ ಮಧ್ಯಮಸ್ಥಾನದ ವಾಯುವು ಪೋಷಿಸಲ್ಪಡಬೇಕಾದುದರಿಂದಲೂ ಆ ಕೆಲಸವನ್ನು ಆದಿತ್ಯನೇ ಮಾಡಬೇಕಾಗಿರುವುದರಿಂದಲೂ ಸಹ ಆದಿತ್ಯನಿಗೆ ವಾಯುವು ಭ್ರಾತೃವಾಗುತ್ತಾನೆ.

ತೃತೀಯೋ ಭ್ರಾತಾ ಅಸ್ಯಾಯಮಗ್ನಿಃ — ಆದಿತ್ಯನಿಗೆ ಅಗ್ನಿಯು ತೃತೀಯಭ್ರಾತೃವು ಹೇಗೆ ಆಗುತ್ತಾನೆಂದರೆ,

ರಾತ್ರೌ ಸವಿತುಸ್ತೇಜೋಭಾಗಸ್ಯ ಹರಣಾತ್। ದಿವಾ ಸ್ವಕೀಯತೇಜೋಭಾಗಸ್ಯ ತದರ್ಥಮೇವ ಭರ್ತ್ತವ್ಯತ್ವಾತ್ ವಾ ಭ್ರಾತೃತ್ವಂ।

ರಾತ್ರಿಯಲ್ಲಿ ಅಗ್ನಿಯು ಆದಿತ್ಯನ ತೇಜಸ್ಸಿನ ಭಾಗವನ್ನು ವಹಿಸುವುದರಿಂದಲೂ, ಹಗಲಿನಲ್ಲಿ ತನ್ನ ತೇಜಸ್ಸನ್ನು ಸೂರ್ಯನಿಗೆ ಹಂಚಿಕೊಡುವುದರಿಂದಲೂ ಇಬ್ಬರೂ ಭ್ರಾತೃಗಳಾದರು.

ಘೃತಪೃಷ್ಠಃ—ಘೃತಂ ಆಹುತಿಲಕ್ಷಣಂ ಪೃಷ್ಠೇ ಯಸ್ಯ ತಾದೃಶಃ। ಆಹುತಿರೂಪವಾದ ಘೃತವನ್ನು ಬೆನ್ನಿನಲ್ಲಿ ಹೊತ್ತುಕೊಂಡಿರುವ ಎಂದರ್ಥ. ಅಗ್ನಿಗೆ ಈ ವಿಶೇಷಣವು ಬಹಳ ಸಾಮಾನ್ಯವಾಗಿ, ಅನೇಕ ಕಡೆಗಳಲ್ಲಿ ಹೇಳಿದೆ. ಆಜ್ಯಸ್ಪೃಷ್ಟಃ—ಆಜ್ಯದಿಂದ ಸ್ಪೃಷ್ಟನಾದವನು ಎಂದೂ ಅರ್ಥವಾಗಬಹುದು.

ಸಪ್ತಪುತ್ರಂ—ಸಪ್ತಮಪುತ್ರಂ ಸರ್ಪಣಪುತ್ರಮಿತಿ ವಾ ಸಪ್ತ ಸೃಪ್ತಾ ಸಂಖ್ಯಾ ಸಪ್ತಾದಿತ್ಯರಶ್ಮಯ ಇತಿ ವದಂತಿ। ಏಳನೆಯ ಪುತ್ರನೆಂದಾಗಲಿ, ಅಥವಾ ಸುತ್ತಲೂ ಪರಿಭ್ರಮಣವನ್ನು ಹೊಂದತಕ್ಕ ಪುತ್ರನೆಂದಾಗಲಿ ಅಥವಾ ಸಪ್ತಸಂಖ್ಯಾಕವಾದ ಆದಿತ್ಯರಶ್ಮಿಗಳೆಂದಾಗಲಿ ಅರ್ಥವಾಗುತ್ತದೆ. ಇಲ್ಲಿ ಸಪ್ತಮಪುತ್ರನೆಂಬುದಕ್ಕೆ ಸಾಯಣರು ಒಂದು ಐತಿಹಾಸಿಕವಾದ ಕಥೆಯನ್ನು ಉದಹರಿಸಿದ್ದಾರೆ.

ಅದಿತಿಃ ಪುತ್ರಕಾಮಾ। ಸಾಧ್ಯೇಭ್ಯೋ ದೇವೇಭ್ಯೋ ಬ್ರಹ್ಮೌದನಮಪಚತ್। ತಸ್ಯಾ ಉಚ್ಛೇ-ಷಣಮದದುಃ। ತತ್ಪ್ರಾಶ್ನಾತ್। ಸಾ ರೇತೋಽಧತ್ತ। ತಸ್ಯೈ ಧಾತಾ ಚಾರ್ಯಮಾಚಾ-

ಜಾಯೇತಾಂ । ಸಾ ದ್ವಿತೀಯೆಮುಪಚತ್ ॥ ತಸ್ಯಾ ಉಚ್ಛೇಷಣಮುದದುಃ । ತತ್ಪ್ರಾಶ್ನಾತ್ । ಸಾ ರೇತೋsಧತ್ತ । ತಸ್ಯೈ ಮಿತ್ರಶ್ಚ ವರುಣಶ್ಚಾಜಾಯೇತಾಂ । ಸಾ ತೃತೀಯೆಮುಪಚತ್ ತಸ್ಯಾ ಉಚ್ಛೇಷಣಮುದದುಃ । ತತ್ಪ್ರಾಶ್ನಾತ್ .... .... .... .... ಸಾ ರೇತೋsಧತ್ತ । ತಸ್ಯಾ ಇಂದ್ರಶ್ಚ ವಿವಸ್ವಾಗ್ಗ್ಂಶ್ಚಾ ಜಾಯೇತಾಂ ।

(ತೈ. ಬ್ರಾ. ೧-೧-೯-೧, ೨)

ಅದಿತಿಯು ಪುತ್ರನನ್ನು ಪಡೆಯಬೇಕೆಂಬ ಇಚ್ಛೆಯಿಂದ ಸಾಧ್ಯರನ್ನುದ್ದೇಶಿಸಿ ಬ್ರಹ್ಮೌದನವನ್ನು ಪಕ್ವಮಾಡಿದಳು. ಅವರು ತಿಂದು ಉಳಿದುದನ್ನು ಇವಳು ಉಪಭೋಗಿಸಿದನಂತರ ಇವಳು ಗರ್ಭವತಿಯಾಗಿ ಇವಳಿಂದ ಆರ್ಯಮನು ಉತ್ಪನ್ನನಾದನು. ಎರಡನೆಯ ಸಲವೂ ಹೀಗೆ ಮಾಡಲು ಮಿತ್ರಾವರುಣರು ಹುಟ್ಟಿದರು. ಮೂರನೆಯ ಸಲಕ್ಕೆ ಅಂಶ ಮತ್ತು ಭಗ ಇವರೂ, ಇನ್ನೊಂದು ಸಲಕ್ಕೆ ಇಂದ್ರನೂ ಆದಿತ್ಯನೂ ಉತ್ಪನ್ನರಾದರು. ಇವರಲ್ಲಿ ಆದಿತ್ಯನು ಸಪ್ತಮನು. ಆದುದರಿಂದ ನಿರುಕ್ತಕಾರರು ಹೇಳಿರುವ ಅರ್ಥಗಳಲ್ಲಿ ಇದೂ ಒಂದಾಗಿದೆ. ಅಥವಾ ಪ್ರವಾಹದಂತೆ ಸರಿಯತಕ್ಕ ರಶ್ಮಿಗಳೆಂದರ್ಥವಾಗಬಹುದು.

ಆಧ್ಯಾತ್ಮಪಕ್ಷೇ ;—

ವಾಮಸ್ಯ—ವಿಶ್ವಸ್ಯ ಉದ್ಗರಿತುಃ ಸ್ರಷ್ಟುಃ ಇತ್ಯರ್ಥಃ । ಬ್ರಹ್ಮಾಂಡರೂಪದಲ್ಲಿ ವಿಶ್ವವನ್ನೆಲ್ಲಾ ಪ್ರಕಾಶ ಪಡಿಸಿ ಸೃಷ್ಟಿಸಿದ ಎಂದರ್ಥ.

ಪಲಿತಸ್ಯ ಪಾಲಯಿತುಃ—ಸ್ವಸೃಷ್ಟಜಗತ್ಪಾಲನಶೀಲಸ್ಯ । ತಾನು ಸೃಷ್ಟಿಸಿದ ಜಗತ್ತನ್ನು ತಾನೇ ಪಾಲಿಸಲು ಸಮರ್ಥನಾದ ಮತ್ತು,

ಹೋತುಃ—ಆದಾತುಃ । ಸ್ವಸ್ಮಿನ್ ಸಂಹರ್ತುಃ । ವಾಮಸ್ಯ, ಪಲಿತಸ್ಯ, ಹೋತುಃ ಎಂಬ ಪದಗಳಿಗೆ ಸೃಷ್ಟಿ, ಸ್ಥಿತಿ (ಪಾಲನ) ಮತ್ತು ಪುನಃ ಪ್ರಳಯ ಎಂಬ ಮೂರು ಅರ್ಥಗಳನ್ನೂ ಮಾಡುತ್ತಾ, ಹೋತುಃ ಎಂಬ ಪದಕ್ಕೆ ಸ್ವಸ್ಮಿನ್ ಸಂಹರ್ತುಃ ತನ್ನಲ್ಲೇ ಎಲ್ಲವನ್ನೂ ಲಯಮಾಡಿಕೊಳ್ಳತಕ್ಕ ಎಂದರ್ಥಮಾಡಿದ್ದಾರೆ. ಇದಕ್ಕೂ ಶ್ರುತಿಯ ಆಧಾರವಿದೆ.

ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಂ ಸರ್ವಸ್ಯೈತಸ್ಯಾತ್ತಾ ಭವತಿ ಸರ್ವಮಸ್ಯಾನ್ನಂ ಭವತಿ ಯ ಏವಮೇತದದಿತೇರದಿತಿತ್ವಂ ವೇದ ॥

(ಬೃ. ಉ. ೧-೨-೫)

ಪ್ರಜಾಪತಿಯು ತಾನು ಸೃಷ್ಟಿಸಿದುದನ್ನೆಲ್ಲಾ ಪುನಃ ಅನ್ನರೂಪದಲ್ಲಿ ಭಕ್ಷಿಸತೊಡಗಿದನು. ಅದೇ ಅವನ ಅದಿತಿ (ಅನಂತ) ಸ್ವರೂಪವು. ವಿಶ್ವವೆಲ್ಲವೂ ಅವನ ಅನ್ನವಾಗಿದೆ. ಇತ್ಯಾದಿ ವಾಕ್ಯಗಳಲ್ಲಿ ವರ್ಣಿತವಾಗಿರುವಂತೆ ಲಯಕರ್ತನಾದ ಈಶ್ವರನೇ ವಿಶ್ವವನ್ನೆಲ್ಲಾ ಪುನಃ ತನ್ನಲ್ಲೇ ಲಯಮಾಡಿಕೊಳ್ಳುವುದರಿಂದ ಈ ಹೋತುಃ ಎಂಬ ವಿಶೇಷಣವಿದೆ.

ಎಂದು ಯಜ್ಞದಲ್ಲಿ ಅನೇಕ ಬಗೆಗಳನ್ನು ಹೇಳಿದೆ. ಅದರಲ್ಲಿ ಜ್ಞಾನಯಜ್ಞವೂ ಒಂದಾಗಿದೆ. ಜ್ಞಾನಂ ಶಾಸ್ತ್ರಾರ್ಥ-ಪರಿಜ್ಞಾನಂ ಯಜ್ಞಃ ಯೇಷಾಂ ತೇ ಜ್ಞಾನಯಜ್ಞಾಃ (ಶಾಂಕರಭಾಷ್ಯ) ಶಾಸ್ತ್ರಾರ್ಥಪರಿಜ್ಞಾನರೂಪವಾದ ಯಜ್ಞವುಳ್ಳವರು ಯಾರೋ ಅವರನ್ನು ಜ್ಞಾನಯಜ್ಞರೆಂದು ಕರೆದಿದೆ.

ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ॥
ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮ ಸನಾತನಂ ।
ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥

(ಭಗವದ್ಗೀತಾ. ೪. ೩೦-೩೧)

ಎಲ್ಲಾವಿಧವಾದ ಯಜ್ಞಗಳನ್ನೂ ತಿಳಿದವರು ಯಜ್ಞದಿಂದಲೇ ಅವರ ದೋಷಗಳನ್ನು ನಾಶಮಾಡಿಕೊಂಡು ಶಾಶ್ವತವಾದ ಬ್ರಹ್ಮಲೋಕವನ್ನು ಪಡೆಯುತ್ತಾರೆ. ಯಜ್ಞರಹಿತನಾದವನಿಗೆ ಇಹದಲ್ಲಿಯೇ ಉತ್ತಮವಾದ ಸ್ಥಾನವಿರುವುದಿಲ್ಲ. ಇನ್ನು ಬ್ರಹ್ಮಲೋಕದ ಪ್ರಾಪ್ತಿಯೆಲ್ಲಿ ಎಂದು ಯಜ್ಞದ ಮಹತ್ತ್ವವನ್ನು ಸ್ತುತಿಸಿದೆ.

ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।
ಕರ್ಮಜಾನ್ವಿದ್ಧಿ ತಾನ್ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥

(ಭಗವದ್ಗೀತಾ. ೪-೩೨)

ಈ ರೀತಿ ನಾನಾವಿಧವಾದ ಯಜ್ಞಗಳು ಬ್ರಹ್ಮನ ಮುಖದಿಂದ ವಿಸ್ತೃತವಾಗಿವೆ. [ಇಲ್ಲಿ ಬ್ರಹ್ಮಶಬ್ದಕ್ಕೆ ಪರಬ್ರಹ್ಮನೆಂದಾದರೂ ಅರ್ಥವಾಗಬಹುದು ; ಅಥವಾ ಪರಬ್ರಹ್ಮತತ್ತ್ವವನ್ನು ಪ್ರತಿಪಾದಿಸುವ ವೇದವೆಂದಾದರೂ ಅರ್ಥವಾಗಬಹುದು.] ಇವುಗಳೆಲ್ಲವೂ ಕಾಯಿಕ, ವಾಚಿಕ, ಮಾನಸಿಕಕರ್ಮೋದ್ಭವಗಳೆಂದು ತಿಳಿಯಬೇಕು. ಇವುಗಳ ಸ್ವರೂಪವನ್ನು ಅರಿತವನಿಗೆ ಮೋಕ್ಷವು ಲಭಿಸುತ್ತದೆ. ಈ ವಿಧವಾಗಿ ಯಜ್ಞದಲ್ಲಿ ಪ್ರಭೇದಗಳಿದ್ದರೂ ಸಹ,

ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ ।
ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥

(೪. ೩೩)

ದ್ರವ್ಯಮಯವಾದ ಯಜ್ಞಕ್ಕಿಂತಲೂ ಜ್ಞಾನಯಜ್ಞವು ಅತ್ಯುತ್ತಮವಾದದ್ದು. ಸಕಲ ಕರ್ಮಗಳೂ ಜ್ಞಾನದಲ್ಲಿಯೇ ಪರಿಸಮಾಪ್ತಿಯನ್ನು ಪಡೆಯುತ್ತವೆ ಇತ್ಯಾದಿಯಾಗಿ ಜ್ಞಾನಯಜ್ಞದ ವೈಶಿಷ್ಟ್ಯವನ್ನು ನಾನಾಕಡೆಗಳಲ್ಲಿ ಪ್ರಶಂಸಿಸಿದೆ. ಇಂತಹ ಜ್ಞಾನಾತ್ಮಕವಾದ ಯಜ್ಞದಿಂದ ಯಜ್ಞಂ ಅಯಜಂತ ಎನ್ನುವಾಗ, ಎರಡನೆಯ ಯಜ್ಞಶಬ್ದಕ್ಕೆ ವಿಷ್ಣುವೆಂದಾಗಲಿ ಅಥವಾ ಪ್ರಜಾಪತಿಯೆಂದಾಗಲಿ ಅರ್ಥವನ್ನು ಹೇಳಬಹುದು. "ಯಜ್ಞೋ ವಿಷ್ಣುಃ ಪ್ರಜಾಪತಿಃ" (ಮೈತ್ರ್ಯುಪನಿಷತ್. ೬. ೧೬) ಇತ್ಯಾದಿವಾಕ್ಯಗಳಿಂದ ಯಜ್ಞಕ್ಕೂ ವಿಷ್ಣುವಿಗೂ, ಮತ್ತು ಯಜ್ಞಕ್ಕೂ ಪ್ರಜಾಪತಿಗೂ ತಾದಾತ್ಮ್ಯವನ್ನೇ ಹೇಳಿದೆ. ಆದುದರಿಂದ ಜ್ಞಾನಯಜ್ಞದಿಂದ ವಿಷ್ಣುವನ್ನು ಪೂಜಿಸಿ ಸಾಧ್ಯರು ವಿಷ್ಣುಲೋಕವನ್ನು ಹೊಂದಿದರು ಎಂದು ತಾತ್ಪರ್ಯ. ಪವಿತ್ರವಾದ ಈ ನಾಕದಲ್ಲಿ ಹಿಂದೆ ಯಜ್ಞದಿಂದ ಯಜ್ಞವನ್ನು ಆರಾಧಿಸಿದ ಸಾಧ್ಯಾದಿಗಳೆಲ್ಲರೂ ತಮ್ಮ ತಮ್ಮ ಸ್ಥಾನಗಳನ್ನು ಪಡೆದಿರುತ್ತಾರೆಂದರ್ಥ.

ಸಾಧ್ಯಾಃ— ಈ ಪದವನ್ನು ರಶ್ಮಿನಾಮಗಳಲ್ಲಿ ಪಠಿಸಿದೆ. (ನಿ ೨-೧೫) ಮತ್ತು ಇದೇ ಋಕ್ಕನ್ನು ವಿವರಿಸು ವಾಗ ಮುಂದೆ ದ್ಯುಸ್ಥಾನೋ ದೇವಗಣ ಇತಿ ನೈರುಕ್ತಾಃ। ಪೂರ್ವಂ ದೇವಯುಗಮಿತ್ಯಾಖ್ಯಾನಂ। ನಿರುಕ್ತಕಾರರ ಮತವಂತೆ ದ್ಯುಲೋಕದ ದೇವತೆಗಳೆಂದರ್ಥ. ಅಥವಾ ದೇವತೆಗಳಲ್ಲಿ ಪ್ರಥಮರು ಎಂಬುದು ಸಾಂಪ್ರ ದಾಯಿಕವಾದ ಮತವೆಂದು ಯಾಸ್ಕರು ತಿಳಿಸಿದ್ದಾರೆ. (ನಿ. ೧೨-೪೧) ಸಾಧ್ಯರ ಸ್ವರೂಪವನ್ನು ಒಂದೊಂದು ಕಡೆ ಒಂದೊಂದು ವಿಧವಾಗಿ ತಿಳಿಸಿದೆ. ಉದಾಹರಣೆಗೆ, ಐತರೇಯಬ್ರಾಹ್ಮಣದಲ್ಲಿ ಇದೇ ಭಾಗವನ್ನು ವಿವರಿಸುತ್ತಾ ;

ಛಂದಾಂಸಿ ವೈ ಸಾಧ್ಯಾ ದೇವಾಸ್ತೇಽಗ್ರೇಽಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಕಮಾಯನ್ ॥ ಆದಿತ್ಯಾಶ್ಚೈವೇಹಾಸನ್ನಂಗಿರಸಶ್ಚ ತೇಽಗ್ರೇಽಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಕ-ಮಾಯನ್ ।

(ಐ. ಬ್ರಾ. ೧-೧೬)

ಛಂದಸ್ಸುಗಳೇ ಸಾಧ್ಯರು ಅವರು ಪೂರ್ವದಲ್ಲಿ ಅಗ್ನಿಯಿಂದ (ಅಗ್ನಿಮಥನದಿಂದ) ಅಗ್ನಿಯನ್ನು ಪೂಜಿಸಿದರು. ಅದರ ಫಲವಾಗಿ ಸ್ವರ್ಗಲೋಕವನ್ನು ಪಡೆದರು. ಹಾಗೆಯೇ ಆದಿತ್ಯರೂ ಅಂಗಿರಸ್ಸುಗಳೂ ಸಹ ಅಗ್ನಿಯಿಂದ ಅಗ್ನಿ ಪೂಜೆಯನ್ನು ನೆರವೇರಿಸಿ ಸ್ವರ್ಗಲೋಕವನ್ನು ಪಡೆದರು, ಎಂದಿದೆ. ಇದನ್ನೇ, ಆದಿತ್ಯಾ ಅಂಗಿರಸಶ್ಚ ಸಾಧ್ಯಾ ದೇವಾ ಉಚ್ಯಂತೇ। ಆದಿತ್ಯರೂ, ಅಂಗಿರಸ್ಸುಗಳೂ ಸಾಧ್ಯದೇವತೆಗಳೆಂದು ಪ್ರಸಿದ್ಧರಾಗಿದ್ದಾರೆಂದು ಸಾಯಣರು ತಿಳಿಸಿದ್ದಾರೆ. ಅಂಗಿರಸ್ಸುಗಳು ಅಗ್ನಿಯನ್ನು ಹುಡುಕಿ ತಂದುದೂ, ಅಗ್ನಿಪೂಜೆಯನ್ನು ಮಾಡಿದುದೂ ಅನೇಕಕಡೆ ಗಳಲ್ಲಿ ವರ್ಣಿತವಾಗಿದೆ. ಋಕ್ಸಂಹಿತೆಯಲ್ಲಿಯೂ ಇತರಕಡೆಗಳಲ್ಲಿಯೂ ಈ ಪದಕ್ಕೆ ಅಂಕಿತನಾಮವಾಗಿಯೂ, ಒಂದು ಋಷಿಸಂತತಿಯ ನಾಮಧೇಯವಾಗಿಯೂ ಮತ್ತು ದೇವತೆಗಳ ಗುಂಪಿಗೆ ಸೇರಿದ ಹೆಸರಾಗಿಯೂ ಮೂರು ವಿಧವಾದ ಅನ್ವಯವಿದೆ. ಈ ಮೂರು ಸನ್ನಿವೇಶಗಳಲ್ಲಿಯೂ ಸಹ ಅಂಗಿರಸ್ಸುಗಳಿಗೂ ಯಜ್ಞರೂಪಿಯಾದ ಅಗ್ನಿಗೂ ಸಾಕ್ಷಾತ್ಸಂಬಂಧವನ್ನು ಹೇಳಿದೆ. ಮೊದಲನೆಯದಾಗಿ,

ಶೌನಕೋ ಹ ವೈ ಮಹಾಶಾಲೋಽಂಗಿರಸಂ ವಿಧಿವದುಪಸನ್ನಃ ಪಪ್ರಚ್ಛ। ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ ॥

(ಮುಂಡಕೋಪನಿಷತ್. ೧-೧-೩)

ಎಂಬಲ್ಲಿ ಅಂಗಿರಸ್ಸು ತತ್ತ್ವಜ್ಞಾನಿಯಾದ ಒಬ್ಬ ಋಷಿಯೆಂದೂ ಅವನು ಶೌನಕನಿಗೆ ಯಜ್ಞಾಗ್ನಿವಿದ್ಯೆಯನ್ನು ಉಪದೇಶಿಸಿದನೆಂದೂ ತಿಳಿಸಿದೆ. ಎರಡನೆಯದಾಗಿ,

ಇದು ಒಂದು ಋಷಿಸಂತತಿಯ ಹೆಸರು. ಆ ಸಂತತಿಗೆ ಮೂಲಪುರುಷನು ಯಜ್ಞಾಗ್ನಿಯು. ಆ ಯಜ್ಞಾಗ್ನಿ ಯಿಂದಲೇ ಅಂಗಿರಸ್ಸೆಂಬ ಋಷಿಯು ಉತ್ಪನ್ನನಾಗಿ ಆ ಸಂತತಿಯು ಪ್ರವರ್ಧಮಾನವಾಗಿ ಬೆಳೆಯಿತು. ಇದೇ ವಿಷಯವನ್ನು ಋಕ್ಸಂಹಿತೆಯಲ್ಲಿಯೂ ಸಹ ತಿಳಿಸಿದೆ.

ತ್ವಮಗ್ನೇ ಪ್ರಥಮೋ ಅಂಗಿರಾ ಋಷಿರ್ದೇವೋ ದೇವಾನಾಮಭವಃ ಶಿವಃ ಸಖಾ।

(ಋ. ಸಂ. ೧-೩೧-೧)

ಇತ್ಯಾದಿ ಋಕ್ಕುಗಳಲ್ಲಿ ಈ ವಿಷಯವನ್ನು ಸೂಚಿಸಿರುವಂತೆ ಐತರೇಯಬ್ರಾಹ್ಮಣದಲ್ಲೂ ಸಹ, ಯೇಽಂಗಿರಾ ಆಸಂಸ್ತೇಽಂಗಿರಸೋಽಭವನ್ (ಐ. ಬ್ರಾ. ೩ ३४) ಇತ್ಯಾದಿವಾಕ್ಯಗಳಲ್ಲಿ ತಿಳಿಸಿದೆ. ಹೀಗೆಯೇ ಅಂಗಿರಸ್ಸೆಂಬ ಋಷಿಗಳು ಗುಹೆಯಲ್ಲಿ ಅಡಗಿದ್ದ ಯಜ್ಞಾಗ್ನಿಯನ್ನು ಹುಡುಕಿ ಅವನನ್ನು ಸಂಪಾದಿಸಿಕೊಂಡರು ಎಂಬ ಕಥೆಯನ್ನು,

ತ್ವಾಮಗ್ನೇ ಅಂಗಿರಸೋ ಗುಹಾ ಹಿತಮನ್ವವಿಂದಞ್ಛಿಶ್ರಿಯಾಣಂ ವನೇವನೇ ।
ಸ ಜಾಯಸೇ ಮಥ್ಯಮಾನಃ ಸಹೋ ಮಹತ್ತ್ವಾಮಾಹುಃ ಸಹಸಸ್ಪುತ್ರಮಂಗಿರಃ ॥

(ಋ. ಸಂ. ೫-೧೧-೬)

ಇತ್ಯಾದಿಋಕ್ಸಂಹಿತಾವಾಕ್ಯಗಳಲ್ಲೂ ಮತ್ತು

ಸಮಿದ್ಭಿರ್ಹ್ಯೇತಮಂಗಿರಸ ಐಂಧತ ।

(ಶ. ಬ್ರಾ. ೧-४-೧-೨೫)

ಇತ್ಯಾದಿ ಬ್ರಾಹ್ಮಣವಾಕ್ಯಗಳಲ್ಲೂ ವಿವರಿಸಿದೆ. ಯಜ್ಞಾಗ್ನಿಯನ್ನು ಪಡೆದು, ಆ ಯಜ್ಞಾಗ್ನಿಯನ್ನು ಅಗ್ನಿಯಿಂದಲೇ ಪೂಜಿಸಿದ ಅಂಗಿರಸ್ಸುಗಳನ್ನು ಕೃತಜ್ಞತೆಯಿಂದಲೂ, ಭಕ್ತಿಯಿಂದಲೂ,

ಅಂಗಿರಸೋ ನಃ ಪಿತರೋ ನವಗ್ವಾ ಅಥರ್ವಾಣೋ ಭೃಗವಃ ಸೋಮ್ಯಾಸಃ ।
ತೇಷಾಂ ವಯಂ ಸುಮತೌ ಯಜ್ಞಿಯಾನಾಮಪಿ ಭದ್ರೇ ಸೌಮನಸೇ ಸ್ಯಾಮ ॥

(ಋ ಸಂ. ೧೦-೧೪-೬)

ಎಂದು ಪ್ರಶಂಸಿಸಿದೆ. ಆ ಅಂಗಿರಸ್ಸುಗಳನ್ನೇ ಸಾಧ್ಯರೆಂದು ಪ್ರಕೃತವಾದ ಋಕ್ಕಿನಲ್ಲಿ ನಿರ್ದೇಶಿಸಿದೆಯೆಂದು ಒಂದು ಮತ. ಅದನ್ನು ಐತರೇಯಬ್ರಾಹ್ಮಣದ ವಿವರಣೆಯಿಂದಲೂ, ಸಾಯಣಭಾಷ್ಯದ ವಿವರಣೆಯಿಂದಲೂ ತಿಳಿಯಬಹುದು. ಇದಲ್ಲದೆ ಸಾಧ್ಯರೆಂಬುವರು ದೇವತಾವಿಶೇಷಗಳಲ್ಲಿ ಸೇರಿದವರೆಂದೂ, ಯಜ್ಞಾದಿಗಳಿಗೆ ಮಾರ್ಗದರ್ಶಕರೆಂದೂ, ಯಜ್ಞಾದಿಕರ್ಮಾಚರಣೆಯಿಂದ ಉತ್ತಮವಾದ ಲೋಕವನ್ನು ಪಡೆದರೆಂದೂ ಅವರನ್ನು ಬಹಳವಾಗಿ ಪ್ರಶಂಸಿಸಿದೆ.

ಅಥ ಯತ್ಪಂಚಮಮಮೃತಂ ತತ್ಸಾಧ್ಯಾ ಉಪಜೀವಂತಿ ಬ್ರಹ್ಮಣಾ ಮುಖೇನ ನ ವೈ ದೇವಾ
ಅಶ್ನಂತಿ ನ ಪಿಬಂತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯಂತಿ ॥

(ಛಾ. ಉ ३-೧೦-೧)

ಬ್ರಹ್ಮಮುಖದ ಸಹಾಯದಿಂದ ಸಾಧ್ಯರು ಐದನೆಯ ಅಮೃತವನ್ನು ಸೇವಿಸುತ್ತಾರೆ. [ಐದನೆಯ ಅಮೃತವೆಂದರೆ ಉಪನಿಷತ್ತೆಂದರ್ಥ. ಬ್ರಹ್ಮಸಾಕ್ಷಾತ್ಕಾರವನ್ನು ಪಡೆದು ಆನಂದವನ್ನನುಭವಿಸುತ್ತಾರೆಂದು ತಾತ್ಪರ್ಯ.] ಸೇವಿಸುವುದೆಂದರೆ ಭುಜಿಸುವುದೆಂದಾಗಲಿ, ಪಾನಮಾಡುವುದೆಂದಾಗಲಿ ಅರ್ಥವಲ್ಲ. ದೇವತೆಗಳಾದ ಸಾಧ್ಯರು ಭುಜಿಸುವುದೂ ಇಲ್ಲ, ಪಾನಮಾಡುವುದೂ ಇಲ್ಲ ಉಪನಿಷದ್ರೂಪವಾದ ಅಮೃತವನ್ನು ಕೇವಲ ವೀಕ್ಷಿಸುತ್ತಾ ಆನಂದವನ್ನನುಭವಿಸುವರೆಂದು ತಾತ್ಪರ್ಯ.

ತ ಏತದೇವ ರೂಪಮಭಿಸಂವಿಶಂತ್ಯೇತಸ್ಮಾದ್ರೂಪಾದುದ್ಯಂತಿ । ಸ ಯ ಏತದೇವಮಮೃತಂ
ವೇದ ಸಾಧ್ಯಾನಾಮೇವೈಕೋ ಭೂತ್ವಾ ಬ್ರಹ್ಮಣೈವ ಮುಖೇನೈತದೇವಾಮೃತಂ ದೃಷ್ಟ್ವಾ

ತೃಪ್ಯತಿ ಸ ಏತದೇವ ರೂಪಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ ||

(ಛಾ. ಉ. ೩-೧೦-೨, ೩)

ಈ ಸಾಧ್ಯರು ಆದಿತ್ಯಾಂತರ್ಗತವಾದ ರೂಪವನ್ನು ಪಡೆಯುತ್ತಾರೆ. ಪುನಃ ಅದೇ ರೂಪದಿಂದ ತಮ್ಮ ಅಸ್ತಿತ್ವವನ್ನು ಪಡೆಯುತ್ತಾರೆ. ಈ ತತ್ತ್ವವನ್ನು ತಿಳಿದ ಜ್ಞಾನಿಯೂ ಸಹ ತಾನೂ ಸಾಧ್ಯರಲ್ಲೊಬ್ಬನಾಗುತ್ತಾನೆ. ಉಪನಿಷದ್ರೂಪವಾದ ಅಮೃತವನ್ನು ಸೇವಿಸುತ್ತಾ ಆತ್ಮತೃಪ್ತಿಯನ್ನು ಪಡೆಯುತ್ತಾನೆ. ಅವನೂ ಸಹ ಆದಿತ್ಯನ ಮಧ್ಯವರ್ತಿಯಾವ ರೂಪವನ್ನೇ ಪಡೆಯುತ್ತಾನೆ.

ಸ ಯಾವದಾದಿತ್ಯ ಉತ್ತರತ ಉದೇತಾ ದಕ್ಷಿಣತೋಽಸ್ತಮೇತಾ ದ್ವಿಸ್ತಾವದೂರ್ಧ್ವ ಉದೇತಾ-ರ್ವಾಗಸ್ತಮೇತಾ ಸಾಧ್ಯಾನಾಮೇವ ತಾವದಾಧಿಪತ್ಯಂ ಸ್ವಾರಾಜ್ಯಂ ಪರ್ಯೇತಾ ||

(ಛಾ. ಉ. ೩-೧೦-೪)

ಸಾಧ್ಯರೂಪವನ್ನು ಹೊಂದಿದ ಈ ಯಜ್ಞಕರ್ತನೂ, ಯಜ್ಞತತ್ತ್ವವನ್ನು ತಿಳಿದ ಜ್ಞಾನಿಯೂ ಸಾಧ್ಯರು ಅನುಭವಿಸುವ ಸ್ವಾರಾಜ್ಯವನ್ನು ಪಡೆದು ಆದಿತ್ಯನ ದಕ್ಷಿಣೋತ್ತರಮಾರ್ಗವಾದುದೂ, ಊರ್ಧ್ವಾರ್ವಾಗ್ರೂಪವಾದುದೂ ಆದ ಸಂಚಾರವು ಇರುವ ವರೆಗೆ ಅದನ್ನು ಅನುಭವಿಸುತ್ತಿರುವನು ಎಂದು ಯಜ್ಞಕ್ರಿಯೆಯ ಪ್ರಾಶಸ್ತ್ಯವನ್ನು ಸ್ತುತಿಸಿದೆ. ಪ್ರಕೃತವಾದ ಋಕ್ಕನ್ನೇ ಶತಪಥಬ್ರಾಹ್ಮಣದಲ್ಲಿ ಉದಹರಿಸಿ ಈರೀತಿ ವಿವರಿಸಿದೆ.

ಯಾನ್ಸ್ಯೈ ತಾನ್ತ್ಸಪ್ತಪುರುಷಾನ್ | ಏಕಂ ಪುರುಷಮಕುರ್ವನ್ತ್ಸ ಪ್ರಜಾಪತಿರಭವತ್ಸ ಪ್ರಜಾ ಅಸೃಜತ ಸ ಪ್ರಜಾಃ ಸೃಷ್ಟ್ವೋರ್ಧ್ವ ಉದಕ್ರಾಮತ್ಸ ಏತಂ ಲೋಕಮಗಚ್ಛದ್ಯತ್ರೈಷ ಏತತ್ತ-ಪತಿ ನೋ ಹ ತರ್ಹ್ಯನ್ಯ ಏತಸ್ಮಾದತ್ರ ಯಜ್ಞಿಯ ಆಸ ತಂ ದೇವಾ ಯಜ್ಞೇನೈವ ಯಷ್ಟು-ಮಧ್ರಿಯಂತ |

(ಶ. ಬ್ರಾ. ೧೦-೨-೨-೧)

'ಸಪ್ತ ಪುರುಷಾನೇಕಂ ಪುರುಷಮಕುರ್ವನ್' ಸಪ್ತಪುರುಷರನ್ನೂ ಒಂದೇ ಪುರುಷನನ್ನಾಗಿ ಪರಿವರ್ತಿಸಿದರು ಎಂದು ಹಿಂದೆ ತಿಳಿಸಿದೆ. (ಶ. ಬ್ರಾ. ೬-೧-೧-೩) ಅದ್ವಿತೀಯನಾದ ಈ ಪುರುಷನೇ ಪ್ರಜಾಪತಿಯು. ಈ ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಿ ಊರ್ಧ್ವಮುಖವಾಗಿ ಆದಿತ್ಯಲೋಕಕ್ಕೆ ಹೋದನು. ಆಗ ಯಜ್ಞಕ್ಕೆ ಬೇರೆ ಪಶುಗಳಿಲ್ಲದಿದ್ದರಿಂದ ದೇವತೆಗಳು ಈ ಪ್ರಜಾಪತಿಯನ್ನೇ ಯಜ್ಞಪಶುವನ್ನಾಗಿ ಮಾಡಿದರು. ಆದುದರಿಂದಲೇ-

ತಸ್ಮಾದೇತದೃಷಿಣಾಭ್ಯನೂಕ್ತಂ | ಯಜ್ಞೇನ ಯಜ್ಞಮಯಜಂತ ದೇವಾ ಇತಿ ಯಜ್ಞೇನ ಹಿ ತಂ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ನಿತಿ ತೇ ಹಿ ಧರ್ಮಾಃ ಪ್ರಥಮೇಽಕ್ರಿಯಂತ ತೇ ಹ ನಾಕಂ ಮಹಿಮಾನಃ ಸಚಂತೇತಿ ಸ್ವರ್ಗೋ ವೈ ಲೋಕೋ ನಾಕೋ ದೇವಾ ಮಹಿಮಾನಸ್ತೇ ದೇವಾಃ ಲೋಕಗ್‌ಂಸಚಂತ ಯೇ ತಂ ಯಜ್ಞಮಯ ಜನ್ನಿತ್ಯೇತತ್ |

(ಶ. ಬ್ರಾ. ೧೦-೨-೨-೨)

ಯಜ್ಞದಿಂದ ಪ್ರಜಾಪತಿರೂಪಿಯಾದ ಯಜ್ಞವನ್ನರ್ಪಿಸಿದರು ; ಈ ನಿಯಮವೇ ಪ್ರಥಮತಃ ಸ್ಥಾಪಿತವಾದುದರಿಂದ 'ಇದನ್ನೇ ತಾನಿ ಧರ್ಮಾಣಿ ಪ್ರಥಮಾನ್ಯಾಸನ್' ಎಂದು ಋಷಿಗಳು ಹೇಳಿದ್ದಾರೆ. ಈ ನಿಯಮಗಳು ಅಂತರಿಕ್ಷಕ್ಕೆ

ವ್ಯಾಪ್ತವಾದವು. ಆದುದರಿಂದಲೇ ಈ ಯಜ್ಞದಿಂದ ಪ್ರಜಾಪತಿರೂಪವಾದ ಯಜ್ಞವನ್ನು ನೆರವೇರಿಸುವವರು ಸ್ವರ್ಗಕ್ಕೆ ಸೇರುವರು ಎಂದು ತಿಳಿಸಿದೆ. ಅದೇ ಪ್ರಕಾರವಾಗಿ ಯಜ್ಞಕರ್ತರಾದ ದೇವತೆಗಳೆಲ್ಲರೂ ಸ್ವರ್ಗವಾಸಿಗಳಾಗಿದ್ದಾರೆ.

ಯತ್ರ ಪೂರ್ವೇ ಸಾಧ್ಯಾಸ್ಸಂತಿ ದೇವಾಃ ಇತಿ। ಪ್ರಾಣಾ ವೈ ಸಾಧ್ಯಾ ದೇವಾಸ್ತ ಏತಮಗ್ರ ಏವಮಸಾಧಯನ್ನೇತದೇವ ಬುಭೂಷಂತಸ್ತ ಉ ಏವಾಸ್ಯೈತರ್ಹಿ ಸಾಧಯಂತಿ ಪಶ್ಚೇದ-ಮನ್ಯದಭವದ್ಯಜತ್ರಮಮರ್ತ್ಯಸ್ಯ ಭುವನಸ್ಯ ಭೂನೇತಿ ಪಶ್ಚಾ ಹ್ಯೈವೇದಮನ್ಯದ್ಯಜ್ಞಿಯ-ಮಾಸ ಯತ್ಕಿಂಚಾಮೃತಂ ॥

(ಶ. ಬ್ರಾ. ೧೦-೨-೨-೩)

ಸಾಧ್ಯರು ಪೂರ್ವದಿಂದಲೇ ಈ ಸ್ವರ್ಗನಿವಾಸಿಗಳಾಗಿದ್ದಾರೆ. ಸಪ್ತಪ್ರಾಣಗಳೇ ಈ ಸಾಧ್ಯರು. ಪ್ರಜಾಪತಿಯು ದೇಹರೂಪಿಗಳಾಗಲು ಪ್ರಾರಂಭದಲ್ಲಿ ಸಪ್ತಪ್ರಾಣಗಳೇ ಅವನನ್ನು ಸಾಧ್ಯನನ್ನಾಗಿ ಮಾಡಿದವು. ಆದುದರಿಂದಲೇ ಇದೇ ವಿಷಯವನ್ನು ಋಕ್ಸಂಹಿತಾವಾಕ್ಯದಲ್ಲಿಯೂ ಈ ರೀತಿ ವರ್ಣಿಸಿದೆ.

ಪಶ್ಚೇದಮನ್ಯದಭವದ್ಯಜತ್ರಮಮರ್ತ್ಯಸ್ಯ ಭುವನಸ್ಯ ಭೂನಾ।
ಸುಪರ್ಣೋ ಅಂಗ ಸವಿತುರ್ಗರುತ್ಮಾನ್ಪೂರ್ವೋ ಜಾತಃ ಸ ಉ ಅಸ್ಯಾನು ಧರ್ಮ ॥

(ಋ. ಸಂ. ೧೦ ೧೪೯-೩)

ಅನಂತರವೇ ಪೂಜ್ಯವಾದ ಈ ದೇವತೆಯು ಅಮರ್ತ್ಯವಾದ ಲೋಕದೊಡನೆ ಉತ್ಪನ್ನವಾಯಿತು. ಈ ಪರವಸ್ತುವನ್ನೇ ಸುಪರ್ಣನಾದ ಗರುತ್ಮಂತನೆಂದು ಕರೆಯುತ್ತಾರೆ. ಈ ಮೂಲವಸ್ತುವಿನ ಸಹಾಯದಿಂದಲೇ ಉಳಿದ ಅಮರ್ತ್ಯವಾದ ವಸ್ತುಗಳೆಲ್ಲವೂ ಪೂಜಾರ್ಹವಾದವು, ಎಂಬುದಾಗಿ ಸಾಧ್ಯಶಬ್ದಕ್ಕೂ, ಯಜ್ಞಶಬ್ದಕ್ಕೂ ಅರ್ಥವನ್ನು ಹೇಳಿ ಅವೆರಡರ ಸಂಬಂಧವನ್ನು ತಿಳಿಸಿದೆ. ಇದೇ ಮಂತ್ರವು ಪುರುಷಸೂಕ್ತದಲ್ಲಿ ಪಠಿತವಾದಾಗ ಸಾಯಣರು ಕೊಂಚ ವ್ಯತ್ಯಸ್ತವಾದ ಅರ್ಥವನ್ನು ಹೇಳಿದ್ದಾರೆ. (ಋ. ಸಂ. ೧೦-೯೦-೧೬)

ದೇವಾಃ—ಪ್ರಜಾಪತಿಪ್ರಾಣರೂಪಾಃ ; ಯಜ್ಞೇನ ಯಥೋಕ್ತೇನ ಮಾನಸೇನ ಸಂಕಲ್ಪೇನ ; ಯಜ್ಞಂ—ಯಥೋಕ್ತಯಜ್ಞಸ್ವರೂಪಂ ಪ್ರಜಾಪತಿಂ ; ಅಯಜಂತ—ಪೂಜಿತವಂತಃ। ಪ್ರಜಾಪತಿಯ ಪ್ರಾಣರೂಪವಾದ ದೇವತೆಗಳನ್ನು ತಮ್ಮ ಮಾನಸಸಂಕಲ್ಪದಿಂದ ಪ್ರಜಾಪತಿರೂಪಿಯಾದ ಯಜ್ಞವನ್ನು ನೆರವೇರಿಸಿದರು. ಆ ಪೂಜಾವಿಶೇಷವು ಜಗತ್ತಿನ ಧಾರಣೆಗೆ ಸಹಾಯಕವಾಯಿತು.

ಯತ್ರ—ಯಸ್ಮಿನ್ವಿರಾಟ್ಪ್ರಾಪ್ತಿರೂಪೇ ನಾಕೇ ; ಪೂರ್ವೇ ಸಾಧ್ಯಾಃ ಪುರಾತನಾ ವಿರಾಡುಪಾಸ್ತಿ-ಸಾಧಕಾಃ ಸಂತಿ । ತೇ ವಿರಾಟ್ಪ್ರಾಪ್ತಿರೂಪಂ ಸ್ವರ್ಗಂ ಪ್ರಾಪ್ನುವಂತಿ। ವಿರಾಟ್ಪುರುಷನನ್ನು ಆರಾಧಿಸತಕ್ಕ ಈ ಪ್ರಜಾಪತಿಪ್ರಾಣರೂಪರಾದ ಸಾಧ್ಯರೆಲ್ಲರೂ, ವಿರಾಟ್ಪುರುಷನ ಪ್ರಾಪ್ತಿಗೆ ಯೋಗ್ಯವಾದ ಸ್ವರ್ಗವನ್ನು ಪಡೆಯುತ್ತಾರೆ ಎಂದು ಪುರುಷಸೂಕ್ತದಲ್ಲಿರುವ ಈ ಋಕ್ಕಿಗೆ ಅರ್ಥಮಾಡಿದೆ. ಐತರೇಯಬ್ರಾಹ್ಮಣದಲ್ಲಿ ಈ ಯಜ್ಞಸೇವನೆಯನ್ನು ಸ್ತುತಿಸುತ್ತಾ,

ಸೈಷಾ ಸ್ವರ್ಗ್ಯಾಹುತಿರ್ಯದಗ್ನ್ಯಾಹುತಿರ್ಯದಿ ಹ ವಾ ಅಪ್ಯಬ್ರಾಹ್ಮಣೋಕ್ತೋ ಯದಿ ದುರುಕ್ತೋಕ್ತೋ ಯಜತೇಽಥ ಹೈಷಾಹುತಿರ್ಗಚ್ಛತ್ಯೇವ ದೇವಾನ್ನ ಪಾಪ್ಮನಾ ಸಂಸೃಜ್ಯತೇ ॥

(ಐ. ಬ್ರಾ. ೧-೧೬)

" ಯಜ್ಞೇನ ಯಜ್ಞಮಯಜಂತ " ಎಂಬ ಮಂತ್ರದಲ್ಲಿ ವರ್ಣಿತವಾಗಿರುವ ನಿಯಮದಂತೆಯೂ ಸಾಧ್ಯಾದಿ ದೇವತೆಗಳು ಅನುಸರಿಸಿದಂತೆಯೂ ಯಜ್ಞಾಗ್ನಿಯಿಂದ ಯಜ್ಞವನ್ನು ಸೇವಿಸುವವರು ಸ್ವರ್ಗಲೋಕವನ್ನು ಪಡೆಯುತ್ತಾರೆ. ಈ ತತ್ತ್ವವನ್ನರಿತು ಯಜ್ಞವನ್ನು ನಿರ್ವಹಿಸುವವನ ಆಹುತಿಗಳು ಸ್ವರ್ಗವಾಸಿಗಳಾದ ದೇವತೆಗಳನ್ನು ಸೇರುತ್ತವೆ. ಅವನು ಅಬ್ರಾಹ್ಮಣನಾದರೂ ಸರಿ ಅಥವಾ ಇತರ ವಿಧದಲ್ಲಿ ದೂಷ್ಯನಾಗಿದ್ದರೂ ಸರಿ ಅವನಿಗೆ ಸ್ವರ್ಗ ಲಾಭವು ಸಿದ್ಧವು. ಅವನು ಪಾಪರಹಿತನಾಗುತ್ತಾನೆ, ಎಂದು ತಿಳಿಸಿದೆ. ಈ ರೀತಿ ಪ್ರಕೃತವಾದ ಋಕ್ಕಿಗೆ ಆಧಿದೈವತಪಕ್ಷದಲ್ಲಿಯೂ, ಅಧ್ಯಾತ್ಮಪಕ್ಷದಲ್ಲಿಯೂ ಸಹ ಶತಪಥಾದಿಬ್ರಾಹ್ಮಣಗಳಲ್ಲಿಯೂ, ಛಾಂದೋಗ್ಯಾದ್ಯುಪನಿಷತ್ತುಗಳಲ್ಲಿಯೂ ತಾತ್ಪರ್ಯವನ್ನು ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

ಯಜ್ಞೇನ—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. ಯಜಯಾಚಯತ—(ಪಾ. ಸೂ. ೩-೩-೯೦) ಎಂಬುದರಿಂದ ನಙ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಅಯಜಂತ—ಪೂರ್ವೋಕ್ತವಾದ ಧಾತುವಿನ ಲಙ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

ಧರ್ಮಾಣಿ—ಧೃಙ್ ಧಾರಣೇ. ಧಾತು. ಅರ್ತಿಸ್ತುಸುಹು—(ಉ. ಸೂ. ೧-೧೩೭) ಎಂಬುದರಿಂದ ಮನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಆಸನ್—ಅಸ ಭುವಿ ಧಾತು. ಲಙ್ ಪ್ರಥಮಪುರುಷಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ

ನಾಕಮ್—ನ ಅಕಮಸ್ಮಿನ್ ಇತಿ ನಾಕಃ ತಮ್. ನಭ್ರಾಣ್ನಪಾತ್‌ನವೇ—(ಪಾ. ಸೂ. ೬-೩-೭೫) ಎಂಬುದರಿಂದ ನಲೋಪಾಭಾವದಿಂದ ನಿಪಾತಿತವಾಗಿದೆ.

ಮಹಿಮಾನಃ—ಪೃಥ್ವಾದಿಭ್ಯ ಇಮನಿಜ್ವಾ (ಪಾ. ಸೂ. ೫-೧-೧೨೨) ಎಂಬುದರಿಂದ ಮಹ ಶಬ್ದದ ಮೇಲೆ ಇಮನಿಚ್ ಪ್ರತ್ಯಯ. ಯಸ್ಯೇತಿಚ ಸೂತ್ರದಿಂದ ಅಕಾರಲೋಪ. ಚಿತ್ತಾದುದರಿಂದ ಅಂತೋದಾತ್ತ ಸ್ವರ ಬರುತ್ತದೆ.

ಸಚಂತ—ಷಚ ಸಮವಾಯೇ ಧಾತು. ಛಾಂದಸವಾಗಿ ಲಙ್ ಪ್ರಥಮಪುರುಷಬಹುವಚನಾಂತರೂಪ. ಛಾಂದಸವಾಗಿ ಅಡಾಗಮ—ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ

ಸಂತಿ—ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ತಿಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. ॥ ೫೦ ॥

ಸಂಹಿತಾಪಾಠಃ

ಸಮಾನಮೇತದುದಕಮುಚ್ಚೈತ್ಯವ ಚಾಹಭಿಃ ।

ಭೂಮಿಂ ಪರ್ಜನ್ಯಾ ಜಿನ್ವಂತಿ ದಿವಂ ಜಿನ್ವಂತ್ಯಗ್ನಯಃ ॥ ೫೧ ॥

॥ ಪದಪಾಠಃ ॥

ಸಮಾನಂ । ಏತತ್ । ಉದಕಂ । ಉತ್ । ಚ । ಏತಿ । ಅವ । ಚ । ಅಹ್ಯಭಿಃ ।

ಭೂಮಿಂ । ಪರ್ಜನ್ಯಾಃ । ಜಿನ್ವಂತಿ । ದಿವಂ । ಜಿನ್ವಂತಿ । ಅಗ್ನಯಃ ॥ ೫೧ ॥

ಸಾಯಣಭಾಷ್ಯಂ

ಏತತ್ಪ್ರಸಿದ್ಧಮುದಕಂ ಸಮಾನಂ । ಏಕರೂಪಮಿತ್ಯರ್ಥಃ । ಅಹಭಿಃ ಕೈಶ್ಚಿದಹೋಭಿರ್ಗ್ರೀಷ್ಮಕಾಲೀನೈರುಚ್ಚೈತಿ । ಊರ್ಧ್ವಂ ಗಚ್ಛತಿ । ತಥಾಹಭಿರ್ವರ್ಷಕಾಲೀನೈರೇವ ತದುದಕಮವ ಚೈತಿ । ಅವಾಙ್ಮುಖಂ ಚ ಗಚ್ಛತಿ ॥ ಚವಾಯೋಗೇ ಪ್ರಥಮೇತಿ ಪ್ರಥಮಾವಿಭಕ್ತಿರ್ನ ನಿಹನ್ಯತೇ ॥ ರಶ್ಮಿನಾಡ್ಯೈವ ಭೂಮಿಂ ಪ್ರಾಪ್ನೋತಿ । ತದೇವೋಚ್ಯತೇ । ಪರ್ಜನ್ಯಾಃ ಪ್ರೀಣಯಿತಾರೋ ಮೇಘಾ ಭೂಮಿಂ ಜಿನ್ವಂತಿ । ಉದಕಸಂಸ್ತ್ಯಾಯೇನ ಸಸ್ಯಾದ್ಯುತ್ಪಾದನದ್ವಾರಾ ಭೂಮಿಷ್ಠಾನ್ಪ್ರೀಣಯಂತಿ । ತಥಾಗ್ನಯ ಆಹವನೀಯಾದ್ಯಾಃ ಸ್ವೇ ಹುತ ಆಹುತ್ಯಾ ದಿವಂ ದ್ಯುಲೋಕಸ್ಥಾನ್ದೇವಾಞ್ಜಿನ್ವಂತಿ । ಪ್ರೀಣಯಂತಿ ॥

॥ ಪ್ರತಿಪದಾರ್ಥ ॥

ಸಮಾನಂ--ಒಂದೇರೂಪವಾದುದೂ । ಏತತ್ ಉದಕಂ—ಪ್ರಸಿದ್ಧವಾದುದೂ ಆದ ಈ ಉದಕವು । ಅಹಭಿಃ--(ಗ್ರೀಷ್ಮಕಾಲದಲ್ಲಿ) ಕೆಲವು ದಿನಗಳಲ್ಲಿ । ಉಚ್ಚೈತಿ—ಊರ್ಧ್ವಮುಖವಾಗಿ (ಅಂತರಿಕ್ಷಕ್ಕೆ) ಹತ್ತುತ್ತದೆ । (ಅಹಭಿಃ—ಮಳೆಗಾಲದ ಕೆಲವು ದಿನಗಳಲ್ಲಿ) । ಅವ ಚ—(ಅಂತರಿಕ್ಷದಿಂದ) ಅಧೋಮುಖವಾಗಿ ಸುರಿಯುತ್ತದೆ । ಪರ್ಜನ್ಯಾಃ—ಪ್ರೀತಿಕಾರಕಗಳಾದ ಮೇಘಗಳು । ಭೂಮಿಂ ಭೂಮಿಯನ್ನು । ಜಿನ್ವಂತಿ—ತೃಪ್ತಿಗೊಳಿಸುತ್ತವೆ । ಅಗ್ನಯಃ—ಆಹವನೀಯಾದ್ಯಗ್ನಿಗಳು । ದಿವಂ—ದ್ಯುಲೋಕವನ್ನು । ಜಿನ್ವಂತಿ—ತೃಪ್ತಿಗೊಳಿಸುತ್ತವೆ ।

॥ ಭಾವಾರ್ಥ ॥

ಏಕರೂಪವಾದ ಉದಕವು ಗ್ರೀಷ್ಮಕಾಲದ ದಿನಗಳಲ್ಲಿ ಊರ್ಧ್ವಮುಖವಾಗಿ ಅಂತರಿಕ್ಷಕ್ಕೆ ಹತ್ತುತ್ತದೆ. ಮಳೆಗಾಲದ ದಿನಗಳಲ್ಲಿ ಅಂತರಿಕ್ಷದಿಂವ ಅಧೋಮುಖವಾಗಿ ಸುರಿಯುತ್ತದೆ ಪ್ರಪಂಚಕ್ಕೆ ಸಂತೃಪ್ತಿಯನ್ನುಂಟು ಮಾಡುವ ಮೇಘಗಳು ಭೂಮಿಯನ್ನು ತೃಪ್ತಿಗೊಳಿಸುತ್ತವೆ. ಆಹವನೀಯಾದ್ಯಗ್ನಿಗಳು ದ್ಯುಲೋಕವನ್ನು ಅಥವಾ ದ್ಯುಲೋಕದಲ್ಲಿರುವ ದೇವತೆಗಳನ್ನು ತೃಪ್ತಿಗೊಳಿಸುತ್ತವೆ

## English Translation

The uniform water passes upwards and downwards in the course of days: clouds give joy to the earth; fires rejoice the heaven

### ವಿಶೇಷವಿಷಯಗಳು

ಭೂಮಿಂ ಪರ್ಜನ್ಯಾ ಜಿನ್ವಂತಿ । ದಿವಂ ಜಿನ್ವಂತ್ಯಗ್ನಯಃ । ಸಸ್ಯಾದಿಗಳ ಬೆಳವಣಿಗೆಗೆ ಕಾರಣವಾಗಿ ಭೂಮಿಗೆ ಅನ್ನಸಂಪತ್ತನ್ನೊದಗಿಸುವುದರಿಂದ ಪರ್ಜನ್ಯಗಳು ಭೂಲೋಕದ ಪ್ರಜೆಗಳಿಗೆ ತೃಪ್ತಿಯನ್ನುಂಟುಮಾಡುತ್ತವೆ. ಯಜ್ಞಾಹುತಿಗಳನ್ನು ಹೊತ್ತುಕೊಂಡುಹೋಗಿ ದ್ಯುಲೋಕದಲ್ಲಿ ದೇವತೆಗಳಿಗೆ ಹಂಚಿ ಅಗ್ನಿಗಳು ದೇವಲೋಕನಿವಾಸಿಗಳನ್ನು ತೃಪ್ತಿಪಡಿಸುತ್ತವೆ. ಕೇವಲ ತೃಪ್ತಿಪಡಿಸುವುದೇ ಅಲ್ಲದೆ ಪರ್ಜನ್ಯಾಗ್ನಿಗಳು ಉಭಯಲೋಕನಿವಾಸಿಗಳ ಸ್ಥಿತಿಗತಿಗಳಿಗೆಲ್ಲಾ ಕಾರಣಗಳಾಗಿವೆ.

ಜಿನ್ವಂತಿ—ಪ್ರೀಣಯಂತಿ । ತೃಪ್ತಿಯನ್ನುಂಟುಮಾಡುತ್ತವೆ. ಜಿನ್ವತಿಃ ಪ್ರೀತಿಕರ್ಮಾ (ನಿ. ೬-೨೨) ಎಂದು ಈ ಪದದ ವಿಶೇಷಾರ್ಥವನ್ನು ಹೇಳಿ ನಿರುಕ್ತಕಾರರು ಪ್ರಕೃತವಾದ ಋಕ್ಕನ್ನೇ ಉದಹರಿಸಿದ್ದಾರೆ. ಚೈತನ್ಯದಾಯಿಯೆಂದೂ ಅರ್ಥವಾಗುತ್ತದೆ ಉಭಯಲೋಕಗಳಿಗೂ ಸಹ ತಮ್ಮ ಆವೃತ್ತಿರೂಪದಿಂದ ಪ್ರಾಣದಾಯಕಗಳಾಗಿರುತ್ತವೆ.

ಪರ್ಜನ್ಯಾಗ್ನಿಗಳ ಸಂಬಂಧವು ಬೀಜಾಂಕುರಗಳ ಸಂಬಂಧದಂತಿದೆ. ಯಜ್ಞಾದಿಗಳಿಂದ ಪರ್ಜನ್ಯವೂ ಪರ್ಜನ್ಯದಿಂದ ಯಜ್ಞವೂ ವೃದ್ಧಿಯಾಗುತ್ತವೆ. ಇವು ಪರಸ್ಪರವಾಗಿ ಅನ್ಯೋನ್ಯಾಶ್ರಯವನ್ನು ಪಡೆದಿವೆ. ಒಂದಕ್ಕೊಂದು ಹೇತುವಾಗಿದೆ. ಪೃಥಿವ್ಯಂತರಿಕ್ಷಾದಿಲೋಕಗಳ ಸ್ಥಿತಿಗಳೆಲ್ಲವೂ ಈ ಅನ್ಯೋನ್ಯಾಶ್ರಯವನ್ನೇ ನಂಬಿವೆ.

ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥

(ಭಗವದ್ಗೀತಾ. ೩. ೧೪)

ಯಜ್ಞಾದಿಕರ್ಮಗಳು ನೆರವೇರಬೇಕಾದರೆ ಅನ್ನಸಂಪತ್ತಿನಿಂದ ಮಾತ್ರ ಸಾಧ್ಯ. ಯಜ್ಞಕ್ಕೆ ಮೂಲವಾದ ಅನ್ನವು ಪರ್ಜನ್ಯದಿಂದಲೇ ಉತ್ಪನ್ನವಾಗುತ್ತದೆ. ಪರ್ಜನ್ಯವು ಯಜ್ಞದಿಂದ ಮಾತ್ರ ಸಾಧ್ಯವಾಗುತ್ತವೆ ಈ ವಿಧವಾಗಿ ಪರ್ಜನ್ಯಕ್ಕೂ ಯಜ್ಞಕ್ಕೂ ಅನ್ಯೋನ್ಯಾಶ್ರಯವಿರುತ್ತದೆ. ಅಗ್ನಯಃ ಎಂದರೆ ಆಹವನೀಯಾದಿಯಜ್ಞಾಗ್ನಿಗಳೆಂದರ್ಥ. ಅಗ್ನಯಃ ಆಹವನೀಯಾದ್ಯಾಃ ಎಂದು ಸಾಯಣರು ತಿಳಿಸಿದ್ದಾರೆ. ಆದುದರಿಂದ ಪರ್ಜನ್ಯಕ್ಕೂ ಯಜ್ಞಕ್ಕೂ ಇರುವ ಸಂಬಂಧವೇ ಪರ್ಜನ್ಯಕ್ಕೂ ಆಹವನೀಯಾಗ್ನಿಗಳಿಗೂ ಇರುವುದೆಂದರ್ಥ. ಇದೇ ಸಂಬಂಧವನ್ನು ಛಾಂದೋಗ್ಯೋಪನಿಷತ್ತಿನಲ್ಲಿ ಈ ರೀತಿ ತಿಳಿಸಿದೆ.

ಪರ್ಜನ್ಯೋ ವಾವ ಗೌತಮಾಗ್ನಿಸ್ತಸ್ಯ ವಾಯುರೇವ ಸಮಿದಭ್ರಂ ಧೂಮೋ ವಿದ್ಯುದರ್ಚಿರಶ-
ನಿರಂಗಾರಾ ಹ್ರಾದನಯೋ ವಿಸ್ಫುಲಿಂಗಾಃ ।

(ಛಾ. ಉ. ೫-೫-೧)

ಪರ್ಜನ್ಯವೇ ಯಜ್ಞಾಗ್ನಿಯು. ವಾಯುವೇ ಅದರ ಸಮಿತ್ತು. ಮೇಘವೇ ಅದರ ಧೂಮವು. ವಿದ್ಯುತ್ತೇ ಅದರ ಜ್ವಾಲೆಯು. ಸಿಡಿಲೇ ಅಂಗಾರಗಳು. ಗುಡುಗುಗಳೇ ಶಬ್ದಗಳು.

ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಸೋಮಂ ರಾಜಾನಂ ಜುಹ್ವತಿ ತಸ್ಯಾ ಆಹುತೇರ್ವರ್ಷಂ ಸಂಭವಂತಿ ||

(ಛಾ. ಉ. ೫-೫-೨)

ಈ ಪರ್ಜನ್ಯರೂಪವಾದ ಅಗ್ನಿಯಲ್ಲಿ ದೇವತೆಗಳು ಸೋಮವನ್ನರ್ಪಿಸುತ್ತಾರೆ. ಇದರ ಫಲವಾಗಿ ವೃಷ್ಟಿಪತನ ವಾಗುತ್ತದೆ, ಎಂದು ಪರ್ಜನ್ಯಕ್ಕೂ ಯಜ್ಞಾಗ್ನಿಗೂ ತಾದಾತ್ಮ್ಯವನ್ನೇ ಹೇಳಿದೆ. ಪೃಥಿವ್ಯಂತರಿಕ್ಷಗಳ ಮತ್ತು ಪ್ರಜೆಗಳ ಜೀವನಾಧಾರವಾಗಿರುವುದಲ್ಲದೆ, ಪರ್ಜನ್ಯವು ಎರಡು ಲೋಕಗಳ ಸಂಬಂಧವನ್ನೂ ನಿಕಟವಾಗಿ ಬೆಳೆಸುವುದರಲ್ಲಿಯೂ ನಿರತವಾಗಿದೆ.

ಪೃಥಿವೀ ಪೂರ್ವರೂಪಂ ದ್ಯೌರುತ್ತರರೂಪಂ ವೃಷ್ಟಿಃಸಂಧಿಃ ಪರ್ಜನ್ಯಃ ಸಂಧಾತಾ | ತದುತಾಪಿ ಯತ್ರೈತದ್ಬಲವದಸುಪ್ಸೃಳ್ಗನ್ಸಂದಧದಹೋರಾತ್ರೇ ವರ್ಷತಿ ದ್ಯಾವಾಪೃಥಿವ್ಯೌ ಸಮಧಾ-ತಾಮಿತ್ಯುತಾಪ್ಯಾಹುಃ | ಇತೀನ್ವಧಿದೈವತಂ | ಅಥಾಧ್ಯಾತ್ಮಂ |

(ಐ. ಆರಣ್ಯಕಂ. ೨-೨-೧ ರಿಂದ ೩)

ಪೃಥ್ವಿಯು ಪೂರ್ವಾರ್ಧವು. ದ್ಯುಲೋಕವು ಉತ್ತರಾರ್ಧವು. ವೃಷ್ಟಿಯಿಂದ ಇವೆರಡರ ಸಂಬಂಧವುಂಟಾಗುತ್ತದೆ. ಪರ್ಜನ್ಯನೇ ಸಂಬಂಧಕಾರಕನು. ಅಹೋರಾತ್ರವೂ ಎಡಬಿಡದೇ ಪರ್ಜನ್ಯನು ವೃಷ್ಟಿಯನ್ನು ಸುರಿಸಿದ ಪಕ್ಷದಲ್ಲಿ ಆಗ ದ್ಯಾವಾಪೃಥಿವಿಗಳೆರಡೂ ಒಟ್ಟಿಗೆ ಸೇರಿರುವುವು ಎಂದು ತಿಳಿದವರು ಹೇಳುತ್ತಾರೆ. ಈ ರೀತಿ ಉಭಯಲೋಕ ಗಳಿಗೂ ಉಪಕಾರಕನಾದ ಪರ್ಜನ್ಯನ ಸ್ತುತಿಯು ಋಕ್ಸಂಹಿತೆಯಲ್ಲಿ ಬಹಳ ಮಹತ್ತ್ವದಿಂದ ಕೂಡಿದೆ.

ಅಚ್ಛಾ ವದ ತವಸಂ ಗೀರ್ಭಿರಾಭಿಃ ಸ್ತುಹಿ ಪರ್ಜನ್ಯಂ ನಮಸಾ ವಿವಾಸ |
ಕನಿಕ್ರದದ್ವೃಷಭೋ ಜೀರದಾನೂ ರೇತೋ ದಧಾತ್ಯೋಷಧೀಷು ಗರ್ಭಂ ||

(ಋ. ಸಂ. ೫-೮೩ ರಿಂದ ೧)

ವೃಷ್ಟಿಕಾರಕನೂ, ಸಸ್ಯೌಷಧ್ಯಾದಿಗಳಲ್ಲಿ ರಸವನ್ನು ತುಂಬತಕ್ಕವನೂ ಆದ ಪರ್ಜನ್ಯನಿಗೆ ಎಲ್ಲರೂ ಕೃತಜ್ಞತೆ ಯನ್ನರ್ಪಿಸಿ ಅವನನ್ನು ಉತ್ತಮವಾದ ಸ್ತುತಿವಾಕ್ಯಗಳಿಂದ ಪ್ರಶಂಸಿಸಿ, ಎಂದು ಸ್ತುತಿಕಾರನನ್ನುದ್ದೇಶಿಸಿ ಹೇಳಿದೆ.

ಯತ್ಪರ್ಜನ್ಯ ಕನಿಕ್ರದತ್ಸ್ತನಯನ್ ಹಂಸಿ ದುಷ್ಕೃತಃ |
ಪ್ರತೀದಂ ವಿಶ್ವಂ ಮೋದತೇ ಯತ್ಕಿಂ ಚ ಪೃಥಿವ್ಯಾಮಧಿ ||

(ಋ. ಸಂ. ೫-೮೩-೯)

ಎಲೈ ಪರ್ಜನ್ಯನೇ, ನೀನು ಶಬ್ದಮಾಡುತ್ತಲೂ, ಶತ್ರುಗಳನ್ನು ದೂರಕ್ಕೆ ಅಟ್ಟುತ್ತಲೂ ಲೋಕೋಪಕಾರವನ್ನು ಮಾಡುವಾಗ ಚರಾಚರಾತ್ಮಕವಾದ ಲೋಕವೆಲ್ಲವೂ ತನ್ನ ಹರ್ಷವನ್ನು ವ್ಯಕ್ತಪಡಿಸುತ್ತದೆ, ಇತ್ಯಾದಿಯಾಗಿ ಪರ್ಜನ ಸ್ತುತಿಯಿದೆ.

ಪರ್ಜನ್ಯಾಃ ಪ್ರೀಣಯಿತಾರೋ ಮೇಘಾಃ | ತೃಪ್ತಿಯನ್ನುಂಟುಮಾಡತಕ್ಕ ಮೇಘಗಳೆಂದು ಸಾಯಣರು ಅರ್ಥಮಾಡಿದ್ದಾರೆ. ನಿರುಕ್ತಕಾರರು ಈ ಪದದ ನಿರ್ವಚನವನ್ನು ತಿಳಿಸುತ್ತಾ, . .

ಪರ್ಜನ್ಯಸ್ತೃಪೇರಾದ್ಯಂತವಿಪರೀತಸ್ಯ ತರ್ಪಯಿತಾ ಜನ್ಯಃ ।

(ನಿ. ೧೦-೧೦)

ತೃಪ್ತಿಯನ್ನುಂಟುಮಾಡು ಎಂಬರ್ಥವನ್ನು ಕೊಡುವ ತೃಪ್‌ಧಾತುವಿನ ಅಕ್ಷರಗಳು ವ್ಯತ್ಯಸ್ತವಾಗಿ ಈ ಪದವು ನಿಷ್ಪನ್ನವಾಗಿದೆ. ಮಾನವರಿಗೆ ಅನುಕೂಲಕಾರಕನಾಗಿ ಅವರಿಗೆ ತೃಪ್ತಿದಾಯಕನಾಗಿರುವನೆಂದರ್ಥ.

ತೃಪ್+ಜನ್ಯಃ=ಪೃತ್+ಜನ್ಯಃ= ಪರ್ಜ್+ಜನ್ಯಃ=ಪರ್ಜನ್ಯಃ । ಅಥವಾ ;

ಪರೋ ಜೇತಾ ವಾ—ಉತ್ತಮವಾದ ಜೇತೃವೆಂದಾಗಲಿ, (ಪರಃ+ಜೀ) ಅಥವಾ ; ಪರೋ ಜನಯಿತಾ ವಾ—ಉತ್ಪಮವಾದ ಉತ್ಪಾದಕನೆಂದಾಗಲಿ, ಅಥವಾ ಪ್ರಾರ್ಜಯಿತಾ ವಾ ರಸಾನಾಂ—ರಸರೂಪವಾದ ಉದಕ ವನ್ನು ಕೊಡತಕ್ಕವನೆಂದಾಗಲೀ (ಪ್ರ+ಋಜ್) ಪರ್ಜನ್ಯಶಬ್ದಕ್ಕೆ ಅರ್ಥವನ್ನು ಹೇಳಬಹುದು. (ನಿ. ೧೦-೧೦) ಎಂದು ತಿಳಿಸಿ ನಿರುಕ್ತಕಾರರು,

ವಿ ವೃಕ್ಷಾನ್ ಹನ್ತ್ಯುತ ಹಂತಿ ರಕ್ಷಸೋ ವಿಶ್ವಂ ಬಿಭಾಯ ಭುವನಂ ಮಹಾವಧಾತ್ ।
ಉತಾನಾಗಾ ಈಷತೇ ವೃಷ್ಣ್ಯಾವತೋ ಯತ್ಪರ್ಜನ್ಯಃ ಸ್ತನಯನ್ ಹಂತಿ ದುಷ್ಕೃತಃ ॥

(ಋ. ಸಂ. ೫-೮೩-೨)

ಎಂಬ ಋಕ್ಕನ್ನುದಹರಿಸಿ ಪರ್ಜನ್ಯನ ನಾನಾಗುಣಗಳನ್ನು ತಿಳಿಸಿದ್ದಾರೆ. ಪರ್ಜನ್ಯನ ಸ್ವರೂಪವನ್ನು ಬೃಹದ್ದೇವತಾಕಾರರು ಬೃಹದ್ದೇವತೆಯಲ್ಲಿ ಈ ರೀತಿ ತಿಳಿಸಿದ್ದಾನೆ.

ಯದಿಮಾಂ ಪ್ರಾರ್ಜಯತ್ಯೇಕೋ ರಸೇನಾಂಬರಜೇನ ಗಾಂ ।
ಕಾಲೇಽತ್ರಿಸ್ತಾರ್ವಶಶ್ಚರ್ಷಿಃ ತೇನ ಪರ್ಜನ್ಯಮಾಹತುಃ ॥

(ಬೃ. ದೇ. ೨-೩೭)

ತಾನೊಬ್ಬನೇ ಪೃಥ್ವಿಯನ್ನು ಅಂತರಿಕ್ಷೋತ್ಪನ್ನವಾದ ಉದಕದಿಂದ ತುಂಬುತ್ತಾನಾದ್ದರಿಂದ ಉರ್ವಶೀಪುತ್ರನಾದ ಅತ್ರಿಋಷಿಯು ಈ ದೇವತೆಯನ್ನು ಪರ್ಜನ್ಯನೆಂದು ಕರೆದು ಸ್ತುತಿಸಿದ್ದಾರೆ.

ತರ್ಪಯತ್ಯೇಷ ಯಲ್ಲೋಕಾನ್ ಜನ್ಯೋ ಜನಹಿತಶ್ಚ ಯತ್ ।
ಪರೋ ಜೇತಾ ಜನಯಿತಾ ಯದ್ವಾಗ್ನೇಯಸ್ತತೋ ಜಗೌ ॥

(ಬೃ. ದೇ. ೨-೩೮)

ಪ್ರಜೆಗಳಿಗೆ ತೃಪ್ತಿಕಾರಕನಾದುದರಿಂದಲೂ, ಪ್ರಸನ್ನನಾಗಿರುವುದರಿಂದಲೂ, ಪ್ರಜಾಸಖನಾಗಿರುವುದರಿಂದಲೂ ಅಥವಾ ಉತ್ತಮವಾದ ಜೈತೃವಾಗಿರುವುದರಿಂದಲೂ, ಅಥವಾ ಉತ್ಪಾದಕನಾಗಿರುವುದರಿಂದಲೂ ಅಗ್ನಿಪುತ್ರನು ಈ ದೇವತೆ ಯನ್ನು ಪರ್ಜನ್ಯನೆಂದು ಕರೆದಿದ್ದಾನೆ, ಎಂದು ಪರ್ಜನ್ಯನ ನಾನಾಗುಣಗಳನ್ನು ವಿವರಿಸಿದೆ.

ಪರ್ಜನ್ಯನು ಭೂಲೋಕಕ್ಕೆ ಚೈತನ್ಯವನ್ನೂ, ಹರ್ಷವನ್ನೂ ಉಂಟುಮಾಡುವಂತೆ ಅಗ್ನಿಗಳೂ ಸಹ ದ್ಯುಲೋಕಕ್ಕೆ ಚೈತನ್ಯದಾಯಕವಾಗಿಯೂ, ಹರ್ಷದಾಯಕವಾಗಿಯೂ ಇದ್ದಾರೆ. ಅಗ್ನಯಃ-ಆವಹನೀಯಾದ್ಯಾಃ ಸ್ವೇ ಹುತೇ ಆಹುತ್ಯಾ । ದಿವಂ-ದ್ಯುಲೋಕಸ್ಥಾನ್ ದೇವಾನ್ ಜಿನ್ವಂತಿ-ಪ್ರೀಣಯಂತಿ । ತಮ್ಮಲ್ಲಿ ಅರ್ಪಿಸಿದ ಆಹುತಿಗಳಿಂದ ಆಹವನೀಯಾದ್ಯಗ್ನಿಗಳು ದ್ಯುಲೋಕಸ್ಥರಾದ ದೇವತೆಗಳನ್ನು ತೃಪ್ತಿಪಡಿಸುತ್ತಾರೆಂದು ತಾತ್ಪರ್ಯ. ಅಗ್ನಿಯ ಸ್ವರೂಪವು ನಾನಾವಿಧವಾಗಿದೆ ಜಾತವೇದಸ್, ದ್ರವಿಣೋದಾಃ, ವೈಶ್ವಾನರ ಇತ್ಯಾದಿರೂಪಗಳಿಂದ

ಅಗ್ನಿಯು ವಿಶ್ವವ್ಯಾಪಕನಾಗಿ ತನ್ನ ಮಹತ್ತ್ವವನ್ನು ಪ್ರಕಾಶಪಡಿಸುವುದನ್ನೂ, ನಾನಾಶ್ರುತಿಗಳಲ್ಲಿ ಈ ಅಗ್ನಿಯ ವೈಶ್ವಾನರಾದಿರೂಪಗಳನ್ನು ಸ್ತುತಿಸಿರುವುದನ್ನೂ ಹಿಂದೆ ಎಂದರೆ ಋಗ್ವೇದಸಂಹಿತೆಯ ೧೧ನೇ ಭಾಗದಲ್ಲಿ ವಿಶದವಾಗಿ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಅಗ್ನಿಯ ಗಾರ್ಹಪತ್ಯಾದಿಸ್ವರೂಪಗಳನ್ನು ನಿರ್ದೇಶಿಸಿದೆ. ದಕ್ಷಿಣಾಗ್ನಿ ಗಾರ್ಹಪತ್ಯ, ಆಹವನೀಯ ಎಂದು ಯಜ್ಞಾಗ್ನಿಯ ಮೂರು ಪ್ರಭೇದಗಳು ಪ್ರಸಿದ್ಧವಾದವು. ಇವುಗಳ ಸ್ವರೂಪ ವನ್ನು ತಿಳಿಸುತ್ತಾ ತೈತ್ತಿರೀಯಸಂಹಿತೆಯಲ್ಲಿ,

> ಯಥಾ ವೈ ಸಮೃತಸೋಮಾ ಏವಂ ವಾ ಏತೇ ಸಮೃತಯಜ್ಞಾ ಯದ್ದರ್ಶಪೂರ್ಣಮಾಸೌ ಕಸ್ಯ ವಾಹ ದೇವಾ ಯಜ್ಞಮಾಗಚ್ಛಂತಿ ಕಸ್ಯ ವಾ ಬಹೂನಾಂ ಯಜಮಾನಾನಾಂ ಯೋ ವೈ ದೇವತಾಃ ಪೂರ್ವಃ ಪರಿಗೃಹ್ಣಾತಿ ಸ ಏನಾಶ್ಶ್ವೋ ಭೂತೇ ಯಜತೆ ಏತದ್ವೈ ದೇವಾನಾ-ಮಾಯತನಂ ಯದಾಹವನೀಯೋಽಂತರಾಗ್ನೀ ಪಶೂನಾಂ ಗಾರ್ಹಪತ್ಯೋ ಮನುಷ್ಯಾಣಾ-ಮನ್ವಾಹಾರ್ಯಪಚನಃ ಪಿತೄಣಾಮಗ್ನಿಂ ಗೃಹ್ಣಾತಿ ಸ್ವ ಏವಾಯತನೇ ದೇವತಾಃ ಪರಿಗೃಹ್ಣಾತಿ ।
>
> (ತೈ. ಸಂ. ೧-೬-೭)

ಸೋಮಯಜ್ಞಗಳಲ್ಲಿ ಸ್ಪರ್ಧೆಯಿರುವಂತೆಯೇ, ದಶಪೂರ್ಣಾದಿಗಳಲ್ಲಿಯೂ ಸ್ಪರ್ಧೆಯಿರುತ್ತದೆ. ಯಾವ ಯಜಮಾನನು ತನ್ನ ಯಜ್ಞವನ್ನು ದೇವತಾತೃಪ್ತ್ಯರ್ಥವಾಗಿಯೇ ನೆರವೇರಿಸುತ್ತಾನೆಯೋ ಆ ಯಜ್ಞವನ್ನೇ ದೇವತೆಗಳು ಸಮೀಪಿಸುವರು, ಈ ಯಜ್ಞಾಗ್ನಿಗಳಲ್ಲಿ, ಪಶ್ವಂತರಗಳಲ್ಲಿರುವ ಆಹವನೀಯಾಗ್ನಿಯು ದೇವತೆಗಳಿಗೆ ಆಯತನವು. ಗಾರ್ಹಪತ್ಯವು ಮಾನವರಿಗೂ, ಅನ್ವಾಹಾರ್ಯಪಚನವು ಪಿತೃಗಳಿಗೂ ಆಯತನವಾಗಿದೆಯೆಂದು ತಿಳಿಸಿ ಅನಂತರ, ಆಹವನೀಯವು ದೇವಲೋಕಗಾಮಿಗೆ ಸಹಾಯಕವಾದುದು ಎಂದು ತಿಳಿಸಿದೆ.

> "…. …. …. ಬ್ರಹ್ಮವಾದಿನೋ ವದಂತಿ ಕಿಂ ಯಜ್ಞಸ್ಯ ಯಜಮಾನ ಇತಿ ಪ್ರಸ್ತರ ಇತಿ ತಸ್ಯ ಕ್ವ ಸುವರ್ಗೋ ಲೋಕ ಇತ್ಯಾಹವನೀಯ ಇತಿ ಬ್ರೂಯಾದ್ಯತ್ಪ್ರಸ್ತರ ಮಾಹವನೀಯೇ ಪ್ರಹರತಿ ಯಜಮಾನಮೇವ ಸುವರ್ಗಂ ಲೋಕಂ ಗಮಯತಿ ॥
>
> (ತೈ. ಸಂ. ೨-೬-೫)

ಯಜ್ಞಕರ್ತನಿಗೂ ಯಜ್ಞಕ್ಕೂ ಇರುವ ಉಪಕಾರ್ಯೋಪಕಾರಕಸಂಬಂಧವನ್ನು ಈ ವಾಕ್ಯದಲ್ಲಿ ತಿಳಿಸಿ ಆಹವನೀಯಾಗ್ನಿ ಯನ್ನು ಉಪಾಸನೆಮಾಡಿ ಯಜ್ಞವನ್ನಾಚರಿಸುವವನಿಗೆ ದೇವಲೋಕವು ಸಿದ್ಧವೆಂದು ಹೇಳಿದೆ, ಈ ಆಹವನೀಯಾಗ್ನಿಯು ದೇವಲೋಕಕ್ಕೆ ಸಂಬಂಧಿಸಿದುದು ಮತ್ತು ದೇವತೆಗಳಿಗೆ ತೃಪ್ತಿದಾಯಕವಾದುದು.

> ಆಹವನೀಯಂ ಪರೀತ್ಯ ವಾಚಂ ವಿಸೃಜೇರನ್ಯಜ್ಞೋ ವಾ ಆಹವನೀಯಃ ಸ್ವರ್ಗೋ ಲೋಕ ಆಹವನೀಯೋ ಯಜ್ಞೇನೈವ ತತ್ಸ್ವರ್ಗೇಣ ಲೋಕೇನ ಸ್ವರ್ಗಂ ಲೋಕಂ ಯಂತಿ ।
>
> (ಐ. ಬ್ರಾ. ೫-೨೪)

ಆಹವನೀಯಾಗ್ನಿಯ ಪ್ರದಕ್ಷಿಣವನ್ನು ಮಾಡುತ್ತಾ "ಆಹವನೀಯವೇ ಯಜ್ಞವು ; ಆಹವನೀಯವೇ ಸ್ವರ್ಗವು ; ಈ ಆಹವನೀಯಾಗ್ನಿಯ ಉಪಾಸನೆಯಿಂದ ಮಾಡಿದ ಯಜ್ಞದಿಂದಲೇ ಸ್ವರ್ಗಪ್ರಾಪ್ತಿಯಾಗುತ್ತದೆ" ಎಂದು ಪಠಿಸಬೇಕು ಎಂಬ ನಿಯಮನ್ನು ಐತರೇಯಬ್ರಾಹ್ಮಣದಲ್ಲಿ ತಿಳಿಸಿದೆ.

ಏಷ ವೈ ಸ ಯಜ್ಞಃ । ಯೇನ ತದ್ದೇವಾ ದಿವಮುಪೋದಕ್ರಾಮನ್ನೇಷ ಆಹವನೀಯೋಽಥ ಯ ಇಹಾಹೀಯತ ಸ ಗಾರ್ಹಪತ್ಯಃ ॥

(ಶ. ಬ್ರಾ ೧.-೨-೩-೨೨)

ಆಹವನೀಯವೇ ಯಜ್ಞವು. ಇದರಿಂದಲೇ ದೇವತೆಗಳಿಗೆ ಸ್ವರ್ಗವಾಸವು ಲಬ್ಧವಾಯಿತು.

ದೇವಯೋನಿರ್ವಾ ಏಷ ಯದಾಹವನೀಯಃ। ತಸ್ಯೈತಾವಮೃತಪಕ್ಷೌ ಯಾವೇತಾವಭಿತೋಽಗ್ನೀ ತದ್ಯದಾಹವನೀಯೇ ಯಜ್ಞಂ ತನ್ವತೇ ದೇವಯೋನಾವೇವೈತದ್ದೇವೇಭ್ಯೋ ಯಜ್ಞಂ ತನ್ವತ ಉಪ ಹೈನಂ ಪುನರ್ಯಜ್ಞೋ ನಮತಿ ನಾಸ್ಮಾದ್ಯಜ್ಞೋ ವ್ಯವಚ್ಛಿದ್ಯತೇ ಯ ಏವಮೇತದ್ವೇದ ಯಸ್ಯ ವೈವಂ ವಿದುಷ ಏತತ್ಕರ್ಮ ಕ್ರಿಯತೇ ॥

(ಶ. ಬ್ರಾ. ೧೨-೯-೩-೧೦)

ಆಹವನೀಯವು ದೇವತೆಗಳ ಯೋನಿಯು. ಅದರ ಎಡಬಲಭಾಗದಲ್ಲಿರುವ ಅಗ್ನಿಗಳು ಅದರ ಅಮರ್ತ್ಯವಾದ ಪಕ್ಷಗಳು ಆಹವನೀಯಾಗ್ನಿಯಲ್ಲಿ ಯಜ್ಞಮಾಡತಕ್ಕವರು ದೇವಯೋನಿಯಲ್ಲಿ ಯಜ್ಞಮಾಡಿದಂತೆಯೇ ಆಗುತ್ತದೆ. ಈ ತತ್ತ್ವವನ್ನು ತಿಳಿದವನು ದೇವತೆಗಳ ತೃಪ್ತಿಗೆ ಕಾರಣನಾಗುತ್ತಾನೆ.

ಹೀಗೆ ಆಹವನೀಯಾದ್ಯಗ್ನಿಗಳ ವೈಯಕ್ತಿಕವಾದ ಸ್ವರೂಪವನ್ನು ಅಧಿದೈವತಪಕ್ಷದಲ್ಲಿ ತಿಳಿಸಿದೆ. ಆಹವನೀಯಾದ್ಯಗ್ನಿಗಳ ಸ್ವರೂಪವನ್ನು ಆಧ್ಯಾತ್ಮಪಕ್ಷದಲ್ಲಿ ವಿವರಿಸುತ್ತಾ ಅವುಗಳೆಲ್ಲವೂ ಪರಬ್ರಹ್ಮತತ್ತ್ವವನ್ನು ಪ್ರತಿಬಿಂಬಿಸುವುವೆಂದು ಛಾಂದೋಗ್ಯೋಪನಿಷತ್ತಿನಲ್ಲಿ ವಿಶದವಾಗಿ ವರ್ಣಿತವಾಗಿದೆ. (ಛಾ. ಉ. ೪-೧೦-೧೪)

ಪ್ರಕೃತವಾದ ಋಕ್ಕಿನಲ್ಲಿ ದಿವಃ ಜಿನ್ವಂತ್ಯಗ್ನಯಃ ಎಂದು ದೇವತಾತೃಪ್ತಿಗೆ ಕಾರಣವಾದ ಅಗ್ನಿಯ ದೇವದೂತತ್ವವನ್ನು ಋಕ್ಸಂಹಿತೆಯ ಅನೇಕಕಡೆಗಳಲ್ಲಿ ಸ್ತುತಿಸಿದೆ.

ಅಗ್ನೇ ಯಂ ಯಜ್ಞಮಧ್ವರಂ ವಿಶ್ವತಃ ಪರಿಭೂರಸಿ । ಸ ಇದ್ದೇವೇಷು ಗಚ್ಛತಿ ।

(ಋ. ಸಂ. ೧-೧-೪)

ಎಲೈ ಅಗ್ನಿಯೇ. ನೀನು ಯಾವಯಾವ ಯಜ್ಞದ ಸುತ್ತಲೂ ವ್ಯಾಪಿಸಿದ್ದೀಯೋ ಆ ಯಜ್ಞವೆಲ್ಲವೂ ದೇವತೆಗಳನ್ನು ಸಮೀಪಿಸಿ ಅವರಿಗೆ ತೃಪ್ತಿಯನ್ನುಂಟುಮಾಡುತ್ತದೆ.

ಮಹಾँ ಅಸ್ಯಧ್ವರಸ್ಯ ಪ್ರಕೇತೋ ನ ಋತೇ ತ್ವದಮೃತಾ ಮಾದಯಂತೇ ।
ಆ ವಿಶ್ವೇಭಿಃ ಸರಥಂ ಯಾಹಿ ದೇವೈರ್ನ್ಯಗ್ನೇ ಹೋತಾ ಪ್ರಥಮಃ ಸದೇಹ ॥

(ಋ. ಸಂ ೭-೧೧-೧)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯಿಲ್ಲದೇ ದೇವತೆಗಳಿಗೆ ಹರ್ಷವೂ ತೃಪ್ತಿಯೂ ಸಾಧ್ಯವಿಲ್ಲವೆಂದೂ, ಮತ್ತು ಅವರು ತೃಪ್ತಿಯನ್ನು ಪಡೆಯಬೇಕಾದರೆ ಅಗ್ನಿಯ ಸಹಾಯದ ಆವಶ್ಯಕತೆಯನ್ನು ತಿಳಿಸುತ್ತಾ

ತ್ವೇ ಅಗ್ನೇ ವಿಶ್ವೇ ಅಮೃತಾಸೋ ಅದ್ರುಹ ಆಸಾ ದೇವಾ ಹವಿರದಂತ್ಯಾಹುತಂ ।
ತ್ವಯಾ ಮರ್ತಾಸಃ ಸ್ವದಂತ ಆಸುತಿಂ ತ್ವಂ ಗರ್ಭೋ ವೀರುಧಾಂ ಜಜ್ಞಿಷೇ ಶುಚಿಃ ॥

(ಋ. ಸಂ. ೨-೧-೧೪)

ಅಮರ್ತ್ಯರ ತೃಪ್ತಿಗೆ ಅಗ್ನಿಮುಖವೇ ಅತ್ಯಗತ್ಯವೆಂದೂ, ಅಗ್ನಿಮುಖದಿಂದಲೇ ದೇವತೆಗಳು ಆಹುತಿಗಳನ್ನು ಭಕ್ಷಿಸಿ ಹರ್ಷವನ್ನು ಪಡೆಯುವರೆಂದೂ, ಅವನೇ ದೇವತೆಗಳಿಗೆ ಅನ್ನರೂಪನೆಂದೂ ವರ್ಣಿಸಿರುವುದನ್ನು ಪ್ರಕೃತವಾದ ಋಕ್ಕಿನಲ್ಲಿ ತಿಳಿಸಿದೆ.

ವ್ಯಾಕರಣಪ್ರಕ್ರಿಯಾ

ಉದಕಮ್—ಉಂದೀಕ್ಲೇದನೇ. ಧಾತು. ಉದಕಂಚ (ಉ. ಸೂ. ೨-೧೪೭) ಎಂಬುದರಿಂದ ಕ್ವುನ್ ಪ್ರತ್ಯಯ. ಅನಿದಿತಾಂಹಲ—ಎಂಬುದರಿಂದ ಉಪಧಾ ನಕಾರಲೋಪ. ಯುವೋರನಾಕೌ (ಪಾ. ಸೂ. ೭-೧-೧) ಎಂಬುದರಿಂದ ಪ್ರತ್ಯಯಕ್ಕೆ ಅಕಾದೇಶ.

ಏತಿ—ಇಣ್ ಗತೌ. ಧಾತು. ಅದಾದಿ ಲಟ್ ಪ್ರಥಮಪುರುಷ ಏಕವಚನಾಂತರೂಪ. ಚ ಎಂಬುದರ ಸಂಬಂಧವಿರುವುರಿಂದ ಚವಾಯೋಗೇ ಪ್ರಥಮಾ (ಪಾ. ಸೂ. ೮-೧-೫೯) ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. ತಿಪ್ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ

ಪರ್ಜನ್ಯಾಃ—ಪೃಷು ಸೇಚನೇ. ಧಾತು. ಪರ್ಜನ್ಯಃ (ಉ. ಸೂ. ೩-೩೮೬) ಎಂಬುದರಿಂದ ನಿಪಾತಿತವಾಗಿದೆ. ಷಕಾರಕ್ಕೆ ಜಕಾರ, ಅನ್ಯ ಪ್ರತ್ಯಯಲಘೂಪಧ ಗುಣ ಕಾರ್ಯಗಳು ನಿಪಾತದಿಂದ ಸಿದ್ಧವಾಗುತ್ತವೆ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ಜಿನ್ವಂತಿ—ಜಿವಿ ಪ್ರೀಣನೇ. ಧಾತು. ಭ್ವಾದಿ. ಇದಿತೋನುಮ್‌ಧಾತೋಃ ಎಂಬುದರಿಂದ ನುಮಾಗಮ. ಶಪ್ ವಿಕರಣ. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಚಾದಿಲೋಪೇ ವಿಭಾಷಾ (ಪಾ. ಸೂ. ೮-೧-೬೩) ಎಂಬುದರಿಂದ ನಿಘಾತಸ್ವರ ಬರುವುದಿಲ್ಲ. ತಾಸ್ಯನುದಾತ್ತೇತ್—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುರಿಂದ ಧಾತುಸ್ವರ ಉಳಿಯುತ್ತದೆ. ಎರಡನೇರೂಪದಲ್ಲಿ ನಿಷೇಧವಿಲ್ಲದಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೫೧ ॥

ಸಂಹಿತಾಪಾಠಃ

ದಿವ್ಯಂ ಸುಪರ್ಣಂ ವಾಯಸಂ ಬೃಹಂತಮಪಾಂ ಗರ್ಭಂ ದರ್ಶತಮೋಷ-
ಧೀನಾಂ ।

ಅಭೀಪತೋ ವೃಷ್ಟಿಭಿಸ್ತರ್ಪಯಂತಂ ಸರಸ್ವಂತಮವಸೇ ಜೋಹವೀಮಿ ॥

॥ ೫೨ ॥

ಪದಪಾಠಃ

ದಿವ್ಯಂ । ಸುಽಪರ್ಣಂ । ವಾಯಸಂ । ಬೃಹಂತಂ । ಅಪಾಂ । ಗರ್ಭಂ । ದರ್ಶತಂ । ಓಷಧೀನಾಂ ।

ಅಭೀಪತಃ । ವೃಷ್ಟಿಽಭಿಃ । ತರ್ಪಯಂತಂ । ಸರಸ್ವಂತಂ । ಅವಸೇ । ಜೋಹವೀಮಿ ॥ ೫೨ ॥

ಸಾಯಣಭಾಷ್ಯಂ

ಸರಸ್ವದ್ದೇವತಾಕೇ ಪಶೌ ದಿವ್ಯಂ ಸುಪರ್ಣಮಿತಿ ವಪಾಯಾಜ್ಯಾ । ದಿವ್ಯಂ ಸುಪರ್ಣಂ ವಾಯಸಂ ಬೃಹಂತಂ ಸ ವಾವೃಧೇ ನರ್ಯೋ ಯೋಷಣಾಸು । ಆ. ೩-೮. । ಇತಿ ಸೂತ್ರಿತ್ವಾತ್ ॥ ಅನ್ವಾರಂಭಣೀಯಾಯಾಂ ಸರಸ್ವದ್ಯಾಗ ಏಷೈವ ಯಾಜ್ಯಾ । ಸೂತ್ರಿತಂ ಚ । ದಿವ್ಯಂ ಸುಪರ್ಣಂ ವಾಯಸಂ ಬೃಹಂತಮಾ ಸವಂ ಸವಿತುರ್ಯಥಾ । ಆ ೨. ೮. । ಇತಿ ॥

ದಿವ್ಯಂ ದಿವಿ ಭವಂ ಸುಪರ್ಣಂ ಶೋಭನಗಮನಂ ವಾಯಸಂ ಗಮನಶೀಲಂ ಬೃಹಂತಂ ಮಹಾಂತಮಪಾಂ ಗರ್ಭಂ ವೃಷ್ಟ್ಯುದಕಾನಾಂ ಗರ್ಭವದುತ್ಪಾದಕಂ । ಓಷಧೀನಾಮೋಷಧೀರ್ದರ್ಶತಂ ದರ್ಶನಾಯ । ದರ್ಶಯಂತಮಿತ್ಯರ್ಥಃ । ಯದ್ವಾ । ಓಷಧೀನಾಂ ಗರ್ಭಂ ದರ್ಶತಮಿತಿ ಪೃಥಗ್ವಿಶೇಷಣಂ ಕಿಂಚಾಭೀಪತ ಅನುಕೂಲ್ಯೇನ ವೃಷ್ಟಿಭಿಸ್ತರ್ಪಯಂತಂ ಜಗತ್ಪ್ರೀಣಯಂತಂ । ಯದ್ವಾ । ಅಭೀಪತೋಽಭಿಗಮನವತಃ ಸಲಿಲಾಧಾರಾಂಸ್ತಟಾಕಾದೀಂಸ್ತರ್ಪಯಂತಂ । ಅಥವಾವಭಿಗಂತಾಹಂ । ಸರಸ್ವಂತಮುದಕವಂತಂ । ಸರ ಇತ್ಯುದಕನಾಮ । ದೇವಂ ಸೂರ್ಯಂ ವಾವಸೇ ರಕ್ಷಣಾಯ ಜೋಹವೀಮಿ । ಪುನಃ ಪುನರಾಹ್ವಯಾಮಿ ॥

ಪ್ರತಿಪದಾರ್ಥ

ದಿವ್ಯಂ—ದ್ಯುಲೋಕೋತ್ಪನ್ನನೂ, । ಸುಪರ್ಣಂ—ಶ್ರೇಷ್ಠವಾದ ಪರ್ಣವುಳ್ಳವನೂ । ವಾಯಸಂ—ಗಮನಶೀಲನೂ, । ಬೃಹಂತಂ—ಮಹತ್ತಿನಿಂದ ಕೂಡಿದವನೂ, । ಅಪಾಂ ಗರ್ಭಂ—ಉದಕಗಳ ಉತ್ಪಾದಕನೂ । ಓಷಧೀನಾಂ —ಓಷಧಿಗಳ । ದರ್ಶತಂ—ಪ್ರಕಾಶಕನೂ, । ಅಭೀಪತಃ—ಅನುಕೂಲಾತ್ಮನಾಗಿ । ವೃಷ್ಟಿಭಿಃ-ವೃಷ್ಟಿಗಳಿಂದ । ತರ್ಪಯಂತಂ—(ಜಗತ್ತನ್ನು) ತೃಪ್ತಿಗೊಳಿಸುವವನೂ, । ಸರಸ್ವಂತಂ—ಉದಕದಿಂದ ಪೂರ್ಣನಾದವನೂ ಆದ ದೇವನನ್ನು । ಅವಸೇ—ರಕ್ಷಣೆಗಾಗಿ । ಜೋಹವೀಮಿ—ಪುನಃ ಪುನಃ ಕರೆಯುತ್ತೇನೆ. ।

ಭಾವಾರ್ಥ

ದ್ಯುಲೋಕೋತ್ಪನ್ನನೂ, ಶ್ರೇಷ್ಠವಾದ ಪತನಸಾಧನವುಳ್ಳವನೂ, ಗಮನಶೀಲನೂ, ಮಹತ್ತಿನಿಂದ ಕೂಡಿದವನೂ, ಉದಕಗಳ ಉತ್ಪಾದಕನೂ, ಓಷಧಿಗಳ ಪ್ರಕಾಶಕನೂ, ಅನುಕೂಲಾತ್ಮನಾಗಿ ವೃಷ್ಟಿಗಳಿಂದ ಜಗತ್ತನ್ನು ತೃಪ್ತಿಗೊಳಿಸುವವನೂ, ಉದಕದಿಂದ ಪೂರ್ಣನಾದವನೂ ಆದ ದೇವನನ್ನು ರಕ್ಷಣೆಗಾಗಿ ಪುನಃ ಪುನಃ ಕರೆಯುತ್ತೇನೆ.

## English Translation

I invoke for our protection the celestial, well-winged, swift-moving majestic (sun); who is the germ of the waters; the displayer of herbs; the cherisher of lakes; replenishing the ponds with rain.

**ವಿಶೇಷವಿಷಯಗಳು**

ಸರಸ್ವದ್ದೇವತಾಸಂಬಂಧವಾದ ಯಾಗದಲ್ಲಿ ಪಶುಹೋಮಕಾಲದಲ್ಲಿ ವಪಾಹೋಮಕ್ಕಾಗಿ ದಿವ್ಯಂ ಸುಪರ್ಣಂ ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ದಿವ್ಯಂ ಸುಪರ್ಣಂ ವಾಯಸಂ ಬೃಹಂತಂ ಸ ವಾವೃಧೇ ನರ್ಯೋ ಯೋಷಣಾಸು ಎಂಬ ಸೂತ್ರದಿಂದಲೂ (ಆ. ೩-೮) ಅನ್ವಾರಂಭಣೀಯಸಂಬಂಧವಾದ ಸರಸ್ವದ್ಯಾಗದಲ್ಲಿ ಈ ಋಕ್ಕನ್ನೇ ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ದಿವ್ಯಂ ಸುಪರ್ಣಂ ವಾಯಸಂ ಬೃಹಂತಮಾ ಸವಂ ಸವಿತುರ್ಯಥಾ ಎಂಬ ಸೂತ್ರದಿಂದಲೂ (ಆ. ೨-೮) ವಿನ್ಯಸ್ತವಾಗಿರುವುದು.

ಈ ಮಂತ್ರವು ಸರಸ್ವದ್ದೇವತಾಕವಾಗಿದೆ. "ಸರಸ್ವದ್ದೇವತಾಕೇ ಪಶೌ ದಿವ್ಯಂ ಸುಪರ್ಣಂ ಇತಿ ವಪಾಯಾಜ್ಯಾ" ಎಂದು ವಿಧಿವಾಕ್ಯವು ಈ ಮಂತ್ರದ ವಿನಿಯೋಗವನ್ನು ತಿಳಿಸುತ್ತದೆ. (ಆಶ್ವ. ಶ್ರೌ. ೩-೮) ಸಾಯಣರು ಸರಸ್ವಂತಂ ಎಂಬ ಪದಕ್ಕೆ ದೇವಂ ಸೂರ್ಯಂ ವಾ ಸರಸ್ವತ್ತೆಂಬ ದೇವತೆಯೆಂದಾಗಲಿ ಅಥವಾ ಸರಸ್ ಶಬ್ದಕ್ಕೆ ಉದಕವೆಂದರ್ಥವಾಗಿ ಸರಸ್ವತ್ತೆಂದರೆ ಉದಕಯುಕ್ತನಾದ ಸೂರ್ಯನೆಂದಾಗಲಿ ಅರ್ಥವಾಗಬಹುದೆಂದು ವಿಕಲ್ಪಾರ್ಥದಲ್ಲಿ ಹೇಳಿದ್ದಾರೆ. ಈ ಋಕ್ಕಿನಲ್ಲಿ ದಿವ್ಯಂ ಸುಪರ್ಣಂ ಇತ್ಯಾದಿವಿಶೇಷಣಗಳು ಈ ಎರಡರ್ಥಗಳನ್ನೂ ಸಮರ್ಥಿಸುತ್ತವೆ.

ನಿರುಕ್ತಕಾರರು ಸರಸ್ವತೀಶಬ್ದದ ನಿರ್ವಚನವನ್ನು ಹೇಳುವುದರಿಂದಲೇ ಸರಸ್ವತ್‌ಶಬ್ದದ ಅರ್ಥವನ್ನೂ ಹೇಳಿದಂತಾಯಿತು ಎಂದು ಸೂಚಿಸಿ ಸರಸ್ವಾನ್ ವ್ಯಾಖ್ಯಾತಃ ಎಂದು ಹೇಳಿದ್ದಾರೆ. (ನಿ. ೧೦-೨೭) ಸರಸ್ವತೀ ಶಬ್ದದ ನಿರ್ವಚನವನ್ನು ತಿಳಿಸುತ್ತಾ,

ಸರಸ್ವತೀ ಸರ ಇತ್ಯುದಕನಾಮ ಸರ್ತೇಸ್ತದ್ವತೀ ॥

(ನಿ. ೯-೨೬)

ಸರವೆಂದರೆ ಉದಕವೆಂದರ್ಥ. ಇದನ್ನುಳ್ಳವಳು ಸರಸ್ವತೀ (ಇದೇ ನದ್ಯಾತ್ಮಕವಾದ ದೇವತೆಯ ಹೆಸರಾಗಬಹುದು) ಇದೇ ವಿವರಣೆಯು ಸರಸ್ವತ್ ಶಬ್ದದ ಅರ್ಥವನ್ನೂ ಹೇಳುತ್ತದೆಂದು ತಿಳಿಸಿ ಅನಂತರ ಋಕ್ಸಂಹಿತೆಯಿಂದ,

ಯೇ ತೇ ಸರಸ್ವ ಊರ್ಮಯೋ ಮಧುಮಂತೋ ಘೃತಶ್ಚುತಃ । ತೇಭಿರ್ನೋಽವಿತಾ ಭವ ॥

(ಋ. ಸಂ. ೭-೯೬-೫)

ಎಂಬ ಋಕ್ಕನ್ನುದಹರಿಸಿ ಕೇವಲ ಪಠನದಿಂದಲೇ ಈ ಋಕ್ಕಿನ ಅರ್ಥವು ಸುಲಭವಾಗಿ ಆಗುತ್ತದೆಂದು ತಿಳಿಸಿದ್ದಾರೆ. ಆದರೂ ಸಹ, ಊರ್ಮಯಃ, ಘೃತಶ್ಚುತಃ ಇತ್ಯಾದಿಪದಗಳು ಇಲ್ಲಿ ಗಮನಾರ್ಹವಾನವಾಗಿವೆ. ಈ ದೇವತೆಯು: ಮಧ್ಯಲೋಕವರ್ತಿಯಾದ ದೇವತೆಯೆಂದು ಬೃಹದ್ದೇವತಾವಾಕ್ಯದಿಂದ ತಿಳಿಯುತ್ತದೆ.

ಮನ್ಯುಶ್ಚ ವಿಶ್ವಕರ್ಮಾ ಚ ಮಿತ್ರಃ ಕ್ಷೇತ್ರಪತಿರ್ಯಮಃ ।

ತಾರ್ಕ್ಷ್ಯೋಽಪಾಂ ನಪಾತ್ ವಾಸ್ತೋಷ್ಪತಿಶ್ಚೈವ ಸರಸ್ವಾಂಶ್ಚೈವಮತ್ರ ಹ ||

(ಬೃ. ದೇ. ೧-೧೨೩)

ಇಂದ್ರನ ವಾಸಸ್ಥಾನವಾದ ಮಧ್ಯಮಲೋಕದಲ್ಲಿ ಮನ್ಯು, ವಿಶ್ವಕರ್ಮ, ಸರಸ್ವಾನ್ ಇತ್ಯಾದಿ ದೇವತೆಗಳೆಲ್ಲರೂ ಸಹ ಇಂದ್ರನೊಡನೆ ಸೇರಿಕೊಂಡಿರುತ್ತಾರೆ.

ಸರಾಂಸಿ ಘೃತವಂತ್ಯಸ್ಯ ಸಂತಿ ಲೋಕೇಷು ಯತ್ರಿಷು |
ಸರಸ್ವಂತಮಿತಿ ಪ್ರಾಹ ವಾಚಂ ಪ್ರಾಹುಃ ಸರಸ್ವತೀಂ ||

(ಬೃ. ದೆ. ೨-೫೧)

ಮೂರು ಲೋಕಗಳಲ್ಲೂ ಘೃತಪೂರ್ಣವಾದ ಸರಸ್ಸುಳ್ಳವನಾದುದರಿಂದ ಈ ದೇವತೆಗೆ ಸರಸ್ವತ್ತೆಂಬ ಹೆಸರು ಪ್ರಸಿದ್ಧ ವಾಯಿತು. ಹೀಗೆಯೇ ವಾಗ್ದೇವತೆಯು ಸರಸ್ವತಿಯಾದಳು.

ಮಾತಾಪುತ್ರೌ ತು ವಾಕ್ಪ್ರಾಣೌ ಮಾತಾ ವಾಗಿತರಃ ಸುತಃ |
ಸರಸ್ವಂತಮಿತಿ ಪ್ರಾಣೋ ವಾಚಂ ಪ್ರಾಹುಃ ಸರಸ್ವತೀಂ ||

(ಬೃ. ದೇ. ೪-೩೯)

ವಾಕ್ಕೇ ಮಾತೃವು; ಪ್ರಾಣವೇ ಪುತ್ರನು. ಸರಸ್ವತ್ ಶಬ್ದದಿಂದ ಪ್ರಾಣವೂ, ಸರಸ್ವತೀಶಬ್ದದಿಂದ ವಾಕ್ಕೂ ನಿರ್ದಿಷ್ಟವಾಗಿವೆ. ಅವರಿಬ್ಬರಿಗೂ ಮಾತೃಪುತ್ರಸಂಬಂಧವಾಯಿತು.

ಇಂದ್ರಂ ಮಿತ್ರಮಿನೋ ಸೌತ್ಯಾ ಸೌರೀ ವಾಂತ್ಯಾ ಸರಸ್ವತೇ |

(ಬೃ. ದೇ. ೪-೪೨)

೨-೧-೬೪ ನೇ ಸೂಕ್ತದಲ್ಲಿ ಅಂತ್ಯಮಂತ್ರವಾದ 'ದಿವ್ಯಂ ಸುಪರ್ಣಂ' ಎಂಬುದು ಮೇಲೆ ತಿಳಿಸಿದ ಸರಸ್ವದ್ದೇವತಾಕ ವಾಗಿದೆ ಎಂದು ಬೃಹದ್ದೇವತೆಯಿಂದ ಸ್ಪಷ್ಟವಾಗಿ ತಿಳಿಯುತ್ತದೆ. ಶತಪಥಬ್ರಾಹ್ಮಣದಲ್ಲಿ ಸರಸ್ವತ್ ಮತ್ತು ಸರಸ್ವತೀ ಎಂಬ ಎರಡು ದೇವತೆಗಳ ಸಂಬಂಧವನ್ನು ತಿಳಿಸುತ್ತಾ ಅವರನ್ನು ಉದ್ದೇಶಿಸಿ ಅರ್ಪಿತವಾಗುವ ಆಹುತಿಯ ವಿಭಾಗ ವನ್ನು ಈ ರೀತಿ ಹೇಳಿವೆ.

ತದ್ಧೈಕೇ | ಚರೂ ನಿರ್ವಪಂತಿ ಪೌರ್ಣಮಾಸ್ಯಾಂ ಸರಸ್ವತೇಽಮಾವಾಸ್ಯಾಯಾಂ ಸರಸ್ವತ್ಯಾ ಏತತ್ಪ್ರತ್ಯಕ್ಷಂ ದರ್ಶಪೂರ್ಣಮಾಸೌ ಯಜಾಮಹ ಇತಿ ವದಂತಸ್ತದು ತಥಾ ನ ಕುರ್ಯಾ- ನ್ಮನೋ ವೈ ಸರಸ್ವಾನ್ವಾಕ್ಸರಸ್ವತೀ ಸ ಯದೇವೈತಾವಾಘಾರಯತಿ ತದೇವಾಸ್ಯ ದರ್ಶಪೂರ್ಣ- ಮಾಸಾವಿಷ್ಟೌ ಭವತಸ್ತಸ್ಮಾದೇತೌ ಚರೂ ನ ನಿರ್ವಪೇತ್ |

(ಶ. ಬ್ರಾ. ೧೧-೨-೪-೯)

ಸರಸ್ವತ್ತೇ ಮನಸ್ಸು, ಸರಸ್ವತಿಯೇ ವಾಕ್ಕು ; ದರ್ಶಪೂರ್ಣಮಾಸಾದಿಗಳಲ್ಲಿ ಆಘಾರಗಳ ಅರ್ಪಣೆಯೇ ಸಾಕಾಗಿರುವುದ ರಿಂದ ಚರೂನಿರ್ವಪನವು ಅವಶ್ಯವಲ್ಲವೆಂದು ತಿಳಿಸುವಾಗ ಸರಸ್ವತ್ತಿಗೂ ಸರಸ್ವತಿಗೂ ಇರುವ ಸಂಬಂಧವನ್ನೂ ಹೇಳಿದೆ

ಸಾಯಣರು ಅರ್ಥಮಾಡಿರುವಂತೆ ಪ್ರಕೃತವಾದ ಋಕ್ಕಿನಲ್ಲಿ ಸರಸ್ವಂತಂ-ಉದಕವಂತಂ | ಸರ ಇತ್ಯುದಕನಾಮ | ದೇವಂ ಸೂರ್ಯಂ ವಾ | ಸರಸ್ವದ್ದೇವತೆಯೆಂದಾಗಲಿ ಅಥವಾ ಉದಕವಂತನಾದ

ಸೂರ್ಯನೆಂದಾಗಲಿ ಅರ್ಥವಾಗುತ್ತದೆ. ಒಂದು ವೇಳೆ ಸೂರ್ಯನೆಂದರ್ಥಮಾಡಿದರೂ ಸಹ ಸರಸ್ವಾನ್ ಎಂಬ ವಿಶೇಷಣವು ಈ ಸಂದರ್ಭದಲ್ಲಿ ಹೊಂದಿಕೊಳ್ಳುತ್ತದೆ. ಉದಕವು ಸೂರ್ಯನ ಅಂತರ್ಗತವಾಗಿಲ್ಲದಿದ್ದರೂ ಸಹ ಸೂರ್ಯನು ಉದಕದ ಮಧ್ಯದಲ್ಲಿ ಪರಿಭ್ರಮಣವನ್ನು ಮಾಡುತ್ತಿರುವುದರಿಂದಲೂ, ಅಥವಾ ಉದಕದ ಉತ್ಪಾದಕನಾಗಿರುವುದರಿಂದಲೂ ಈ ವಿಶೇಷಣವು ಉಚಿತವಾಗಿರುವುದೆಂದು ಶತಪಥಾದಿವಾಕ್ಯಗಳ ವರ್ಣನೆಯಿಂದ ತಿಳಿಯುತ್ತದೆ.

ಅಪಾಂ ಗಂಭನ್ತ್ಸೀದೇತಿ । ಏತದ್ವಾಪಾಂ ಗಂಭಿಷ್ಠಂ ಯತ್ರೈಷ ಏತತ್ತಪತಿ ।

(ಶ. ಬ್ರಾ. ೭-೫-೧-೮)

ಸೂರ್ಯನು ಅಂತರಿಕ್ಷದಲ್ಲಿ ಗಭೀರವಾದ ಉದಕದ ಮಧ್ಯದಲ್ಲಿ ಪ್ರಕಾಶಿಸುತ್ತಿದ್ದಾನೆ.

ಅಗ್ನೇ ದಿವೋಽರ್ಣಮಚ್ಛಾ ಜಿಗಾಸೀತಿ । ಅಪೋ ವಾ ಅಸ್ಯ ದಿವೋಽರ್ಣಸ್ತಾ ............... ಯೋ ರೋಚನೇ ಪರಸ್ತಾತ್ಸೂರ್ಯಸ್ಯ ॥

(ಶ. ಬ್ರಾ. ೭-೧-೧-೨೪)

ಎಲೈ ಅಗ್ನಿಯೇ, [ಸರಸ್ವತ್ತೆಂಬ ದೇವತೆಯೂ ಸಹ ಮಧ್ಯಲೋಕವರ್ತಿಯಾದ ಅಗ್ನಿಯ ರೂಪಾಂತರವೆಂದೂ ಹೇಳಬಹುದು]. ದ್ಯುಲೋಕದಲ್ಲಿ ನಿನ್ನ ತೇಜಸ್ಸೆಲ್ಲವೂ ಆದಿತ್ಯರೂಪದಲ್ಲಿ ಪ್ರಕಾಶಿಸುತ್ತಿದೆ. ಅಂತರಿಕ್ಷಸ್ಥವಾದ ಪ್ರವಾಹದಲ್ಲಿ ನೀನು ಬೆಳಗುತ್ತಿದ್ದೀಯೆ. ಆ ಪ್ರವಾಹವು ಅಂತರಿಕ್ಷಸ್ಥವಾದ ಉದಕದಿಂದ ವ್ಯಾಪ್ತವಾಗಿದೆ. ಆ ಉದಕದ ಪ್ರವಾಹವು ಆದಿತ್ಯನ ತೇಜೋಮಂಡಲವನ್ನೂ ಮೀರಿದೆ. ಕೆಳಗೂ, ಮೇಲೂ, ಸುತ್ತಲೂ ವ್ಯಾಪಿಸಿರುವ ಪ್ರವಾಹದ ನಡುವೆ ಆದಿತ್ಯರೂಪದ ಅಗ್ನಿಯು ಪ್ರಕಾಶಿಸುತ್ತಿದ್ದಾನೆ, ಇತ್ಯಾದಿಯಾಗಿ ವರ್ಣಿತವಾಗಿದೆ. ಸರಸ್ವಾನ್ ಎಂಬ ವಿಶೇಷಣವಿರುವುದರಿಂದ ಸರಸ್ವತೀ ನಾಮಕವಾದ ನದಿಗೂ ಸಂಬಂಧವಿರಬಹುದೆಂದು ಊಹಿಸಬಹುದು. Macdonell ಎಂಬ ಪಂಡಿತನು ಬೃಹದ್ದೇವತೆಯಲ್ಲಿರುವ ಈ ದೇವತಾಪರವಾದ ವಾಕ್ಯಗಳನ್ನು ಪರಿವರ್ತಿಸುವಾಗ ತನ್ನ ಅಭಿಪ್ರಾಯವನ್ನು ಈ ರೀತಿ ತಿಳಿಸಿದ್ದಾನೆ.

Yaska does not explain this word Saraswati (Nirukta. X. 24) he merely remarks ಸರಸ್ವಾನ್ ವ್ಯಾಖ್ಯಾತಃ This must refer to Nir. II. 23. where ಸರಸ್ವತೀ is stated to be a name of ವಾಕ್ (R. V. VI. 61-2) being quoted as an example of ಸರಸ್ವತೀ as a river, while examples of her as a goddess (ಮಧ್ಯಸ್ಥಾನಾ ಸ್ತ್ರೀ) were deffered to Nir. XI. 25-27.

(Brihaddevata. II. 51. Translation and notes, by Macdonell. p. 44.)

ಸುಪರ್ಣಃ ವಾಯಸಂ ಎಂಬ ಎರಡು ವಿಶೇಷಣಗಳಿವೆ. ಸಾಯಣರು ಸುಪರ್ಣಶಬ್ದಕ್ಕೆ ಶೋಭನಗಮನಂ ಎಂದೂ, ವಾಯಸಂ ಎಂಬ ಶಬ್ದಕ್ಕೆ ಗಮನಶೀಲಂ ಎಂದೂ ಅರ್ಥಮಾಡಿದ್ದಾರೆ. Wilson ಎಂಬುವನು ಸುಪರ್ಣಶಬ್ದಕ್ಕೆ Well-Winged ಎಂದು ಅರ್ಥಹೇಳಿರುವುದು ಉಚಿತವಾಗಿರುವಂತೆ ಕಾಣುತ್ತದೆ.

ಸುಪರ್ಣಶಬ್ದವು ರಶ್ಮಿನಾಮಗಳಲ್ಲಿಯೂ (ನಿ. ೨-೧೫) ಅಶ್ವನಾಮಗಳಲ್ಲಿಯೂ (ನಿ. ೨-೨೭) ಪಠಿತವಾಗಿದೆಯಾದರೂ, ಪಕ್ಷಿ, ಬಾಣ ಇತ್ಯಾದ್ಯರ್ಥಗಳಲ್ಲಿಯೂ ಸಹ ಉಪಯೋಗಿಸಲ್ಪಟ್ಟಿದೆ. ಯಾವ ಅರ್ಥವನ್ನು ಹೇಳಿದರೂ ಸಹ ಶೋಭನಪತನ, ಎಂದರೆ ಮನೋಹರವಾಗಿ ಸಂಚರಿಸತಕ್ಕದ್ದು ಎಂಬರ್ಥವನ್ನೇ ತಿಳಿಸಿದೆ. ಈ ಪದದ ನಿರ್ವಚನವನ್ನೂ, ಬೇರೆ ಬೇರೆ ಅರ್ಥಗಳಲ್ಲಿ ಇದರ ಪ್ರಯೋಗಗಳನ್ನೂ ಸಹ ಇದೇ ಭಾಗದ 42ನೇ ಪೇಜಿನಲ್ಲಿ ತಿಳಿ

ಸಿದೆ. ಪ್ರಕೃತವಾದ ಋಕ್ಕಿನಲ್ಲಿ ಗಮನಸಾಧನವೆಂಬರ್ಥವನ್ನು ಹೇಳಬಹುದು. ಉಳಿದ ವಿಶೇಷಣಗಳು ಸ್ಪಷ್ಟಾರ್ಥಗಳುಳ್ಳವಾಗಿಯೇ ಇವೆ. ಸಂತಾನೇಚ್ಛೆಯುಳ್ಳವರು ಸರಸ್ವದ್ದೇವತೆಯನ್ನು ಆರಾಧಿಸುವ ವಾಡಿಕೆಯಿರುವುದಾಗಿ ಕೆಲವು ಸನ್ನಿವೇಶಗಳಿಂದ ತಿಳಿಯುತ್ತದೆ. Muir ಎಂಬುವನು ಈ ಅಂಶವನ್ನು ವಿವರಿಸುತ್ತಾ ತನ್ನ ಅಭಿಪ್ರಾಯವನ್ನು ಕೆಳಗಿನ ವಾಕ್ಯಗಳಲ್ಲಿ ತಿಳಿಸಿದ್ದಾನೆ. ಅವನು ಹೇಳುವಂತೆ,

" In VII, 96. 4-6, a river God called ಸರಸ್ವತ್, is assigned as a consort to ಸರಸ್ವತೀ, who rolls along his fertilizing waters and is invoked by the worshippers who are seeking for wives and offspring, as well as for plenty and protection "

( Muir. original Sanskrit Texts. Vol. V. p. 340 )

ಸರಸ್ವತೀನದಿಯ ಪತಿಯೂ, ನದ್ಯಾತ್ಮಕವಾದ ದೇವತೆಯೂ ಆದ ಸರಸ್ವದ್ದೇವತೆಯನ್ನು ಪತ್ನೀಕಾಮರೂ, ಪುತ್ರಕಾಮರೂ, ಸಂಪತ್ತನ್ನು ಪಡೆಯಲಿಚ್ಛೆಯುಳ್ಳವರೂ ಸಹ ಪ್ರಾರ್ಥಿಸುತ್ತಾರೆ. ಋಕ್ಸಂಹಿತೆಯಲ್ಲಿ ಈ ಪ್ರಾರ್ಥನಾ ವಿಶೇಷವು ಈ ದೇವತೆಯ ಮಹತ್ತ್ವವನ್ನು ಸೂಚಿಸುತ್ತದೆ. ಇದನ್ನು ಸಂಕ್ಷೇಪವಾಗಿ ಇಲ್ಲಿ ಉದಹಂಸಲಾಗುತ್ತದೆ.

ಜನೀಯಂತೋ ನಗ್ರವಃ ಪುತ್ರೀಯಂತಃ ಸುದಾನವಃ । ಸರಸ್ವಂತಂ ಹವಾಮಹೇ ।

(ಋ. ಸಂ. ೭-೯೬-೪)

ಪತ್ನಿಯರನ್ನು ಅಪೇಕ್ಷಿಸುವವರೂ, ಪುತ್ರೇಚ್ಛೆಯುಳ್ಳವರೂ, ಶ್ರೇಷ್ಠವಾದ ದಾತೃಗಳೂ ಆದ ನಾವು ನಮ್ಮ ಇಷ್ಟಾರ್ಥಗಳನ್ನು ನೆರವೇರಿಸಿಕೊಡಬೇಕೆಂದು ಸರಸ್ವಂತನನ್ನು ಪ್ರಾರ್ಥಿಸುತ್ತೇವೆ.

ಯೇ ತೇ ಸರಸ್ವ ಊರ್ಮಯೋ ಮಧುಮಂತೋ ಘೃತಶ್ಚುತಃ । ತೇಭಿರ್ನೋಽವಿತಾ ಭವ ।

(ಋ. ಸಂ. ೭-೯೬-೫)

ಎಲೈ ಸರಸ್ವದ್ದೇವತೆಯೇ, ನಿನ್ನ ಜಲಸಂಘಗಳು ರಸವತ್ತಾಗಿವೆ. ವೃಷ್ಟ್ಯುದಕವನ್ನು ಸುರಿಸುವವಾಗಿವೆ. ನಿನ್ನ ಜಲ ಸಂಘಗಳಿಂದ ನಮ್ಮೆಲ್ಲರನ್ನೂ ರಕ್ಷಿಸು.

ಪೀಪಿವಾಂಸಂ ಸರಸ್ವತಃ ಸ್ತನಂ ಯೋ ವಿಶ್ವದರ್ಶತಃ । ಭಕ್ಷೀಮಹಿ ಪ್ರಜಾಮಿಷಂ ॥

(ಋ. ಸಂ ೭-೯೬-೬)

ಸರಸ್ವದ್ದೇವತೆಯ ಪ್ರವೃದ್ಧವಾದುದೂ, ಸ್ತನದಂತೆ ರಸಾಧಾರವಾದುದೂ ಆದ ಮೇಘವನ್ನು ನಾವು ಭಜಿಸುತ್ತೇವೆ. ಆ ದೇವತೆಯು ನಮಗೆ ಪ್ರತ್ಯಕ್ಷನಾಗುತ್ತಾನೆ. ಅವನ ಅನುಗ್ರಹದಿಂದ ನಾವೆಲ್ಲರೂ ಪುತ್ರಾದಿಗಳನ್ನೂ ಅನ್ನ ಸಂಪತ್ತನ್ನೂ ಪಡೆದು ಸುಖವನ್ನನುಭವಿಸುತ್ತೇವೆ. ಇತ್ಯಾದಿಯಾಗಿ ಈ ದೇವತೆಯನ್ನು ಪ್ರಾರ್ಥಿಸಿದೆ.

ತೈತ್ತಿರೀಯಸಂಹಿತೆಯಲ್ಲಿ ಈ ದೇವತೆಯು ಪಶುಗಳಿಗೂ, ಉದಕಗಳಿಗೂ ಪ್ರಭುವೆಂದು ಪ್ರಶಂಸಿಸುತ್ತಾ,

ಯಸ್ಯ ವ್ರತಂ ಪಶವೋ ಯಂತಿ ಸರ್ವೇ ಯಸ್ಯ ವ್ರತಮುಪತಿಷ್ಠಂತ ಆಪಃ ॥
ಯಸ್ಯ ವ್ರತೇ ಪುಷ್ಟಿಪತಿರ್ನಿವಿಷ್ಟಸ್ತಗ್ಂ ಸರಸ್ವಂತಮವಸೇ ಹುವೇಮ ॥

(ತೈ. ಸಂ ೩-೧-೧೧-೩)

ಯಾವ ದೇವತೆಯ ಅನುಶಾಸನವನ್ನು ಪಶುಗಳೆಲ್ಲವೂ ಪಾಲಿಸುತ್ತವೆಯೋ, ಯಾವ ದೇವತೆಯ ನಿಯಮವನ್ನು ಉದಕಗಳೆಲ್ಲವೂ ಪರಿಪಾಲಿಸುತ್ತವೆಯೋ ಅಂತಹ ಸರಸ್ವದ್ದೇವತೆಯನ್ನು ನಾವು ರಕ್ಷಣೆಗಾಗಿ ಪ್ರಾರ್ಥಿಸಿ ಕರೆಯುತ್ತೇವೆ ಆ ದೇವತೆಯ ಅಧೀನದಲ್ಲಿಯೇ ಪುಷ್ಟಿಪತಿಯೂ ಸಹ ಆಶ್ರಯವನ್ನು ಪಡೆದಿರುತ್ತಾನೆ- ಇತ್ಯಾದಿಯಾಗಿ ಪ್ರಾರ್ಥಿಸಿದೆ. ಇದೇ ಸಂದರ್ಭದಲ್ಲಿ ಮೇಲೆ ಉದಹರಿಸಿರುವ " ಯೇ ತೇ ಸರಸ್ವ .... .... .... .... .... " (ಋ. ಸಂ. ೭-೯೬-೫) ಎಂಬ ಋಕ್ಕನ್ನೂ ಪ್ರಕೃತವಾದ " ದಿವ್ಯಂ ಸುಪರ್ಣಂ .... .... .... .... " (ಋ. ೧-೧೬೪-೫೨) ಎಂಬ ಋಕ್ಕನ್ನೂ ಸಹ ಪಠಿಸಿ ಈ ದೇವತೆಯ ರಕ್ಷಣೆಯನ್ನು ಕೋರಿದೆ-

॥ ವ್ಯಾಕರಣಪ್ರಕ್ರಿಯಾ ॥

ದಿವ್ಯಮ್—ದಿವಿ ಭವಃ ತಮ್. ದಂಡಾದಿಭ್ಯೋಯಃ ಎಂಬುದರಿಂದ ಯ ಪ್ರತ್ಯಯ. ಪ್ರತ್ಯಯಸ್ವರ ದಿಂದ ಅಂತೋದಾತ್ತವಾಗುತ್ತದೆ.

ವಾಯಸಮ್—ವಯ ಗತೌ ಧಾತು. ವಯೆಶ್ಚ (ಉ. ಸೂ. ೪-೪೦೦) ಎಂಬುದರಿಂದ ಅಸಚ್ ಪ್ರತ್ಯಯ. ಣಿತ್ ಎಂದು ಹಿಂದಿನ ಸೂತ್ರದಿಂದ ಅನುವೃತ್ತವಾಗುವುದರಿಂದ ಅತಉಪಧಾಯಾಃ (ಪಾ. ಸೂ. ೭-೨-೧೧೬) ಎಂಬುದರಿಂದ ಆದಿವೃದ್ಧಿ ಬರುತ್ತದೆ ಚಿತಃ (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ಅಪಾಂ—ಊಡಿದಂ ಪದಾದಿ-(ಪಾ ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

ದರ್ಶತಮ್—ದೃಶಿರ್ ಪ್ರೇಕ್ಷಣೇ ಧಾತು. ಭೃಮೃದೃಶಿಯಜಿ-(ಉ. ಸೂ. ೩-೩೯೦) ಎಂಬುದರಿಂದ ಅತಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಉಪಧೆಗೆ ಗುಣ. ಚಿತ್ತಾದುದರಿಂದ ಚಿತಃ ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ

ಅಭೀಪತಃ—ಪತ್ಲೃ ಗತೌ ಧಾತು. ಅಚ್ ಪ್ರತ್ಯಯ. । ಅನ್ಯೇಷಾಮಪಿ ದೃಶ್ಯತೇ ಎಂಬುದರಿಂದ ಪೂರ್ವಕ್ಕೆ ದೀರ್ಘ. ಗತಿಕಾರಕೋಪಪದಾತ್‌ಕೃತ್ ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ

ವೃಷ್ಟಿಭಿಃ—ವೃಷು ಸೇಚನೇ ಧಾತು. ಕ್ತಿನ್ ಪ್ರತ್ಯಯ. ಮಂತ್ರೇವೃಷೇಷಪಚೆ—(ಪಾ. ಸೂ. ೩-೩-೯೬) ಎಂಬುದರಿಂದ ಅದು ಉದಾತ್ತವಾಗುತ್ತದೆ. ತೃತೀಯಾಬಹುವಚನಾಂತರೂಪ.

ತರ್ಪಯಂತಮ್—ತೃಪ ತೃಪ್ತೌ ಧಾತು. ಹೇತುಮತಿ ಚ (ಪಾ ಸೂ. ೩-೧-೨೬) ಎಂಬುದರಿಂದ ಣಿಚ್ ಪ್ರತ್ಯಯ. ಪುಂಗತೆಲಘೂಪಧಸ್ಯಚ (ಪಾ. ಸೂ ೭-೩-೮೬) ಎಂಬುದರಿಂದ ಲಘೂಪಧಗುಣ. ಣಿಜಂತದ ಮೇಲೆ ಲಟಿಗೆ ಶತ್ರಾದೇಶ ಶಪ್ ವಿಕರಣ. ಅದನ್ನು ನಿಮಿತ್ತೀಕರಿಸಿ ಣಿಚಿಗೆ ಗುಣ. ಆಯಾದೇಶ. ಣಿಚ್‌ಸ್ವರ ಉಳಿಯುತ್ತದೆ. ತಾಸ್ಯನುದಾತ್ತೇತ್-ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುತ್ತದೆ. ದ್ವಿತೀಯಾಏಕ ವಚನದಲ್ಲಿ ಉಗಿತ್ತಾದುದರಿಂದ ನುಮಾಗಮ.

ಅವಸೇ-—ಅವ ರಕ್ಷಣೇ ಧಾತು. ಸರ್ವಧಾತುಭ್ಯಅಸುನ್ ಎಂಬುದರಿಂದ ಅಸುನ್ ಪ್ರತ್ಯಯ. ನಿತ್ತಾ ದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಜೋಹವೀಮಿ—ಹು ದಾನಾದನಯೋಃ ಧಾತು. ಪೌನಃಪುನ್ಯಾರ್ಥ ತೋರುವಾಗ ಧಾತೋರೇಕಾ-ಚಃ ಕ್ರಿ—(ಪಾ. ಸೂ. ೩-೧-೨೨) ಎಂಬುದರಿಂದ ಯಜ್ ಬಂದಾಗ ಯಙೋಚಿಚ (ಪಾ. ಸೂ. ೨-೪-೭೪) ಎಂಬುದರಿಂದ ಅದಕ್ಕೆ ಲುಕ್. ಯಙ್‌ನಿಮಿತ್ತವಾಗಿ ದ್ವಿತ್ವಾದಿಗಳು ಬಂದಾಗ ಗುಣೋಯಙ್‌ಲುಕೋಃ (ಪಾ. ಸೂ. ೭-೪-೮೨) ಎಂಬುದರಿಂದ ಅಭ್ಯಾಸದ ಉಕಾರಕ್ಕೆ ಗುಣ. ಯಙೋವಾ (ಪಾ. ಸೂ. ೭-೩-೯೪) ಎಂಬುದರಿಂದ ಮಿಪಿಗೆ ಈಡಾಡಮು. ಪ್ರತ್ಯಯನಿಮಿತ್ತವಾಗಿ ಧಾತು ಉಕಾರಕ್ಕೆ ಗುಣ- ಅವಾದೇಶ. ಅತಿಙಂತವ ಪರವಲ್ಲಿರುವುದ ರಿಂದ ನಿಘಾತಸ್ವರ ಬರುತ್ತದೆ. ॥ ೫೨ ॥

ಇಲ್ಲಿಗೆ ೧೬೪ನೇ ಸೂಕ್ತವು ಮುಗಿದುದು.

———೩೦೩———

# ನೂರ ಅರವತ್ತೈದನೆಯ ಸೂಕ್ತವು

—··—

ತ್ರಯೋವಿಂಶೇಽನುವಾಕೇ ಪಂಚದಶ ಸೂಕ್ತಾನಿ । ತತ್ರ ಕಯಾ ಶುಭೇತಿ ಪಂಚದಶರ್ಚಂ ಪ್ರಥಮಂ ಸೂಕ್ತಂ ತ್ರೈಷ್ಟುಭಂ । ಅತ್ರಾನುಕ್ರಮಣಿಕಾ । ಕಯಾ ಪಂಚೋನಾ ಸಂವಾದಸ್ತೃತೀಯಾ-ದ್ಯಯುಜೋ ಮರುತಾಂ ವಾಕ್ಯಮಂತ್ಯಸ್ತ್ರ್ಯಗಸ್ತ್ಯಸ್ಯ ಶಿಷ್ಟಾ ಇಂದ್ರಸ್ಯೈಕಾದಶೀ ಚ ಮರುತ್ವಾಂ-ಸ್ತ್ವಿಂದ್ರೋ ದೇವತೇತಿ । ಅತ್ರೇಂದ್ರಾಗಸ್ತ್ಯಮರುತಾಂ ಸಂವಾದಃ ಪ್ರತಿಪಾದ್ಯತೇ । ತತ್ರ ತೃತೀಯಾ-ಪಂಚಮೀಸಪ್ತಮೀನವಮೀನಾಂ ಮರುದ್ವಾಕ್ಯರೂಪತ್ವಾತ್ತ ಏವರ್ಷಯಃ । ಯಸ್ಯ ವಾಕ್ಯಂ ಸ ಋಷಿಃ । ಅನು ೨-೪ । ಇತಿ ನ್ಯಾಯಾತ್ । ಅಂತ್ಯತೃಚಸ್ಯಾಗಸ್ತ್ಯವಾಕ್ಯತ್ವಾತ್ಸ ಏವರ್ಷಿಃ । ಶಿಷ್ಟಾ ಯುಜ ಆದ್ಯಾ ಚೈಕಾದಶೀ ಚೇಂದ್ರಸ್ಯ ವಾಕ್ಯಂ । ಅತಃ ಸ ಏವರ್ಷಿಃ । ಅತ್ರ ಯಾ ತೇನೋಚ್ಯತೇ ಸಾ ದೇವತಾ । ಅನು ೨-೫ । ಇತಿ ಸಾಮಾನ್ಯಾಪವಾದೇನ ಕೃತ್ಸ್ನಸ್ಯ ಮರುತ್ವದ್ಗಣಕ ಇಂದ್ರೋ ದೇವತಾ ॥ ಸಂಸವಜಾತು-ರ್ವಿಂಶಕಯೋರ್ಮರುತ್ವತೀಯಶಸ್ತ್ರೇ ನಿವಿದ್ಧಾನೀಯಾತ್ಪೂರ್ವಮೇತತ್ಸೂಕ್ತಂ । ಯದಿ ಪರ್ಯಾಯಾನ್ಮ-ರುತ್ವತೀಯ ಇತಿ ಖಂಡಯೋಃ ಸೂತ್ರಿತಂ । ಕಯಾ ಶುಭೇತಿ ಚ ಮರುತ್ವತೀಯೇ ಪುರಸ್ತಾತ್ಸೂಕ್ತಸ್ಯ ಶಂಸೇತ್ । ಆ. ೬-೬-೭-೩ । ಇತಿ ॥ ಅಭಿಪ್ಲವಿಕೇ ಪಂಚಮೇಽಹನಿ ಮರುತ್ವತೀಯ ಏತದೇವ ಸೂಕ್ತಂ । ಪಂಚಮಸ್ಯ ಕಯಾ ಶುಭಾ ಯಸ್ತಿಗ್ಮಶೃಂಗ ಇತಿ ಮಧ್ಯಂದಿನಃ । ಆ ೭ ೭ । ಇತಿ ಸೂತ್ರಿತತ್ವಾತ್ ॥ ಮಹಾವ್ರತೇ ಮರುತ್ವತೀಯಶಸ್ತ್ರ ಏತತ್ಸೂಕ್ತಂ । ಪಂಚಮಾರಣ್ಯಕೇ ಕಯಾ ಶುಭಾ ಸವಯಸಃ ಸನೀಳಾ ಮರುತ್ವಾँ ಇಂದ್ರ ವೃಷಭೋ ರಣಾಯ । ಐ. ಆ. ೫ ೧-೧ । ಇತ್ಯುಕ್ತತ್ವಾತ್ ॥ ವಿಷುವತಿ ಮರುತ್ವತೀಯ ಏತದೇವ ನಿವಿದ್ಧಾನೀಯಂ । ತ್ಯಂ ಸು ಮೇಷಂ ಕಯಾ ಶುಭೇತಿ ಚ ಮರುತ್ವತೀಯಂ । ಆ. ೮-೬ । ಇತಿ ಸೂತ್ರಿತತ್ವಾತ್ ॥ ಅಸ್ಯ ವಿನಿಯೋಗಂ ಶೌನಕ ಆಹ । ಜ್ಞಾತಿಪುತ್ರಸುಹೃನ್ಮಿತ್ರೈರ್ಯಶ್ಚ ರಾಜ್ಯಂ ಚಿಕೀ-ರ್ಷತಿ ನಿತ್ಯಂ ಸ ನಿಯತೋ ಭೂತ್ವಾ ಸೂಕ್ತಂ ತು ಮನಸಾ ಜಪೇತ್ । ಕಯಾ ಶುಭೇತಿ ಪೈಶುನ್ಯಂ ಕೃತ್ವಾಚಾರ್ಯನೃಪದ್ವಿಜೈಃ । ಶ್ರುತ್ವಾ ಪರರಹಸ್ಯಂ ತು ಗುರೋರಪ್ಯಾಹ ಶೌನಕಃ । ಋಗ್ವಿ. ೧-೨೬ । ಇತಿ ॥

ಅನುವಾದವು—ಈ ಸೂಕ್ತದಿಂದ ಪ್ರಥಮಮಂಡಲದ ಇಪ್ಪತ್ತಮೂರನೆಯ ಅನುವಾಕವು ಪ್ರಾರಂಭವಾಗುವುದು. ಈ ಅನುವಾಕದಲ್ಲಿ ಹದಿನೈದು ಸೂಕ್ತಗಳಿರುವುವು. ಅವುಗಳಲ್ಲಿ ಕಯಾ ಶುಭಾ ಎಂಬ ಮೊದಲನೆಯ ಸೂಕ್ತದಲ್ಲಿ ಹದಿನೈದು ಋಕ್ಕುಗಳಿರುವುವು. ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—ಕಯಾ ಸಂಚೋನಾ ಸಂವಾದಸ್ತ್ರ್ಯತೀಯಾದ್ಯಯುಜೋ ಮರುತಾಂ ವಾಕ್ಯಮಂತ್ಯಸ್ತ್ರ್ಯಚೋಽಗಸ್ತ್ಯಸ್ಯ ಶಿಷ್ಟಾ ಇಂದ್ರಸ್ಯೈಕಾದಶೀ ಚ ಮರುತ್ವಾಂಸ್ತ್ವಿಂದ್ರೋ ದೇವತೇತಿ ಎಂದು ಹೇಳಿರುವುದು. ಈ ಸೂಕ್ತದಲ್ಲಿ ಇಂದ್ರ, ಅಗಸ್ತ್ಯ, ಮರುದ್ದೇವತೆಗಳು ಇವರುಗಳಿಗೆ ನಡೆದ ಸಂವಾದವು ಪ್ರತಿಪಾದಿತವಾಗಿದೆ. ಆದುದರಿಂದ ಈ ಸೂಕ್ತದಲ್ಲಿ ಮೂರು ಐದು, ಏಳು, ಒಂಭತ್ತನೆಯ ಋಕ್ಕುಗಳು ಮರುದ್ವಾಕ್ಯಗಳಾದುದರಿಂದ ಆ ಋಕ್ಕುಗಳಿಗೆ ಮರುತ್ತುಗಳೇ ಋಷಿಗಳು. ಯಸ್ಯ ವಾಕ್ಯಂ ಸ ಋಷಿಃ–ಋಕ್ಕಿನಲ್ಲಿ ವಾಕ್ಯವನ್ನು ಯಾರು ಹೇಳುವರೋ ಅವರೇ ಆ ಋಕ್ಕಿಗೆ ಋಷಿಯು ಎಂದು, ಅನುಕ್ರಮಣಿಕೆಯಲ್ಲಿ (ಅನು ೨–೪) ಹೇಳಿರುವುದು. ಕೊನೆಯ ಮೂರು ಋಕ್ಕುಗಳು ಅಗಸ್ತ್ಯವಾಕ್ಯಗಳಾದುದರಿಂದ ಆ ಋಕ್ಕುಗಳಿಗೆ ಅಗಸ್ತ್ಯನೇ ಋಷಿಯು. ಉಳಿದ ಋಕ್ಕುಗಳು, ಮೊದಲನೆಯ ಋಕ್ಕು ಹನ್ನೊಂದನೆಯ ಋಕು ಇವೆಲ್ಲವೂ ಇಂದ್ರನ ವಾಕ್ಯಗಳು. ಆದ್ದರಿಂದ ಆ ಋಕ್ಕುಗಳಿಗೆ ಇಂದ್ರನೇ ಋಷಿಯು. ಮತ್ತು ದೇವತೆಯ ವಿಷಯ್ಕದಲ್ಲಿ—ಯಾ ತೆನೋಚ್ಯತೇ ಸಾ ದೇವತಾ—ಋಕ್ಕಿನಲ್ಲಿ ಹೇಳಿರುವ ವಿಷಯವೇ ಆ ಋಕ್ಕಿಗೆ ದೇವತೆಯು ಎಂದು ಅನುಕ್ರಮಣಿಕೆಯಲ್ಲಿ (ಅನು ೨–೫) ಹೇಳಿರುವುದರಿಂದಲೂ ಮುಖ್ಯವಾಗಿ ಈ ಸೂಕ್ತದಲ್ಲಿ ಇಂದ್ರಮರುತ್ತುಗಳು ಪ್ರತಿಪಾದಿತವಾಗಿರುವುದರಿಂದಲೂ, ಒಟ್ಟು ಸೂಕ್ತಕ್ಕೆ ಮರುದ್ದೇವತೆಗಳಿಂದ ಯುಕ್ತವಾದ ಇಂದ್ರನೇ ದೇವತೆಯು. ಈ ಸೂಕ್ತದ ವಿನಿಯೋಗವು, ಈ ಪ್ರಕಾರವಾಗಿರುವುದು-(1) ಸಂಸವ ಮತ್ತು ಚಾತುರ್ವಿಂಶಕಸಂಬಂಧವಾದ ಮರುತ್ವತೀಯಶಸ್ತ್ರಮಂತ್ರ ಪಠನಕಾಲದಲ್ಲಿ ನಿವಿನ್ಮಂತ್ರಕ್ಕೆ ಪೂರ್ವಭಾವಿಯಾಗಿ ಈಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ ಯದಿ ಪರ್ಯಾಯಾನ್ಮರುತ್ವತೀಯೇ ಎಂಬ ಖಂಡಗಳ ಕಯಾ ಶುಭೇತಿ ಚ ಮರುತ್ವತೀಯೇ ಪುರಸ್ತಾತ್ಸೂಕ್ತಸ್ಯಶಂಸೇತ್ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೬-೬ ; ೭-೩) ಮತ್ತು (2) ಅಭಿಪ್ಲವವೆಂಬ ಯಾಗದ ಐದನೆಯ ದಿವಸದಲ್ಲಿ ಮರುತ್ವತೀಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತವನ್ನು ಪಠಿಸಬೇಕೆಂದು ಪಂಚಮಸ್ಯ ಕಯಾ ಶುಭಾ ಯಸ್ತಿಗ್ಮಶೃಂಗ ಇತಿ ಮಧ್ಯಂದಿನಃ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೭-೭) (3) ಮಹಾವ್ರತದಲ್ಲಿ ಮರುತ್ವತೀಯಶಸ್ತ್ರಮಂತ್ರಗಳ ಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಐತರೇಯಾರಣ್ಯಕ್ಯದ ಪಂಚಮಾರಣ್ಯಕದಲ್ಲಿ ಕಯಾ ಶುಭಾ ಸವಯಸಃ ಸನೀಳಾ ಮರುತ್ವಾँ ಇಂದ್ರ ವೃಷಭೋ ರಣಾಯ ಎಂಬ ವಾಕ್ಯದಿಂದ ನಿರ್ದಿಷ್ಟವಾಗಿರುವುದು. (ಐ. ಆ ೫-೧-೧) (4) ವಿಷುವದ್ಯಾಗದಲ್ಲಿ ಮರುತ್ವತೀಯ ಸಂಬಂಧವಾದ ನಿವಿನ್ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ ತ್ಯಂ ಸು ಮೇಷಂ ಕಯಾ ಶುಭೇತಿ ಚ ಮರುತ್ವತೀಯಂ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೬) ಮತ್ತು ಈ ಸೂಕ್ತದ ವಿನಿಯೋಗದಲ್ಲಿ ಶೌನಕಮಹರ್ಷಿಯು ತಮ್ಮ ಋಗ್ವಿಧಾನವೆಂಬ ಗ್ರಂಥದಲ್ಲಿ—

ಜ್ಞಾತಿಪುತ್ರಸುಹೃನ್ಮಿತ್ರೈರ್ಯಶ್ಚ ರಾಜ್ಯಂ ಚಿಕೀರ್ಷತಿ ।
ನಿತ್ಯಂ ಸ ನಿಯತೋ ಭೂತ್ವಾ ಸೂಕ್ತಂ ತು ಮನಸಾ ಜಪೇತ್ ॥
ಕಯಾ ಶುಭೇತಿ ಪೈಶುನ್ಯಂ ಕೃತ್ವಾಚಾರ್ಯನೃಪದ್ವಿಜೈಃ ।
ಶ್ರುತ್ವಾ ಪರರಹಸ್ಯಂ ತು ಗುರೋರಪ್ಯಾಹ ಶೌನಕಃ ॥

( ಋಗ್ವಿ. ೧-೨೬ )

ಎಂದು ಹೇಳಿರುವರು ಎಂದರೆ ಯಾವ ರಾಜನು ತನ್ನ ಪುತ್ರಮಿತ್ರಸುಹೃದ್ಬಾಂಧವಾದಿಗಳಿಂದ ಕೂಡಿ ಶತ್ರುಗಳ ಬಾಧೆಯಿಲ್ಲದಂತೆ ರಾಜ್ಯಭಾರವನ್ನು ಮಾಡಬೇಕೆಂದು ಅಪೇಕ್ಷಿಸುವನೋ ಅವನು ಕಯಾ ಶುಭಾ ಎಂಬ ಈ ಸೂಕ್ತವನ್ನು ಪ್ರತಿದಿವಸವೂ ಮನಸ್ಸಿನಲ್ಲಿ ಭಕ್ತಿಯಿಂದ ಜಪಮಾಡಬೇಕು. ಹೀಗೆ ಮಾಡುವುದರಿಂದ ಪರರಾಜರ ರಹಸ್ಯಾದಿಗಳು ಗೊತ್ತಾಗಿ ಅವುಗಳಿಂದ ತಾನು ಪಾರಾಗಿ ವಿಜಯಿಯಾಗುವನು ಎಂದು ಹೇಳಿದೆ.

---

॥ ಓಂ ॥

## ಸೂಕ್ತ—೧೬೫

---

॥ ಮಂಡಲ—೧ ॥ ಅನುವಾಕ—೨೩ ॥ ಸೂಕ್ತ—೧೬೫ ॥

॥ ಅಷ್ಟಕ— ೨ ॥ ಅಧ್ಯಾಯ— ೩ ॥ ವರ್ಗ— ೨೪, ೨೫, ೨೬, ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥

॥ ಋಷಿಃ—೧, ೨, ೪, ೬, ೮, ೧೦-೧೨. ಇಂದ್ರಃ ।

೩, ೫, ೭, ೯. ಮರುತಃ । ೧೩-೧೫. ಅಗಸ್ತ್ಯಃ ॥

॥ ದೇವತಾ—ಮರುತ್ವಾನಿಂದ್ರಃ ॥

॥ ಛಂದಃ—ತ್ರಿಷ್ಟುಪ್ ॥

---

ಸಂಹಿತಾಪಾಠಃ

ಕಯಾ ಶುಭಾ ಸವಯಸಃ ಸನೀಳಾಃ ಸಮಾನ್ಯಾ ಮರುತಃ ಸಂ ಮಿಮಿಕ್ಷುಃ ।
ಕಯಾ ಮತೀ ಕುತ ಏತಾಸ ಏತೇಽರ್ಚಂತಿ ಶುಷ್ಮಂ ವೃಷಣೋ
ವಸೂಯಾ ॥ ೧ ॥

ಪದಪಾಠಃ

ಕಯಾ । ಶುಭಾ । ಸಽವಯಸಃ । ಸಽನೀಳಾಃ । ಸಮಾನ್ಯಾ । ಮರುತಃ । ಸಂ । ಮಿಮಿಕ್ಷುಃ ।
ಕಯಾ । ಮತೀ । ಕುತಃ । ಆಽಇತಾಸಃ । ಏತೇ । ಅರ್ಚಂತಿ । ಶುಷ್ಮಂ । ವೃಷಣಃ । ವಸುಽಯಾ ॥ ೧ ॥

ಸಾಯಣಭಾಷ್ಯಂ

ಇಂದ್ರವಾಕ್ಯಂ । ಸವಯಸಃ ಸಮಾನವಯಸ್ಕಾಃ ಸನೀಳಾಃ ಸಮಾನಸ್ಥಾನಾ ಏತೇ ಮರುತಃ ಕಯಾ ಶುಭಾ ಕೈರಪಿ ದುರ್ಜ್ಞೇಯಯಾ ಶೋಭಯಾ ಸಮಾನ್ಯಾ ಸರ್ವೇಷಾಮೇಕರೂಪಯಾ ಮಹತ್ಯಾ ಯುಕ್ತಾಃ । ಯದ್ವಾ । ಶುಬಿತ್ಯುದಕನಾಮ । ಉಕ್ತರೂಪಯಾ ಶುಭೋದಕೇನ । ಸಂ ಮಿಮಿಕ್ಷುಃ । ಲೋಕಂ ಸಮ್ಯಕ್ ಸಿಂಚಂತಿ ॥ ಮಿಹಿಸಮಾನಾರ್ಥೋ ಮಿಮಿಕ್ಷತಿಧಾತುಃ ॥ ಯದ್ವಾ ಮಾಂ ಯುದ್ಧಾದಿಷು ಪ್ರವರ್ತಮಾನಂ ಸಂ ಮಿಮಿಕ್ಷುಃ । ತದರ್ಥಮೇತೇ ಮರುತಃ ಕಯಾನಿಶ್ಚೇಯಯಾ ಮತೀ ಮತ್ಯಾ ಕುತೋ ದೇಶಾದೇತಾಸಃ । ಆಗತಾಃ । ಆಗತ್ಯ ಚೈತೇ ವೃಷಣೋ ವರ್ಷಿತಾರೋ ವಸೂಯಾ ವಸೂಯಯಾ ॥ ಸುಪಾಂ ಸುಲುಗಿತಿ ಪೂರ್ವಸವರ್ಣದೀರ್ಘಃ ॥ ಧನೇಚ್ಛಯಾ । ಯದ್ವಾ । ವಸವೋ ವಾಸಯಿತಾರೋ ವಾ ॥ ತೇನೈವ ಜಸೋ ಯಾಜಾದೇಶಃ ॥ ಶುಷ್ಮಂ ಬಲಂ ವೃಷ್ಟಿಪ್ರದಾನಜನಿತಂ ಲೋಕೇಽರ್ಚಂತಿ । ಪೂಜಯಂತಿ । ಜಗತಿ ಕುರ್ವಂತಿ । ಯದ್ವಾ । ಮಮ ಬಲಂ ವರ್ಧಯಂತೀತ್ಯರ್ಥಃ । ಮರುತೋ ಹೈನಂ ನಾಜಹುಃ । ಐ. ಬ್ರಾ. ೩-೨೦ । ಇತಿ ಶ್ರುತೇಃ । ಅತ್ರೇಂದ್ರಮರುತ್ಸಂವಾದರೂಪೇ ಸರ್ವತ್ರ ಪ್ರಾಣಜೀವಾತ್ಮಪರತಯಾಪಿ ಯೋಜನೀಯಂ । ಅತ್ರಾಪೀಂದ್ರೋ ಬ್ರೂತೇ ॥

ಪ್ರತಿಪದಾರ್ಥ

ಸವಯಸಃ—ಒಂದೇ ವಯಸ್ಸುಳ್ಳವರೂ, । ಸನೀಳಾಃ—ಒಂದೇ ವಾಸಸ್ಥಾನವುಳ್ಳವರೂ, ಆದ । ಮರುತಃ—ಈ ಮರುತ್ತುಗಳು । ಕಯಾ ಶುಭಾ—( ಸ್ಥೂಲವಾದ ದೃಷ್ಟಿಗೆ ಗೋಚರವಲ್ಲದ ) ಯಾವ ಪ್ರಭೆಯಿಂದಲೂ । ಸಮಾನ್ಯಾ—ಒಂದೇ ರೀತಿಯಾದ ಮಹತ್ತಿನಿಂದಲೂ ಕೂಡಿದವರಾಗಿ । ಸಂ ಮಿಮಿಕ್ಷುಃ—ಉದಕದಿಂದ (ಲೋಕವನ್ನು) ಸಿಂಚಿಸುತ್ತಾರೆ ? । ಕಯಾ ಮತೀ—ಯಾವ ಉದ್ದಿಶ್ಯವುಳ್ಳವರಾಗಿದ್ದಾರೆ ? । ಕುತಃ—ಯಾವ ಪ್ರದೇಶದಿಂದ । ಏತಾಸಃ—ಈ ಮರುತ್ತುಗಳು ಬಂದಿದ್ದಾರೆ ? । ವೃಷಣಃ—ವೃಷ್ಟಿಯನ್ನು ಸುರಿಸುವವರಾದ । ಏತೇ—ಈ ಮರುತ್ತುಗಳು । ವಸೂಯಾ—ಧನೇಚ್ಛೆಯಿಂದ । ಶುಷ್ಮಂ—ಬಲವನ್ನು । ಅರ್ಚಂತಿ—ಪೂಜಿಸುತ್ತಾರೆ.

ಭಾವಾರ್ಥ

ಒಂದೇ ವಯಸ್ಸುಳ್ಳವರೂ, ಒಂದೇ ವಾಸಸ್ಥಾನವುಳ್ಳವರೂ ಆದ ಈ ಮರುತ್ತುಗಳು ಸ್ಥೂಲವಾದ ದೃಷ್ಟಿಗೆ ಗೋಚರವಲ್ಲದ ಯಾವ ಪ್ರಭೆಯಿಂದಲೂ, ಒಂದೇ ರೀತಿಯಾದ ಮಹತ್ತಿನಿಂದಲೂ, ಕೂಡಿದವರಾಗಿ ಲೋಕಕ್ಕೆಲ್ಲಾ ಉದಕವನ್ನು ಸಿಂಚಿಸುತ್ತಾರೆ ? ಇವರ ಉದ್ದಿಶ್ಯವೇನು ? ಇವರು ಎಲ್ಲಿಂದ ಬಂದಿದ್ದಾರೆ ? ವೃಷ್ಟಿಯನ್ನು ಸುರಿಸುವವರಾದ ಈ ಮರುತ್ತುಗಳು ಧನೇಚ್ಛೆಯಿಂದ ಶಕ್ತಿಪೂಜಕರಾಗಿದ್ದಾರೆ

## English Translation

(Indra speaks),—With what auspicious fortune have the Maruts, who are of one age, one residence, one dignity, watered (the earth) together ? with what intention ? whence have they come ? Showerers of rain, they venerate, through desire of wealth, the energy (theat is granted in the world by rain).

### ವಿಶೇಷವಿಷಯಗಳು

ಇಲ್ಲಿಂದ ಪ್ರಥಮಮಂಡಲದ ಕೊನೆಯವರೆಗೂ ಅಗಸ್ತ್ಯಋಷಿಯಿಂದ ನಿರ್ಮಿತವಾದ ಒಟ್ಟು ೨೭ ಸೂಕ್ತಗಳಿವೆ. ಇವು ಇಂದ್ರ, ಮರುತ್ತುಗಳು, ಅಶ್ವಿನೀದೇವತೆಗಳು, ದ್ಯಾವಾಪೃಥಿವಿಗಳು, ಅನ್ನ, ಬೃಹಸ್ಪತಿ ಇತ್ಯಾದಿ ದೇವತೆಗಳನ್ನು ಉದ್ದೇಶಿಸಿ ಪಠಿಸಿದ ಸೂಕ್ತಗಳಾಗಿವೆ. ಈ ೨೭ ಸೂಕ್ತಗಳನ್ನೂ ಬೃಹದ್ದೇವತೆಯಲ್ಲಿ ಎರಡು ಪಂಗಡಗಳಾಗಿ ವಿಭಾಗಿಸಿದೆ. ೧೬೫ ರಿಂದ ೧೭೦ ನೇ ಸೂಕ್ತದವರೆಗೆ ಇಂದ್ರನಿಗೂ ಮರುತ್ತುಗಳಿಗೂ ನಡೆದ ಸಂಭಾಷಣೆಯನ್ನೂ ಮತ್ತು ಇವರ ನಡುವೆ ಅಗಸ್ತ್ಯಋಷಿಯು ಪ್ರವೇಶಿಸಿ ಮರುತ್ತುಗಳನ್ನೂ ಇಂದ್ರನನ್ನೂ ಸ್ತುತಿಸಿ ಅವರಿಗೆ ಸಮಾಧಾನವನ್ನುಂಟುಮಾಡಿದುದನ್ನೂ ಕಥಾರೂಪವಾಗಿ ತಿಳಿಸಿದೆ. ೧೭೧ ರಿಂದ ೧೯೧ ರವರಿಗೆ ಅಗಸ್ತ್ಯನಿಗೂ ಲೋಪಾಮುದ್ರೆಗೂ ಇರುವ ಸಂಬಂಧವನ್ನೂ ಪ್ರೇಮವನ್ನೂ ತಿಳಿಸುವ ಸಂದರ್ಭದಲ್ಲಿ ನಿರ್ಮಿತವಾದ ಸೂಕ್ತಗಳಾಗಿವೆ.

ಪ್ರಕೃತವಾದ ಸೂಕ್ತದಲ್ಲಿ (೧-೧೫) ಇಂದ್ರನಿಗೂ ಮರುತ್ತುಗಳಿಗೂ ನಡೆದ ಸಂಭಾಷಣೆಯನ್ನೂ, ಆ ಮಧ್ಯದಲ್ಲಿ ಅಗಸ್ತ್ಯಋಷಿಯ ಸಮಾಧಾನಕರವಾದ ಸ್ತುತಿಯನ್ನೂ ವರ್ಣಿಸಿರುವುದರಿಂದ, ಈ ಸಂಭಾಷಣೆಯ ಸ್ವರೂಪ, ಇದಕ್ಕೆ ಕಾರಣ, ಈ ನಡುವೆ ಅಗಸ್ತ್ಯಋಷಿಯು ಪ್ರವೇಶಿಸುವುದರ ಔಚಿತ್ಯ, ಅಗಸ್ತ್ಯಋಷಿಯ ಪೂರ್ವ ಕಥೆ ಇತ್ಯಾದಿಗಳನ್ನು ತಿಳಿಯಬೇಕಾದುದು ಅಗತ್ಯವಾಗಿರುತ್ತದೆ. ಇವುಗಳಲ್ಲಿ ಇಂದ್ರನಿಗೂ, ಮರುತ್ತುಗಳಿಗೂ ನಡೆದ ಸಂಭಾಷಣೆಯ ಸ್ವರೂಪವನ್ನು ಬೃಹದ್ದೇವತೆಯಲ್ಲಿ ಸಂಕ್ಷೇಪವಾಗಿ ತಿಳಿಸಿದೆ-

ಮಾರುತ್ಯೈಂದ್ರಸ್ತು ಸಂವಾದಃ ಕಯೇತಿ ಪರಮಃ ಸ್ಮೃತಃ ।
ಮರುತಾಮುಯುಜಸ್ತ್ವೈಂದ್ರ್ಯೋ ಯುಗ್ಮಾಃ ಸರ್ವಾಃ ಸಹಾಂತ್ಯಯಾ ॥
ಏಕಾದಶೀ ಪ್ರಥಮಾ ಚ ಮಾರುತೆಸ್ತ್ವೃಚಿ ಉತ್ತರಃ ।
ತೃಚಸ್ಯೈವ ತು ತತ್ಪ್ರೋಕ್ತಂ ಕರ್ತೃತ್ವಮಿತರಸ್ಯ ತು ॥

( ಬೃ. ದೇ. ೪-೪೪, ೪೫ )

' ಕಯಾ ಶುಭಾ ' ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವು ಇಂದ್ರನಿಗೂ ಮರುತ್ತುಗಳಿಗೂ ನಡೆದ ಸಂಭಾಷಣೆಯ ಮುಖ್ಯಾಂಶವನ್ನು ತಿಳಿಸುವುದಾಗಿ ಹಿಂದಿನಿಂದಲೂ ಪ್ರಶಂಸಿತವಾಗಿದೆ. ಇವುಗಳಲ್ಲಿ ವಿಷಮಸಂಖ್ಯೆಯುಳ್ಳ ಋಕ್ಕುಗಳೆಲ್ಲವೂ ಮರುದ್ವಾಕ್ಯಗಳು. ಸಮ .ಸಂಖ್ಯೆಯುಳ್ಳವೂ, ಮೊದಲನೆಯದೂ, ಹನ್ನೊಂದನೆಯದೂ ಮತ್ತು ಕೊನೆಯದೂ ಸಹ ಇಂದ್ರವಾಕ್ಯಗಳು. ೧೩ರಿಂದ ೧೫ರವರೆಗಿನ ಋಕ್ಕುಗಳು ಮರುತ್ತುಗಳನ್ನುದ್ದೇಶಿಸಿ ಪಠಿತವಾಗಿವೆ. ಅವುಗಳ ನಿರ್ಮಾತೃತ್ವವು ಬೇರೆಯವರಿಗೆ ಸೇರಿದುದಾಗಿದೆ.

ಇತಿಹಾಸಃ ಪುರಾವೃತ್ತ ಋಷಿಭಿಃ ಪರಿಕೀರ್ತ್ಯತೇ ।
ಸಮಾಗಚ್ಛನ್ಮರುದ್ಭಿಸ್ತು ಚರನ್ವ್ಯೋಮ್ನಿ ಶತಕ್ರತುಃ ॥
ದೃಷ್ಟ್ವಾ ತುಷ್ಟಾವ ತಾನಿಂದ್ರಸ್ತೇ ಚೇಂದ್ರಮೃಷಯೋಽಬ್ರುವನ್ ।
ತೇಷಾಮಗಸ್ತ್ಯಃ ಸಂವಾದಂ ತಪಸಾ ವೇದ ತತ್ತ್ವತಃ ॥

( ಬೃ. ದೇ. ೪-೪೬, ೪೭ )

ಇಂದ್ರನು ಅಂತರಿಕ್ಷದಲ್ಲಿ ಸಂಚರಿಸುತ್ತಿದ್ದಾಗ ಒಂದು ಸಲ ಮರುತ್ತುಗಳನ್ನು ಸಂದರ್ಶಿಸಿದನು. ಅವರನ್ನು ನೋಡಿ ಜೊಡನೆಯೇ ಇಂದ್ರನು ಅವರನ್ನು ಸ್ತುತಿಸಿದನು ಅವರೂ ಸಹ ಇಂದ್ರನನ್ನು ಸ್ತುತಿಸಿದರು. ಅಗಸ್ತ್ಯನು ತನ್ನ

ತಪೋಮಹಿಮೆಯಿಂದ ಅವರವರ ಸಂಭಾಷಣೆಯನ್ನು ಗ್ರಹಿಸಿದನು, ಎಂದು ಹಿಂದೆ ನಡೆದ ಒಂದು ವೃತ್ತಾಂತವನ್ನು ಇಲ್ಲಿ ಕಥಾರೂಪದಲ್ಲಿ ತಿಳಿಸಿದೆ. ಮತ್ತು,

ಸ ತಾನಭಿಜಗಾಮಾಶು ನಿರೂಪ್ಯೈಂದ್ರಂ ಹವಿಸ್ತದಾ ।
ಮರುತಶ್ಚಾಭಿತುಷ್ಟಾವ ಸೂಕ್ತೈಸ್ತನ್ನಿತ್ತಿ ಚ ತ್ರಿಭಿಃ ॥

( ಬೃ. ದೇ. ೪-೪೮ )

ಅಗಸ್ತ್ಯನು ಅವರ ಸಂಭಾಷಣೆಯನ್ನು ಗ್ರಹಿಸಿದೊಡನೆಯೇ ತಾನೂ ಅವರಿಗಭಿಮುಖವಾಗಿ ಹೋಗಿ ಇಂದ್ರನಿಗಾಗಿ ಹವಿಸ್ಸನ್ನು ಸಿದ್ಧಪಡಿಸಿದನು. ಜೊತೆಯಲ್ಲಿಯೇ ತೆನ್ನುವೋಚಾಮ ಇತ್ಯಾದಿ ಮಂತ್ರಗಳಿಂದ ಕೂಡಿದ ಮೂರು ಸೂಕ್ತಗಳನ್ನು ( ೧-೧೬೬ ರಿಂದ ೧೬೮ ) ರಚಿಸಿ ಮರುತ್ತುಗಳನ್ನೂ ಸ್ತುತಿಸಿದನು ಎಂಬ ವಿವರಣೆಯಿದೆ.

ಇಂದ್ರನಿಗೂ ಮರುತ್ತುಗಳಿಗೂ ಇರುವ ಶಾಶ್ವತವಾದ ಸಾಹಚರ್ಯವು ಶ್ರುತಿಪ್ರಸಿದ್ಧವಾದುದು. ಅವರವರಿಗೆ ಇರುವ ರಾಜಪ್ರಜಾಸಂಬಂಧವೂ, ಮರುತ್ತುಗಳೊಡಗೂಡಿದ ಇಂದ್ರನಿಗೆ ಮುಖ್ಯವಾದ ಯಜ್ಞಕ್ರಿಯೆಗಳಲ್ಲಿ ಹವಿಸ್ಸಿನ ಅರ್ಪಣೆಯೂ, ಮತ್ತು ವೃತ್ರಾಸುರನೊಡನೆ ಯುದ್ಧವನ್ನು ನಡೆಸುವಾಗ ಇಂದ್ರನಿಗೆ ಮರುತ್ತುಗಳು ಸಹಾಯಮಾಡಿರುವುದೂ, ಸಂಹಿತೆಗಳಲ್ಲಿಯೂ ಬ್ರಾಹ್ಮಣಗಳಲ್ಲಿಯೂ ಅನೇಕಕಡೆ ಸ್ತುತಿಸಲ್ಪಟ್ಟಿದೆ. ಇಂದ್ರನು ಮರುತ್ತುಗಳೊಡನೆ ಸೇರಿಕೊಂಡು ಉಳಿದ ದೇವತೆಗಳಿಂದ ಪ್ರತ್ಯೇಕವಾಗಿ ಇದ್ದುದನ್ನು ಹೇಳುವ ಪೂರ್ವ ಕಥೆಯೊಂದನ್ನು ಶತಪಥಬ್ರಾಹ್ಮಣದಲ್ಲಿ ಹೇಳಿದೆ.

ಆತಿಥ್ಯೇನ ವೈ ದೇವಾ ಇಷ್ಟ್ವಾ । ತಾನ್ತ್ಸಮದವಿದಂತ್ತೇ ಚತುರ್ಧಾವ್ಯದ್ರವನ್ನನ್ಯೋಽನ್ಯಸ್ಯ ಶ್ರಿಯಾ ಅತಿಷ್ಠಮಾನಾ ಅಗ್ನಿರ್ವಸುಭಿಃ, ಸೋಮೋ ರುದ್ರೈರ್ವರುಣ ಆದಿತ್ಯೈರಿಂದ್ರೋ ಮರುದ್ಭಿರ್ಬೃಹಸ್ಪತಿರ್ವಿಶ್ವೇದೇವೈಃ ॥

( ಶ ಬ್ರಾ. ೩-೪-೨-೧ )

ಹಿಂದೆ ದೇವತೆಗಳು ಆತಿಥ್ಯಕ್ರಿಯೆಯನ್ನು ನೆರವೇರಿಸಿದಾಗ ಅವರವರಲ್ಲೇ ವೈಮನಸ್ಯವುಂಟಾಗಿ ಒಬ್ಬರಿಗೊಬ್ಬರು ಸೋಲಲಿಷ್ಟಪಡದೇ ನಾಲ್ಕು ಗುಂಪುಮಾಡಿಕೊಂಡು ಬೇರೆ ಬೇರೆ ಯಾದರು. ಅಗ್ನಿಯು ವಸುಗಳೊಂದಿಗೂ. ಸೋಮನು ರುದ್ರರೊಂದಿಗೂ ವರುಣನು ಆದಿತ್ಯರೊಂದಿಗೂ, ಇಂದ್ರನು ಮರುತ್ತುಗಳೊಂದಿಗೂ, ಮತ್ತು ಬೃಹಸ್ಪತಿಯು ವಿಶ್ವೇದೇವತೆಗಳೊಂದಿಗೂ ಕೂಡಿಕೊಂಡು ಪ್ರತ್ಯೇಕವಾದ ಗುಂಪುಮಾಡಿಕೊಂಡರು, ಎಂಬ ಕಥೆಯಲ್ಲಿ ಇಂದ್ರನು ಮರುತ್ತುಗಳೊಡನೆ ಸಾಹಚರ್ಯವನ್ನು ಬೆಳಸಿ ಅವರೊಡನೆ ಇಟ್ಟುಕೊಂಡಿರುವ ನಿಕಟವಾದ ಸಂಬಂಧವನ್ನು ಹೇಳಿರುವುದು. ಇದೂ ಅಲ್ಲದೆ, ಇಂದ್ರನೇ ದೊರೆಯೆಂದೂ, ಮರುತ್ತುಗಳೇ ಪ್ರಜೆಗಳೆಂದೂ ಅನೇಕಕಡೆ ಹೇಳಿದೆ. ಉದಾಹರಣೆಗೆ—

ಕ್ಷತ್ರಂ ವಾ ಇಂದ್ರೋ ವಿಶೋ ಮರುತೋ ವಿಶಾ ವೈ ಕ್ಷತ್ರಿಯೋ ಬಲವಾನ್ ಭವತಿ ।

( ಶ ಬ್ರಾ ೪-೩-೩-೬ )

ಇಂದ್ರನು ಕ್ಷಾತ್ರತೇಜಸ್ಸುಳ್ಳ ರಾಜನು. ಮರುತ್ತುಗಳೇ ಪ್ರಜೆಗಳು. ಪ್ರಜೆಗಳ ಸಹಕಾರದಿಂದಲೇ ರಾಜನು ಶಕ್ತಿಯುಳ್ಳವನಾಗಿ ಆಗುತ್ತಾನೆಂದೂ ಮರುತ್ತುಗಳ ಸಹಾಯದಿಂದ ಇಂದ್ರನ ಪರಾಕ್ರಮವು ವೃದ್ಧಿಯನ್ನು ಪಡೆಯಿತೆಂದೂ ಸೂಚಿಸಿದೆ. ಈ ರೀತಿಯಾದ ನಿಕಟವಾದ ಸಂಬಂಧವೂ ಸಾಹಚರ್ಯವೂ ಇರುವುದರಿಂದಲೇ ಇಂದ್ರನನ್ನೂ ಮರುತ್ತುಗಳನ್ನೂ ಒಟ್ಟಿಗೆ ಉದ್ದೇಶಿಸಿ ಹವಿಸ್ಸುಗಳನ್ನೂ ಅರ್ಪಿಸುವ ಕ್ರಮವೂ ಶ್ರುತಿಗಳಲ್ಲಿ ಕಂಡುಬರುತ್ತದೆ. ಮತ್ತು

ಸ ನೋ ಮರುದ್ಭಿರ್ವೃಷಭ ಶ್ರವೋ ಧಾ ಉಗ್ರ ಉಗ್ರೇಭಿಃ ಸ್ಥವಿರಃ ಸಹೋದಾಃ ।

( ಋ. ಸಂ. ೧-೧೭೧-೫ )

ಎಂಬಿವೇ ಮುಂತಾದ ಋಕ್ಕುಗಳಿಂದ ಇಂದ್ರನಿಗೂ ಮರುತ್ತುಗಳಿಗೂ ಒಟ್ಟಿಗೆ ಸೇರಿಸಿ ಆಹ್ವಾನವೂ ಹವಿಸ್ಸಿನ ಅರ್ಪಣೆಯೂ ಇದೆ. ಈ ರೀತಿಯ ಸಾಹಚರ್ಯವನ್ನು ವರ್ಣಿಸಿ ಬೃಹದ್ದೇವತೆಯಲ್ಲಿ—

ಮರುದ್ಭಿಃ ಸಹ ಯತ್ರೇಂದ್ರೋ ಮರುತ್ವಾಂಸ್ತತ್ರ ಸೋಽಭವತ್ ।

( ಬೃ. ದೇ. ೪-೫೬ )

ಇತ್ಯಾದಿ ವಾಕ್ಯಗಳಿಂದ ಈ ದೇವತೆಗಳ ಸಂಬಂಧಸೂಚಕವಾದ ವಿಶೇಷಣವನ್ನು ವಿವರಿಸಿದೆ. ಆದರೆ ಪ್ರಕೃತವಾದ ಸೂಕ್ತದಲ್ಲಿ ಇಂದ್ರನಿಗೂ ಮರುತ್ತುಗಳಿಗೂ ನಡೆದ ವಾಗ್ವಾದವನ್ನೂ ಅವರವರ ವೈಷಮ್ಯವನ್ನೂ ವರ್ಣಿಸಿ ಆ ಕಾಲದಲ್ಲಿ ಅಗಸ್ತ್ಯಋಷಿಯು ಅವರಿಗೆ ಸಮಾಧಾನವನ್ನುಂಟುಮಾಡಿದುದಾಗಿ ತಿಳಿಸಿದೆ

ಮಹಾವ್ರತೇ ಮರುತ್ವತೀಯಶಸ್ತ್ರೇ ಏತತ್ಸೂಕ್ತಂ । ' ಕಯಾ ಶುಭಾ ಸವಯಸಃ.... .... .... ' ( ಐ. ಆ. ೫-೧-೧ ) ಇತ್ಯುಕ್ತತ್ವಾತ್ । ವಿಷುವತಿ ಮರುತ್ವತೀಯೇ ಏತದೇವ ನಿವಿದ್ಧಾನೀಯಂ । ಮರುತ್ವತೀಯಶಸ್ತ್ರದಲ್ಲಿ ಈ ಸೂಕ್ತವು ಪಠಿತವಾಗಿದೆ. ಮತ್ತು ಮರುತ್ವತೀಯಶಸ್ತ್ರದ ವಿಧಿಯಿರುವಾಗಲೆಲ್ಲಾ ಈ ಸೂಕ್ತವು ಪಠಿತವಾಗಬೇಕು ಎಂಬ ವಿಧಿಯನ್ನು ಸಾಯಣರು ಉದಹರಿಸಿದ್ದಾರೆ. ಮರುತ್ವತೀಯಶಸ್ತ್ರದ ಪ್ರಕರಣ ವನ್ನು ಪರಿಶೀಲಿಸಿದರೆ ಅಲ್ಲಿ ಇಂದ್ರನು ಮರುತ್ತುಗಳು ತನ್ನಲ್ಲಿ ತೋರಿಸಿದ ವಿಶ್ವಾಸದ ಗುರುತಾಗಿ ತನಗೆ ಅರ್ಪಿತವಾದ ಹವಿಸ್ಸಿನಲ್ಲಿ ಅವರಿಗೂ ಸಹ ಭಾಗವು ದೊರೆಯಬೇಕೆಂದಪೇಕ್ಷಿಸುವುದು ಸ್ಪಷ್ಟವಾಗಿದೆ.

ಇಂದ್ರೋ ವೈ ವೃತ್ರಂ ಹನಿಷ್ಯನ್ಸರ್ವಾ ದೇವತಾ ಅಬ್ರವೀದನು ಮೋಪತಿಷ್ಠಧ್ವಮುಪ ಮಾ ಹ್ವಯಧ್ವಮಿತಿ ತಥೇತಿ ತಂ ಹನಿಷ್ಯಂತ ಆದ್ರವನ್ಸೋಽವೇನ್ಮಾಂ ವೈ ಹನಿಷ್ಯಂತ ಆದ್ರವಂತಿ ಹಂತೇಮಾನ್ ಭೀಷಯಾ ಇತಿ ತಾನಭಿಪ್ರಾಶ್ವಸೀತ್ತಸ್ಯ ಶ್ವಸಥಾದೀಷಮಾಣಾ ವಿಶ್ವೇ ದೇವಾ ಅದ್ರವನ್ಮರುತೋ ಹೈನಂ ನಾಜಹುಃ ಪ್ರಹರ ಭಗವೋ ಜಹಿ ವೀರಯಸ್ವೇತ್ಯೇವೈನಮೇತಾಂ ವಾಚಂ ವದಂತ ಉಪಾತಿಷ್ಠಂತ ।

( ಐ. ಬ್ರಾ. ೩-೨೦ )

ವೃತ್ರನನ್ನು ಹನನಮಾಡುವ ಕಾಲದಲ್ಲಿ ಇಂದ್ರನು ಎಲ್ಲಾ ದೇವತೆಗಳನ್ನೂ ಉದ್ದೇಶಿಸಿ " ನೀವು ನನಗೆ ಈ ವೃತ್ರಾ ಸುರನನ್ನು ಕೊಲ್ಲುವ ಕೆಲಸದಲ್ಲಿ ಸಹಾಯವನ್ನು ಮಾಡಿ " ಎಂದು ಹೇಳಿಕೊಂಡಾಗ ಅವರು ಹಾಗೆಯೇ ಆಗಲೆಂದು ಒಪ್ಪಿ ಅದಕ್ಕಾಗಿ ಓಡಿಬಂದರು. ಆಗ ವೃತ್ರಾಸುರನು " ಇವರು ನನ್ನನ್ನು ಕೊಲ್ಲಲು ಬರುತ್ತಿದ್ದಾರೆ. ಇವರನ್ನು ಭಯಗೊಳಿಸುತ್ತೇನೆ '' ಎಂದು ಬಿರುಸಾದ ಉಸಿರನ್ನು ಬಿಟ್ಟನು. ಕೂಡಲೇ ಎಲ್ಲಾ ದೇವತೆಗಳೂ ಭಯಪಟ್ಟು ಕೊಂಡು ಓಡಿಬಿಟ್ಟರು. ಆದರೆ ಮರುತ್ತುಗಳು ಮಾತ್ರ ಇಂದ್ರನನ್ನು ಬಿಟ್ಟುಕೊಡಲಿಲ್ಲ. " ಈತನನ್ನು ಹೊಡಿ. ಇವನ ಮೇಲೆ ನಿನ್ನ ಪೂರ್ಣವಾದ ಬಲವನ್ನು ಪ್ರಯೋಗಿಸು '' ಎಂದು ಇಂದ್ರನನ್ನು ಹುರಿದುಂಬಿಸುತ್ತಿದ್ದರು. ಇದೇ ವಿಷಯವನ್ನು,

ವೃತ್ರಸ್ಯ ತ್ವಾ ಶ್ವಸಥಾದೀಷಮಾಣಾ ವಿಶ್ವೇ ದೇವಾ ಅಜಹುರ್ಯೇ ಸಖಾಯಃ ।
ಮರುದ್ಭಿರಿಂದ್ರ ಸಖ್ಯಂ ತೇ ಅಸ್ತ್ವಥೇಮಾ ವಿಶ್ವಾಃ ಪೃತನಾ ಜಯಾಸಿ ॥
(ಋ. ಸಂ. ೮-೯೬-೭)

ಎಂಬ ಋಕ್ಕಿನಲ್ಲಿ ಸ್ತುತಿಸಿದೆ. ಆದುದರಿಂದಲೇ ಇಂದ್ರನು ಮರುತ್ತುಗಳು ತನಗೆ ಮಾಡಿದ ಉಪಕಾರವನ್ನು ಸ್ಮರಿಸುತ್ತಾ,

ಸೋಽವೇದಿಮೇ ವೈ ಕಿಲ ಮೇ ಸಚಿವಾ ಇಮೇ ಮಾಕಾಮಯಂತ ಹಂತೇಮಾನಸ್ಮಿನ್ನುಕ್ಥ ಆಭಜಾ ಇತಿ ತಾನೇತಸ್ಮಿನ್ನುಕ್ಥ ಆಭಜದಥಹೈತೇ ತರ್ಹ್ಯುಭೇ ಏವ ನಿಷ್ಕೇವಲ್ಯೇ ಉಕ್ಥೇ ಆಸತುಃ । ಮರುತ್ವತೀಯಂ ಗ್ರಹಂ ಗೃಹ್ಣಾತಿ ಮರುತ್ವತೀಯಂ ಪ್ರಗಾಥಂ ಶಂಸತಿ ಮರುತ್ವತೀಯಂ ಸೂಕ್ತಂ ಶಂಸತಿ ಮರುತ್ವತೀಯಾಂ ನಿವಿದಂ ದಧಾತಿ ಮರುತಾಂ ಸಾ ಭಕ್ತಿಃ ॥
(ಐ ಬ್ರಾ. ೩-೨೦)

"ಈ ಮರುತ್ತುಗಳೇ ನನ್ನ ನಿಜವಾದ ಸಖರು. ಅವರು ನನ್ನನ್ನು ಪ್ರೀತಿಸಿದರು. ಆದುದರಿಂದ ನಾನು ನನ್ನನ್ನುದ್ದೇಶಿಸಿದ ಉಕ್ಥದಲ್ಲಿ ಅವರಿಗೂ ಭಾಗವನ್ನು ಕೊಡುತ್ತೇನೆ" ಎಂದು ಸಂಕಲ್ಪಿಸಿ ಅವರಿಗೂ ಸಹ ಭಾಗವನ್ನು ಕಲ್ಪಿಸಿದನು. ಮರುತ್ತುಗಳಿಗಾಗಿ ಗ್ರಹವನ್ನು (ಪಾನಪಾತ್ರೆ) ಹಿಡಿದನು, ಪ್ರಗಾಥವನ್ನು ಪಠಿಸಿದನು, ಹೀಗೆಯೇ ನಾನಾ ವಿಧವಾಗಿ ಅವರನ್ನು ಉಪಚರಿಸಿದನು ಎಂದು ಮರುತ್ವತೀಯಶಸ್ತ್ರವನ್ನು ವರ್ಣಿಸುವ ಸಂದರ್ಭದಲ್ಲಿ ಉಕ್ತವಾಗಿದೆ. ಆದರೆ ಪ್ರಕೃತವಾದ ಋಕ್ಕಿನಲ್ಲಿರುವಂತೆ ಇಂದ್ರನಿಗೂ ಮರುತ್ತುಗಳಿಗೂ ವೈಷಮ್ಯವು ಪ್ರಾಪ್ತವಾಯಿತು ಎಂಬ ವರ್ಣನೆಗೆ ನಿಜವಾದ ಅರ್ಥವೇನು ಎಂಬುದನ್ನು ಮುಂದೆ ತಿಳಿಸಲಾಗುತ್ತದೆ.

ಸನೀಳಾಃ—ಗಯಃ, ಕೃದರಃ, ಗರ್ತಃ ಇತ್ಯಾದಿ ೨೨ ಗೃಹನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೪೩) ನೀಳ ಶಬ್ದಕ್ಕೆ ಗೃಹವೆಂದರ್ಥ. ಮರುತ್ತುಗಳು ಯಾವಾಗಲೂ ಒಟ್ಟಿಗೆ ವಾಸಮಾಡುವುದರಿಂದ ಒಂದೇ ನಿಲಯವುಳ್ಳವರೆಂದಭಿಪ್ರಾಯ. ಮರುತ್ತುಗಳನ್ನುದ್ದೇಶಿಸುವಾಗ ಈ ವಿಶೇಷಣವು ಉಪಯೋಗಿಸಲ್ಪಟ್ಟಿದೆ.

ಕ ಈಂ ವ್ಯಕ್ತಾ ನರಃ ಸನೀಳಾ ರುದ್ರಸ್ಯ ಮರ್ಯಾ ಅಧಾ ಸ್ವಶ್ವಾಃ ॥
(ಋ. ಸಂ. ೭-೫೬-೧)

ಇತ್ಯಾದಿಋಕ್ಕುಗಳಲ್ಲೆಲ್ಲಾ ಸನೀಳಾಃ ಎಂಬ ವಿಶೇಷಣವು ಏಕನಿಲಯದ ವಾಸವನ್ನು ವರ್ಣಿಸುತ್ತದೆ.

ಶುಭಾ—ಈ ಪದಕ್ಕೆ ಶೋಭಯಾ, ಪ್ರಕಾಶದಿಂದ, ಸೌಂದರ್ಯದಿಂದ ಕೂಡಿದವರಾಗಿ ಎಂದು ಒಂದರ್ಥವೂ ಅಥವಾ, ಶುಭ್ ಎಂಬ ಪದವು ಉದಕನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೨೪) ಉದಕದಿಂದ ಕೂಡಿದವರಾಗಿ ಎಂದು ಇನ್ನೊಂದರ್ಥವೂ ಸಾಧ್ಯವಾಗುತ್ತದೆ.

ಈ ಸೂಕ್ತದಲ್ಲಿ ಇಂದ್ರಮರುತ್ತಗಳ ಸಂವಾದವನ್ನು ಪ್ರಾಣಕ್ಕೂ ಜೀವಾತ್ಮನಿಗೂ ನಡೆದ ಸಂಭಾಷಣೆಯೆಂದೂ ಅನ್ವಯಮಾಡಿ ಅಧ್ಯಾತ್ಮಪರವಾದ ಅರ್ಥವನ್ನು ಮಾಡಬಹುದೆಂದೂ ಸಾಯಣರು ತಿಳಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

ಶುಭಾ—ಶುಭ ದೀಪ್ತೌ ಧಾತು. ಕ್ವಿಪ್ ಪ್ರತ್ಯಯ ಕಿತ್ತಾದುದರಿಂದ ಲಘೂಪದಗುಣ ಬರುವುದಿಲ್ಲ. ಸಾವೇಕಾಚಸ್ತೃತೀಯಾದಿಃ (ಪಾ. ಸೂ. ೬-೧-೧೬೮) ಎಂಬುದರಿಂದ ತೃತೀಯಾಏಕವಚನಕ್ಕೆ ಉದಾತ್ತಸ್ವರ ಬರುತ್ತದೆ.

ಸವಯಸಃ—ಸಮಾನಂ ವಯಃ ಯೇಷಾಂ ತೇ. ಸವಯಸಃ ಸಮಾನಸ್ಯ ಛಂದಸಿ-(ಪಾ. ಸೂ. ೬-೩ ೮೪) ಎಂಬುದರಿಂದ ಸಮಾನಶಬ್ದಕ್ಕೆ ಸಭಾವ. ಬಹುವ್ರೀಹಿಯಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಸನೀಳಾಃ ಎಂಬಲ್ಲಿಯೂ ಹೀಗೆ ಸಮಾನಸ್ವರಗಳು ಬರುತ್ತವೆ.

ಸಮಾನ್ಯಾ—ಕೇವಲಮಾಮಕಭಾಗಧೇಯಪಾಪಾಪರಸಮಾನ-(ಪಾ. ಸೂ. ೪-೧-೩೦) ಎಂಬುದರಿಂದ. ಜೀಪ್. ತೃತೀಯಾ ಏಕವಚನಾಂತರೂಪ.

ಮಿಮಿಕ್ಷುಃ- ಮಿಕ್ಷ ಸೇಚನೇ ಧಾತು, ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷ ಬಹುವಚನಾಂತರೂಪ ತಿಙಂತನಿಘಾತಸ್ವರ ಬರುತ್ತದೆ.

ಮತೀ—ಮಂತ್ರೇವೃಷೇಷಪಚ-(ಪಾ. ಸೂ. ೩-೩-೯೬) ಎಂಬುದರಿಂದ ಕ್ತಿನ್ ಉದಾತ್ತವಾಗುತ್ತದೆ. ತೃತೀಯಾಏಕವಚನ ಪರವಾದಾಗ ಸುಪಾಂ ಸುಲುಕ್-(ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣ ದೀರ್ಘ. ಏಕಾದೇಶವಾಗಿ ಬರುತ್ತದೆ.

ಏತಾಸಃ—ಆಙ್ ಉಪಸರ್ಗ. ಇಣ್ ಗತೌ ಧಾತು. ಕ್ತಪ್ರತ್ಯಯ. ಉಪಸರ್ಗದೊಡನೆ ಗುಣ. ಜಸ್ ಪರ ವಾದಾಗ ಆಜ್ಜಸೇರಸುಕ್ (ಪಾ ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

ಅರ್ಚಂತಿ—ಅರ್ಚ ಪೂಜಾಯಾಂ ಧಾತು. ಲಟ್ ಪ್ರಥಮಪುರುಷಬಹುವಚನಾಂತರೂಪ. ಪಾದಾದಿಯಲ್ಲಿ ರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ

ಶುಷ್ಮಮ್—ಶುಷ ಶೋಷಣೇ ಧಾತು. ಅವಿಸಿವಿಸಿಶುಷಿಭ್ಯಃಕಿತ್ (ಉ ಸೂ ೧-೧೪ .) ಎಂಬುದರಿಂದ ಮನ್ ಪ್ರತ್ಯಯ. ಕಿತ್ವವಿಧಾನಮಾಡಿರುವುದರಿಂದ ಲಘೂಪಧಗುಣ ಬರುವುದಿಲ್ಲ ನಿತ್ತಾದುದರಿಂದ ಞ್ನಿತ್ಯಾದಿ—ರ್ನಿತ್ಯಮ್ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ-

ವಸೂಯಾ—ವಸೂನಿ ಆತ್ಮನಃ ಇಚ್ಛತಿ ಇತಿ । ಸುಪ ಆತ್ಮನಃ ಕ್ಯಚ್ (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಬಂದಾಗ ಅದರ ಮೇಲೆ ಅಪ್ರತ್ಯಯಾತ್ (ಪಾ. ಸೂ. ೩-೩-೧೦೨) ಎಂಬುದರಿಂದ ಅಪ್ರತ್ಯಯ. ಛಾಂದಸವಾಗಿ ಪೂರ್ವಕ್ಕೆ ದೀರ್ಘ. ತೃತೀಯಾಏಕವಚನ ಪರವಾದಾಗ ಸುಪಾಂ ಸುಲುಕ್ ಎಂಬುದರಿಂದ ಪೂರ್ವಸವರ್ಣದೀರ್ಘ. ದ್ವಿತೀಯಾರ್ಥದಲ್ಲಿ ಜಸ್ ಪರವಾದಾಗ ಪೂರ್ವಸೂತ್ರದಿಂದ ಯಾಚಾದೇಶ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೧ ॥



ಸಂಹಿತಾಪಾಠಃ

ಕಸ್ಯ ಬ್ರಹ್ಮಾಣಿ ಜುಜುಷುರ್ಯುವಾನಃ ಕೋ ಅಧ್ವರೇ ಮರುತ ಆ ವವರ್ತ ।
ಶ್ಯೇನಾঁಇವ ಧ್ರಜತೋ ಅಂತರಿಕ್ಷೇ ಕೇನ ಮಹಾ ಮನಸಾ ರೀರಮಾಮ ॥ ॥ ೨ ॥

। ಪದಪಾಠಃ ।

ಕಸ್ಯ । ಬ್ರಹ್ಮಾಣಿ । ಜುಜುಷುಃ । ಯುವಾನಃ । ಕಃ । ಅಧ್ವರೇ । ಮರುತಃ । ಆ । ವವರ್ತ ।
ಶ್ಯೇನಾನ್ऽಇವ । ಧ್ರಜತಃ । ಅಂತರಿಕ್ಷೇ । ಕೇನ । ಮಹಾ । ಮನಸಾ । ರೀರಮಾಮ ॥ ೨ ॥

ಸಾಯಣಭಾಷ್ಯಂ

ಯುವಾನೋ ನಿತ್ಯತರುಣಾ ಮಹಾನುಭಾವಾ ಮರುತಃ ಕಸ್ಯ ಮಹಾಭಾಗಸ್ಯ ಬ್ರಹ್ಮಾಣಿ ಪರಿವೃಢಾನಿ ಹವೀಂಷಿ ಜುಜುಷುಃ । ಸೇವಂತೇ । ಕಶ್ಚ ಮಹಾನಧ್ವರೇ ಸ್ವಕೀಯೇ ಯಾ ಮರುತ ಏತಾನಾವವರ್ತ । ಯಾಗಾಂತರೇಭ್ಯೋ ನಿವರ್ತಯತಿ । ದುರ್ನಿಗ್ರಹತ್ವೇ ದೃಷ್ಟಾಂತಮಾಹ । ಅಂತರೀಕ್ಷೇ ಧ್ರಜತೋ ಗಚ್ಛತಃ ಶ್ಯೇನಾಞ್ಛಂಸನೀಯಗಮನಾನೇತನ್ನಾಮಕಾನ್ಪಕ್ಷಿಣ ಇವ । ಕೇನ ತತ್ಪ್ರೀತಿಸಾಧನೇನ ಮಹಾ ಮಹತಾ ಮನಸಾ ಮನನವತಾ ಸ್ತೋತ್ರೇಣ ರೀರಮಾಮ । ರಮಯೇಮಹಿ ॥

। ಪ್ರತಿಪದಾರ್ಥ ।

ಯುವಾನಃ—ನಿತ್ಯಯುವಕರಾದ ಮರುತ್ತುಗಳು । ಕಸ್ಯ—ಯಾವ ಮಹಾತ್ಮನ । ಬ್ರಹ್ಮಾಣಿ—ಹವಿಸ್ಸುಗಳನ್ನು । ಜುಜುಷುಃ—ಸೇವಿಸುತ್ತಾರೆ ? । ಕಃ—ಯಾವ ಮಹಾತ್ಮನು । ಅಧ್ವರೇ—ಯಾಗದಲ್ಲಿ । ಮರುತಃ—ಮರುತ್ತುಗಳನ್ನು । ಆ ವವರ್ತ—(ಇತರ ಯಾಗಗಳಿಂದ)ಹಿಂತಿರುಗುವಂತೆ ಮಾಡಿ ತನ್ನ ಯಾಗಕ್ಕೆ ಬರಮಾಡಿ ಕೊಳ್ಳುತ್ತಾನೆ ? । ಅಂತರೀಕ್ಷೇ—ಅಂತರಿಕ್ಷದಲ್ಲಿ । ಧ್ರಜತಃ—ಸಂಚರಿಸುವ । ಶ್ಯೆನಾನಿವ—ಶ್ಯೇನಪಕ್ಷಿಗಳಂತೆ (ಸಂಚರಿಸುವ ಮರುತ್ತುಗಳನ್ನು) । ಮಹಾ—ಮಹತ್ತಾದುದೂ । ಕೇನ ಮನಸಾ—ಧ್ಯಾನಾತ್ಮಕವಾದುದೂ ಆದ ಯಾವ ಸ್ತೋತ್ರದಿಂದ । ರೀರಮಾಮ—ಆರಾಧಿಸೋಣ ? ।

ಭಾವಾರ್ಥ

ನಿತ್ಯಯುವಕರಾದ ಮರುತ್ತುಗಳು ಯಾವ ಮಹಾತ್ಮನ ಹವಿಸ್ಸುಗಳನ್ನು ಸೇವಿಸುತ್ತಾರೆ ? ಯಾವ ಮಹಾತ್ಮನು ಯಾಗದಲ್ಲಿ ಮರುತ್ತುಗಳನ್ನು ಇತರ ಯಾಗಗಳಿಂದ ಹಿಂತಿರುಗುವಂತೆ ಮಾಡಿ ತನ್ನ ಯಾಗಕ್ಕೆ ಆಕರ್ಷಿಸುತ್ತಾನೆ ? ಅಂತರಿಕ್ಷದಲ್ಲಿ ಸಂಚರಿಸುವ ಶ್ಯೇನಪಕ್ಷಿಗಳಂತೆ ಸಂಚರಿಸುವ ಮರುತ್ತುಗಳನ್ನು ಮಹತ್ತಾದುದೂ ಧ್ಯಾನಾತ್ಮಕವಾದುದೂ ಆದ ಯಾವ ಸ್ತೋತ್ರದಿಂದ ಆರಾಧಿಸೋಣ ?

## English Translation

Of whose oblations do the youthful (Maruts) approve? who attracts them to his (own) sacrifice (from the rites of others)? with what powerful praise may we propitiate (them), wandering like kites in the mid-air?

### ವಿಶೇಷವಿಷಯಗಳು

ಬ್ರಹ್ಮಾಣಿ—ಬ್ರಹ್ಮಶಬ್ದವನ್ನು ಅನ್ನನಾಮಗಳಲ್ಲಿಯೂ, (ನಿ. ೩-೯) ಧನನಾಮಗಳಲ್ಲಿಯೂ (ನಿ ೩-೯) ಪಠಿಸಿದೆ. ಅನ್ನ, ಕರ್ಮ, ಸ್ತುತಿ ಎಂಬರ್ಥಗಳಲ್ಲಿ ಈ ಪದದ ಪ್ರಯೋಗವಿದೆ. ವೃದ್ಧಿಯನ್ನು ಹೊಂದು ಎಂಬರ್ಥವುಳ್ಳ ಬೃಹಿ ಧಾತುವಿನಿಂದ ಪ್ರಕೃತವಾದ ಬ್ರಹ್ಮಶಬ್ದವು ನಿಷ್ಪನ್ನವಾಗಿ ವೃದ್ಧಿಯನ್ನು ಹೊಂದಿದ ಕರ್ಮ ಅಥವಾ ಅನ್ನವೆಂದರ್ಥವಾಗುತ್ತದೆ. ಹಿಂದೆ,

ಯಾಮಥರ್ವಾ ಮನುಷ್ಪಿತಾ ದಧ್ಯಙ್ ಧಿಯಮತ್ನತ ।
ತಸ್ಮಿನ್ ಬ್ರಹ್ಮಾಣಿ ಪೂರ್ವಥೇಂದ್ರ ಉಕ್ಥಾ ಸಮಗ್ಮತಾರ್ಚನ್ನನು ಸ್ವರಾಜ್ಯಂ ।
(ಋ ಸಂ. ೧-೮೦-೧೬)

ಎಂಬ ಋಕ್ಕಿನಲ್ಲಿ ಬ್ರಹ್ಮಶಬ್ದಕ್ಕೆ ಸಾಯಣರು ಹವೀರೂಪವಾದ ಅನ್ನವೆಂದರ್ಥಮಾಡಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಅದೇ ಅರ್ಥವನ್ನು ಹೇಳಬಹುದು. (ನಿ. ೧೨-೩೪)

ಅಧ್ವರೇ—ಧ್ವರತಿಃ ಹಿಂಸಾಕರ್ಮಾ ತತ್ಪ್ರತಿಷೇಧಃ । ಕೊಲ್ಲು ಎಂಬರ್ಥವನ್ನು ಕೊಡುವ ಧ್ವೃ ಧಾತುವಿನ ನಿಷೇದಾರ್ಥವನ್ನು ಸೂಚಿಸುತ್ತದೆ (ನಿ. ೧-೮) ಅಹಿಂಸಾತ್ಮಕವಾದ ಯಜ್ಞದಲ್ಲಿ ಎಂದರ್ಥ.

ಧ್ರಜತಃ—ಧ್ರಜತಿ ಎಂಬ ಪದವು ಗತಿ ಕರ್ಮನಾಮಗಳಲ್ಲಿ ಪಠಿತವಾಗಿದೆ. (ನಿ. ೨-೯). ಮರುತ್ತುಗಳ ಸಂಚಾರ ಕ್ರಮವನ್ನು ಸೂಚಿಸುವ ಪದವಾಗಿದೆ.

ಅಂತರಿಕ್ಷೇ—ಅಂತರಿಕ್ಷಂ ಕಸ್ಮಾದಂತರಾ ಕ್ಷಾಂತಂ ಭವತ್ಯಂತರೇಮೇ ಇತಿ ವಾ ಶರೀರೇಷ್ವಂತ-ರಕ್ಷಯಮಿತಿ ವಾ । (ನಿ. ೨-೧೦) ಪೃಥಿವಿಗೂ ದ್ಯುಲೋಕಕ್ಕೂ ನಡುವೆ ಇರುವುದರಿಂದಾಗಲಿ, ಅಥವಾ ಪೃಥಿವಿಯ ಅಂಚಿನಲ್ಲಿರುವುದು ಎಂಬುದರಿಂದಾಗಲಿ ಈ ಹೆಸರು ಪ್ರಸಿದ್ಧವಾಗಿದೆಯೆಂದು ನಿರುಕ್ತಕಾರರು ನಿರ್ವಚನವನ್ನು ಹೇಳಿದ್ದಾರೆ.

ಮನಸಾ—ಮನೋ ಮನೋತೇಃ (ನಿ ೪-೪) ಚಿಂತಿಸು, ಧ್ಯಾನಮಾಡು, ಎಂಬರ್ಥವನ್ನು ಕೊಡುವ ಮನ್ ಧಾತುವಿನಿಂದ ನಿಷ್ಪನ್ನವಾಗಿ ಧ್ಯಾನಪೂರ್ವಕವಾದ ಅಥವಾ ಶ್ರದ್ಧಾಪೂರ್ವಕವಾದ ಎಂಬರ್ಥವನ್ನು ಕೊಡುತ್ತದೆ. ಇಲ್ಲಿ ಸಾಯಣರು ಮನನವತಾ ಸ್ತೋತ್ರೇಣ । ಧ್ಯಾನಾತ್ಮಕವಾದ ಸ್ತುತಿಯಿಂದ ಎಂದರ್ಥಮಾಡಿದ್ದಾರೆ.

ಆ ವಿಶ್ವತಃ ಪ್ರತ್ಯಂಚಂ ಜಿಘರ್ಮ್ಯರಕ್ಷಸಾ ಮನಸಾ ತಜ್ಜುಷೇತ ।
ಮರ್ಯಶ್ರೀಃ ಸ್ಪೃಹಯದ್ವರ್ಣೋ ಅಗ್ನಿರ್ನಾಭಿಮೃಶೇ ತನ್ವಾ ಜರ್ಭುರಾಣಃ ॥
(ಋ. ಸಂ. ೨-೧೦-೫)

ಇತ್ಯಾದಿ ಋಕ್ಕುಗಳಲ್ಲಿ ಶ್ರದ್ಧಾಪೂರ್ವಕವೂ, ಧ್ಯಾನಾತ್ಮಕವೂ ಆದ ಸ್ತೋತ್ರ ಎಂದರ್ಥವಾಗುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸ್ತುತಿಯಿಂದ ಎಂದು ತಾತ್ಪರ್ಯವಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

ಜುಜುಷುಃ—ಜುಷೀ ಪ್ರೀತಿಸೇವನಯೋಃ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಿಟ್ ಪ್ರಥಮಪುರುಷಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಅಧ್ವರೇ—ನಞ್ಸುಭ್ಯಾಮ್ (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ.

ವವರ್ತಿ—ವೃತು ವರ್ತನೆ. ಧಾತು. ವ್ಯತ್ಯಯೋ ಬಹುಲಮ್ ಎಂಬುದರಿಂದ ಪರಸ್ಮೈಪದಿಯಾಗುತ್ತದೆ ಛಾಂದಸವಾಗಿ ಲಿಟ್. ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಶ್ಯೇನಾನ್—ಶ್ಯೈಙ್. ಗತೌ. ಧಾತು. ಶ್ಯಾಸ್ತ್ಯಾಹೃಞ್‌ವಿಭ್ಯ ಇನಚ್ (ಉ. ಸೂ. ೨-೨೦೪) ಎಂಬುದರಿಂದ ಇನಚ್ ಪ್ರತ್ಯಯ. ಆದೇಚಉಪದೇಶೇಽಶಿತಿ (ಪಾ. ಸೂ. ೬-೧-೪೫) ಎಂಬುದರಿಂದ ಧಾತುವಿಗೆ ಆತ್ವ ಬಂದಾಗ ಗುಣ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

ಧ್ರಜತಃ—ಧ್ರಜ ಗತೌ. ಧಾತು. ಲಟ್ ಬಂದಾಗ ಅದಕ್ಕೆ ಶತ್ರಾದೇಶ ಶಪ್ ವಿಕರಣ. ದ್ವಿತೀಯಾ ಬಹುವಚನಾಂತರೂಪ. ತಾಸ್ಯನುದಾತ್ತೇತ್—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

ಮಹಾ—ಮಹ ಪೂಜಾಯಾಂ ಧಾತು. ಕ್ವಿಪ್‌ಚ ಎಂಬುದರಿಂದ ಕ್ವಿಪ್‌ಪ್ರತ್ಯಯ. ತೃತೀಯಾ ಏಕವಚನಾಂತರೂಪ. ಸಾವೇಕಾಚಸ್ತೃತೀಯಾದಿಃ (ಪಾ ಸೂ ೬-೧-೧೬೮) ಎಂಬುದರಿಂದ ವಿಭಕ್ತಿ ಉದಾತ್ತ ವಾಗುತ್ತದೆ.

ರೀರಮಾಮ—ರಮು ಕ್ರೀಡಾಯಾಂ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಣಿಜಂತದ ಮೇಲೆ ಲುಙ್. ಉತ್ತಮಪುರುಷಬಹುವಚನದಲ್ಲಿ ಮಸ್. ನಿತ್ಯಂಙಿತಃ ಎಂಬುದರಿಂದ ಸಕಾರಲೋಪ ಣಿಶ್ರಿದ್ರುಸ್ರು—(ಪಾ. ಸೂ. ೩-೧-೪೮) ಎಂಬುದರಿಂದ ಚ್ಲಿಗೆ ಚಙ್. ಚಙಿ ಎಂಬುದರಿಂದ ದ್ವಿತ್ವ ಣೌಚಙ್ಯುಪಧಾಯಾಃಹ್ರಸ್ವಃ (ಪಾ. ಸೂ. ೭-೪-೧) ಎಂಬುದರಿಂದ ಧಾತುವಿನ ಉಪಧೆಗೆ ಹ್ರಸ್ವ. ಸನ್ವಲ್ಲಘುನಿಚಙ್-(ಪಾ. ಸೂ. ೭-೪-೯೩) ಎಂಬುದರಿಂದ ಸನ್ವದ್ಭಾವ ಬರುವುದರಿಂದ ಸನ್ಯತಃ (ಪಾ. ಸೂ. ೭-೪-೭೯) ಎಂಬುದರಿಂದ ಅಭ್ಯಾಸಕ್ಕೆ ಇತ್ವ. ದೀರ್ಘೋಲಘೋಃ (ಪಾ. ಸೂ. ೭-೪-೯೪) ಎಂಬುದರಿಂದ ಅದಕ್ಕೆ ದೀರ್ಘ. ಬಹುಲಂ ಛಂದಸ್ಯ—(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ. ॥ ೨ ॥

———೩೦೩———

ಸಂಹಿತಾಪಾಠಃ

ಕುತಸ್ತ್ವಮಿಂದ್ರ ಮಾಹಿನಃ ಸನ್ನೇಕೋ ಯಾಸಿ ಸತ್ಪತೇ ಕಿಂ ತ ಇತ್ಥಾ ।
ಸಂ ಪೃಚ್ಛಸೇ ಸಮರಾಣಃ ಶುಭಾನೈರ್ವೋಚೇಸ್ತನ್ನೋ ಹರಿವೋ ಯತ್ತೇ
ಅಸ್ಮೇ ॥ ೩ ॥

ಪದಪಾಠಃ

ಕುತಃ । ತ್ವಂ । ಇಂದ್ರ । ಮಾಹಿನಃ । ಸನ್ । ಏಕಃ । ಯಾಸಿ । ಸತ್ಽಪತೇ । ಕಿಂ । ತೇ । ಇತ್ಥಾ ।
ಸಂ । ಪೃಚ್ಛಸೇ । ಸಂಽಅರಾಣಃ । ಶುಭಾನೈಃ । ವೋಚೇಃ । ತತ್ । ನಃ । ಹರಿಽವಃ । ಯತ್ । ತೇ । ಅಸ್ಮೇ
ಇತಿ ॥ ೩ ॥

ಸಾಯಣಭಾಷ್ಯಂ

ಅಥ ಮರುತ ಇಂದ್ರೇಣೋಕ್ತಾಸ್ತೃತೀಯಯಾನಯಾ ಪತಿಬ್ರುವತೇ ॥

ಹೇ ಇಂದ್ರ ಸತ್ಪತೇ ಸತಾಂ ಪಾಲಕ ತ್ವಂ ಮಾಹಿನೋ ಮಹನೀಯಃ ಪೂಜನೀಯಃ। ಅನುಚರೈರನುಗಂತವ್ಯ ಇತ್ಯರ್ಥಃ। ತಥಾಭೂತಃ ಸನ್ನಪ್ಯೇಕೋಽಸಹಾಯಃ ಸನ್ ಕುತೋ ಯಾಸಿ । ಕುತಃ ಕಾರಣಾದ್ಯಾಸಿ । ಯದ್ವಾ। ಕುತ್ರ ಯಾಸಿ । ತೇ ತವೇತ್ಥೇತ್ಥಂ ಕಿಂ । ಕಿಂ ತ್ವಮೇವಮೇವ । ಕಿಂ ನ ಕೋಽಪ್ಯನುಚರೋಽಸ್ತಿ । ಕಿಂಚ ತ್ವಂ ಸಮರಾಣೋಽಸ್ಮಾಭಿಃ ಸಂಗಚ್ಛಮಾನಃ ಸಂ ಪೃಚ್ಛಸೇ। ಸಮೀಚೀನಂ ಪೃಚ್ಛಸಿ । ಹೇ ಹರಿವೋ ಹರಿಭ್ಯಾಂ ತದ್ವನ್ನಿಂದ್ರ ತೇ ತವಾಸ್ಮೇ ಅಸ್ಮಾಸು ಯದ್ವಕ್ತುಮಿಷ್ಟತಮಮಸ್ತಿ ತನ್ನೋಽಸ್ಮಭ್ಯಂ ಶುಭಾನೈಃ ಶೋಭಮಾನೈರ್ವಚನೈರ್ವೋಚೇಃ । ಬ್ರೂಹಿ ॥

ಪ್ರತಿಪದಾರ್ಥ

ಸತ್ಪತೇ—ಸಜ್ಜನರ ಪಾಲಕನಾದ । ಇಂದ್ರ—ಎಲೈ ಇಂದ್ರನೇ । ತ್ವಂ—ನೀನು । ಮಾಹಿನಃ ಸನ್—ಪೂಜ್ಯನಾಗಿಯೂ ಅನುಚರರಿಂದ ಹಿಂಬಾಲಿಸಲ್ಪಡುವವನಾಗಿಯೂ ಇದ್ದರೂ ಸಹ । ಏಕಃ—ಒಬ್ಬಂಟಿಗನಾಗಿ ಕುತಃ—ಏತಕ್ಕೆ (ಅಥವಾ ಎಲ್ಲಿಗೆ) । ಯಾಸಿ—ಹೊರಟಿದ್ದೀಯೆ ? । ತೇ—ನಿನ್ನ । ಇತ್ಥಾ—ಅನುಚರರಹಿತನಾಗಿರುವ ಈ ವ್ಯವಹಾರವು । ಕಿಂ—ಏತಕ್ಕಾಗಿ ? । ಸಮರಾಣಃ—ನಮ್ಮಿಂದ ಹಿಂಬಾಲಿಸಲ್ಪಡುವ ನೀನು । ಸಂಪೃಚ್ಛಸೇ—ಸೂಕ್ತವಾಗಿ ಕೇಳಲ್ಪಟ್ಟವನಾಗಿದ್ದೀಯೆ । ಹರಿವಃ—ಹರಿನಾಮಕವಾದ ಅಶ್ವಗಳಿಂದ ಕೂಡಿದ ಎಲೈ ಇಂದ್ರನೇ, । ತೇ—ನಿನ್ನ ಸಂಬಂಧಿಗಳಾದ । ಅಸ್ಮೇ—ನಮ್ಮಲ್ಲಿ। ಯತ್—ನೀನು ಹೇಳಬೇಕಾದುದು ಯಾವುದಿದೆಯೋ । ತತ್—ಅದನ್ನು । ನಃ—ನಮಗೆ । ಶುಭಾನೈಃ—ಶೋಭನಾತ್ಮಕಗಳಾದ ಮಾತುಗಳಿಂದ । ವೋಚೇಃ—ಹೇಳು ।

ಭಾವಾರ್ಥ

ಸಜ್ಜನರ ಪಾಲಕನಾದ ಎಲೈ ಇಂದ್ರನೇ, ನೀನು ಪೂಜ್ಯನಾಗಿಯೂ, ಅನುಚರರಿಂದ ಹಿಂಬಾಲಿಸಲ್ಪಡುವವನಾಗಿಯೂ ಇದ್ದರೂ ಸಹ ಒಬ್ಬಂಟಿಗನಾಗಿ ಎಲ್ಲಿಗೆ ಹೊರಟದ್ದೀಯೆ ? ಅನುಚರರಹಿತನಾಗಿರುವ ನಿನ್ನ ಈ ವ್ಯವಹಾರವು ಏತಕ್ಕಾಗಿ ? ನಮ್ಮಿಂದ ಹಿಂಬಾಲಿಸಲ್ಪಡುವ ನೀನು ಸೂಕ್ತವಾಗಿ ಪೃಷ್ಟನಾಗಿದ್ದೀಯೆ. ಹರಿನಾಮುಕವಾದ ಅಶ್ವಗಳಿಂದ ಕೂಡಿದ ಎಲೈ ಇಂದ್ರನೇ, ನಿನ್ನ ಸಂಬಂಧಿಗಳಾದ ನಮ್ಮಲ್ಲಿ ನೀನು ಹೇಳಬೇಕಾದುದು ಏನಿದೆಯೋ ಅದನ್ನು ನಮಗೆ ಶೋಭನಾತ್ಮಕಗಳಾದ (ಒಳ್ಳೆಯ) ಮಾತುಗಳಿಂದ ಹೇಳು

## English Translation

( The Maruts ),—Indra, lord of the good, whither do you, who are entitled to honour, proceed alone? what means this (absence of attendence): when followed (by us), you require (what is right)? Lord of fleet horses, say to us, with pleasant words, that which you (have to say) to us.

ವಿಶೇಷವಿಷಯಗಳು

ಸತ್ಪತೇ—ಸತಾಂ ಪಾಲಕ ; ಎಂದು ಸಾಯಣರು ವಿವರಿಸಿದ್ದಾರೆ. ಸತಾಂ ಎಂದರೆ, ಸತ್ತುಗಳಿಗೆ ಎಂದರೆ ಸತ್ತಾತ್ಮಕವಾದ ಸಕಲ ಭೂತಗಳಿಗೂ ಎಂದಾಗಬಹುದು. ಅಥವಾ ಸಕಲ ಸಜ್ಜನರಿಗೂ ಎಂದಾಗಬಹುದು. ಈ ಪದಕ್ಕೆ ಇಲ್ಲಿ ವಿಶೇಷಾರ್ಥವಿದೆಯೆಂದು ತಿಳಿಸುತ್ತಾ Max Muller ಎಂಬ ಪಂಡಿತನು ಈ ರೀತಿ ತಿಳಿಸಿದ್ದಾನೆ.

Sat-pati, Lord of men means Lord of real men, of heroes, and should not be translated as good lord. Sat (ಸತ್) by itself is frequently used in the sense of heroes, of men physically rather than morally good.

ಕೇವಲ ಪ್ರಜೆಗಳ ಪಾಲಕನೆಂದು ಮಾತ್ರವಲ್ಲ : ಶಕ್ತಿಯುತರಾಗಿಯೂ, ಯುದ್ಧಾದಿಗಳಲ್ಲಿ ತಮ್ಮ ಪರಾಕ್ರಮವನ್ನು ತೋರುವವರಾಗಿಯೂ ಇರತಕ್ಕ ಪ್ರಜೆಗಳ ಪಾಲಕನೆಂದರ್ಥವೆಂದು ವಿವರಿಸಿ ಉದಾಹರಣೆಗಾಗಿ ಈ ಪದಪ್ರಯೋಗವಿರುವ ಎರಡು ಋಕ್ಕುಗಳನ್ನು ಉದಹರಿಸಿದ್ದಾನೆ. ಮೊದಲನೆಯದಾಗಿ—

ತ್ವಮಗ್ನ ಇಂದ್ರೋ ವೃಷಭಃ ಸತಾಮಸಿ ತ್ವಂ ವಿಷ್ಣುರುರುಗಾಯೋ ನಮಸ್ಯಃ ।
ತ್ವಂ ಬ್ರಹ್ಮಾ ರಯಿವಿದ್ಬ್ರಹ್ಮಣಸ್ಪತೇ ತ್ವಂ ವಿಧರ್ತಃ ಸಚಸೇ ಪುರಂಧ್ಯಾ ॥

( ಋ. ಸಂ. ೨-೨-೩ )

ಎಂಬ ಋಕ್ಕಿನಲ್ಲಿ ಸತಾಂ ವೃಷಭಃ ಅಸಿ ಎನ್ನುವುದಕ್ಕೆ ವೀರರಲ್ಲಿ ವೀರನು ಎಂದರ್ಥವೆಂದೂ, ಹೀಗೆಯೇ

ಸಮುತ್ಸು ತ್ವಾ ಶೂರ ಸತಾಮುರಾಣಂ ಪ್ರಪಥಿಂತಮಂ ಪರಿಸಂತಯಧ್ಯೈ ।
ಸಜೋಷಸ ಇಂದ್ರಂ ಮದೇ ಕ್ಷೋಣೀಃ ಸೂರಿಂ ಚಿದ್ಯೇ ಅನುಮದಂತಿ ವಾಜೈಃ ॥

(ಋ. ಸಂ. ೧-೧೭೩-೭)

ಎಂಬಲ್ಲಿ, ಸಮುತ್ಸು ಶೂರ ಸತಾಮುರಾಣಂ ಎಂಬುದಕ್ಕೆ ಯುದ್ಧದಲ್ಲಿ ವೀರರನ್ನು ರಕ್ಷಿಸುವವನು ಎಂಬಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸತ್‌ಶಬ್ದಕ್ಕೆ ವೀರರೆಂದರ್ಥವೆಂದು ಹೇಳಬೇಕೆಂದು ತಿಳಿಸುತ್ತಾನೆ.

ಶುಭಾನೈಃ—ಶೋಭಮಾನೈಃ ವಚನೈಃ । ಶೋಭನಾತ್ಮಕಗಳಾದ ವಾಕ್ಕುಗಳಿಂದ ಎಂದು ಸಾಯಣರು ಅರ್ಥಮಾಡಿದ್ದಾರೆ. ಆದರೆ ಈ ಪದವು ಮರುತ್ತುಗಳಿಗೆ ಪರ್ಯಾಯಪದವಾಗಿ ಉಪಯೋಗಿಸಲ್ಪಟ್ಟಿದೆಯೆರಡೂ ಕೆಲವರ ಮತವಾಗಿದೆ.

ಶುಭಾನ is evidently meant as a name for the Maruts, who thus speak of themselves in the third person which is by no means unusual in the Rig-Veda.

(Max Muller's Sacred Books of the east. Vol. XXII. p. 190)

ವ್ಯಾಕರಣಪ್ರಕ್ರಿಯಾ

ಮಾಹಿನಃ—ಮಹ ಪೂಜಾಯಾಂ ಧಾತು ಮಹೇರಿನಣ್ ಚ (ಉ ಸೂ ೨-೨೧೪) ಎಂಬುದರಿಂದ ಇನಣ್ ಪ್ರತ್ಯಯ. ಅತಉಪಧಾಯಾಃ (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ.

ಸತ್ಪತೇ—ಸತಾಂ ಪತಿಃ ಸತ್ಪತಿಃ ಸಂಬುದ್ಧ್ಯಂತರೂಪ. ಆಮಂತ್ರಿತಸ್ಯಚ (ಪಾ. ಸೂ ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

ಪೃಚ್ಛಸೇ—ಪ್ರಚ್ಛ ಜ್ಞೀಪ್ಸಾಯಾಂ ವಾಚಿ ಧಾತು ವಿದಿಪ್ರಚ್ಛಿಸ್ವರತೀನಾಮುಪಸಂಖ್ಯಾನಮ್ (ಪಾ ಸೂ. ೧-೩-೨೯-೧) ಎಂಬುದರಿಂದ ಸಮ್‌ಸಂಬಂಧವಿರುವುದರಿಂದ ಆತ್ಮನೇಪದಿಯಾಗುತ್ತದೆ. ಲಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತಸ್ವರ ಬರುತ್ತದೆ.

ಸಮರಾಣಃ—ಋ ಗತೌ. ಧಾತು. ಆರ್ತಿಶ್ರುದೃಶಿಭ್ಯಶ್ಚೇತಿ ವಕ್ತವ್ಯಮ್ (ಪಾ. ಸೂ. ೧-೩-೨೯-೨) ಎಂಬುದರಿಂದ ಸಮ್ ಸಂಬಂಧವಿರುವುದರಿಂದ ಲಟಗೆ ಆತ್ಮನೇಪದ ಶಾನಚ್ ಬರುತ್ತದೆ. ಅಟ್‌ಕುಪ್ವಾಙ್—ಎಂಬುದರಿಂದ ಪ್ರತ್ಯಯ ನಕಾರಕ್ಕೆ ಣತ್ವ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ. ಪ್ರಾದಿಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

ಶುಭಾನೈಃ—ಶುಭ ದೀಪ್ತೌ ಧಾತು. ಲಟಗೆ ಶಾನಚಾದೇಶ. ಬಹುಲಂ ಛಂದಸಿ ಎಂಬುದರಿಂದ ಶಪಿಗೆ ಲುಕ್, ಸಾರ್ವಧಾತುಕಮಪಿತ್ ಎಂಬುದರಿಂದ ಶಾನಚ್ ಙಿತ್ತಾದುದರಿಂದ ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಚಿತಃ ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ವೋಚೇಃ—ವಚ ಪರಿಭಾಷಣೇ. ಧಾತು. ಲಿಙ್. ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಇತಶ್ಚ ಎಂಬುದರಿಂದ ಇಕಾರಲೋಪ. ಲಿಙ್ಯಾಶಿಷ್ಯಙ್ (ಪಾ ಸೂ ೩-೧-೮೬) ಎಂಬುದರಿಂದ ಅಙ್. ಇದು ಪರವಾದಾಗ

ವಚಉಮ್ (ಪಾ. ಸೂ. ೭-೪-೨೦) ಎಂಬುದರಿಂದ ಧಾತುವಿಗೆ ಉಮಾಗಮ. ಛಂದಸ್ಯುಭಯಥಾ (ಪಾ. ಸೂ. ೩-೪-೧೧೭) ಎಂಬುದರಿಂದ ಯಾಸುಟಿಗೆ ಸಾರ್ವಧಾತುಕಸಂಜ್ಞೆ ಇರುವುದರಿಂದ ಲಿಙಃ ಸಲೋಪೋಽನಂತ್ಯಸ್ಯ (ಪಾ. ಸೂ. ೭-೨-೭೯) ಎಂಬುದರಿಂದ ಸಕಾರಕ್ಕೆ ಲೋಪ. ಅತೋಯೇಯಃ (ಪಾ. ಸೂ. ೭-೨-೮೦) ಎಂಬುದರಿಂದ ಇಯಾದೇಶ. ಗುಣ. ಯಲೋಪ. ಸಕಾರಕ್ಕೆ ರುತ್ವವಿಸರ್ಗ. ವೋಚೇಃ ಎಂದು ರೂಪವಾಗುತ್ತದೆ.

ಅಸ್ಮೇ—ಸುಪಾಂಸುಲುಕ್—(ಪಾ ಸೂ. ೭-೧-೩೯) ಎಂಬುದರಿಂದ ಸಪ್ತಮಿಗೆ ಶೇ ಆದೇಶ- ॥ ೩ ॥

———:o:———

ಸಂಹಿತಾಪಾಠಃ

ಬ್ರಹ್ಮಾಣಿ ಮೇ ಮತಯಃ ಶಂ ಸುತಾಸಃ ಶುಷ್ಮ ಇಯರ್ತಿ ಪ್ರಭೃತೋ ಮೇ ಅದ್ರಿಃ ।

ಆ ಶಾಸತೇ ಪ್ರತಿ ಹರ್ಯಂತ್ಯುಕ್ಥೇಮಾ ಹರೀ ವಹತಸ್ತಾ ನೋ ಅಚ್ಛ ॥ ॥ ೪ ॥

॥ ಪದಪಾಠಃ ॥

ಬ್ರಹ್ಮಾಣಿ । ಮೇ । ಮತಯಃ । ಶಂ । ಸುತಾಸಃ । ಶುಷ್ಮಃ । ಇಯರ್ತಿ । ಪ್ರಽಭೃತಃ । ಮೇ । ಅದ್ರಿಃ ।

ಆ । ಶಾಸತೇ । ಪ್ರತಿ । ಹರ್ಯಂತಿ । ಉಕ್ಥಾ । ಇಮಾ । ಹರೀ ಇತಿ । ವಹತಃ । ತಾ । ನಃ । ಅಚ್ಛ ॥೪॥

ಸಾಯಣಭಾಷ್ಯಂ

ಅಥೈವಂ ತ್ರೈಃ ಪೃಷ್ಟೋಽನಯಾ ಚತುರ್ಥ್ಯೇಂದ್ರಃ ಪ್ರತ್ಯಾಹ। ಹೇ ಮರುತಃ ಬ್ರಹ್ಮಾಣಿ ಸರ್ವಾಣಿ ಕರ್ಮಾಣಿ ಹವೀಂಷಿ ವಾ ಮೇ ಮಮ ಸ್ವಭೂತಾನಿ । ತಥಾ ಮತಯಶ್ಚ ಮನನಯುಕ್ತಾಃ ಸ್ತುತಯಶ್ಚ ಮೇ ಮಮ ಶಂ ಸುಖಕಾರ್ಯಃ । ಯದ್ವಾ । ಮೇ ಮತಯೋ ಬುದ್ಧಯಸ್ತೇಷ್ವೇವ ವರ್ತಂತ ಇತಿ ಶೇಷಃ । ತಥಾ ಸುತಾಸೋಽಭಿಷುತಾಃ ಸೋಮಾ ಮೇ ಮದೀಯಾ ಮದರ್ಥಾ ಏವ । ಅತೋ ಯಜ್ಞಂ ಪ್ರತಿ ಗಂತವ್ಯಮಿತ್ಯರ್ಥಃ । ಕಿಂಚ ಮಧ್ಯೇ ರಾಕ್ಷಸಾದಿಬಾಧಪರಿಹಾರಾಯ ಶುಷ್ಮೋ ಬಲವಾನ್ಮೇ ಮದೀ-ಯೋಽದ್ರಿಃ ಶತ್ರೂಣಾಂ ಭಕ್ಷಕೋ ವಜ್ರಃ ಪ್ರಭೃತಃ ಸನ್ನಿಯರ್ತಿ । ಗಚ್ಛತ್ಯೇವ ಲಕ್ಷ್ಯಂ ಪ್ರತಿ. ನ ಚ ನಿವರ್ತತೇ । ನ ಕೇವಲಂ ಹವಿರಾದೀನಾಂ ಮದೀಯತ್ವಮೇವ ಅಪಿ ತು ಯಜಮಾನಾ ಆ ಶಾಸತೇ । ಮಾಮೇವ ಪ್ರಾರ್ಥಯಂತೇ । ಕಿಂಚೋಕ್ಥೋಕ್ಥಾನಿ ಶಸ್ತ್ರಾಣಿ ಮಾಂ ಪ್ರತಿ ಹರ್ಯಂತಿ । ಕಾಮಯಂತೇ । ಮಾಮೇವ ಶಂಸಂತೀತ್ಯರ್ಥಃ । ಕಿಂಚ ನೋಽಸ್ಮದೀಯಾವಿಮಾ ಹರೀ ಇಮಾವಶ್ವೌ ತಾ ತಾನಿ ಗಂತವ್ಯಾನಿ ಹವಿರಾದೀನ್ಯಚ್ಛಾಭಿಪ್ರಾಪ್ತುಂ ಮಾಂ ವಹತಃ । ಅಭಿಮತದೇಶಂ ಪ್ರಾಪಯತಃ । ಅತ ಏವ ಶೀಘ್ರಂ

ಗಚ್ಛಾಮಿ । ಯುಷ್ಮಾಭಿರಪಿ ತತ್ಪ್ರಾಪ್ತುಂ ಗಂತವ್ಯಮಿತ್ಯರ್ಥಃ । ಅತೋऽಸಹಾಯ ಇತಿ ಮಂತವ್ಯಮಿತಿ ಭಾವಃ ॥

। ಪ್ರತಿಪದಾರ್ಥ ।

ಮರುತಃ—ಎಲೈ ಮರುತ್ತುಗಳೇ । ಬ್ರಹ್ಮಾಣಿ—ಸಕಲ ಕರ್ಮಗಳೂ । ಮೇ—ನನ್ನನ್ನು ಉದ್ದೇಶ ಮಾಡಿದವೇ ಆಗಿವೆ । ಮತಯಃ—ಸ್ತುತಿಗಳೂ ಸಹ । ಶಂ—ನನಗೆ ಸುಖವನ್ನುಂಟುಮಾಡುವವಾಗಿವೆ । ಸುತಾಸಃ—ಹಿಂಡಿರುವ ಸೋಮರಸಗಳೂ ನನ್ನವೇ ಆಗಿವೆ । ಶುಷ್ಮ—(ನನ್ನ) ಶಕ್ತಿಯು ಅಧಿಕವಾದುದು. ಮೇ—ನನ್ನ । ಅದ್ರಿಃ—ವಜ್ರಾಯುಧವು । ಪ್ರಭೃತಃ—ಪ್ರಯುಕ್ತವಾದುದಾಗಿ । ಇಯರ್ತಿ—ತನ್ನ ಲಕ್ಷ್ಯದ ಕಡೆಗೆ ಓಡುತ್ತದೆ । ಆ ಶಾಸತೇ—(ಯಜ್ಞಕರ್ತರೆಲ್ಲರೂ) ನನ್ನನ್ನೇ ಹಂಬಲಿಸುತ್ತಾರೆ । ಉಕ್ಥಾ—ಶಸ್ತ್ರರೂಪವಾದ ಸ್ತುತಿಗಳೂ ಸಹ । ಪ್ರತಿ ಹರ್ಯಂತಿ—ನನ್ನನ್ನೇ ಪ್ರಶಂಸಿಸುತ್ತವೆ । ನಃ—ನನ್ನ । ಇಮಾ ಹರೀ—ಈ ಅಶ್ವಗಳು ತಾ—ಹೋಗಿಸೇರಬೇಕಾದ ಯಜ್ಞಾದಿಗಳನ್ನೂ । ಅಚ್ಛ-- ಹೋಗಿಸೇರಲು । ವಹತಃ—ನನ್ನನ್ನು ವಹಿಸುತ್ತವೆ ।

ಭಾವಾರ್ಥ

ಎಲೈ ಮರುತ್ತುಗಳೇ, ಸಕಲಕರ್ಮಗಳೂ ನನ್ನನ್ನು ಉದ್ದೇಶಿಸಿ ಮಾಡಿದವೇ ಆಗಿವೆ. ಸ್ತುತಿಗಳೂ ನನಗೇ ಸುಖಕಾರಕಗಳಾಗಿವೆ. ಹಿಂಡಿರುವ ಸೋಮರಸಗಳೂ ನನ್ನವೇ ಆಗಿವೆ. ನನ್ನ ಶಕ್ತಿಯು ಅತ್ಯಧಿಕವಾಗಿದೆ. ನನ್ನ ವಜ್ರಾಯುಧವನ್ನು ಪ್ರಯೋಗಿಸಿದಾಗ ಅದು ತನ್ನ ಶತ್ರುವಿನ ಕಡೆಗೆ ಓಡುತ್ತದೆ. ಯಜ್ಞಕರ್ತರೆಲ್ಲರೂ ನನ್ನನ್ನೇ ಹಂಬಲಿಸುತ್ತಾರೆ ಶಸ್ತ್ರರೂಪವಾದ ಸ್ತುತಿಗಳೂ ಸಹ ನನ್ನನ್ನೇ ಪ್ರಶಂಸಿಸುತ್ತವೆ. ನನ್ನ ಈ ಅಶ್ವಗಳು ನಾನು ಹೋಗಿ ಸೇರಬೇಕಾದ ಯಜ್ಞಾದಿಗಳನ್ನು ಹೋಗಿ ಸೇರಲು ನನ್ನನ್ನು ವಹಿಸುತ್ತವೆ

English Translation

(Indra),—Sacred rites are mine: (holy) praises give me pleasure: libations are for me: my vigorous thunder-bolt, hurled (against my foes), goes (to its mark): me, do (pious worshippers) propitiate: hymns are addressed to me: these horses bear us to the presence (of those worshippers and worship).

ವಿಶೇಷವಿಷಯಗಳು

ಬ್ರಹ್ಮಾಣಿ—ಪರಿವೃಢವಾದ ಕರ್ಮವೆಂದಾಗಲಿ ಅಥವಾ ಹವೀರೂಪವಾದ ಅನ್ನವೆಂದಾಗಲಿ ಅರ್ಥ. ಈ ಪದದ ನಿರ್ವಚನವನ್ನೂ, ನಾನಾರ್ಥಗಳನ್ನೂ ಹಿಂದೆ ತಿಳಿಸಿದೆ.

ಶುಷ್ಮಃ—ಓಜಃ ಪಾಜಃ ಇತ್ಯಾದಿ ಬಲನಾಮಗಳಲ್ಲಿ ಪಠಿತವಾಗಿರುವುದರಿಂದ ಶುಷ್ಮವೆಂದರೆ ಬಲವೆಂದರ್ಥ. (ನಿ. ೨-೯)

ಶುಷ್ಮಮಿತಿ ಬಲನಾಮ ಶೋಷಯತೀತಿ ಸತಃ । (ನಿ. ೨-೨೩)

ಸಕಲಶತ್ರುಗಳನ್ನೂ ಕ್ಷಯಿಸುವಂತೆ ಮಾಡುವುದರಿಂದ ಈ ಹೆಸರು ಪ್ರಸಿದ್ಧವಾಗಿವೆ. ಅದರಲ್ಲೂ ಬಲಶಾಲಿಗಳಲ್ಲೆಲ್ಲಾ ಅತ್ಯಂತ ಬಲಶಾಲಿಯಾದ ಇಂದ್ರನಿಗೆ ಈ ಪದವು ವಿಶೇಷಣವಾಗಿ ಬಹಳ ಕಡೆಗಳಲ್ಲಿ ಪ್ರಯೋಗಿಸಲ್ಪಟ್ಟಿರುತ್ತದೆ. ಉದಾಹರಣೆಗೆ—

ಯಸ್ಯಾನಾಪ್ತಃ ಸೂರ್ಯಸ್ಯೇವ ಯಾಮೋ ಭರೇಭರೇ ವೃತ್ರಹಾ ಶುಷ್ಮೋ ಅಸ್ತಿ ।
ವೃಷಂತಮಃ ಸಖಿಭಿಃ ಸ್ವೇಭಿರೇವೈರ್ಮರುತ್ವಾನ್ನೋ ಭವತ್ವಿಂದ್ರ ಊತೀ ॥

(ಋ. ಸಂ. ೧-೧೦೦-೨)

ಇತ್ಯಾದಿ ಋಕ್ಕುಗಳಲ್ಲಿ ಶುಷ್ಮಪದವು ಇಂದ್ರವಿಶೇಷಣವಾಗಿದೆ.

ಅದ್ರಿಃ—ಅದ್ರಿಶಬ್ದಕ್ಕೆ ವಜ್ರಾಯುಧ, ರಾಕ್ಷಸ ಸೋಮರಸವನ್ನು ಹಿಂಡುವ ಕಲ್ಲು, ಪರ್ವತ, ಮೇಘ ಇತ್ಯಾದ್ಯರ್ಥಗಳಲ್ಲಿ ಪ್ರಯೋಗವಿದೆ. ನಿರುಕ್ತಕಾರರು ಈ ಪದದ ನಿರ್ವಚನವನ್ನು ತಿಳಿಸುತ್ತಾ,

ಅದ್ರಿರಾದೃಣಾತ್ಯೇತೇನ । ಅಪಿ ವಾ ಅತ್ತೇಃ ಸ್ಯಾತ್ ॥

(ನಿ. ೪-೪)

ಸೀಳು ಎಂಬರ್ಥವನ್ನು ಕೊಡತಕ್ಕ ಧೃಾಧಾತುವಿನಿಂದಾಗಲಿ, ತಿನ್ನು ಎಂಬರ್ಥವನ್ನು ಕೊಡುವ ಅದ್ ಧಾತುವಿನಿಂದಾಗಲಿ ಅದ್ರಿಶಬ್ದವು ನಿಷ್ಪನ್ನವಾಗಿದೆಯೆಂದು ತೋರಿಸಿದ್ದಾರೆ. ಪರ್ವತಾದಿಗಳನ್ನು ಸೀಳುವುದರಿಂದ ವಜ್ರಾಯುಧಕ್ಕೆ ಅದ್ರಿಯೆಂದು ಹೆಸರು. ಮತ್ತು ಅತ್ತಾರಂ, ಅಸುರಂ, ಭಕ್ಷಕಂ, ಪಣಿಂ ಎಂದೂ ಸಹ ಅರ್ಥ ಮಾಡಿದೆ. ಈ ವಿವರಣೆಯನು ಕೊಡುವಾಗ ನಿರುಕ್ತಕಾರರು,

ಯದಿಂದ್ರ ಚಿತ್ರ ಮೇಹನಾಸ್ತಿ ತ್ವಾದಾತಮದ್ರಿವಃ ।
ರಾಧಸ್ತನ್ನೋ ವಿದದ್ವಸ ಉಭಯಾಹಸ್ತ್ಯಾ ಭರ ॥

(ಋ. ಸಂ. ೫-೩೯-೧)

ಎಂಬ ಋಕ್ಕನ್ನುದಹರಿಸಿ ಅದ್ರಿವಃ ಎಂಬ ಪದಕ್ಕೆ ವಜ್ರವನ್ ಇಂಧ್ರ ಎಂಬ ಅರ್ಥವು ಹೇಗೆ ಸಾಧ್ಯವಾಗುವುದೆಂದು ತೋರಿಸಿದ್ದಾರೆ. ಅದ್ರಿಶಬ್ದದ ಮೂಲ ಧಾತುವು ಅಥವಾ ಧಾತುಗಳು ಸಂದರ್ಭಾನುಸಾರವಾದ ನಿವೃತ್ತಿಗಳಿಂದ ಬೇರೆ ಬೇರೆ ಅರ್ಥಗಳನ್ನು ಕೊಡುವುದರಿಂದ ಆಯಾ ಸನ್ನಿವೇಶಕ್ಕನುಗುಣವಾಗಿ ಅರ್ಥಮಾಡಬೇಕು.

ಮಹಃ ಸ ರಾಯ ಏಷತೇ ಪತಿರ್ದನ್ನಿನ ಇನಸ್ಯ ವಸುನಃ ಪದ ಆ ।
ಉಗ ಧ್ರಜಂತಮದ್ರಯೋ ವಿಧನ್ನಿತ್ ।

(ಋ. ಸಂ. ೧-೧೪೯-೧)

ಇತ್ಯಾದಿಋಕ್ಕುಗಳಲ್ಲಿ ಅದ್ರಿಗಳುಳ್ಳ ಎಂದರೆ ಹಿಂಡುವಕಲ್ಲುಗಳುಳ್ಳ ಯಜಮಾನರೆಂದರ್ಥ. ಹೀಗೆಯೇ, ಮೇಘ, ಅಸುರ, ಪರ್ವತ ಇತ್ಯಾದ್ಯರ್ಥಗಳಲ್ಲೂ ಇರುವ ಪ್ರಯೋಗಗಳನ್ನು ಹಿಂದೆ ತಿಳಿಸಿದೆ.

ಉಕ್ಥಾ—ಉಕ್ಥಾನಿ ಶಸ್ತ್ರಾಣಿ । ಉಕ್ಥರೂಪವಾದ ಶಸ್ತ್ರವೆಂದರ್ಥ.

ವ್ಯಾಕರಣಪ್ರಕ್ರಿಯಾ

ಬೃಹ್ಮಾಣಿ—ಬೃಹಿ ವೃದ್ಧೌ. ಧಾತು. ಬೃಂಹೇರ್ನೋಽಚ್ಚ (ಉ ಸೂ. ೪-೫೮೫) ಎಂಬುದರಿಂದ ಮನಿನ್ ಪ್ರತ್ಯಯ. ಇದಿತ್ ನಿಮಿತ್ತವಾಗಿ ಬಂದ ನುಮಿನ ನಕಾರಕ್ಕೆ ಅಕಾರಾದೇಶ. ಅದನ್ನು ನಿಮಿತ್ತೀಕರಿಸಿ ಋಕಾರಕ್ಕೆ ಯಣಾದೇಶ ಞ್ನಿತ್ಯಾದಿರ್ನಿತ್ಯಮ್ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಸುತಾಸಃ—ಷುಞ್ ಅಭಿಷವೇ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಆಜ್ಜಸೇರಸುಕ್ (ಪಾ. ಸೂ. ೭-೧-೫೦) ಎಂಬುದರಿಂದ ಜಸಿಗೆ ಅಸುಕಾಗಮ.

ಶುಷ್ಮಃ—ಶುಷ ಶೋಷಣೇ ಧಾತು ಅವಿಸಿವಿಸಿಶುಷಿಭ್ಯಃ ಕಿತ್ (ಉ ಸೂ. ೧-೧೪೧) ಎಂಬುದರಿಂದ ಮನ್ ಪ್ರತ್ಯಯ. ಕಿತ್ವಾತಿದೇಶದಿಂದ ಲಘೂಪಧಗುಣ ಬರುವುದಿಲ್ಲ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಇಯರ್ತಿ—ಋ ಗತೌ ಧಾತು. ಜುಹೋತ್ಯಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್. ಶ್ಲು ವಿಕರಣನಿಮಿತ್ತವಾಗಿ ದ್ವಿತ್ವ. ಅಭ್ಯಾಸಸ್ಯಾಸವರ್ಣೇ (ಪಾ. ಸೂ. ೬-೪-೭೮) ಎಂಬುದರಿಂದ ಅಭ್ಯಾಸಕ್ಕೆ ಇಯಙಾದೇಶ. ತಿಙಂತನಿಘಾತಸ್ವರ ಬರುತ್ತದೆ.

ಪ್ರಭೃತಃ—ಗತಿರನಂತರಃ (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ ಉದಾತ್ತಸ್ವರ ಬರುತ್ತದೆ.

ಶಾಸತೇ—ಶಾಸು ಅನುಶಿಷ್ಟೌ. ಧಾತು. ಅದಾದಿ. ಆಙ್ ಸಂಬಂಧವಿರುವುದರಿಂದ ಆತ್ಮನೇಪದಿಯಾಗುತ್ತದೆ. ಆತ್ಮನೇಪದೇಷ್ವನತಃ (ಪಾ ಸೂ. ೭-೧-೫) ಎಂಬುದರಿಂದ ಝ ಪ್ರತ್ಯಯಕ್ಕೆ ಅತಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಉಕ್ಥಾ—ವಚ ಪರಿಭಾಷಣೇ. ಧಾತು. ಪಾತೃತುದಿವ— (ಉ. ಸೂ. ೨-೧೬೪) ಎಂಬುದರಿಂದ ಥಕ್ ಪ್ರತ್ಯಯ. ಕಿತ್ತಾದುದರಿಂದ ವಚಿಸ್ವಪಿಯಜಾದೀನಾಂ ಕಿತಿ। (ಪಾ. ಸೂ. ೬-೩-೧೫) ಎಂಬುದರಿಂದ ಸಂಪ್ರಸಾರಣ, ಪೂರ್ವರೂಪ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ನಪುಂಸಕ ಬಹುವಚನದಲ್ಲಿ ಶೇಶ್ಛಂದಸಿ ಬಹುಲಮ್ (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲುಕ್. ॥ ೪ ॥



ಸಂಹಿತಾಪಾಠಃ

ಅತೋ ವಯಮಂತಮೇಭಿರ್ಯುಜಾನಾಃ ಸ್ವಕ್ಷತ್ರೇಭಿಸ್ತನ್ವ೧ಃ ಶುಂಭಮಾನಾಃ ।

ಮಹೋಭಿರೇತಾಁ ಉಪ ಯುಜ್ಮಹೇ ನ್ವಿಂದ್ರ ಸ್ವಧಾಮನು ಹಿ ನೋ ಬಭೂಥ ॥ ೫ ॥

॥ ಪದಪಾಠಃ ॥

ಅತಃ । ವಯಂ । ಅಂತಮೇಭಿಃ । ಯುಜಾನಾಃ । ಸ್ವಽಕ್ಷತ್ರೇಭಿಃ । ತನ್ವಃ । ಶುಂಭಮಾನಾಃ ।

ಮಹಃಽಭಿಃ । ಏತಾನ್ । ಉಪ । ಯುಜ್ಮಹೇ । ನು । ಇಂದ್ರ । ಸ್ವಧಾಂ । ಅನು । ಹಿ । ನಃ । ಬಭೂಥ ॥೫॥

ಸಾಯಣಭಾಷ್ಯಂ

ಏವಮುಕ್ತಾ ಮರುತಸ್ತಮೇವ ಬ್ರುವತೇ । ಹೇ ಇಂದ್ರ ತ್ವಂ ಯಸ್ಮಾದೇವಂ ಕರೋಷಿ ಅತಃ ಕಾರಣಾದ್ವಯಮಪ್ಯಂತಮೇಭಿರಂತಿಕತಮೈರಶ್ವೈರ್ಯುಜಾನಾ ಯುಕ್ತಾಃ ಸಂತಃ । ಕೀದೃಶೈಃ ಸ್ವಕ್ಷತ್ರೇಭಿಃ ಸ್ವಾಯತ್ತಬಲೈಃ ಕಿಂಚ ಮಹೋಭಿಸ್ತೇಜೋಭಿಸ್ತನ್ವ ಆತ್ಮಶರೀರಾಣಿ ಶುಂಭಮಾನಾ ದೀಪಯಂತಃ । ಹರ್ಷಂ ಪ್ರಾಪ್ನುವಾನಾ ಇತ್ಯರ್ಥಃ । ಯದ್ವಾ । ಮಹೋಭಿಃ ಸ್ವಮಹತ್ತ್ವೇನ ಯುಕ್ತಾ ವಯಮೇತಾನ್ಯಜ್ಞಾಂತೂನ್ನು ಕ್ಷಿಪ್ರಮುಪ ಯುಜ್ಮಹೇ । ತವ ಸಾಕಂ ಹವಿರಾದಿ ಸ್ವೀಕುರ್ಮಹ ಇತ್ಯರ್ಥಃ । ಹೇ ಇಂದ್ರ ತ್ವಮಪಿ ನೋಽಸ್ಮತ್ಸಂಬಂಧಿ ಸ್ವಧಾಮುದಕಂ ಬಲಂ ವಾನು ಬಭೂಥ ಹಿ । ಅಸ್ಮತ್ಸ್ವೃಷ್ಟ್ಯೋದಕಜನ್ಯಂ ಹವಿರನುಭವಸಿ ಖಲು । ಹಿಶಬ್ದಃ ಪರಸ್ಪರೋಪಕಾರ್ಯೋಪಕಾರಿಭಾವಪ್ರಸಿದ್ಧಿದ್ಯೋತನಾರ್ಥಃ ॥

ಪ್ರತಿಪದಾರ್ಥ

ಅತಃ—ಸ್ತುತ್ಯಾದಿಗಳನ್ನು ಸ್ವೀಕರಿಸಲು ನೀನು ಸಿದ್ಧವಾಗಿರುವುದರಿಂದಲೇ । ವಯಂ—ನಾವೂ ಕೂಡ । ಅಂತಮೇಭಿಃ—ನಮ್ಮ ಸಮೀಪದಲ್ಲಿರುವ ಅಶ್ವಗಳಿಂದ । ಯುಜಾನಾಃ—ಕೂಡಿದವರಾಗಿಯೂ । ಸ್ವಕ್ಷತ್ರೇಭಿಃ—ನಮ್ಮ ನಮ್ಮ ಬಲಗಳಿಂದಲೂ । ಮಹೋಭಿಃ—ತೇಜಸ್ಸುಗಳಿಂದಲೂ । ತನ್ವಃ—ನಮ್ಮ ಶರೀರಗಳನ್ನು । ಶುಂಭಮಾನಾಃ—ಪ್ರಕಾಶಿಸುವಂತೆ ಮಾಡಿಕೊಂಡು । ಏತಾನ್—ಯಜ್ಞಕರ್ಮಗಳನ್ನು ಲಕ್ಷಿಸಿ । ನು—ಶೀಘ್ರವಾಗಿ । ಉಪ ಯುಜ್ಮಹೇ—ನಿನ್ನೊಡನೆ ಹವಿರಾದಿಗಳನ್ನು ಸ್ವೀಕರಿಸುತ್ತೇವೆ । ಇಂದ್ರ—ಇಂದ್ರನೇ । ನಃ—ನಮ್ಮಿಂದ ದತ್ತವಾದ । ಸ್ವಧಾಂ—ಉದಕವನ್ನು ಅಥವಾ ಬಲವನ್ನು । ಅನು ಬಭೂಥ ಹಿ—ಅನುಭವಿಸುತ್ತೀಯಲ್ಲವೇ ? ।

ಪದಪಾಠಃ

ಎಲೈ ಇಂದ್ರನೇ, ಸ್ತುತ್ಯಾದಿಗಳನ್ನು ಸ್ವೀಕರಿಸಲು ನೀನು ಸಿದ್ಧನಾಗಿರುವುದರಿಂದಲೇ ನಾವೂ ಕೂಡ ನಮ್ಮ ಸಮೀಪದಲ್ಲಿರುವ ಅಶ್ವಗಳಿಂದ ಕೂಡಿದವರಾಗಿಯೂ, ನಮ್ಮ ನಮ್ಮ ಬಲಗಳಿಂದಲೂ, ತೇಜಸ್ಸುಗಳಿಂದಲೂ, ನಮ್ಮ ಶರೀರಗಳನ್ನು ಪ್ರಕಾಶಿಸುವಂತೆ ಮಾಡಿಕೊಂಡು ಯಜ್ಞಕರ್ಮಗಳನ್ನು ಲಕ್ಷಿಸಿ ಶೀಘ್ರವಾಗಿ ಬಂದು ನಿನ್ನೊಡನೆ ಹವಿರಾದಿಗಳನ್ನು ಸ್ವೀಕರಿಸುತ್ತೇವೆ. ಇಂದ್ರನೇ, ನಮ್ಮಿಂದ ದತ್ತವಾದ ಬಲವನ್ನು ನೀನು ಅನುಭವಿಸುತ್ತೀಯಲ್ಲವೇ ? (ಅವರಂತೆಯೇ ನಮಗೂ ನಿನ್ನ ಹವಿಸ್ಸಿನಲ್ಲಿ ಭಾಗವನ್ನು ಕೊಡು)

## English Translation

(The Maruts),—Therefore we also, decorating our persons, are ready, with our docile and nigh-standing steeds, (to attend you), with all our splendour, to those rites : verily, Indra, you appropriate our sacrificial food.

### ವಿಶೇಷವಿಷಯಗಳು

ವೃತ್ರಾಸುರನ ವಧಕಾಲದಲ್ಲಿ ಮರುತ್ತುಗಳು ಇಂದ್ರನಿಗೆ ಸಹಾಯಮಾಡಿದುದನ್ನು ಜ್ಞಾಪಿಸಿ, ಇಂದ್ರನು ಭಾಗವಹಿಸತಕ್ಕ ಯಜ್ಞಗಳಲ್ಲಿ ಅವನೊಂದಿಗೆ ಭಾಗವನ್ನು ವಹಿಸುವ ಅಧಿಕಾರವು ತಮಗೂ ಇದೆಯೆಂದೂ, ಅವನು ತಮ್ಮನ್ನು ಮರೆಯುವಂತಿಲ್ಲವೆಂದೂ ಈ ಋಕ್ಕಿನಲ್ಲಿ ತಿಳಿಸಿರುತ್ತಾರೆ-

ಸ್ವಧಾಂ—ಉದಕಂ ಬಲಂ ವಾ । ತಮ್ಮಿಂದ ಎಂದರೆ ಮರುತ್ತುಗಳಿಂದ ದತ್ತವಾದ ಉದಕ ಅಥವಾ ತಮ್ಮ ಸ್ವಶಕ್ತಿ ಎಂದು ಇಲ್ಲಿ ಸ್ವಧಾ ಶಬ್ದಕ್ಕೆ ಅರ್ಥಮಾಡಿದೆ. ನಿರುಕ್ತಕಾರರು ಈ ಪದವನ್ನು ಉದಕನಾಮಗಳಲ್ಲಿಯೂ (ನಿ. ೨-೩೩), ಅನ್ನ ನಾಮಗಳಲ್ಲಿಯೂ (೩-೯) ಪಠಿಸಿದ್ದಾರೆ. ಆದರೆ ಅನೇಕ ಸಂದರ್ಭಗಳಲ್ಲಿ ಸ್ವಧಾಶಬ್ದಕ್ಕೆ ಸ್ವಮಹಿಮೆ, ತೇಜಸ್ಸು, ಅಥವಾ ಸ್ವಾಶ್ರಯ ಎಂದೂ ಅರ್ಥವಾಗುತ್ತದೆ. ಉದಾಹರಣೆಗೆ,

ಶಶ್ವತ್ಪುರೋಷಾ ವ್ಯುವಾಸ ದೇವ್ಯಥೋ ಅದ್ಯೇದಂ ವ್ಯಾವೋ ಮಘೋನೀ ।
ಅಥೋ ವ್ಯುಚ್ಛಾದುತ್ತರಾ ಅನು ದ್ಯೂನಜರಾಮೃತಾ ಚರತಿ ಸ್ವಧಾಭಿಃ ॥

(ಋ. ಸಂ. ೧-೧೧೩-೧೩)

ಎಂಬ ಋಕ್ಕಿನಲ್ಲಿ ಉಷಸ್ಸಿನ ಪರವಾಗಿ ಉಪಯೋಗಿಸಲ್ಪಟ್ಟ ಈ ಪದಕ್ಕೆ ಆತ್ಮೀಯೈಸ್ತೇಜೋಭಿಃ, ತನ್ನ ತೇಜಸ್ಸುಗಳಿಂದ ಎಂದರ್ಥಮಾಡಿದೆ. ಇದರಂತೆಯೇ,

ಯದಂತರಿಕ್ಷೇ ಪತಥಃ ಪುರುಭುಜಾ ಯದ್ವೇಮೇ ರೋದಸೀ ಅನು ।
ಯದ್ವಾ ಸ್ವಧಾಭಿರಧಿತಿಷ್ಠಥೋ ರಥಮತ ಆ ಯಾತಮಶ್ವಿನಾ ॥

(ಋ. ಸಂ. ೮-೧೦-೬)

ಎಂಬಲ್ಲಿಯೂ ಸಹ ಆತ್ಮೀಯೈಸ್ತೇಜೋಭಿರ್ಬಲೈರ್ವಾ ಸಾರ್ಧಂ । ನಿಮ್ಮ ತೇಜಸ್ಸುಗಳಿಂದ ಅಥವಾ ಸ್ವಶಕ್ತಿಗಳೊಡನೆ ಎಂದರ್ಥವಾಗುತ್ತದೆ.

ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ಪ್ರಕೇತಃ ।
ಅನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂ ಚನಾಸ ॥

(ಋ. ಸಂ. ೧೦-೧೨೯-೨)

ಎಂಬ ಋಕ್ಕಿನಲ್ಲಿ ಸಾಯಣರು, ಸ್ವಸ್ಮಿನ್ ಧೀಯತೇ ಧ್ರಿಯತೇ ಆಶ್ರಿತ್ಯ ವರ್ತತೇ ಇತಿ ಸ್ವಧಾ, ಸ್ವಾಶ್ರಯಾವಲಂಬಿಯಾಗಿರುವುದರಿಂದ ಸ್ವಧಾ ಎಂದು ಈಶ್ವರನ (ಪರಬ್ರಹ್ಮನ) ವಿಚಿತ್ರವಾದ ಶಕ್ತಿಯಾದ ಮಾಯೆಗೆ ವಿಶೇಷಣವಾಗಿದೆಯೆಂದು ವಿವರಿಸಿದ್ದಾರೆ. ಅದರಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಮರುತ್ತುಗಳ ಅಸಾಧಾರಣವಾದ ಶಕ್ತಿಯೆಂದರ್ಥಮಾಡಬಹುದೆಂದು ಸಾಯಣರ ಅಭಿಪ್ರಾಯ.

ಶುಂಭಮಾನಾಃ—ದೀಪ್ತಯಂತಃ । ಹರ್ಷಂ ಪ್ರಾಪ್ನುವಾನಾ ಇತ್ಯರ್ಥಃ । ಪ್ರಕಾಶಿಸುತ್ತಾ ಎಂದರೆ ಹರ್ಷವನ್ನು ಪ್ರಕಟಿಸುತ್ತಾ ಎಂದರ್ಥ. ಶುಂಭ ದೀಪ್ತೌ । ಪ್ರಕಾಶಿಸು, ಶೋಭಿಸು ಎನ್ನುವ ಅರ್ಥವನ್ನು ಕೊಡುವ ಶುಂಭ ಧಾತುವಿನಿಂದ ನಿಷ್ಪನ್ನವಾಗಿ ಶುಂಭಮಾನಾ ಎಂದಾಗಿದೆ. ಶುಂಭಮಾನಾಃ ಶುಶೋಭಿಷ-

ಮಾಣಾಃ (ನಿ. ೮-೧೧) ಎಂದು ನಿರುಕ್ತಕಾರರು ಈ ಶಬ್ದಕ್ಕೆ ಅತಿಶಯವಾಗಿ ಶೋಭಿಸತಕ್ಕ ಎಂದರ್ಥಮಾಡಿದ್ದಾರೆ. ಅದರಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಮರುತ್ತುಗಳ ಆಕರ್ಷಕವಾದ ಶೋಭೆಯನ್ನು ತಿಳಿಸುವ ಪದವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

ಅಂತಮೇಭಿಃ—ಅತಿಶಯೇನ ಅಂತಿಕಾ. ಅತಿಶಾಯನೇತಮಪ್ (ಪಾ. ಸೂ. ೫-೩-೫೫) ಎಂಬುದರಿಂದ ತಮಪ್. ತಮೇತಾದೇಶ್ಚ (ಪಾ. ಸೂ. ೬-೪-೧೪೯-೯) ಎಂಬುದರಿಂದ ಅಂತಿಕ ಎಂಬಲ್ಲಿ ತಾದಿಗೆ ಲೋಪ ಅಂತಮ ಶಬ್ದವಾಗುತ್ತದೆ. ತಮಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಪೂರ್ವದ ಅಂತಿಕ ಶಬ್ದವು ಕನ್ನಂತವಾದುದರಿಂದ ಆದ್ಯುದಾತ್ತವಾಗುತ್ತದೆ. ಭಿಸ್‌ಪರವಾದಾಗ ಬಹುಲಂ ಛಂದಸಿ ಎಂಬುದರಿಂದ ಭಿಸಿಗೆ ಐಸ್ ವಿಕಲ್ಪವಾದುದರಿಂದ ಬರುವುದಿಲ್ಲ. ಬಹುವಚನೇಝುಲ್ಯೇತ್ ಎಂಬುದರಿಂದ ಏತ್ವ.

ಯುಜಾನಾಃ—ಯುಜಿರ್ ಯೋಗೇ ಧಾತು. ಲಟಿಗೆ ಶಾನಚಾದೇಶ. ಬಹುಲಂ ಛಂದಸಿ ಎಂಬುದರಿಂದ ವಿಕರಣಕ್ಕೆ ಲುಕ್. ಚಿತಃ ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ಸ್ವಕ್ಷತ್ರೇಭಿಃ—ಸ್ವಂ ಕ್ಷತ್ರಂ ಯೇಷಾಂ ತೇ. ಸ್ವಕ್ಷತ್ರಾಃ ತೈಃ । ಬಹುವ್ರಿಹೌ ಪ್ರಕೃತ್ಯಾಪೂರ್ವಪದಂ ಪಾ. ಸೂ. ೬-೨-೧) ಎಂಬುದರಿಂದ ಪೂರ್ವದಪದ ಪ್ರಕೃತಿಸ್ವರ ಬರುತ್ತದೆ. ಭಿಸಿಗೆ ಐಸ್‌ಭಾವವಿಕಲ್ಪವಾದುದರಿಂದ ಏತ್ವ.

ತನ್ವಃ—ತನ್ವಾದೀನಾಂ ಛಂದಸ್ಯುಪಸಂಖ್ಯಾನಮ್ ಎಂಬುದರಿಂದ ಶಸ್ ಪರವಾದಾಗ ಯಣಾದೇಶ. ಉದಾತ್ತಸ್ವರಿತಯೋರ್ಯ—(ಪಾ ಸೂ. ೯-೨-೪) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

ಶುಂಭಮಾನಾಃ—ಶುಂಭ ದೀಪ್ತೌ. ಲಟಿಗೆ ಶಾನಚಾದೇಶ. ಶಪ್ ವಿಕರಣ. ತಾಸ್ಯನುದಾತ್ತೇತ್— ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

ಮಹೋಭಿಃ—ಮಹ ಪೂಜಾಯಾಂ ಧಾತು. ಔಣಾದಿಕ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾಬಹುವಚನಾಂತರೂಪ.

ಯುಜ್ಮಹೇ—ಯುಜಿರ್ ಯೋಗೇ ಧಾತು. ಲಟ್ ಉತ್ತಮಪುರುಷಬಹುವಚನದಲ್ಲಿ ಮಹಿಙ್ ಪ್ರತ್ಯಯ. ಟಿತಆತ್ಮನೇಪದಾ—ಎಂಬುದರಿಂದ ಟಿಗೆ ಏತ್ವ. ಬಹುಲಂ ಛಂದಸಿ ಎಂಬುದರಿಂದ ವಿಕರಣಕ್ಕೆ ಲುಕ್. ತಿಙಂತ ನಿಘಾತಸ್ವರ ಬರುತ್ತದೆ.

ಬಭೂಥ—ಬಭೂಥಾತತಂಥಜಗೃಂಭವವರ್ಥೇತಿ ನಿಗಮೇ (ವಾ. ಸೂ. ೭-೨-೬೪) ಎಂಬುದರಿಂದ ಲಿಟಿನಲ್ಲಿ ಇಡಭಾವದಿಂದ ನಿಪಾತವಾಗಿದೆ. ಹಿಚ (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. ಥಲ್ ಲಿತ್ತಾದುದರಿಂದ ಲಿತಿ ( ವಾ. ಸೂ. ೬-೧-೧೬೪) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತ ಸ್ವರ ಬರುತ್ತದೆ ॥ ೫ ॥



ಸಂಹಿತಾಪಾಠಃ

ಕ್ವ೧ ಸ್ಯಾ ವೋ ಮರುತಃ ಸ್ವಧಾಸೀದ್ಯನ್ಮಾಮೇಕಂ ಸಮಧತ್ತಾಹಿಹತ್ಯೇ ।
ಅಹಂ ಹ್ಯು೧ಗ್ರಸ್ತವಿಷಸ್ತುವಿಷ್ಮಾನ್ವಿಶ್ವಸ್ಯ ಶತ್ರೋರನಮಂ ವಧಸ್ನೈಃ ॥೬॥

ಪದಪಾಠಃ

ಕ್ವ । ಸ್ಯಾ । ವಃ । ಮರುತಃ । ಸ್ವಧಾ । ಆಸೀತ್ । ಯತ್ । ಮಾಂ । ಏಕಂ । ಸಂऽಅಧತ್ತ । ಅಹಿऽ-
ಹತ್ಯೇ ।
ಅಹಂ । ಹಿ । ಉಗ್ರಃ । ತವಿಷಃ । ತುವಿಷ್ಮಾನ್ । ವಿಶ್ವಸ್ಯ । ಶತ್ರೋಃ । ಅನಮಂ । ವಧಸ್ನೈಃ ॥ ೬ ॥

ಸಾಯಣಭಾಷ್ಯಂ

ಸ್ಯಾ ಸಾ ಸ್ವಧಾ ತದುದಕಂ ಬಲಂ ವಾ ವೋ ಯುಷ್ಮಾಕಂ ಸಂಬಂಧಿ ಕ್ವಾಸೀತ್ । ನೈವಾಸೀ-ದಿತ್ಯರ್ಥಃ । ಅಸ್ಮಾಕಮುದಕಂ ತ್ವಮನುಭವಸೀತಿ ಬ್ರೂಥ । ಯದ್ವಾ ಸ್ವಧೈಕಮಸಹಾಯಂ ಮಾಮಹಿ-ಹತ್ಯೇ ವೃಷ್ಟ್ಯರ್ಥಂ ಮೇಘಹನನಕರ್ಮಣಿ ವೃತ್ರವಧೇ ವಾ ಸಮಧತ್ತ ಸಹಿತಮಭೂತ್ । ಸಮಾಸೀದಿತಿ ಸಂಬಂಧಃ । ಅಸಹಾಯಸ್ಯ ಕಥಮಿತಿ ಮತಂ ಸೇತ್ಸ್ಯತೀತಿ ಅತ ಆಹ । ಅಹಂ ಹ್ಯಹಂ ಖಲೂಗ್ರ ಉದ್ಗೂರ್ಣಬಲಸ್ತವಿಷೋ ಬಲವಾಂಸ್ತುವಿಷ್ಮಾನ್ಮಹತ್ತ್ವೋಪೇತೋಽಸ್ಮಿ । ಯಸ್ಮಾದತಿಬಲೋಽಹಂ ತಸ್ಮಾದ್ವಿಶ್ವಸ್ಯ ಕೃತ್ಸ್ನಸ್ಯ ಶತ್ರೋರ್ಮೇಘಸ್ಯ । ಶತ್ರುರೇವಾಯಂ ॥ ಕರ್ಮಣಿ ಷಷ್ಠೀ ॥ ಸರ್ವಂ ಶತ್ರು-ಸಂಘಂ ವಧಸ್ನೈರ್ವಧರೂಪೈಃ ಶೋಧನೈಃ । ವಧಕೌಶಲ್ಯೈರಿತ್ಯರ್ಥಃ । ಯದ್ವಾ । ವಧ ಇತಿ ವಜ್ರನಾಮ । ವಧಸ್ನೈರ್ವಜ್ರಸ್ಯಾಸನೈಃ ಕ್ಷೇಪಣಪ್ರಕಾರೈಃ । ಅನಮಂ।ಅನಮಯಂ ॥ ಅಂತರ್ಭಾವಿತಣ್ಯರ್ಥೋಽಯಂ॥ ವಶೀಕರೋಮೀತ್ಯರ್ಥಃ ॥

ಪ್ರತಿಪದಾರ್ಥ

ಸ್ಯಾ—ನೀವು ವರ್ಣಿಸಿದ । ಸ್ವಧಾ—ಶಕ್ತಿಯು । ವಃ—ನಿಮ್ಮ ಮಾಹಾತ್ಮ್ಯವನ್ನು ಪ್ರಕಟಿಸುವುದಾಗಿ । ಕ್ವ ಆಸೀತ್—ಎಲ್ಲಿದ್ದಿತು ? (ನಿಮಗೆ ಆ ಶಕ್ತಿಯೇ ಇರಲಿಲ್ಲ) ! ಯತ್—ಯಾವ ಅದೇ ಶಕ್ತಿಯು । ಏಕಂ—ಇತರ ಶಕ್ತಿಯ ಸಹಾಯವನ್ನಪೇಕ್ಷಿಸದೆ । ಮಾಂ—ನನ್ನನ್ನು । ಅಹಿಹತ್ಯೇ—ವೃತ್ರಹನನಕಾಲದಲ್ಲಿ । ಸಮಧತ್ತ ಸೇರಿಕೊಂಡಿತು । ಅಹಂ ಹಿ—ಕೇವಲ ನಾನು ಮಾತ್ರ । ಉಗ್ರಃ—ಭಯಂಕರನೂ । ತವಿಷಃ—ಶಕ್ತಿಯುಳ್ಳವನೂ । ತುವಿಷ್ಮಾನ್—ಮಹತ್ತ್ವದಿಂದ ಕೂಡಿದವನೂ ಆಗಿದ್ದೇನೆ । ವಧಸ್ನೈಃ—ವಧಸಾಧನವಾದ ವಜ್ರಾಯುಧದಿಂದ । ವಿಶ್ವಸ್ಯ—ಸಮಸ್ತವಾದ । ಶತ್ರೋಃ—ಶತ್ರುಗಳನ್ನೂ । ಅನಮಂ—ವಶವಾಗುವಂತೆ ಮಾಡಿದೆನು ।

ಭಾವಾರ್ಥ

ಎಲೈ ಮರುತ್ತುಗಳೇ, ನಿಮ್ಮ ಸಹಾಯದಿಂದ ನಾನು ಅಹಿಹನನವನ್ನು ಮಾಡಿದೆನು ಎಂದು ನೀವು ಹೇಳುವುದು ಸುಳ್ಳು. ನಿಮಗೆ ಆ ಶಕ್ತಿಯು ತಾನೇ ಎಲ್ಲಿದ್ದಿತು ? ನನ್ನ ಶಕ್ತಿಯೇ ಅಸಾಧಾರಣವಾದುದರಿಂದ ಇತರ

ಶಕ್ತಿಯ ಸಹಾಯವನ್ನು ಅಪೇಕ್ಷಿಸದೆ ಅದು ವೃತ್ರಹನನಕಾಲದಲ್ಲಿ ನನಗೆ ಸಹಾಯಮಾಡಿತು. ಕೇವಲ ನಾನು ಮಾತ್ರ ಭಯಂಕರನೂ, ಅದ್ಭುತವಾದ ಶಕ್ತಿಯುಳ್ಳವನೂ ಮಹತ್ತ್ವದಿಂದ ಕೂಡಿದವನೂ ಆಗಿದ್ದೇನೆ. ವಧ ಸಾಧನ ವಾದ ವಜ್ರಾಯುಧದಿಂದ ನಾನು ಸಮಸ್ತವಾದ ಶತ್ರುಗಳನ್ನೂ ನನ್ನ ವಶಮಾಡಿಕೊಂಡೆನು.

## English Translation

(Indra)—Where Maruts, has that (sacrifical) food been assigned to you, which, for the destruction of Ahi, was appropriated to me alone? for I indeed am fierce, and strong, and mighty, and have bowed down all mine enemies with death-dealing shafts.

### ವಿಶೇಷವಿಷಯಗಳು

ವೃತ್ರಾಸುರನ ವಧಕಾಲದಲ್ಲಿ ಮರುತ್ತುಗಳ ಸಹಾಯವನ್ನು ಇಂದ್ರನು ಪಡೆದನೆಂಬುದು ಪ್ರಸಿದ್ಧವಾಗಿದೆ. ಆದರೂ ಸಹ ಮರುತ್ತುಗಳು ಆ ವಿಷಯವನ್ನು ತಿಳಿಸಿ ಆ ಸಹಾಯದ ಜ್ಞಾಪಕಾರ್ಥವಾಗಿ ಇಂದ್ರನಿಗೆ ಸೇರಬೇಕಾದ ಹವಿಸ್ಸಿನಲ್ಲಿ ತಮಗೂ ಭಾಗವನ್ನು ಕೊಡಬೇಕೆಂದು ಕೇಳಿದಾಗ ಇಂದ್ರನು ಮರುತ್ತುಗಳಿಂದ ತನಗೆ ಯಾವ ಸಹಾಯವೂ ಆಗಿಯೇ ಇಲ್ಲವೆಂದೂ, ತಾನು ತನ್ನ ಸ್ವಶಕ್ತಿಯಿಂದಲೇ ಸಕಲಶತ್ರುಗಳನ್ನೂ ಕೊಂದೆನೆಂದೂ ಹೇಳಿ ಕೊಳ್ಳುತ್ತಾನೆ

ಅಹಿಹತ್ಯೇ—ವೃಷ್ಟ್ಯರ್ಥಂ ಮೇಘಹನನಕರ್ಮಣಿ ವೃತ್ರವಧೇ ವಾ। ವೃಷ್ಟಿಯನ್ನು ಸುರಿಸುವುದಕ್ಕಾಗಿ ಮೇಘಹನನವೆಂದಾಗಲಿ ಅಥವಾ ವೃತ್ರವಧವೆಂದಾಗಲಿ ಅರ್ಥ.

ಅಹಿ ಶಬ್ದವು ಮೇಘನಾಮಗಳಲ್ಲಿಯೂ (ನಿ. ೨-೨೧) ಉದಕನಾಮಗಳಲ್ಲಿಯೂ (ನಿ. ೨-೨೩) ಪಠಿತವಾಗಿದ್ದರೂ ಇಲ್ಲಿ ಶತ್ರುಪರ್ಯಾಯವಾಗಿಯೂ ಅರ್ಥಮಾಡಬಹುದು ನಿರುಕ್ತಕಾರರು,

ದಾಸಪತ್ನೀರಹಿಗೋಪಾ ಅತಿಷ್ಠನ್ನಿರುದ್ಧಾ ಆಪಃ ಪಣಿನೇವ ಗಾವಃ।

(ಋ. ಸಂ. ೧-೩೨-೧೧)

ಎಂಬ ಋಕ್ಕನ್ನುದಹರಿಸಿ ಅಹಿ ಶಬ್ದದ ನಿರ್ವಚನವನ್ನು ಮಾಡುವಾಗ ಮೇಘವೆಂದರ್ಥಮಾಡಿ, ಅಹಿರಯನಾದೇತ್ಯಂತರಿಕ್ಷೇ (ನಿ. ೨-೧೭) ಅಂತರಿಕ್ಷದಲ್ಲಿ ಸಂಚರಿಸುವುದರಿಂದ ಮೇಘಕ್ಕೆ ಅಹಿಯೆಂದು ಹೆಸರು ಎಂದು ತೋರಿಸಿದ್ದಾರೆ. ಇಲ್ಲಿಯೂ ಸಹ ಸಾಯಣರು ವೃಷ್ಟ್ಯರ್ಥಂ ಮೇಘಹನನಂ ಎಂದರ್ಥಮಾಡಿದ್ದಾರೆ ಇದಲ್ಲದೆ,

ಅಯಮಪೀತರೋಽಹಿರೇತಸ್ಮಾದೇವ ನಿರ್ಹ್ರಸಿತೋಪಸರ್ಗ ಆಹಂತೀತಿ।

(ನಿ. ೨-೧೭)

ಮೇಲೆ ಬೀಳು ಎಂಬರ್ಥವನ್ನು ಕೊಡುವ ಹನ್ ಧಾತುವಿನೊಂದಿಗೆ ಆ ಎಂಬ ಉಪಸರ್ಗವು ಸೇರಿ ಅನಂತರ ಅದು ಹ್ರಸ್ವವಾಗಿ ಅಹಿ ಎಂಬ ವ್ಯುತ್ಪತ್ತಿಯನ್ನು ಪಡೆದು ಸರ್ಪವೆಂಬರ್ಥವನ್ನು ಕೊಡುತ್ತದೆ. ಇದಲ್ಲದೇ,

ಯೋಽಹಿಃ ಸ ಬುಧ್ನ್ಯೋ ೞೀ ಬುಧ್ನಮಂತರಿಕ್ಷಂ ತನ್ನಿವಾಸಾತ್ ।

(ನಿ. ೧೦-೪೪)

ಅಂತರಿಕ್ಷಕ್ಕೆ ಬುಧ್ನವೆಂದೂ, ಇಂತಹ ಅಂತರಿಕ್ಷದಲ್ಲಿ ವಾಸಮಾಡುವುದರಿಂದ ಅಹಿಗೆ ಬುಧ್ನವೆಂದೂ ಹೆಸರಿರುವುದಾಗಿಯೂ ತಿಳಿಸಿರುತ್ತಾರೆ. ಇದೇ ಅರ್ಥವನ್ನು ವಿಶದಪಡಿಸುತ್ತಾ ಬೃಹದ್ದೇವತಾಕಾರರೂ ಸಹ,

ಅಹಿರಾಹಂತಿ ಮೇಘಾನ್ತ್ಸ ಏತಿ ವಾ ತೇಷು ಮಧ್ಯಮಃ ।
ಯೋಽಹಿಃ ಸ ಬುಧ್ನ್ಯೋ ೞೀ ಬುಧ್ನೇ ಹಿ ಸೋಽಂತರಿಕ್ಷೇಽಭಿಜಾಯತೇ ॥

(ಬೃ. ದೇ. ೫-೧೬೬)

ಅಹಿಯು ಮೇಘಗಳನ್ನು ಆಶ್ರಯಿಸಿ ಮುನ್ನುಗ್ಗಿ ಹೋಗುತ್ತಾನೆ. ಅಥವಾ ಅವುಗಳ ನಡುವೆ ಸಂಚರಿಸುತ್ತಾನೆ. ಗಭೀರವಾದ ಅಂತರಿಕ್ಷದಲ್ಲಿ ಉತ್ಪನ್ನನಾದುದರಿಂದ ಅವನಿಗೂ ಸಹ ಬುಧ್ನ್ಯವೆಂದೂ ಹೆಸರು ಎಂದು ಅಹಿಶಬ್ದದ ನಿರ್ವಚನವನ್ನು ತೋರಿಸಿದ್ದಾರೆ. ಈ ಅರ್ಥದಲ್ಲಿ ಅಹಿಯೆಂದರೆ ಸರ್ಪವಾದರೂ ಆಗಬಹುದು ಅಥವಾ ಅಸುರನೆಂದಾದರೂ ಆಗಬಹುದು. ಈ ರೀತಿ ಮೇಘ, ಗಭೀರವಾದ ಅಂತರಿಕ್ಷದಲ್ಲಿ ಸಂಚರಿಸತಕ್ಕ ಅಸುರ, ಅಥವಾ ಸರ್ಪ ಎಂಬ ಈ ಅರ್ಥಗಳಲ್ಲದೆ ವೃತ್ರಾಸುರನಿಗೆ ವಿಶೇಷಣವಾಗಿಯೂ ಅಥವಾ ಪರ್ಯಾಯರೂಪದಲ್ಲಿಯೂ ಈ ಶಬ್ದವು ಉಪಯೋಗಿಸಲ್ಪಟ್ಟಿದೆ.

ತ್ವಂ ಪ್ರತಿ ಪ್ರವತ ಆಶಯಾನಮಹಿಂ ವಜ್ರೇಣ ಮಘವನ್ವಿ ವೃಶ್ಚಃ ॥

(ಋ. ಸಂ. ೪-೧೭-೭)

ಇತ್ಯಾದಿಋಕ್ಕುಗಳಲ್ಲಿ ಅಹಿಂ ವೃತ್ರನಾಮಾನಮಸುರಂ ಎಂದು ವೃತ್ರಪರ್ಯಾಯವಾಗಿಯೇ ಅರ್ಥಮಾಡಿದೆ ಒಂದನೇ ಮಂಡಲದ ೩೨ನೇ ಸೂಕ್ತದಲ್ಲೆಲ್ಲಾ ಅಹಿಯೆಂದರೆ ಸುತ್ತಲೂ ನೀರನ್ನು ತಡೆದು ವ್ಯಾಪಿಸಿರುವ ಮೇಘವೆಂದರ್ಥ. ಪ್ರಕೃತವಾದ ಋಕ್ಕಿನಲ್ಲಿಯೂ ಮೇಘವೆಂದಾಗಲಿ ಅಥವಾ ವೃತ್ರಾಸುರನೆಂದಾಗಲಿ ಅರ್ಥವಾಗಬಹುದೆಂದು ಸಾಯಣರ ವಿವರಣೆಯಿದೆ.

॥ ವ್ಯಾಕರಣಪ್ರಕ್ರಿಯಾ ॥

ಸ್ಯಾ—ತ್ಯದ್ ಶಬ್ದ. ಸುಪರವಾದಾಗ ತ್ಯದಾದೀನಾಮಃ ಎಂಬುದರಿಂದ ಅತ್ವ. ಪರರೂಪ. ಸ್ತ್ರೀತ್ವದಲ್ಲಿ ಅದಂತನಿಬಂಧನವಾಗಿ ಟಾಪ್. ತದೋಃಸಾವನಂತ್ಯಯೋಃ ಎಂಬುದರಿಂದ ಆದಿಯ ತಕಾರಕ್ಕೆ ಸತ್ವ.

ಸಮಧತ್ತ—ಡುಧಾಞ್ ಧಾರಣಪೋಷಣಯೋಃ ಧಾತು. ಲಙ್ ಪ್ರಥಮಪುರುಷ ಏಕವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾಗುವುದರಿಂದ ಆದ್ಯುದಾತ್ತವಾಗುತ್ತದೆ ತಿಙಿಚೋದಾತ್ತವತಿ (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಸಮ್) ಅನುದಾತ್ತಸ್ವರ ಬರುತ್ತದೆ

ಅಹಿಹತ್ಯೇ—ಹನ ಹಿಂಸಾಗತ್ಯೋಃ ಧಾತು. ಹನಸ್ತ್ಚ (ಪಾ ಸೂ. ೩-೧-೧೦೮) ಎಂಬುದರಿಂದ ಸುಬಂತ ಉಪಪದವಾಗಿರುವಾಗ ಇದಕ್ಕೆ ಕ್ಯಪ್ ಪ್ರತ್ಯಯ. ಧಾತುವಿನ ಅಂತ್ಯ ನಕಾರಕ್ಕೆ ತಕಾರಾದೇಶ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ.

ತವಿಷಃ—ತವಿ ಎಂಬುದು ಸೌತ್ರ ಧಾತು. ತವೇರ್ಣಿದ್ವಾ (ಉ. ಸೂ. ೧-೫೮) ಎಂಬುದರಿಂದ ಟಿಷಚ್ ಪ್ರತ್ಯಯ. ಇದರಲ್ಲಿ ಇಷ ಎಂಬುದು ಉಳಿಯುತ್ತದೆ. ಚಿತಃ (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ಅನುಮಮ್—ಣಮು ಪ್ರಹ್ವತ್ವೇ ಶಬ್ದೇ ಚ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾಗಿದೆ ಲುಙ್ ಉತ್ತಮಪುರುಷ ಏಕವಚನಾಂತರೂಪ. ಹಿಚ (ಪಾ. ಸೂ ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಅಟ್ ಸ್ವರದಿಂದ ಆದ್ಯುದಾತ್ತವಾಗುತ್ತದೆ.

ಶತ್ರೋಃ—ಕರ್ಮಾರ್ಥದಲ್ಲಿ ಷಷ್ಠೀ ಬಂದಿದೆ. ॥ ೬ ॥

———— :o: ————

ಸಂಹಿತಾಪಾಠಃ

ಭೂರಿ ಚಕರ್ಥ ಯುಜ್ಯೇಭಿರಸ್ಮೇ ಸಮಾನೇಭಿರ್ವೃಷಭ ಪೌಂಸ್ಯೇಭಿಃ ।
ಭೂರೀಣಿ ಹಿ ಕೃಣವಾಮಾ ಶವಿಷ್ಠೇಂದ್ರ ಕ್ರತ್ವಾ ಮರುತೋ ಯದ್ವಶಾಮ ॥
॥ ೭ ॥

ಪದಪಾಠಃ

ಭೂರಿ । ಚಕರ್ಥ । ಯುಜ್ಯೇಭಿಃ । ಅಸ್ಮೇ ಇತಿ । ಸಮಾನೇಭಿಃ । ವೃಷಭ । ಪೌಂಸ್ಯೇಭಿಃ ।
ಭೂರೀಣಿ । ಹಿ । ಕೃಣವಾಮ । ಶವಿಷ್ಠ । ಇಂದ್ರ । ಕ್ರತ್ವಾ । ಮರುತಃ । ಯತ್ । ವಶಾಮ ॥ ೭ ॥

ಸಾಯಣಭಾಷ್ಯಂ

ಅಥೈವಮುಕ್ತಾ ಇಂದ್ರಂ ಪುನರಾಹುಃ । ಹೇ ಇಂದ್ರ ವೃಷಭ ವರ್ಷಿತಃ ತ್ವಂ ಭೂರಿ ಚಕರ್ಥ ಪ್ರಭೂತಂ ಕೃತವಾನಸಿ । ಸತ್ಯಮೇವ । ತಥಾಪ್ಯಸ್ಮೇ ಅಸ್ಮಾಕಂ ಸಮಾನೇಭಿಃ ಸಮಾನೈರ್ಯುಜ್ಯೇಭಿರಸ್ಮಾಭಿರ್ಯೋಕ್ತೃಭಿಃ ಪೌಂಸ್ಯೇಭಿಃ ಪುಂಸಃ ಕರ್ಮಭಿಃ ಸಾಮರ್ಥ್ಯೈರೇವ ಚಕರ್ಥ । ನತ್ವೇಕ ಏವೇತ್ಯರ್ಥಃ । ಹೇ ಶವಿಷ್ಠ । ಶವ ಇತಿ ಬಲನಾಮ । ಹೇ ಇಂದ್ರ ಬಲವತ್ತಮ ವಯಂ ಭೂರೀಣಿ ಹಿ ತ್ವತ್ಕೃತಾದಪಿ ಪ್ರಭೂತಾನಿ ಕರ್ಮಾಣಿ ಕೃಣವಾಮ । ಕೃತವಂತಃ ಸ್ಮ । ಹೇ ಇಂದ್ರ ಕ್ರತ್ವಾ ಕ್ರತುನಾ ಕರ್ಮಣಾ ಯದ್ವೃಷ್ಟ್ಯಾದಿಕಂ ವಶಾಮ ಕಾಮಯಾಮಹೇ । ತಾನಿ ತ್ವತ್ತೋಽಪ್ಯಧಿಕಾನೀತ್ಯರ್ಥಃ । ಯತೋ ವಯಂ ಮರುತಃ ॥ ಛಾಂದಸಮನುದಾತ್ತತ್ವಂ ॥ ಏತೇನ ಸ್ವಮಹತ್ತ್ವಂ ಸ್ಥಾಪಿತಂ ಭವತಿ । ಸ್ವರೋ ವ್ಯಸ್ತಃ । ಅಥವಾ ಇಂದ್ರಸ್ಯೇದಂ ವಾಕ್ಯಂ । ಹೇ ಮರುತಃ ಯದ್ಯಸ್ಯೈವ ತತ್ತಸ್ಯೈವ ಭವತು । ತರ್ಹ್ಯಹಂ ಚ ಯೂಯಂ ಚ ಸಹೈವ ಕ್ರತ್ವಾ ಕರ್ಮಣಾ ಯದ್ವಶಾಮ ಯದ್ವೃಷ್ಟಿಕರ್ಮ ಕಾಮಯಾಮಹೇ । ತಸ್ಮಾದುದಕಂ ಸಮಾನಮೇವೇತ್ಯರ್ಥಃ । ಏವಂ ಮರುತ ಇತಿ ನಿಘಾತಸ್ವರಸ್ಯ ವ್ಯಾಖ್ಯಾನಂ ॥

। ಪ್ರತಿಪದಾರ್ಥ ।

ವೃಷಭ— ಇಷ್ಟಾರ್ಥಗಳನ್ನು ಸುರಿಸತಕ್ಕ ಎಲೈ ಇಂದ್ರನೇ, | (ತ್ವಂ—ನೀನು) | ಭೂರಿ—ಅತ್ಯಧಿಕವಾದ ಕಾರ್ಯಗಳನ್ನು | ಚಕರ್ಥ— ಮಾಡಿದ್ದೀಯೆ (ಆದರೂ ಸಹ) | ಸಮಾನೇಭಿಃ—ಒಟ್ಟಿಗೆ ಸಮವಾಗಿರುವುದೂ, | ಯುಜ್ಯೇಭಿಃ—ಸಂಯುಕ್ತವಾಗಿರುವುದೂ ಆದ | ಅಸ್ಮೇ—ನಮ್ಮ | ಪೌಂಸ್ಯೇಭಿಃ—ಪರಾಕ್ರಮಕಾರ್ಯಗಳ (ಸಹಾಯದಿಂದಲೇ ಮಾಡಿದ್ದೀಯೆ) | ಶವಿಷ್ಠ— ಬಲಶಾಲಿಯಾದ | ಇಂದ್ರ—ಎಲೈ ಇಂದ್ರನೇ | ಕ್ರತ್ವಾ—ಯಾವ ಕರ್ಮಗಳಿಂದ | ಯತ್—ವೃಷ್ಟ್ಯಾದಿಗಳನ್ನು | ವಶಾಮ—ಅಪೇಕ್ಷಿಸುವೆವೋ ಅಂತಹ | ಭೂರೀಣಿ ಹಿ— ಅತ್ಯತಿಶಯವಾದ ಕರ್ಮಗಳನ್ನೇ | ಕೃಣವಾಮ—ಮಾಡಿದ್ದೇವೆ | (ಆದುದರಿಂದಲೇ) | ಮರುತಃ—ನಾವು ಮರುತ್ತುಗಳಾಗಿದ್ದೇವೆ.

ಭಾವಾರ್ಥ

ಇಷ್ಟಾರ್ಥಗಳನ್ನು ಸುರಿಸತಕ್ಕ ಎಲೈ ಇಂದ್ರನೇ, ನೀನು ಅತ್ಯಧಿಕವಾದ ಕಾರ್ಯಗಳನ್ನು ಮಾಡಿರುವುದು ನಿಜ. ಆದರೂ ಸಹ ನಮ್ಮೆಲ್ಲರ ಒಟ್ಟಿಗೆ ಸಮವಾಗಿರುವುದೂ, ಸಂಯುಕ್ತವಾಗಿರುವುದೂ ಆದ ಪರಾಕ್ರಮಕಾರ್ಯಗಳ ಸಹಾಯದಿಂದಲೇ ನೀನು ಅವೆಲ್ಲವನ್ನೂ ಮಾಡಿದ್ದೀಯೆ. ಬಲಶಾಲಿಯಾದ ಎಲೈ ಇಂದ್ರನೇ, ಯಾವ ಕರ್ಮಗಳಿಂದ ವೃಷ್ಟ್ಯಾದಿಗಳನ್ನು ಅಪೇಕ್ಷಿಸುವೆವೋ ಅಂತಹ ಅತ್ಯತಿಶಯವಾದ ಕರ್ಮಗಳನ್ನೇ ನಾವೂ ಮಾಡಿದ್ದೇವೆ. ಆದುದರಿಂದಲೇ ನಾವು ಮರುತ್ತುಗಳಾಗಿದ್ದೇವೆ.

## English Translation

(Maruts),-Showerer (of benefits), you have done much ; but it has been with our united equal energies ; for we, too, most powerful Indra, have done many things, and by our deeds (we are, as) we desire to be, Maruts.

ವಿಶೇಷವಿಷಯಗಳು

ಸಮಾನೇಭಿಃ ಯುಜ್ಯೇಭಿಃ ಪೌಂಸ್ಯೇಭಿಃ— ಮರುತ್ತುಗಳ ಸ್ವಾಭಾವಿಕವಾದುದೂ ಸಂಘಾತ್ಮಕವಾದುದೂ ಆದ ಶಕ್ತಿಯೂ, ಆ ಶಕ್ತಿಯಿಂದ ನೆರವೇರಿಸಿದ ವೀರ್ಯಕರ್ಮಗಳೂ ಇದರಿಂದ ಸೂಚಿತವಾಗಿವೆ. ಮರುತ್ತುಗಳ ಸಂಘಾತ್ಮಕವಾದ ಶಕ್ತಿಯನ್ನು ಅನೇಕ ಕಡೆಗಳಲ್ಲಿ ಪ್ರಶಂಸಿಸಿದೆ.

ಸಪ್ತ ಸಪ್ತ ಹಿ ಮಾರುತೋ ಗಣಸ್ತಸ್ಮಾನ್ಮಾರುತಃ ಸಪ್ತಕಪಾಲಃ |

(ಶ. ಬ್ರಾ. ೨-೫-೧-೧೩)

ಸಪ್ತ ಸಪ್ತ ಹಿ ಮಾರುತೋ ಗಣಃ ಸರ್ವಮೇವೈತೇನ ರಥಂ ಪ್ರೀಣಾತಿ |

(ಶ. ಬ್ರಾ. ೫-೪-೩-೧೭)

ಇತ್ಯಾದಿವಾಕ್ಯಗಳಿಂದ ಮರುತ್ತುಗಳು ಯಾವಾಗಲೂ ಗುಂಪುಕಟ್ಟಿಕೊಂಡೇ ಇರುವರೆಂದು ತಿಳಿಯುತ್ತದೆ. ಆ ವಿಧವಾದ ಗುಂಪಿನಲ್ಲಿ ಒಂದು ವಿಧವಾದ ಚೈತನ್ಯವೂ ಶಕ್ತಿಯೂ ಸಹ ಸಹಜವಾಗಿರುತ್ತದೆ.

ಪೌಂಸ್ಯೇಭಿಃ—ಪುಂಸಃ ಕರ್ಮ ಪೌಂಸ್ಯಂ । ಪುರುಷಶಕ್ತಿಯೆಂದು ತಾತ್ಪರ್ಯ. ಈ ಪದವು ಬಲನಾಮ ಗಳಲ್ಲಿಯೂ (ನಿ. ೩-೯), ಸಂಗ್ರಾಮನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ ಪ್ರಕೃತವಾದ ಋಕ್ಕಿನಲ್ಲಿ ಶಕ್ತಿ ಯೆಂದೇ ಅರ್ಥಮಾಡಬೇಕಾಗುತ್ತದೆ.

ಅಥ ಮರುದ್ಭ್ಯಃ ಕ್ರೀಡಿಭ್ಯಃ ಸಪ್ತಕಪಾಲಂ ಪುರೋಡಾಶಂ ನಿರ್ವಪತಿ ಮರುತೋ ಹ ವೈ ಕ್ರೀಡಿನೋ ವೃತ್ರಗ್ಂ ಹನಿಷ್ಯಂತಮಿಂದ್ರಮಾಗತಂ ತಮಭಿತಃ ಪರಿಚಿಕ್ರೀಡುಃ .... .... .... ।

(ಶ. ಬ್ರಾ. ೨-೫-೩-೨೦)

ಇತ್ಯಾದಿ ವಾಕ್ಯಗಳಲ್ಲೆಲ್ಲಾ ಇಂದ್ರನು ವೃತ್ರಾಸುರನ ಕಾಲದಲ್ಲಿ ಮರುತ್ತುಗಳಿಂದ ಪಡೆದ ಸಹಾಯವೂ, ಅದುದ ರಿಂದಲೇ ಇಂದ್ರನು ಸ್ವೀಕರಿಸುವ ಹವಿಸ್ಸುಗಳಲ್ಲಿ ಮರುತ್ತುಗಳಿಗೂ ಭಾಗವು ನಿರ್ದಿಷ್ಟವಾಗಿದೆ. ಪ್ರಕೃತವಾದ ಋಕ್ಕಿ ನಲ್ಲಿ ಮರುತ್ತುಗಳು ತಾವು ಹಿಂದೆ ಮಾಡಿದ ಸಹಾಯವನ್ನು ಜ್ಞಾಪಿಸುತ್ತಾರೆ.

ಕೃತ್ವಾ ಮರುತೋ ಯದ್ವಶಾಮ—ಈ ಭಾಗಕ್ಕೆ ಅರ್ಥವನ್ನು ಹೇಳುವುದು ಕೊಂಚ ಶ್ರಮವೆಂದು ಸಾಯಣರೇ ತಿಳಿಸಿದ್ದಾರೆ. ಮೊದಲು ಯತೋ ವಯಂ ಮರುತಃ ಎಂಬ ವಿವರಣೆಯಿಂದ ಇದು ಮರುತ್ತುಗಳ ವಾಕ್ಯಗಳೆಂದು ತಿಳಿಯುತ್ತದೆ. ಅನಂತರ,

ಅಥವಾ ಇಂದ್ರಸ್ಯೇದಂ ವಾಕ್ಯಂ ; ಹೇ ಮರುತಃ ಯತ್ ಯುಷ್ಮೈವ ತತ್ತಸ್ಯೈವ ಭವತು........॥

ಇತ್ಯಾದಿ ವಿವರಣೆಗಳಿಂದ ಇದು ಇಂದ್ರನ ವಾಕ್ಯವೆಂದೂ ಹೇಳಬಹುದೆಂದು ತಿಳಿಸಿದ್ದಾರೆ. Max Muller ಎಂಬ ಪಂಡಿತನು ಈ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ಈ ರೀತಿ ತಿಳಿಸಿದ್ದಾನೆ.

The last words leave no doubt as to their meaning, for the phrase is one of frequent occurance. The only difficulty is the vocative ಮರುತಃ where we should expect the nominative. It is quite possible, however, that the Maruts Should here address themselves, though, no doubt, it would be easy to alter the accent.

(Sacred Books of the East. Voi. XXXII. The Vedic Hymns. p. 198)

ಕೊನೆಯ ಪದಗಳಿಗೆ ಅರ್ಥವು ವಿಶದವಾಗಿದ್ದರೂ ಸಹ ಪ್ರಥಮಾವಿಭಕ್ತಿಯಲ್ಲಿರಬೇಕಾದ ಮರುತಃ ಎಂಬ ಪದವು ಸಂಬೋಧನಾಪ್ರಥಮಾವಿಭಕ್ತಿಯಲ್ಲಿರುವುದು ಕೊಂಚ ತಡವನ್ನುಂಟುಮಾಡುತ್ತದೆ. ಅಥವಾ ಮರುತ್ತುಗಳು ತನ್ನನ್ನೇ ಸಂಬೋಧಿಸಿದ್ದರೂ ಇರಬಹುದೆಂದು ಹೇಳಬಹುದು.

ಅಪ್ರಾಮಿಸತ್ಯ ಮಘವನ್ನಥೇದಸದಿಂದ್ರ ಕ್ರತ್ವಾ ಯಥಾ ವಶಃ ॥

(ಋ. ಸಂ. ೮-೬೧-೪)

ಇತ್ಯಾದಿ ಕೆಲವು ವಾಕ್ಯಗಳಲ್ಲಿಯೂ ಸಹ ಕ್ರತ್ವಾ ಯಥಾ ವಶಃ ಎಂಬ ಶೈಲಿಯು ಪ್ರಕೃತವಾದ ಋಕ್ಕಿನಲ್ಲಿರು ವಂತೆಯೇ ಇರುತ್ತದೆ.

॥ ವ್ಯಾಕರಣಪ್ರಕ್ರಿಯಾ ।

ಚಕರ್ಥ—ಡುಕೃಞ್ ಕರಣೇ ಧಾತು. ಲಿಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತನಿಘಾತ ಸ್ವರ ಬರುತ್ತದೆ.

ಯುಜ್ಯೇಭಿಃ—ಯುಜಿರ್ ಯೋಗೇ. ಧಾತು. ಬಹುಲಗ್ರಹಣಸಾಮರ್ಥ್ಯದಿಂದ ಕ್ಯಪ್ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಛಂದಸ್ಸಿನಲ್ಲಿ ಭಿಸಿಗೆ ಐಸ್ ಭಾವ ವಿಕಲ್ಪವಾದುದರಿಂದ ಏತ್ವ.

ಅಸ್ಮೇ—ಸುಪಾಂ ಸುಲುಕ್—(ಪಾ. ಸೂ. ೭-೧-೩೯) ಎಂಬುದರಿಂದ ಷಷ್ಠೀ ಬಹುವಚನಕ್ಕೆ ಶೇ ಆದೇಶ.

ಸಮಾಸೇಭಿಃ—ಭಿಸಿಗೆ ಐಸ್‌ಭಾವವಿಕಲ್ಪವಾದುದರಿಂದ ಬಹುವಚನೇ ಝಲ್ಯೇತ್ ಎಂಬುದರಿಂದ ಏತ್ವ.

ಪೌಂಸ್ಯೇಭಿಃ—ಪುಂಸಃ. ಕರ್ಮಾಣಿ ಪೌಂಸ್ಯಾನಿ. ಷ್ಯಞ್‌ಪ್ರತ್ಯಯ. ತದ್ಧಿತೇಷ್ವಚಾಮಾದೇಃ ಎಂಬುದರಿಂದ ಆದಿ ವೃದ್ಧಿ. ಞಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಭಿಸಿಗೆ ಐಸ್ ಭಾವ ವಿಕಲ್ಪವಾದುದ ರಿಂದ ಏತ್ವ.

ಕೃಣವಾಮ—ಕೃವಿ ಹಿಂಸಾಕರಣಯೋಶ್ಚ ಧಾತು ಲೋಟ್ ಉತ್ತಮಪುರುಷ ಬಹುವಚನಾಂತರೂಪ. ಹಿಚ (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ವಿಕರಣ ಸ್ವರ ಉಳಿಯುತ್ತದೆ.

ಶವಿಷ್ಠ—ಶವಃ ಎಂಬುದು ಬಲದ ಹೆಸರು. ಮತ್ವರ್ಥದಲ್ಲಿ ವಿನಿಪ್ರತ್ಯಯ ಬಂದಾಗ ಶವಸ್ವೀ ಎಂದು ರೂಪವಾಗುತ್ತದೆ. ಇದರಮೇಲೆ ಅತಿಶಯಾರ್ಥದಲ್ಲಿ ಇಷ್ಠನ್ ಪ್ರತ್ಯಯ. ವಿನ್‌ಮತೋರ್ಲುಕ್ (ಪಾ. ಸೂ. ೫-೩-೬೫) ಎಂಬುದರಿಂದ ವಿನಿಗೆ ಲುಕ್ ಟೇಃ ಎಂಬುದರಿಂದ ಟಿಗೆ (ಅಸ್) ಲೋಪ. ಸಂಬುದ್ಧಿಯಲ್ಲಿ ಆ ಮಂತ್ರಿತನಿಘಾತಸ್ವರ ಬರುತ್ತದೆ.

ಕ್ರತ್ವಾ—ತೃತೀಯಾ ಏಕವಚನ ಪರವಾದಾಗ ಜಸಾದಿಷು ಛಂದಸಿ ವಾ ವಚನಮ್ (ಪಾ. ಸೂ. ೭-೩-೧೦೯-೧) ಎಂಬುದರಿಂದ ನಾಭಾವ ವಿಕಲ್ಪವಾದುಸರಿಂದ ಬರುವುದಿಲ್ಲ. ಯಣಾದೇಶ.

ಮರುತಃ—ಮೊದಲನೇ ವ್ಯಾಖ್ಯಾನದಲ್ಲಿ ಛಾಂದಸವಾಗಿ ಸರ್ವಾನುದಾತ್ತಸ್ವರ ಬರುತ್ತದೆ. ದ್ವಿತೀಯ ವ್ಯಾಖ್ಯಾನದಲ್ಲಿ ಆಮಂತ್ರಿತಸ್ಯ ಚ ಎಂಬುದರಿಂದ ನಿಘಾತಸ್ವರ ಬರುತ್ತದೆ.

ವಶಾಮ—ವಶ ಕಾಂತೌ. ಧಾತು. ಕಾಂತಿಯೆಂದರೆ ಇಚ್ಛಾ. ಲೋಟ್ ಉತ್ತಮಪುರುಷ ಏಕವಚನಾಂತ ರೂಪ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ತಾಸ್ಯನುದಾತ್ತೇತ್—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ॥ ೭ ॥

— — :0: —

ಸಂಹಿತಾಪಾಠಃ

ವಧೀಂ ವೃತ್ರಂ ಮರುತ ಇಂದ್ರಿಯೇಣ ಸ್ವೇನ ಭಾಮೇನ ತವಿಷೋ ಬಭೂವಾನ್ ।

ಅಹಮೇತಾ ಮನವೇ ವಿಶ್ವಶ್ಚಂದ್ರಾಃ ಸುಗಾ ಅಪಶ್ಚಕರ ವಜ್ರಬಾಹುಃ ॥೮॥

। ಪದಪಾಠಃ ।

ವಧೀಂ । ವೃತ್ರಂ । ಮರುತಃ । ಇಂದ್ರಿಯೇಣ । ಸ್ವೇನ । ಭಾಮೇನ । ತವಿಷಃ । ಬಭೂವಾನ್ ।

ಅಹಂ । ಏತಾಃ । ಮನವೇ । ವಿಶ್ವಚಂದ್ರಾಃ । ಸುಗಾಃ । ಅಪಃ । ಚಕರ । ವಜ್ರಬಾಹುಃ ॥ ೮ ॥

ಸಾಯಣಭಾಷ್ಯಂ

ಇದಾನೀಮಿಂದ್ರ ಆಹ । ಹೇ ಮರುತಃ ಅಹಮಿಂದ್ರ ಇಂದ್ರಿಯೇಣ ಸ್ವೇನ ಭಾಮೇನ ಕೋಪೇನ ತವಿಷೋ ಬಲವಾನ್ ಬಭೂವಾನ್ । ಭೂತಃ । ಸಂಪನ್ನಃ । ಕಸ್ಮೈ ಕಮಿತಿ ತದುಚ್ಯತೇ । ಮನವೇ ಮನೋರರ್ಥಾಯೈತಾ ವಿಶ್ವಶ್ಚಂದ್ರಾಃ ಸರ್ವಾಹ್ಲಾದಕಾಃ ಸುಗಾಃ ಸುಗಮನಾಃ ಸರ್ವತ್ರ ನದ್ಯಾದಿಷು ಗಮನಶೀಲಾ ಅಪೋ ವೃಷ್ಟ್ಯುದಕಾನಿ ಚಕರ । ಚಕಾರ । ಕೃತವಾನಸ್ಮಿ । ಯತೋಽಹಂ ವಜ್ರಬಾಹುಃ । ಅನೇನ ಸಹಾಯನೈರಪೇಕ್ಷ್ಯಮುಕ್ತಂ ಭವತಿ ॥

ಪ್ರತಿಪದಾರ್ಥ

ಮರುತಃ—ಎಲೈ ಮರುತ್ತುಗಳೇ, । ಅಹಂ—ನಾನು । ಇಂದ್ರಿಯೇಣ—ನನ್ನ ಪರಾಕ್ರಮದಿಂದಲೂ, । ಸ್ವೇನ—ನನ್ನದೇ ಆದ । ಭಾಮೇನ—ಕ್ರೋಧದ ಪ್ರಕಟಣೆಯಿಂದಲೂ । ವೃತ್ರಂ—ವೃತ್ರನನ್ನು । ವಧೀಂ—ಕೊಂದೆನು । ತವಿಷಃ—ನನ್ನ ಶಕ್ತ್ಯಾಯುಧದೊಡನೆ । ಬಭೂವಾನ್— ಸೇರಿಕೊಂಡೆನು ಮತ್ತು । ವಜ್ರಬಾಹುಃ—ವಜ್ರಾಯುಧವನ್ನು ಕೈಯಲ್ಲಿ ಹಿಡಿದು । ಅಹಂ—ನಾನು । ಮನವೇ—ಮಾನವನಿಗಾಗಿ । ಏತಾಃ—ಪ್ರಸಿದ್ಧವಾಗಿರುವ । ವಿಶ್ವಚಂದ್ರಾಃ—ಸರ್ವರಿಗೂ ಆಹ್ಲಾದವನ್ನುಂಟುಮಾಡುವವೂ, । ಸುಗಾಃ—ಶ್ರೇಷ್ಠವಾದ ಪ್ರವಾಹವುಳ್ಳವೂ, ಆದ । ಅಪಃ—ವೃಷ್ಟ್ಯುದಕಾದಿಗಳನ್ನು । ಚಕರ—ನಿರ್ಮಿಸಿದ್ದೇನೆ.

ಭಾವಾರ್ಥ

ಎಲೈ ಮರುತ್ತುಗಳೇ, ನಾನು ನನ್ನದೇ ಆದ ಪರಾಕ್ರಮದಿಂದಲೂ, ಕ್ರೋಧದ ಪ್ರಕಟಣೆಯಿಂದಲೂ. ವೃತ್ರನನ್ನು ಕೊಂದೆನು ಅತ್ಯಂತ ಶಕ್ತಿಯುತನಾದೆನು. ಮತ್ತು ವಜ್ರಾಯುಧವನ್ನು ಕೈಯಲ್ಲಿ ಹಿಡಿದುಕೊಂಡು ಸರ್ವರಿಗೂ ಆಹ್ಲಾದವನ್ನುಂಟುಮಾಡುವವೂ, ಶ್ರೇಷ್ಠವಾದ ಪ್ರವಾಹವುಳ್ಳವೂ ಆದ ವೃಷ್ಟ್ಯುದಕಾದಿಗಳನ್ನು ಮಾನವನ ಹಿತಕ್ಕಾಗಿ ನಿರ್ಮಿಸಿದ್ದೇನೆ.

## English Translation

(Indra),—by my own prowess, Maruts, I, mighty in my wrath, slew Vritra : armed with my thunderbolt, I created all these pellucid gently-flowing waters for (the good of) man.

### ವಿಶೇಷವಿಷಯಗಳು

ಯಾರ ಸಹಾಯವೂ ಇಲ್ಲದೇ ತಾನೊಬ್ಬನೇ ಶತ್ರುಹನನಮಾಡಿದನೆಂದೂ, ತನ್ನ ಸ್ವಶಕ್ತಿಯಿಂದಲೇ ವೃಷ್ಟ್ಯಾದಿಗಳ ಪ್ರವಾಹವನ್ನು ಹರಿಸಿ ಜನಗಳಿಗೆ ಉಪಕಾರಮಾಡಿದನೆಂದೂ, ಈ ಕೆಲಸಗಳಲ್ಲಿ ಮರುತ್ತುಗಳ ಸಹಾಯವಾವುದೂ ಇಲ್ಲವೆಂದೂ ಇಂದ್ರನು ಈ ಋಕ್ಕಿನಲ್ಲಿ ಹೇಳುತ್ತಾನೆ.

ಇಂದ್ರಿಯೇಣ ಸ್ವೇನ—ತನ್ನ ಸ್ವಬಲದಿಂದಲೇ ಎಂದರ್ಥ. ನಿರುಕ್ತಕಾರರು ಇಂದ್ರಿಯಶಬ್ದವನ್ನು ಮಘಂ; ರೇಕ್ಣಃ, ಇತ್ಯಾದಿ ೨೮ ಧನನಾಮಗಳಲ್ಲಿ ಸೇರಿಸಿದ್ದಾರೆ. (ನಿ. ೩-೯) ಬಲವಾಗಲಿ, ಧನವಾಗಲಿ, ಅಥವಾ ಇನ್ನಾವ ಬೇರೆ ಅರ್ಥವಾಗಲಿ, ಇಂದ್ರನಿಗೆ ಸಂಬಂಧಿಸಿದುದರಿಂದ ಇಂದ್ರಿಯವೆಂಬ ಶಬ್ದದ ನಿಷ್ಪತ್ತಿಯಾಗಿದೆಯೆಂದು ಋಕ್ಸಂಹಿತೆಯ ಅನೇಕ ವಾಕ್ಯಗಳಿಂದ ತಿಳಿಯುತ್ತದೆ. ಈ ಎರಡು ಅರ್ಥಗಳಲ್ಲದೆ, ಇಂದ್ರನಿಗೆ ಅರ್ಪಿಸಲು ಯೋಗ್ಯವಾದುದು ಎಂದೂ, ಇಂದ್ರನಿಗೆ ತೃಪ್ತಿಯನ್ನುಂಟುಮಾಡತಕ್ಕದ್ದೆಂದೂ ಅರ್ಥವಾಗುತ್ತದೆ.

ನ ಕ್ಷೋಣೀಭ್ಯಾಂ ಪರಿಭ್ವೇ ತ ಇಂದ್ರಿಯಂ ನ ಸಮುದ್ರೈಃ ಪರ್ವತೈರಿಂದ್ರ ತೇ ರಥಃ ।

(ಋ. ಸಂ. ೨-೮೭-೩)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರಿಯಂ-ಬಲಂ; ಇಂದ್ರಿಯಾಯ-ವೀರ್ಯಾಯ ಎಂದು ಇಂದ್ರನ ವೀರ್ಯವನ್ನೂ ಸಾಮರ್ಥ್ಯವನ್ನೂ ವರ್ಣಿಸಿದೆ.

ನಿರಗ್ನಯೋ ರುರುಚುರ್ನಿರು ಸೂರ್ಯೋ ನಿಃ ಸೋಮ ಇಂದ್ರಿಯೋರಸಃ ।

(ಋ. ಸಂ. ೮-೩-೨೦)

ಎಂಬಲ್ಲಿ ಇಂದ್ರೇಣ ಸೇವ್ಯಃ ಇಂದ್ರಿಯಃ ರಸಃ । ಇಂದ್ರನು ಸೇವಿಸಲು ಯೋಗ್ಯವಾದ ಸೋಮರಸವೆಂದೂ,

ನಹೀ ನ್ವಸ್ಯ ಮಹಿಮಾನಮಿಂದ್ರಿಯಂ ಸ್ವರ್ಗೃಣಂತ ಆನಶುಃ ।

(ಋ. ಸಂ. ೮-೩-೧೩)

ಎಂಬ ಋಕ್ಕಿನಲ್ಲಿ ಇಂದ್ರಿಯಮಿಂದ್ರಸ್ಯ ಲಿಂಗಮಿಂದ್ರಸ್ಯೈವಾಸಾಧಾರಣಂ । ಇಂದ್ರನ ಅಸಾಧಾರಣವಾದ ಮಹತ್ತ್ವವೆಂದೂ.

ಅಪಚ್ಛ್ಲೋಕಮಿಂದ್ರಿಯಂ ಪೂಯಮಾನಃ ಪ್ರತಿ ದೇವಾँ ಅಜುಷತ ಪಯೋಭಿಃ ।

(ಋ. ಸಂ ೯-೯೨-೧)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರಸ್ಯ ಪರ್ಯಾಪ್ತಂ । ಇಂದ್ರನಿಗೆ ತೃಪ್ತಿಯನ್ನುಂಟುಮಾಡಲು ಸಾಕಾಗುವಷ್ಟು ಎಂತಲೂ,

ಯಥಾ ಕ್ಷಯಾಮ ಸರ್ವವೀರಯಾ ವಿಶಾ ತನ್ನಃ ಶರ್ಧಾಯ ಧಾಸಥಾ ಸ್ವಿಂದ್ರಿಯಂ ।
(ಋ. ಸಂ. ೧-೧೧೧-೨)

ಉದ್ಯತ್ಸಹಃ ಸಹಸ ಆಜನಿಷ್ಟ ದೇದಿಷ್ಟ ಇಂದ್ರ ಇಂದ್ರಿಯಾಣಿ ವಿಶ್ವಾ ।
(ಋ. ಸಂ. ೫-೩೧-೩)

ಇತ್ಯಾದಿ ಸನ್ನಿವೇಶಗಳಲ್ಲಿ ಧನ, ಐಶ್ವರ್ಯ ಎಂದೂ ಅರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಇಂದ್ರನ ಸ್ವಬಲವೆಂದರ್ಥ.

ಭಾಮೇನ—ಭಾಮ ಶಬ್ದವು ಕ್ರೋಧನಾಮಗಳಲ್ಲಿ ಪಠಿತವಾಗಿದೆ.

(ನಿ. ೩-೯)

ತ್ವೇ ಹಿ ಮನ್ಯೋ ಅಭಿಭೂತ್ಯೋಜಾಃ ಸ್ವಯಂಭೂರ್ಭಾಮೋ ಅಭಿಮಾತಿಷಾಹಃ ।
ವಿಶ್ವಚರ್ಷಣಿಃ ಸಹುರಿಃ ಸಹಾವಾನಸ್ಮಾಸ್ವೋಜಃ ಪೃತನಾಸು ಧೇಹಿ ॥
(ಋ. ಸಂ ೧೦-೮೩-೪)

ಇತ್ಯಾದಿ ಋಕ್ಕುಗಳಲ್ಲಿ ಕ್ರೋಧವೆಂದರ್ಥವಾಗುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಶತ್ರುವಿನ ವಿಷಯದಲ್ಲಿ ಇಂದ್ರನು ಪ್ರಕಟಿಸತಕ್ಕ ಕ್ರೋಧವೆಂದರ್ಥವಾಗುತ್ತದೆ.

ವ್ಯಾಕರಣಪ್ರಕ್ರಿಯಾ

ವಧೀಮ್—ಹನ ಹಿಂಸಾಗತ್ಯೋಃ ಧಾತು ಲುಙಿನಲ್ಲಿ ಲುಙಿಚ (ಪಾ. ಸಾ. ೨-೪-೪೩) ಎಂಬುದರಿಂದ ವಧಾದೇಶ. ವ್ಯತ್ಯಯದಿಂದ ಮಿಪಿಗೆ ಅಮಾದೇಶ ಬರುವುದಿಲ್ಲ. ಇಕಾರಲೋಪ ಅಸ್ತಿಸಿಚೋಽಪೃಕ್ತೇ (ಪಾ. ಸೂ. ೭-೩-೯೬) ಎಂಬುದರಿಂದ ಪ್ರತ್ಯಯಕ್ಕೆ ಈಡಾಗಮ. ಸಿಚಿಗೆ ಆರ್ಧಧಾತುಕ ನಿಮಿತ್ತವಾಗಿ ಇಡಾಗಮ ಇಟ ಈಟಿ (ಪಾ. ಸೂ. ೮-೨-೨೮) ಎಂಬುದರಿಂದ ಸಿಚಿಗೆ ಲೋಪ. ವಧಾದೇಶ ಅದಂತವಾದುದರಿಂದ ಅಕಾರ ಲೋಪವಾದಾಗ ಅದಕ್ಕೆ ಸ್ಥಾನಿವದ್ಭಾವ ಬರುವುದರಿಂದ ಅತೋಹಲಾದೇರ್ಲಘೋಃ ( ಪಾ. ಸೂ. ೭-೨-೭ ) ಎಂಬುದರಿಂದ ವೃದ್ಧಿ ಬರುವುದಿಲ್ಲ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ಆಗಮ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

ಇಂದ್ರಿಯೇಣ—ಇಂದ್ರಿಯಮಿಂದ್ರಲಿಂಗ—( ಪಾ. ಸೂ. ೫-೨-೯೩ ) ಎಂಬುದರಿಂದ ಘಚ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ

ಭಾಮೇನ—ಭಾ ದೀಪ್ತೌ ಧಾತು. ಅರ್ತಿಸ್ತುಸುಹು—(ಉ. ಸೂ. ೧-೧೩೭) ಎಂಬುದರಿಂದ ಮನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಬಭೂವನ್—ಭೂ ಧಾತು- ಛಾಂದಸವಾಗಿ ಕ್ವಸುಪ್ರತ್ಯಯ. ಪ್ರತ್ಯಯಸ್ವರ ಬರುತ್ತದೆ. ಸು ಪರವಾದಾಗ ಉಗಿತ್ತಾದುದರಿಂದ ನುಮಾಗಮ. ಅತ್ವ ಸಂತಸ್ಯ—ಎಂಬುದರಿಂದ ಉಪಧಾದೀರ್ಘ. ಸುಲೋಪ.

ವಿಶ್ವಶ್ಚಂದ್ರಾಃ—ಪರಾದಿಶ್ಛಂದಸಿ ಬಹುಲಮ್ (ಪಾ. ಸೂ. ೬-೨-೧೯೯) ಎಂಬುದರಿಂದ ಪೂರ್ವ-ಪದಾಂತೋದಾತ್ತ ಸ್ವರ ಬರುತ್ತದೆ.

ಸುಗಾಃ—ಗಮ್ಲೃ ಗತೌ. ಧಾತು. ಸುದುರೋರಧಿಕರಣೇ ಎಂಬ ವಚನದಿಂದ ಸು ಉಪಪದವಾಗಿರುವಾಗ ಡಪ್ರತ್ಯಯ. ಡಿತ್ವ ಸಾಮರ್ಥ್ಯದಿಂದ ಧಾತುವಿನ ಟಿಗೆ (ಅಮ್) ಲೋಪ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

ಚಕರ—ಡುಕೃಞ್ ಕರಣೇ. ಧಾತು. ಲಿಟ್ ಉತ್ತಮಪುರುಷ ಏಕವಚನದಲ್ಲಿ ಮಿಪಿಗೆ ಣಲಾದೇಶ. ಣಲ್ ಉತ್ತಮೋ ವಾ (ಪಾ. ಸೂ. ೭-೧-೯೧) ಎಂಬುದರಿಂದ ವಿಕಲ್ಪ.ಣಿತ್ವವಿಧಾನಮಾಡಿರುವುದರಿಂದ ವೃದ್ಧಿ ಬರುವುದಿಲ್ಲ. ಗುಣ. ತಿಙಂತನಿಘಾತಸ್ವರ ಬರುತ್ತದೆ.

ವಜ್ರಬಾಹುಃ—ವಜ್ರಃ ಬಾಹೌ ಯಸ್ಯ ಸಃ ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್ (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ॥ ೮ ॥

———:o:———

ಸಂಹಿತಾಪಾಠಃ

ಅನುತ್ತಮಾ ತೇ ಮಘವನ್ನಕಿರ್ನು ನ ತ್ವಾವಾँ ಅಸ್ತಿ ದೇವತಾ ವಿದಾನಃ ।
ನ ಜಾಯಮಾನೋ ನಶತೇ ನ ಜಾತೋ ಯಾನಿ ಕರಿಷ್ಯಾ ಕೃಣುಹಿ ಪ್ರವೃದ್ಧ ॥ ೯ ॥

ಪದಪಾಠಃ

ಅನುತ್ತಂ । ಆ । ತೇ । ಮಘ್ಽವನ್ । ನಕಿಃ । ನು । ನ । ತ್ವಾಽವಾನ್ । ಅಸ್ತಿ । ದೇವತಾ । ವಿದಾನಃ ।
ನ । ಜಾಯಮಾನಃ । ನಶತೇ । ನ । ಜಾತಃ । ಯಾನಿ । ಕರಿಷ್ಯಾ । ಕೃಣುಹಿ । ಪ್ರಽವೃದ್ಧ ॥ ೯ ॥

ಸಾಯಣಭಾಷ್ಯಂ

ಇದಾನೀಂ ತೇ ಮರುತೋ ಹರ್ಷೇಣ ಪ್ರತ್ಯಾಹುಃ । ಆ ಇತಿ ಸ್ಮರಣೇ । ಸ್ಮೃತಪಂತೋ ವಯಮಿದಾನೀಂ ಹೇ ಮಘವನ್ ತೇ ತ್ವಯಾನುತ್ತಮಪ್ರೇರಿತಂ ನಕಿರ್ನು । ನೈವಾಸ್ತಿ । ನು ನಿಶ್ಚಯೇ । ತ್ವಯಾ ಯದುಕ್ತಂ ತತ್ಸತ್ಯಮಿತ್ಯರ್ಥಃ । ಹೇ ದೇವ ತ್ವಾವಾಂಸ್ತ್ವತ್ಸದೃಶೋ ವಿದಾನೋ ವಿದ್ವಾನ್ ॥ ವ್ಯತ್ಯಯೇನ ಶಾನಚ್ ॥ ಜಯೋಪಾಯವೇದಿತಾ ದೇವತಾ ದೇವೋ ನಾಸ್ತಿ । ಕಿಂಚ ಹೇ ಪ್ರವೃದ್ಧಾತಿಬಲ ಜಾಯಮಾನೋ ಜಾತೋ ವಾ ಕಶ್ಚಿದ್ದೇವೋ ಮರ್ತ್ಯೋ ವಾ ತ್ವಂ ಯಾನಿ ವೃತ್ರವಧಾದೀನಿ ಕರಿಷ್ಯಾ ಕರ್ತವ್ಯಾನಿ ಕೃಣುಹಿ ಕುರುಷೇ ತಾನಿ ನ ನಶತೇ । ನ ವ್ಯಾಪ್ನೋತಿ । ನಶತಿರ್ವ್ಯಾಪ್ತಿಕರ್ಮಾ । ನಾನ್ಯಸ್ತ್ವಚ್ಚೇಷ್ಟಿತಾನುಕಾರ್ಯೇವೇತ್ಯರ್ಥಃ ॥

### ಪ್ರತಿಪದಾರ್ಥ

ಮಘವನ್—ಎಲೈ ಇಂದ್ರನೇ । ಅ—ಖಂಡಿತವಾಗಿಯೂ । ತೇ—ನಿನ್ನಿಂದ । ಅನುತ್ತಂ—ನಡೆಸಲ್ಪಡದಿರುವ ಕಾರ್ಯವು । ನುಕಿರ್ನು—ಇಲ್ಲವೇ ಇಲ್ಲ । ತ್ವಾವಾನ್—ನಿನಗೆ ಸದೃಶನಾಗಿ । ವಿದಾನಃ—ಪ್ರಾಜ್ಞನಾಗಿರುವ । ದೇವತಾ—ದೇವತೆಯು । ನ ಅಸ್ತಿ—ಇಲ್ಲವೇ ಇಲ್ಲ । ಪ್ರವೃದ್ಧ—ಅತ್ಯಂತ ಬಲಶಾಲಿಯಾದ ಎಲೈ ಇಂದ್ರನೇ । ಯಾನಿ—ವೃತ್ರವಧಾದಿರೂಪವಾದುದೂ । ಕರಿಷ್ಯಾ—(ಲೋಕಹಿತಕ್ಕಾಗಿ) ನೆರವೇರಿಸಲ್ಪಡಬೇಕಾದುದೂ ಆದ ಕಾರ್ಯಗಳನ್ನು । ಕೃಣುಹಿ—ನೀನು ಮಾಡುತ್ತೀಯೋ ಅವುಗಳನ್ನು । ಜಾಯಮಾನಃ—ಮುಂದೆ ಹುಟ್ಟುವವನೂ । ಜಾತಃ—ಹಿಂದೆ ಹುಟ್ಟಿರುವವನೂ ಆದ ಯಾವ ದೇವತೆಯಾಗಲಿ ಅಥವಾ ಮಾನವನಾಗಲಿ । ನ ನಶತೇ—ನಿನಗಿಂತಲೂ ಅಧಿಕವಾಗಿ ಮಾಡಲಾರನು ।

### ಭಾವಾರ್ಥ

ಎಲೈ ಇಂದ್ರನೇ, ನಿನ್ನಿಂದ ನಡೆಸಲ್ಪಡದಿರುವ ಕಾರ್ಯವು ಯಾವುದೂ ಇಲ್ಲ. ದೇವತೆಗಳಲ್ಲಿ ನಿನಗೆ ಸಮಾನನಾದ ಪ್ರಾಜ್ಞನೂ ಯಾರೂ ಇಲ್ಲ. ಅತ್ಯಂತ ಬಲಶಾಲಿಯಾದ ಇಂದ್ರನೇ, ವೃತ್ರವಧಾದಿರೂಪವಾದುದೂ, ಲೋಕಹಿತಕ್ಕಾಗಿ ನೆರವೇರಿಸಲ್ಪಡಬೇಕಾದುದೂ ಆದ ಯಾವ ಕಾರ್ಯಗಳನ್ನು ನೀನು ಮಾಡುತ್ತೀಯೋ, ಅವುಗಳನ್ನು ಮುಂದೆ ಹುಟ್ಟುವವನಾಗಲಿ, ಅಥವಾ ಈಗ ಹುಟ್ಟಿರುವವನಾಗಲಿ ಯಾವದೇವತೆಯೂ ಅಥವಾ ಯಾವ ಮಾನವನೂ ಮಾಡಿ ನಿನ್ನನ್ನು ಮೀರಿಸಲೂ ಸಾಧ್ಯವಿಲ್ಲ.

### English Translation

(Maruts),—Verily, Maghavat, nothing (done) by you is unavailing there is no divinty as wise as you : no one being born, or that has been born, ever surpasses the glorious deeds which you, mighty (Indra) have achieved.

### ವಿಶೇಷವಿಷಯಗಳು

ಮರುತ್ತುಗಳಿಂದ ಕಷ್ಟಕಾಲದಲ್ಲಿ ಸಹಾಯುವನ್ನು ಪಡೆದು ಹವಿಸ್ಸನ್ನು ಸ್ವೀಕರಿಸುವ ವೇಳೆಯಲ್ಲಿ ಮಾತ್ರ ಆ ಸಹಾಯವನ್ನು ಮರೆತರೂ ಸಹ ಮರುತ್ತುಗಳು ಇಂದ್ರನಿಗೆ ಕೊಡಬೇಕಾದ ಗೌರವವನ್ನು ಸಲ್ಲಿಸಿ ಅವನ ಪರಾಕ್ರಮವನ್ನು ಪ್ರಶಂಸಿಸುತ್ತಾರೆ. ಕಾರ್ಯದಲ್ಲಾಗಲಿ, ಪ್ರಜ್ಞೆಯಲ್ಲಾಗಲಿ, ಲೋಕೋಪಕಾರದಲ್ಲಾಗಲಿ, ಇಂದ್ರನಿಗೆ ಸಮಾನವಾದ ದೇವತೆಯು ಹಿಂದೆಯೂ ಹುಟ್ಟಿಲ್ಲ, ಮುಂದೆಯೂ ಹುಟ್ಟುವುದಿಲ್ಲವೆಂದರ್ಥ.

ನಶತೇ—ನಶತಿರ್ವ್ಯಾಪ್ತಿಕರ್ಮಾ । ಈ ಪದವನ್ನು ವ್ಯಾಪ್ತಿಕರ್ಮ ನಾಮುಗಳಲ್ಲಿ ಪಠಿಸಿದೆ. (ನಿ. ೩-೧೦) ದೇವತೆಯಾಗಲಿ ಮಾನವನಾಗಲಿ ನಿನ್ನನ್ನು ವ್ಯಾಪಿಸುವುದಿಲ್ಲ ಎಂದರೆ ನಿನ್ನ ಕಾರ್ಯವನ್ನು ಮರೆಸಿ ಅದಕ್ಕಿಂತಲೂ ಅಧಿಕವಾದ ಕಾರ್ಯವನ್ನು ಮಾಡಲಾರನು ಎಂದರ್ಥ.

### ॥ ವ್ಯಾಕರಣಪ್ರಕ್ರಿಯಾ ॥

ಅನುತ್ತಮ್—ಣುದ ಪ್ರೇರಣೇ. ಧಾತು. ಕ್ತ ಪ್ರತ್ಯಯ. ನಸತ್ತನಿಷತ್ತ—(ಪಾ. ಸೂ ೮-೨-೬೧) ಎಂಬುದರಿಂದ ನಿಪಾತಮಾಡಿರುವುದರಿಂದ ನಿಷ್ಠಾನತ್ವ ಬರುವುದಿಲ್ಲ. ತತ್ಪುರುಷೇತುಲ್ಯಾರ್ಥ—(ಪಾ. ಸೂ.

೬-೨-೨) ಎಂಬುದರಿಂದ ನಞ್‌ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

ತ್ವಾವಾನ್—ವತುಪ್ ಪ್ರಕರಣೇ ಯುಷ್ಮದಸ್ಮಭ್ಯಾಂ ಛಂದಸಿ ಸಾದೃಶ್ಯೇ ಉಪಸಂಖ್ಯಾನಮ್ (ಪಾ. ಸೂ. ೫-೨-೩೯-೧) ಎಂಬುದರಿಂದ ಸಾದೃಶ್ಯಾರ್ಥದಲ್ಲಿ ವತುಪ್ ಪ್ರತ್ಯಯ ಪ್ರತ್ಯಯೋತ್ತರಪದಯೋಶ್ಚ ಸೂತ್ರದಿಂದ ಮಪರ್ಯಂತಕ್ಕೆ ತ್ವಾದೇಶ. ಆ ಸರ್ವನಾಮ್ನಃ (ಪಾ. ಸೂ. ೬-೩-೯೧) ಎಂಬುದರಿಂದ ದಕಾರಕ್ಕೆ ಆತ್ವ. ಪ್ರತ್ಯಯ ಪಿತ್ತಾದುದರಿಂದ ಪ್ರಾತಿಪದಿಕಸ್ವರ ಬರುತ್ತದೆ.

ದೇವತಾ—ದೇವ ಏವ ದೇವತಾ. ಸ್ವಾರ್ಥದಲ್ಲಿ ತಲ್‌ಪ್ರತ್ಯಯ. ತಲಂತಂಸ್ತ್ರಿಯಾಮ್ ಎಂಬ ವಚನದಿಂದ ಟಾಪ್ ಬರುತ್ತದೆ. ಪ್ರತ್ಯಯ ಲಿತ್ತಾದುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

ವಿದಾನಃ—ವಿದ ಜ್ಞಾನೇ. ಧಾತು. ವ್ಯತ್ಯಯೋ ಬಹುಲಮ್ ಎಂಬುದರಿಂದ ಲಟಿಗೆ ಶಾನಚಾದೇಶ. ವಿಕರಣಕ್ಕೆ ಲುಕ್. ಸಾರ್ವಧಾತುಕಮಪಿತ್ ಎಂಬುದರಿಂದ ಪ್ರತ್ಯಯ ಙಿತ್ತಾಗುವುದರಿಂದ ಧಾತುವಿನ ಇಕಿಗೆ ಅದನ್ನು ನಿಮಿತ್ತೀಕರಿಸಿ ಗುಣ ಬರುವುದಿಲ್ಲ. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

ನಶತೇ—ಣಶ ವ್ಯಾಪ್ತೌ. ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ಚಾದಿಲೋಪೇ ವಿಭಾಷಾ (ಪಾ. ಸೂ. ೮-೧-೬೩) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಧಾತುಸ್ವರ ಉಳಿಯುತ್ತದೆ.

ಕರಿಷ್ಯಾ—ಛಾಂದಸ ಪ್ರತ್ಯಯ. ನಪುಂಸಕದಲ್ಲಿ ಶೇಶ್ಛಂದಸಿ ಬಹುಲಮ್ (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

ಕೃಣುಹಿ—ಕೃವಿ ಹಿಂಸಾಕರಣಯೋಶ್ಚ ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಉತಶ್ಚ ಪ್ರತ್ಯಯಾಚ್ಛಂದೋವಾವಚನಮ್ (ಪಾ. ಸೂ. ೯-೪-೧೦೬-೧) ಎಂಬುದರಿಂದ ಹಿಗೆ ಲುಕ್ ಬರುವುದಿಲ್ಲ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಹಿಗೆ ಅಪಿತ್ವವಿಧಾನಮಾಡಿರುವುದರಿಂದ ಉದಾತ್ತಸ್ವರ ಬರುತ್ತದೆ.

ಪ್ರವೃದ್ಧ—ವೃಧು ವೃದ್ಧೌ. ಕ್ತ ಪ್ರತ್ಯಯ. ಝಷಸ್ತಥೋರ್ಧೋಽಧಃ—ಎಂಬುದರಿಂದ ಅದಕ್ಕೆ ಧತ್ವ. ಸಂಬುದ್ಧಿಯಲ್ಲಿ ಆಮಂತ್ರಿತ ನಿಘಾತಸ್ವರ ಬರುತ್ತದೆ. ॥ ೯ ॥

—:o:—

ಸಂಹಿತಾಪಾಠಃ

ಏಕಸ್ಯ ಚಿನ್ಮೇ ವಿಭ್ವ೧ಸ್ತ್ವೋಜೋ ಯಾ ನು ದಧೃಷ್ವಾನ್ಕೃಣವೈ ಮನೀಷಾ ।

ಅಹಂ ಹ್ಯು೧ಗ್ರೋ ಮರುತೋ ವಿದಾನೋ ಯಾನಿ ಚ್ಯವಮಿಂದ್ರ ಇದೀಶ ಏಷಾಂ ॥ ೧೦ ॥

॥ ಪದಪಾಠಃ ॥

ಏಕಸ್ಯ । ಚಿತ್ । ಮೇ । ವಿಽಭು । ಅಸ್ತು । ಓಜಃ । ಯಾ । ನು । ದಧೃಷ್ವಾನ್ । ಕೃಣವೈ । ಮನೀಷಾ ।

ಅಹಂ । ಹಿ । ಉಗ್ರಃ । ಮರುತಃ । ವಿದಾನಃ । ಯಾನಿ । ಚ್ಯವಂ । ಇಂದ್ರಃ । ಇತ್ । ಈಶೇ । ಏಷಾಂ ॥ ॥ ೧೦ ।

ಸಾಯಣಭಾಷ್ಯಂ

ಇದಾನೀಮಿಂದ್ರ ಆಹ । ಮೇ ಮಮೈಕಸ್ಯ ಚಿದೇಕಸ್ಯೈವ ವಿಭು ಸರ್ವತ್ರಗಮನಶೀಲಮೋಜೋ ಬಲಮಸ್ತು । ಯದ್ವಾ । ಬಲಮೇಕಸ್ಯೈವಾಸ್ತು । ಕಿಮರ್ಥಮಿತಿ ಚೇತ್ ಉಚ್ಯತೇ । ಯಾ ಯಾನಿ ಕರ್ಮಾಣಿ ಮನೀಷಾ ಮನೀಷಯಾ ಮನಸ ಈಷಯಾ ದಧೃಷ್ವಾನ್ ಧರ್ಷಿತವಾನಹಂ ನು ಕ್ಷಿಪ್ರಂ ಕೃಣವೈ ಕರ್ತುಂ ಶಕ್ನುವಾನಿ । ಹೇ ಮರುತಃ ಅಹಂ ಹ್ಯಹಂ ಖಲೂಗ್ರ ಉದ್ಗೂರ್ಣಬಲೋ ವಿದಾನೋ ವೇದನಾವಾನ್ । ಯಾನಿ ಯಾನಿ ವಸೂನಿ ಚ್ಯವಂ ಅವಗಚ್ಛಾಮಿ ಏಷಾಮಹಮೇವೇಂದ್ರ ಇದೀಶ್ವರ ಏವ ಸನ್ನೀಶೇ । ಈಶ್ವರೋ ಭವಾಮಿ । ಅಥವಾ ವಿದಾನೋಽಹಂ ಯಾನಿ ಚ್ಯವಂ ಯಾನ್ಯುದ್ದಿಶ್ಯ ಗಚ್ಛೇಯಂ ಏಷಾಮೀಶೇ । ಯತೋಽಹಮಿಂದ್ರಃ ಅತಃ ಶಕ್ತ ಇತ್ಯರ್ಥಃ ॥

ಪ್ರತಿಪದಾರ್ಥ

ಯಾ—ಯಾವ ಸಾಹಸಕಾರ್ಯಗಳನ್ನು । ಮನೀಷಾ—ನನ್ನ ಸ್ವಬುದ್ಧಿಪ್ರೇರಣೆಯಿಂದಲೇ । ದಧೃಷ್ವಾನ್—ಸಂಕಲ್ಪಿಸಿ । ನು—ಕ್ಷಿಪ್ರವಾಗಿಯೇ । ಕೃಣವೈ—ಮಾಡಲು ಶಕ್ತನಾಗಿದ್ದೇನೆಯೋ (ಆದ್ದರಿಂದಲೇ) । ಮೇ ಏಕಸ್ಯ ಚಿತ್—ಕೇವಲ ನನ್ನ ಸಂಬಂಧಿಯಾದುದೂ । ವಿಭು—ಸರ್ವತ್ರ ಸಂಚರಿಸತಕ್ಕದ್ದೂ ಆದ । ಓಜಃ—ಬಲವು । ಅಸ್ತು—ಸ್ಥಿರವಾಗಿರಲಿ । ಮರುತಃ—ಎಲೈ ಮರುತ್ತುಗಳೇ । ಅಹಂ ಹಿ—ನಾನಾದರೋ । ಉಗ್ರಃ—ಭಯಂಕರನು । ವಿದಾನಃ—ಪ್ರಾಜ್ಞನು (ಮತ್ತು) । ಯಾನಿ—ಯಾವ ವಿಷಯದಲ್ಲಿ । ಚ್ಯವಂ—ಮನಸ್ಸನ್ನಿಡುತ್ತೇನೆಯೋ ! ಏಷಾಂ—ಆ ಸಕಲ ವಸ್ತುಗಳಿಗೂ । ಇಂದ್ರ ಇತ್—ನಾನೇ ಒಡೆಯನಾಗಿ । ಈಶೇ—ಪ್ರಭುತ್ವವನ್ನು ಮಾಡುತ್ತೇನೆ.

ಭಾವಾರ್ಥ

ಎಲೈ ಮರುತ್ತುಗಳೇ, ಎಲ್ಲಾ ಸಾಹಸಕಾರ್ಯಗಳನ್ನೂ ಸಹ ನಾನು ನನ್ನ ಸ್ವಬುದ್ಧಿಪ್ರೇರಣೆಯಿಂದಲೇ ಸಂಕಲ್ಪಿಸಿ ಕ್ಷಿಪ್ರವಾಗಿ ನಡೆಸಲು ಶಕ್ತನಾಗಿದ್ದೇನೆ. ಆದ್ದರಿಂದಲೇ, ಸರ್ವತ್ರಸಂಚರಿಸಲು ಯೋಗ್ಯವಾದ ಕೇವಲ ನನ್ನ ಬಲವು ಮಾತ್ರ ಸ್ಥಿರವಾಗಿರಲಿ. ನಾನಾದರೋ, ಅತ್ಯಂತ ಭಯಂಕರನು, ಮತ್ತು ಪ್ರಾಜ್ಞನು, ಯಾವ ವಸ್ತುವಿನಲ್ಲಿ ನಾನು ಮನಸ್ಸು ಕೊಡುತ್ತೇನೆಯೋ, ಆ ಸಕಲವಸ್ತುಗಳನ್ನೂ ಪಡೆದು ಅವುಗಳಿಗೆ ಪ್ರಭುವಾಗಿರಬಲ್ಲೆನು.

## English Translation

(Indra),—May the prowess of me alone be irresistible : may I quickly accomplish whatever I contemplate in my mind : for verily, Maruts, I am

fierce and sagacious, and to whatever (objects) I direct (my thoughts), of them I am the lord, and rule (over them).

**ವಿಶೇಷವಿಷಯಗಳು**

ಇಂದ್ರನು ಈ ಋಕ್ಕಿನಲ್ಲಿ ಸರ್ವವ್ಯಾಪಕವಾದ ತನ್ನ ಬಲವನ್ನೂ, ಬುದ್ಧಿಯನ್ನೂ, ತನ್ನ ಭಯಂಕರ ಸ್ವರೂಪವನ್ನೂ, ಪ್ರಾಜ್ಞತೆಯನ್ನೂ ಪ್ರಶಂಸಿಸಿ ಈ ಎಲ್ಲಾ ಗುಣಗಳೂ ಇರುವುದರಿಂದಲೇ, ತಾನು ಸಕಲಕ್ಕೂ ಪ್ರಭುವಾಗಿರಲು ಯೋಗ್ಯನೆಂದು ಹೇಳಿಕೊಳ್ಳುತ್ತಾನೆ. ಈ ರೀತಿ ನಾನಾವಿಧವಾದ ಮಹದ್ಗುಣಗಳಿರುವುದರಿಂದಲೇ ಯಾನಿ ಚ್ಯವಮಿಂದ್ರ ಇದೀಶ ಏಷಾಂ ನಾನೇ ಇಂದ್ರನಾಗಿದ್ದೇನೆ ಎಂದು ಹೇಳಿಕೊಳ್ಳುತ್ತಾನೆ. ಇಲ್ಲಿ ಇಂದ್ರ ಶಬ್ದಕ್ಕೆ ಮೇಲೆ ಹೇಳಿದ ನಾನಾ ಮಹದ್ಗುಣಗಳಿಂದ ಕೂಡಿದ ಪ್ರಭುತ್ವವೆಂದರ್ಥ. ನಿರುಕ್ತಕಾರರು ಇಂದ್ರ ಶಬ್ದದ ನಿರ್ವಚನವನ್ನು ತೋರಿಸಿ ಇಂದ್ರನ ವಿಶೇಷಗುಣಗಳೆಲ್ಲವೂ ಈ ಪದದಿಂದಲೇ ಸೂಚಿತವಾಗುವುದೆಂದು ತಿಳಿಸಿದ್ದಾರೆ

ಇಂದ್ರ ಇರಾಂ ದೃಣಾತೀತಿ ವಾ । ವಿಭಾಗಮಾಡು ಎಂಬರ್ಥವನ್ನು ಕೊಡುವ ದೃ ಧಾತುವಿನಿಂದ ನಿಷ್ಪನ್ನವಾಗಿ, ಇರಾಂ ಅನ್ನಂ ವ್ರೀಹ್ಯಾದಿ ದೃಣಾತಿ ವಿದಾರಯತಿ । ವರ್ಷಕ್ಲೇದಿತಮಂಕುರಂ ಬೀಜಂ ಭಿನತ್ತಿ ವ್ರೀಹ್ಯಾದಿರೂಪವಾದ ಅನ್ನವನ್ನು ವಿಭಾಗಮಾಡುತ್ತಾನೆ ಎಂದರೆ ಮಳೆಯಿಂದ ತೋಯಲ್ಪಟ್ಟ ಬೀಜಾಷ್ಯಂಕುರಗಳನ್ನು ಬಿಡಿಸಿ ವೃಕ್ಷವಾಗುವಂತೆ ಮಾಡುತ್ತಾನೆ ಎಂಬುದರಿಂದಾಗಲಿ, ಅಥವಾ,

ಇರಾಂ ದದಾತೀತಿ ವಾ—ಕೊಡು ಎಂಬರ್ಥವುಳ್ಳ ದಾ ಧಾತುವಿನಿಂದ ನಿಷ್ಪನ್ನವಾಗಿ ವರ್ಷದ್ವಾರೇಣಾಸೌ ಇರಾಂ ದದಾತಿ । ವೃಷ್ಟ್ಯುತ್ಪಾದನಮೂಲಕವಾಗಿ ಅನ್ನವನ್ನು ಕೊಡುತ್ತಾನೆಂಬುದರಿಂದಾಗಲಿ,

ಇರಾಂ ದಧಾತೀತಿ ವಾ—ಪೋಷಣಾರ್ಥಕವಾದ ಧಾ ಧಾತುವಿನಿಂದ ನಿಷ್ಪನ್ನವಾಗಿ ಅನ್ನಾದಿಗಳನ್ನು ವೃಷ್ಟಿದ್ವಾರಾ ಕೊಟ್ಟು ಪೋಷಿಸುವುದರಿಂದಾಗಲಿ,

ಇರಾಂ ದಾರಯತೆ ಇತಿ ವಾ—ಸೀಳುವಂತೆ ಮಾಡು ಎಂಬರ್ಥವನ್ನು ಕೊಡುವ ದೃ ಧಾತುವಿನಿಂದ ನಿಷ್ಪನ್ನವಾಗಿ ಸಸ್ಯಾದಿಗಳಿಗಾಗಿ ಭೂಮಿಯನ್ನು ಉಳುವರೂಪದಲ್ಲಿ ಹದಮಾಡುವುದರಿಂದಾಗಲಿ,

ಇಂದವೇ ದ್ರವತೀತಿ ವಾ—ಓಡು ಎಂಬರ್ಥವನ್ನು ಕೊಡುವ ದ್ರು-ಧಾತುವಿನಿಂದ ನಿಷ್ಪನ್ನವಾಗಿ ಸೋಮರಸಕ್ಕಾಗಿ ಆತುರದಿಂದ ಓಡಿಬರುವನು ಎಂಬುದರಿಂದಾಗಲಿ,

ಇಂದೌ ರಮತ ಇತಿ ವಾ । ಸಂತೋಷಪಡು ಎಂಬರ್ಥವನ್ನು ಕೊಡುವ ರಮ್ ಧಾತುವಿನಿಂದ ನಿಷ್ಪನ್ನವಾಗಿ ಸೋಮರಸದ ಪಾನದಿಂದ ತೃಪ್ತನಾಗು ಎಂಬುದರಿಂದಾಗಲಿ,

ಇಂಧೇ ಭೂತಾನೀತಿ ವಾ—ಪ್ರಕಾಶಿಸು ಎಂಬರ್ಥವನ್ನು ಕೊಡುವ ಇಂಧ್ ಧಾತುವಿನಿಂದ ನಿಷ್ಪನ್ನವಾಗಿ ಭೂತಗಳನ್ನು ಪ್ರಕಾಶಿಸುವಂತೆ ಮಾಡುವವನು ಎಂಬುದರಿಂದಾಗಲಿ, ಇಂದ್ರನೆಂಬ ಹೆಸರು ಪ್ರಸಿದ್ಧವಾಗಿದೆಯೆಂದು ತಮ್ಮ ವೈಯಕ್ತಿಕವಾದ ಅಭಿಪ್ರಾಯವನ್ನು ತಿಳಿಸಿ ಅನಂತರ ಇತರ ಆಚಾರ್ಯರ ಅಭಿಪ್ರಾಯಗಳನ್ನೂ ತಿಳಿಸಿದ್ದಾರೆ:—

ಇದಂ ಕರಣಾದಿತ್ಯಾಗ್ರಯಣಃ—ವಿಶ್ವಸೃಷ್ಟಿಯಲ್ಲಿ ಎಲ್ಲವನ್ನೂ ಇವನೇ ಮಾಡಿದನು. ಎಂಬುದರಿಂದ (ಇದಮಸೌ ಸರ್ವಮಕರೋತ್) ಇಂದ್ರಶಬ್ದವಾಚ್ಯನೆಂದು ಆಗ್ರಯಣಮುನಿಗಳ ಮತವಾಗಿದೆ.

ಇದಂ ದರ್ಶನಾದಿತ್ಯೌಪಮನ್ಯವಃ—ಸಕಲವನ್ನೂ ದರ್ಶನಮಾಡತಕ್ಕ ಶಕ್ತಿಯಿರುವುದರಿಂದ ಇಂದ್ರಶಬ್ದ ವಾಚನ್ಯೆಂದು ಔಪಮನ್ಯವಋಷಿಗಳ ಮತ.

ಇಂದತೇರ್ವೈಶ್ವರ್ಯಕರ್ಮಣಃ—ವಿಶ್ವಕ್ಕೆಲ್ಲಾ ಪ್ರಭುವಾಗಿರುವುದರಿಂದಲೂ ಸಹ ಈ ಹೆಸರಿರಬಹುದು.

ಇಂದಞ್ಛತ್ರೂಣಾಂ ದಾರಯಿತಾ ವಾ ದ್ರಾವಯಿತಾ ವಾ । ಸರ್ವಶಕ್ತಿಯಿಂದ ಕೂಡಿ ಶತ್ರುಗಳನ್ನು ಸೀಳುವವನು ಅಥವಾ ಓಡಿಸುವವನು ಎಂಬುದರಿಂದಾಗಲಿ ಈ ಪ್ರಸಿದ್ಧವಾದ ಹೆಸರಿದೆ

ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಮೇಲೆ ಹೇಳಿದ ಗುಣಗಳು ಇಂದ್ರಶಬ್ದದಿಂದ ಸೂಚಿತವಾಗುತ್ತದೆಂದು ಇಂದ್ರ ಇದೀಶ ವಿಷಾಂ ಎಂಬುದರಿಂದ ತಿಳಿಯುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

ವಿಭು—ವಿಭವತೀತಿ ವಿಭು. ಭೂ ಸತ್ತಾಯಾಂ ಧಾತು ಭುವಃ (ಪಾ. ಸೂ. ೩-೨-೧೭೯) ಎಂಬ ಸೂತ್ರವು ಅನುವೃತ್ತವಾಗುವಾಗ ವಿಪ್ರಭ್ಯೋಡ್ವಸಂಜ್ಞಾಯಾವ್ (ಪಾ ಸೂ. ೩-೨-೧೮೦) ಎಂಬು ದರಿಂದ ಡು ಪ್ರತ್ಯಯ. ಡಿತ್ತಾದುದರಿಂದ ಟಿಗೆ ಲೋಪ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

ದಧೃಷ್ವಾನ್—ಞಿಧೃಷಾ ಪ್ರಾಗಲ್ಭ್ಯೇ ಧಾತು. ಕ್ವಸುಶ್ಚ ಎಂಬುದರಿಂದ ಲಿಟಿಗೆ ಕ್ವಸುರಾದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವಾದಿ. ಪ್ರಥಮಾ ಏಕವಚನಾಂತರೂಪ.

ಕೃಣವೈ— ಕೃವಿ ಹಿಂಸಾಕರಣಯೋಶ್ಚ ಧಾತು. ಇದಿತೋನುಮ್ ಧಾತೋಃ ಎಂಬುದರಿಂದ ನುಮಾ ಗಮ. ತುಮನರ್ಥದಲ್ಲಿ ತುಮರ್ಥೇಸೇಸೇನಸೇ—(ಪಾ. ಸೂ. ೩-೪-೯) ಪ್ರತ್ಯಯ ಬಂದಾಗ ಛಾಂದಸವಾಗಿ ಅಭಿಮತರೂಪವಾಗುತ್ತದೆ.

ಉಗ್ರಃ—ಉಚ ಸಮವಾಯೇ. ಧಾತು. ಋಜ್ರೇಂದ್ರ—(ಉ. ಸೂ. ೨-೧೮೬) ಎಂಬುದರಿಂದ ರಗಂತವಾಗಿ ನಿಪಾತಿತವಾಗಿದೆ.

ಚ್ಯವಮ್—ಚ್ಯುಙ್ ಗತೌ. ಧಾತು. ಭ್ವಾದಿ. ವ್ಯತ್ಯಯೋ ಬಹುಲಮ್ (ಪಾ ಸೂ. ೩-೧-೮೫) ಎಂಬುದರಿಂದ ಪರಸ್ಮೈಪದಿಯಾಗುತ್ತದೆ. ಲಿಙ್ ಉತ್ತಮಪುರುಷಏಕವಚನದಲ್ಲಿ ಮಿಪ್. ತಸ್‌ಥಸ್‌ಥಮಿ— (ಪಾ. ಸೂ. ೩-೪-೧೦೧) ಎಂಬುದರಿಂದ ಅದಕ್ಕೆ ಅಮಾದೇಶ. ಬಹುಲಂ ಛಂದಸಿ ಎಂಬುದರಿಂದ ವಿಕರಣಕ್ಕೆ ಲುಕ್. ಪ್ರತ್ಯಯನಿಮಿತ್ತವಾಗಿ ಧಾತು ಉಕಾರಕ್ಕೆ ಗುಣ. ಅವಾದೇಶ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಮಿಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

ಈಶೇ—ಈಶ ಐಶ್ವರ್ಯೇ ಧಾತು. ಅಟ್ ಉತ್ತಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೧೦ ॥

—— —— :0: ——

ಸಂಹಿತಾಪಾಠಃ

ಅಮನ್ದನ್ಮಾ ಮರುತಃ ಸ್ತೋಮೋ ಅತ್ರ ಯನ್ಮೇ ನರಃ ಶ್ರುತ್ಯಂ ಬ್ರಹ್ಮ ಚಕ್ರ ।

ಇಂದ್ರಾಯ ವೃಷ್ಣೇ ಸುಮಖಾಯ ಮಹ್ಯಂ ಸಖ್ಯೇ ಸಖಾಯಸ್ತನ್ವೇ ತನೂಭಿಃ ॥ ೧೧ ॥

ಪದಪಾಠಃ

ಅಮಂದತ್ । ಮಾ । ಮರುತಃ । ಸ್ತೋಮಃ । ಅತ್ರ । ಯತ್ । ಮೇ । ನರಃ । ಶ್ರುತ್ಯಂ । ಬ್ರಹ್ಮ । ಚಕ್ರ ।

ಇಂದ್ರಾಯ । ವೃಷ್ಣೇ । ಸುऽಮಖಾಯ । ಮಹ್ಯಂ । ಸಖ್ಯೇ । ಸಖಾಯಃ । ತನ್ವೇ । ತನೂಭಿಃ ॥ ೧೧ ॥

ಸಾಯಣಭಾಷ್ಯಂ

ಇದಮಪೀಂದ್ರವಾಕ್ಯಂ । ಹೇ ಮರುತಃ ಮಾ ಮಾಮತ್ರಾಸ್ಮಿನ್ನುದಕೋತ್ಪಾದನವಿಷಯೇ ಸ್ತೋಮಃ ಸ್ತೋತ್ರಮಮಂದತ್। ಮಾದಯತಿ ಮೋದಯತೇ ವಾ । ಹೇ ನರಃ ಸಖಾಯಃ ಯೂಯಂ ಮೇ ಮಮ ಯಚ್ಛ್ರುತ್ಯಂ ಸರ್ವೈಃ ಶ್ರೋತವ್ಯಂ ಬ್ರಹ್ಮ ಪರಿವೃಢಮೋಘಧಾರಣಾದಿರೂಪಂ ಚಕ್ರ ಕೃತವಂತಃ । ಸ್ವಪ್ರಭೂತಂ ಸ್ತೋತ್ರಂ ವಾನುತ್ತಮಾ ತ ಇತ್ಯಾದಿಕಂ । ಇಂದ್ರಾಯ ಪರಮೈಶ್ವರ್ಯಗುಣಕಾಯ ವೃಷ್ಣೇऽಭಿಮತವರ್ಷಿತ್ರೇ ಸುಮಖಾಯ ಶೋಭನಯಾಗಾಯ ಸಖ್ಯೇ ಯುಷ್ಮಾಭಿಃ ಸಮಾನಖ್ಯಾನಾಯ ತನೂಭಿರನೇಕಶರೀರೈರುಪೇತಾಯ ಮಹ್ಯಂ ಮಮ ತನ್ವೇ ಮದೀಯಶರೀರಪೋಷಾಯ ಭವತು । ಯದ್ವಾ । ತನೂಭಿರಸ್ಮಚ್ಛರೀರಭೂತೈರ್ಯುಷ್ಮಾಭಿಃ ಕೃತಂ ಮಹ್ಯಮೇವಾಸ್ತ್ವಿತ್ಯರ್ಥಃ ॥

। ಪ್ರತಿಪದಾರ್ಥ ।

ಮರುತಃ—ಎಲೈ ಮರುತ್ತುಗಳೇ, । ಮಾ—ನನ್ನನ್ನು । ಅತ್ರ—ಈ ಸನ್ನಿವೇಶದಲ್ಲಿ । ಸ್ತೋಮಃ—ಸ್ತೋತ್ರವು । ಅಮಂದತ್—ಸಂತೋಷಪಡಿಸುತ್ತದೆ । ನರಃ—ನೇತೃಗಳೂ । ಸಖಾಯಃ—ಸುಹೃತ್ತುಗಳೂ ಆದ ನೀವು । ಮೇ—ನನಗೆ ಸಂಬಂಧಿಸಿದುದೂ ಮತ್ತು । ಯತ್—ಯಾವುದು । ಶ್ರುತ್ಯಂ—ಸರ್ವರಿಂದಲೂ ಕೇಳಲ್ಪಡುವುದೂ, । ಬ್ರಹ್ಮ-ಬೃಹತ್ತಾದ ಮೇಘವನ್ನು ಧರಿಸತಕ್ಕದ್ದೂ ಆದ ಸ್ತೋತ್ರವನ್ನು । ಚಕ್ರ—ಮಾಡಿದ್ದೀರೋ (ಅವೆಲ್ಲವೂ ಸಹ) । ಇಂದ್ರಾಯ– ಈಶ್ವರಗುಣವುಳ್ಳವನೂ, । ವೃಷ್ಣೇ—ಇಷ್ಟಾರ್ಥಗಳನ್ನು ಸುರಿಸುವವನೂ, । ಸುಮಖಾಯ—ಶ್ರೇಷ್ಠವಾದ ಯಾಗವುಳ್ಳವನೂ, । ಸಖ್ಯೇ—ನಿಮ್ಮಗಳ ಸಖನೂ, । ತನೂಭಿಃ—ಅನೇಕ ಶರೀರಗಳಿಂದ ಕೂಡಿದವನೂ ಆದ । ಮಹ್ಯಂ—ನನ್ನ । ತನ್ವೇ—ಶರೀರದ ಪೋಷಣೆಗಾಗಿ ಉದ್ದಿಷ್ಟವಾಗಿರಲಿ.

### ಭಾವಾರ್ಥ

ಎಲೈ ಮರುತ್ತುಗಳೇ, ಈ ಸನ್ನಿವೇಶದಲ್ಲಿ ನನ್ನನ್ನು ನಿಮ್ಮ ಸ್ತೋತ್ರವು ಸಂತೋಷಪಡಿಸುತ್ತದೆ. ನೇತೃಗಳೂ ಸುಹೃತ್ತುಗಳೂ ಆದ ನೀವು ನನಗೆ ಸಂಬಂಧಿಸಿದುದೂ, ಸರ್ವರಿಂದಲೂ ಕೇಳಲ್ಪಡುವುದೂ, ಬೃಹತ್ತಾದ ಮೇಘವನ್ನು ಧರಿಸತಕ್ಕದೂ ಆದ ಸ್ತೋತ್ರವನ್ನು ಪಠಿಸಿದ್ದೀರಿ. ಆ ಸ್ತುತಿಗಳೆಲ್ಲವೂ ಸಹ ಈಶ್ವರಗುಣವುಳ್ಳವನೂ, ಇಷ್ಟಾರ್ಥಗಳನ್ನು ಸುರಿಸುವವನೂ, ಶ್ರೇಷ್ಠವಾದ ಯಾಗವುಳ್ಳವನೂ, ನಿಮ್ಮಗಳ ಸಖನೂ, ಅನೇಕ ಶರೀರಗಳಿಂದ ಕೂಡಿದವನೂ ಆದ ನನ್ನ ಶರೀರದ ಪೋಷಣೆಗಾಗಿ ಆಗಿರಲಿ.

### English Translation

Maruts, on this occasion praise delights me ; that praise which is to be heard (by all); which men have offered me· To Indra, the showerer (o benefits), the object of pious sacrifce : to me, (endowed) with many forms (do you) my friends (offer sacrifices) for (the nourishment of my) person·

### ವಿಶೇಷವಿಷಯಗಳು

ಇಂದ್ರನು ಮರುತ್ತುಗಳ ಮನಸ್ಸು ನೋಯುವಂತೆ ಹಿಂದಿನ ಋಕ್ಕುಗಳಲ್ಲಿ ಉತ್ತರ ಕೊಟ್ಟಂತೆ ಈ ಋಕ್ಕಿನಲಿಲ್ಲ. ಮರುತ್ತುಗಳ ಸಖ್ಯವನ್ನು ಸ್ಮರಿಸಿ ಅವರಿಗೆ ಸಮಾಧಾನವಾಗುವಂತೆ ಉಪಚಾರದ ಮಾತುಗಳನ್ನಾಡುತ್ತಾನೆ. ಹಿಂದಿನ ಋಕ್ಕುಗಳಲ್ಲಿ ವರ್ಣಿತವಾಗಿರುವಂತೆ ಇಂದ್ರನು ಮರುತ್ತುಗಳ ವಿಷಯದಲ್ಲಿ ಬಹಳ ಕಠಿಣವಾಗಿ ವರ್ತಿಸಿದ್ದರೂ ಸಹ, ಒಂಭತ್ತನೇ ಋಕ್ಕಿನಲ್ಲಿ " ಅನುತ್ತಮಾ ತೇ ಮಘವನ್ನಕಿರ್ನು " ಇತ್ಯಾದಿಯಾಗಿ ಮರುತ್ತುಗಳು ಇಂದ್ರನ ಮಹತ್ತ್ವವನ್ನು ಪ್ರಶಂಸಿಸುತ್ತಾರೆ ಅನಂತರ ಇಂದ್ರನ ಉತ್ತರವು ಮೃದುವಾಗಿಯೂ, ಉಪಕಾರವನ್ನು ಸ್ಮರಿಸುವುದಾಗಿಯೂ ಇರುತ್ತದೆ. ಈ ಋಕ್ಕಿನ ಅರ್ಥವು ಸ್ಪಷ್ಟವಾಗಿದ್ದರೂ ಸಖ್ಯೇ ಸಖಾಯಸ್ತನ್ವೇ ತನೂಭಿಃ ಎಂಬ ಪಾದವು ಮಾತ್ರ ಕೊಂಚ ಕ್ಲಿಷ್ಟವಾಗಿರುತ್ತದೆ. ಸಾಯಣರು ಇದಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಿರುತ್ತಾರೆ. ಮೊದಲನೆಯದಾಗಿ ; ತನೂಭಿಃ— ಅನೇಕಶರೀರೈರುಪೇತಾಯ ; ಮಹ್ಯಂ— ಮಮ ; ತನ್ವೇ— ಮದೀಯಶರೀರಪೋಷಾಯೆ-ಅನೇಕ ಶರೀರಗಳಿಂದ ಕೂಡಿದ ನನ್ನ ದೇಹಪೋಷಣೆಗಾಗಿ ಎಂದು ಒಂದರ್ಥವೂ, ಅಲ್ಲದೇ, ತನೂಭಿರಸ್ಮಚ್ಛರೀರಭೂತೈರ್ಯುಷ್ಮಾಭಿಃ— ನನ್ನ ದೇಹಾನತಿರಿಕ್ತರಾದ ನಿಮ್ಮಿಂದ ಕೃತವಾದದ್ದು ಎಂದು ಇನ್ನೊಂದರ್ಥವೂ ಸಾಧ್ಯವೆಂದು ತಿಳಿಸಿದ್ದಾರೆ.

### ವ್ಯಾಕರಣಪ್ರಕ್ರಿಯಾ

ಅಮಂದತ್— ಮದಿ ಸ್ತುತ್ಯಾದಿಷು. ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಯೋಜಕ ವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾಗಿದೆ. ಪ್ರಥಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ· ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

ಶ್ರುತ್ಯಮ್— ಶ್ರು ಶ್ರವಣೇ. ಧಾತು. ಅಚೋಯತ್ (ಪಾ. ಸೂ ೩-೧-೯೭) ಎಂಬುದರಿಂದ ಯತಿಗೆ ಅಪವಾದವಾಗಿ ಔಣಾದಿಕ ಕ್ಯಪ್ ಪ್ರತ್ಯಯ. ಹ್ರಸ್ವಸ್ಯಪಿತಿಕೃತಿ ತುಕ್ (ಪಾ. ಸೂ. ೬-೧-೭೧) ಎಂಬು

ದರಿಂದ ತುಕಾಗಮ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ ಅಥವಾ ಶ್ರುತಿಶಬ್ದ. ಭವೇಛಂದಸಿ (ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. ಯತೋಽನಾವಃ ( ಪಾ. ಸೂ. ೬-೧-೨೧೩ ) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಚಕ್ರೆ—ಡುಕೃಞ್ ಕರಣೇ. ಧಾತು. ಲಿಟ್ ಮಧ್ಯಮಪುರುಷ ಬಹುವಚನಾಂತರೂಪ. ಯದ್ಯೋಗ ವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಸುಮುಖಾಯೆ—ಶೋಭನಃ ಮುಖಃ ಯಸ್ಯ ಸಃ. ತಸ್ಮೈ. ಸುಸ್ವರಕ್ಕೆ ಅಪವಾದವಾಗಿ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ.

ಸಖ್ಯೇ—ಶೇಷೋಘ್ಯಸಖಿ (ಪಾ ಸೂ. ೧-೪-೭) ಎಂಬುದರಿಂದ ಘಿಸಂಜ್ಞಾ ಇಲ್ಲದಿರುವುದರಿಂದ ಗುಣಾದಿಗಳು ಬರುವುದಿಲ್ಲ. ಚತುರ್ಥೀಏಕವಚನದಲ್ಲಿ ಯಣಾದೇಶ.

ತನ್ವೇ—ತನು ಶಬ್ದಕ್ಕೆ ಚತುರ್ಥೀ ಏಕವಚನಪರವಾದಾಗ ಜಸಾದಿಷು ಛಂದಸಿ ವಾ ವಚನಮ್ ಎಂಬು ದರಿಂದ ಗುಣಾದಿಗಳು ಬರುವುದಿಲ್ಲ. ಯಣಾದೇಶ. ಉದಾತ್ತಸ್ವರಿತಯೋರ್ಯ—(ಪಾ. ಸೂ. ೮-೨-೪) ಎಂಬುದ ರಿಂದ ವಿಭಕ್ತಿಗೆ ಸ್ವರಿತಸ್ವರ ಬರುತ್ತದೆ. ॥ ೧೧ ॥



ಸಂಹಿತಾಪಾಠಃ

ಏವೇದೇತೇ ಪ್ರತಿ ಮಾ ರೋಚಮಾನಾ ಅನೇದ್ಯಃ ಶ್ರವ ಏಷೋ ದಧಾನಾಃ।
ಸಂಚಕ್ಷ್ಯಾ ಮರುತಶ್ಚಂದ್ರವರ್ಣಾ ಅಚ್ಛಾಂತ ಮೇ ಛದಯಾಥಾ ಚ
ನೂನಂ ॥ ೧೨ ॥

। ಪದಪಾಠಃ ।

ಏವ । ಇತ್ । ಏತೇ । ಪ್ರತಿ । ಮಾ । ರೋಚಮಾನಾಃ । ಅನೇದ್ಯಃ । ಶ್ರವಃ । ಆ । ಇಷಃ । ದಧಾನಾಃ ।
ಸಂಽಚಕ್ಷ್ಯ । ಮರುತಃ । ಚಂದ್ರಽವರ್ಣಾಃ । ಅಚ್ಛಾಂತ । ಮೇ । ಛದಯಾಥ । ಚ । ನೂನಂ ॥ ೧೨ ॥

ಸಾಯಣಭಾಷ್ಯಂ

ಹೇ ಮರುತಃ ಏವೇದೇವಮೇವೈತೇ ಯೂಯಂ ಮಾ ಮಾಂ ಪ್ರತಿ ರೋಚಮಾನಾ ಮದ್ವಿಷಯೇ ಸಂಪ್ರೀಯಮಾಣಾ ಮಾಂ ಖ್ಯಾಪಯಂತೋ ವಾನೇದ್ಯೋಽನಂತಿಕಸ್ಥಂ ಶ್ರವಃ ಕೀರ್ತಿಮಿಷಶ್ಚ ದಧಾನಾಃ। ಆ ಇತಿ ಚಾರ್ಥೇ। ಯದ್ವಾ। ಅನೇದ್ಯ ಇತಿ ಪ್ರಶಸ್ಯನಾಮ । ಪ್ರಶಸ್ಯಂ ಯಶೋಽಸ್ಮತ್ತೋ ದಧಾನಾ

ಅಸ್ಮಾಭಿರ್ವಾ ಧಾರಯಮಾಣಾಃ । ಚಂದ್ರವರ್ಣಾಃ । ಚಂದ್ರಮಿತಿ ಹಿರಣ್ಯನಾಮ । ಸುವರ್ಣವರ್ಣಾ ಯೂಯಂ ಮೇ ಮಾಂ ಸಂಚಕ್ಷ್ಯ ಸಮ್ಯಕ್ಪ್ರಕಾಶ್ಯ ನೂನಂ ನಿಶ್ಚಯಮಚ್ಛಾಂತ ಯಶೋಭಿರಾಚ್ಛಾದಿತವಂತಶ್ಛದಯಾಥ । ಆಚ್ಛಾದಯಥ ಚ । ಮಾಂ ಪ್ರತಿ ಸರ್ವದಾ ರೋಚಮಾನಾ ಮಯ್ಯೇವ ಕೀರ್ತಿಮನ್ನಂ ಚ ದಧಾನಾ ಮತ್ಕೃತೈಃ ಕರ್ಮಭಿರ್ಮಾಮೇವ ಸ್ತುತೇತ್ಯರ್ಥಃ ॥

### ಪ್ರತಿಪದಾರ್ಥ

ಮರುತಃ—ಎಲೈ ಮರುತ್ತುಗಳೇ. । ಏವೇತ್—ಇದೇ ರೀತಿಯಲ್ಲಿ । ಏತೇ—ನೀವುಗಳು । ಮಾಂ—ನನ್ನನ್ನು । ಪ್ರತಿರೋಚಮಾನಾಃ—ಪ್ರಶಂಸಾವಾಕ್ಯಗಳಿಂದ ಹರ್ಷಗೊಳಿಸುತ್ತಲೂ, । ಅನೇದ್ಯಃ—ಅತಿವಿಸ್ತೃತವಾದ । ಶ್ರವಃ—ಕೀರ್ತಿಯನ್ನೂ । ಇಷಃ—ಅನ್ನವನ್ನೂ । ದಧಾನಾಃ—ಹೊಂದುತ್ತಲೂ, । ಚಂದ್ರವರ್ಣಾಃ—ಆಹ್ಲಾದಕರವಾದ ವರ್ಣವುಳ್ಳವರಾಗಿಯೂ । ಮೇ—ನನ್ನನ್ನು । ಸಂಚಕ್ಷ್ಯ—ಪ್ರಕಾಶಗೊಳಿಸಿ ನೂನಂ—ನಿಶ್ಚಯವಾಗಿಯೂ । ಅಚ್ಛಾಂತ—ಯಶಸ್ಸಿನಿಂದ ಯುಕ್ತರಾಗಿಯೂ ಆಗಿ । ಛದಯಾಥ ಚ—(ನನ್ನನ್ನೂ) ಯಶಸ್ಸಿನಿಂದ ಯುಕ್ತನಾಗುವಂತೆ ಮಾಡಿರಿ ।

### ಭಾವಾರ್ಥ

ಎಲೈ ಮರುತ್ತುಗಳೇ, ಇದೇ ರೀತಿಯಲ್ಲಿ ನೀವುಗಳು ನನ್ನನ್ನು ಪ್ರಶಂಸಾವಾಕ್ಯಗಳಿಂದ ಹರ್ಷಗೊಳಿಸುತ್ತಲೂ, ಅತಿವಿಸ್ತೃತವಾದ ಕೀರ್ತಿಯನ್ನೂ ಅನ್ನವನ್ನೂ ಹೊಂದುತ್ತಲೂ, ಆಹ್ಲಾದಕರವಾದ ವರ್ಣವುಳ್ಳವರಾಗಿಯೂ, ನನ್ನನ್ನು ಪ್ರಕಾಶಗೊಳಿಸಿ ನೀವೂ ಯಶಸ್ಸಿನಿಂದ ಯುಕ್ತರಾಗಿಯೂ ನನ್ನನ್ನೂ ಸಹ ಯಶಸ್ಸಿನಿಂದ ಯಃಕಸಾಗುವಂತೆ ಪೂಡಿರಿ.

### English Translation

Maruts, verily, glorifying me and enjoying boundless fame and food (through my favour), do you, of golden colour, and invested with glory, cover me in requital, verily, (with renown).

### । ವಿಶೇಷವಿಷಯಗಳು ।

ಅನೇದ್ಯಃ—ಎಂಬ ಪದಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಬಹುದು. ಮೊದಲನೆಯದಾಗಿ ಅನಂತಿಕಸ್ಥಂ ಎಂದರೆ, ಅತಿದೂರವಾಗಿ ವಿಸ್ತೃತವಾದ (ಪ್ರಭೂತವಾದ) ಯಶಸ್ಸೆಂದೂ, ಎರಡನೆಯದಾಗಿ ಅನೇದ್ಯ ಶಬ್ದವು ಪ್ರಶಸ್ಯನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) ಅನೇದ್ಯಃ ಶ್ರವಃ ಎಂಬುದಕ್ಕೆ ಅತ್ಯಂತಪ್ರಶಸ್ಯವಾದ ಯಶಸ್ಸೆಂದೂ ಅರ್ಥವಾಗುತ್ತದೆ.

ಚಂದ್ರವರ್ಣಾಃ—ಚಂದ್ರಮಿತಿ ಹಿರಣ್ಯನಾಮ । ಸುವರ್ಣವರ್ಣಾಃ । ಚಂದ್ರಶಬ್ದವು ಹಿರಣ್ಯನಾಮಗಳಲ್ಲಿ ಪಠಿತವಾಗಿದೆ. (ನಿ ೨-೧೦) ಆದುದರಿಂದ ಪ್ರಕೃತದಲ್ಲಿ ಸುವರ್ಣದಂತೆ ರಮ್ಯವಾದ ವರ್ಣವುಳ್ಳವರಿಂದಾಗಲಿ; ಅಥವಾ,

ಚಂಪ್ರಶ್ಚಂದತೇಃಕಾಂತಿಕರ್ಮಣಃ । (ನಿ ೧೦-೫) .ಕಾಂತಿಯುತವಾದುದೂ, ರಮ್ಯವಾದುದೂ ಆದ ಎಂಬರ್ಥವನ್ನು ಕೊಡುವ ಚಂದ್ ಧಾತುವಿನಿಂದ ಚಂಪ್ರವೆಂಬ ಪದವು ನಿಷ್ಪನ್ನವಾಗಿದೆಯಾದ್ದರಿಂದ ಆಹ್ಲಾದ ಕರವಾದ ರೂಪವನ್ನು ಪಡೆದಿರುವವರು ಎಂದಾಗಲಿ ಮರುತ್ತುಗಳ ವರ್ಣವನ್ನು ಪ್ರಶಂಸಿಸಿದೆ.

ಯೇ ಅಗ್ನಯೋ ನ ಶೋಶುಚನ್ನಿಧಾನಾ ದ್ವಿರ್ಯತ್ತ್ರಿರ್ಮರುತೋ ವಾವೃಧಂತ ।
ಅರೇಣವೋ ಹಿರಣ್ಯಯಾಸ ಏಷಾಂ ಸಾಕಂ ನೃಮ್ಣೈಃ ಪೌಂಸ್ಯೇಭಿಶ್ಚ ಭೂವನ್ ॥
(ಋ. ಸಂ. ೬-೬೬-೨)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿತವಾಗಿರುವಂತೆ ಇಲ್ಲಿಯೂ ಮರುತ್ತುಗಳ ಆಹ್ಲಾದಕರವಾದ ರೂಪವನ್ನು ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

ರೋಚಮಾನಾಃ—ರುಚ ದೀಪ್ತೌ. ಧಾತು. ಲಟಿಗೆ ಶಾನಚಾದೇಶ. ಶಪ್ ವಿಕರಣನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಆನೇಮುಕ್ (ಪಾ. ಸೂ ೭-೨-೮೨) ಎಂಬುದರಿಂದ ಮುಕಾಗಮ. ತಾಸ್ಯನುದಾತ್ತೇತ್—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

ಅನೇದ್ಯಃ—ಣಿದಿ ಕುತ್ಸಾಯಾಂ ಧಾತು. ಣೋನಃ ಎಂಬುದರಿಂದ ಆದಿಗೆ ನತ್ವ. ಋಹಲೋರ್ಣ್ಯತ್ (ಪಾ. ಸೂ. ೩-೧-೧೨೪) ಎಂಬುದರಿಂದ ಣ್ಯತ್ ಪ್ರತ್ಯಯ. ಆಗಮಶಾಸ್ತ್ರಮನಿತ್ಯಮ್ ಎಂಬ ವಚನದಿಂದ ನುಮಾಗನು ಬರುವುದಿಲ್ಲ. ನಞ್‌ತತ್ಪುರುಷಸಮಾಸವಾದಾಗ ನಞ್‌ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

ಸಂಚಕ್ಷ್ಯಾ—ಚಕ್ಷಿಙ್ ವ್ಯಕ್ತಾಯಾಂ ವಾಚಿ ಧಾತು. ಇಲ್ಲಿ ಪ್ರಕಾಶಾರ್ಥದಲ್ಲಿ ಪ್ರಯುಕ್ತವಾಗಿದೆ. ಸಮಾಸೇನಞ್‌ಪೂರ್ವೇ—(ಪಾ. ಸೂ. ೭-೧-೩೭) ಎಂಬುದರಿಂದ ಕ್ತ್ವಾ ಪ್ರತ್ಯಯಕ್ಕೆ ಲ್ಯಬಾದೇಶ. ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ನಿಪಾತಸ್ಯ ಚ (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

ಚಂಪ್ರವರ್ಣಾಃ—ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

ಛದಯಾಥ—ಛದ ಅಪವಾರಣೇ. ಧಾತು. ಚುರಾದಿ. ಲೇಟ್ ಮಧ್ಯಮಪುರುಷ ಬಹುವಚನದಲ್ಲಿ ಥ ಪ್ರತ್ಯಯ. ಲೇಟೋಽಡಾಟೌ (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಆಡಾಗಮ. ಣಿಚಿಗೆ ಗುಣ, ಅಯಾದೇಶ. ಸಂಜ್ಞಾಪೂರ್ವಕೋವಿಧಿರನಿತ್ಯಃ ಎಂಬ ವಚನದಿಂದ ಣಿಚ್ ನಿಮಿತ್ತವಾಗಿ ಧಾತುವಿನ ಉಪಧೆಗೆ ವೃದ್ಧಿ ಬರುವುದಿಲ್ಲ. ಛಾಂದಸವಾಗಿ ನಿಘಾತಸ್ವರ ಬರುವುದಿಲ್ಲ. ಣಿಚ್‌ಸ್ವರದಿಂದ ದಕಾರೋತ್ತರಾಕಾರ ಉದಾತ್ತವಾಗುತ್ತದೆ. ॥ ೧೨ ॥



ಸಂಹಿತಾಪಾಠಃ

ಕೋ ನ್ವತ್ರ ಮರುತೋ ಮಾಮಹೇ ವಃ ಪ್ರ ಯಾತನ ಸಖೀರಚ್ಛಾ ಸಖಾಯಃ ।
ಮನ್ಮಾನಿ ಚಿತ್ರಾ ಅಪಿವಾತಯಂತ ಏಷಾಂ ಭೂತ ನವೇದಾ ಮ ಋತಾನಾಂ ॥ ೧೩ ॥

। ಪದಪಾಠಃ ।

ಕಃ । ನು । ಅತ್ರ । ಮರುತಃ । ಮಮಹೇ । ವಃ । ಪ್ರ । ಯಾತನ । ಸಖೀನ್ । ಅಚ್ಛ । ಸಖಾಯಃ ।
ಮನ್ಮಾನಿ । ಚಿತ್ರಾಃ । ಅಪಿವಾತಯಂತಃ । ಏಷಾಂ । ಭೂತ । ನವೇದಾಃ । ಮೇ । ಋತಾನಾಂ ॥ ೧೩ ॥

ಸಾಯಣಭಾಷ್ಯಂ

ಹೇ ಮರುತಃ ಯುಷ್ಮಾನತ್ರ ಲೋಕೇ ಕೋ ನು ಖಲು ಮರ್ತ್ಯೋ ಮಮಹೇ । ಪೂಜಯತಿ । ಹೇ ಸಖಾಯಃ ಸರ್ವಸ್ಯ ಸಖಿವತ್ಪ್ರಿಯಕಾರಿಣಃ ಸಂತಃ ಸಖೀನ್ ಹವಿಷ್ಪ್ರದಾನೇನ ಸಖಿಭೂತಾನ್ಯಜಮಾನಾನಚ್ಛಾಭಿಮುಖ್ಯೇನ ಪ್ರಾಪ್ತುಂ ಪ್ರ ಯಾತನ । ಗಚ್ಛತ । ಹೇ ಚಿತ್ರಾಶ್ಚಾಯನೀಯಾಃ ಯೂಯಂ ಮನ್ಮಾನಿ ಮನನೀಯಾನಿ ಧನಾನ್ಯಪಿವಾತಯಂತಃ ಸಂಪೂರ್ಣಂ ಪ್ರಾಪಯಂತೋ ಭೂತ । ಭವತ । ಕಿಂಚ ಮೇ ಮದೀಯಾನಾಮೇಷಾಮೃತಾನಾಮವಿತಥಾನಾಂ ನವೇದಾ ಭೂತ । ಜ್ಞಾತಾರೋ ಭವತ ॥

ಪ್ರತಿಪದಾರ್ಥ

ಮರುತಃ—ಎಲೈ ಮರುತ್ತುಗಳೇ, । ಅತ್ರ—ಈ ಲೋಕದಲ್ಲಿ । ಕೋ ನು—ಯಾವ ಮರ್ತ್ಯನು ತಾನೇ (ನನ್ನಂತೆ) । ಮಮಹೇ—ಪೂಜಿಸುತ್ತಾನೆ. । ಸಖಾಯಃ—ಸಕಲರಿಗೂ ಸಖರಾಗಿದ್ದುಕೊಂಡು । ಸಖೀನ್—ನಿಮಗೆ ಸಖರಾದ ಯಜಮಾನರನ್ನು । ಅಚ್ಛ—ಅಭಿಮುಖವಾಗಿ ಹೋಗಿ ಸೇರಲು । ಪ್ರ ಯಾತನ—ನಡೆಯಿರಿ । ಚಿತ್ರಾಃ—ಆಕರ್ಷಕರಾದ ಮರುತ್ತುಗಳೇ । ಮನ್ಮಾನಿ—ಧ್ಯಾನಕ್ಕೆ ವಿಷಯಗಳಾದ ಧನಗಳನ್ನು । ಅಪಿವಾತಯಂತಃ—(ಅವರಿಗೆ) ಒದಗಿಸಿ ಕೊಡುತ್ತಾ । ಭೂತ—ಇರಿ । ಮೇ—ನನ್ನ । ಏಷಾ ಋತಾನಾಂ—ಈ ಸತ್ಯವಾದ ಭಕ್ತಿಯನ್ನು । ನವೇದಾಃ—ತಿಳಿಯಿರಿ. ।

ಭಾವಾರ್ಥ

ಎಲೈ ಮರುತ್ತುಗಳೇ, ಈ ಲೋಕದಲ್ಲಿ ಯಾವ ಮರ್ತ್ಯನು ತಾನೇ ನಿಮ್ಮನ್ನು ನನ್ನಂತೆ ಪೂಜಿಸುತ್ತಾನೆ. ನೀವು ಸಕಲರಿಗೂ ಸಖರಾಗಿದ್ದು ಕೊಂಡು ನಿಮಗೆ ಸಖರಾದ ಯಜಮಾನರನ್ನು ಅಭಿಮುಖವಾಗಿ ಹೋಗಿ ಸೇರಲು ನಡೆಯಿರಿ. ಆಕರ್ಷಕರಾದ ಎಲೈ ಮರುತ್ತುಗಳೇ, ಧ್ಯಾನಕ್ಕೆ ವಿಷಯಗಳಾದ (ಅವರು ಬಯಸುತ್ತಿರುವ) ಧನಗಳನ್ನು ಅವರಿಗೆ ಒದಗಿಸಿಕೊಡುತ್ತಾ ಇರಿ. ನನ್ನ ಈ ಸತ್ಯವಾದ ಭಕ್ತಿಯನ್ನು ತಿಳಿಯಿರಿ.

## English Translation

(Agastya),—What mortal, Maruts, worships you in this world; hasten friends, to the presence of your friends: wonderful (divinities), be to them the means of acquiring riches, and be not uncognizant of my merits.

### ವಿಶೇಷವಿಷಯಗಳು

ಇಂದ್ರನಿಗೂ ಮರುತ್ತುಗಳಿಗೂ ಸಂಭಾಷಣೆಯು ನಡೆದನಂತರ ಅಗಸ್ತ್ಯನು ಈ ಮಂತ್ರದಲ್ಲಿ ಮರುತ್ತುಗಳನ್ನುದ್ದೇಶಿಸಿ ಪ್ರಾರ್ಥಿಸುತ್ತಾನೆ.

ಮನ್ಮಾನಿ—ಮನ್ಮಶಬ್ದಕ್ಕೆ ಮನನೀಯಾನಿ ಧನಾನಿ ಧ್ಯಾನಾರ್ಹವಾದ ಧನಗಳೆಂದರ್ಥಮಾಡಿದೆ. ಸ್ತುತ್ಯವಾದ, ಪೂಜ್ಯವಾದ ಎಂಬರ್ಥಗಳಲ್ಲಿ ಈ ಪದದ ಪ್ರಯೋಗವಿದೆ (ಋ. ಸಂ. ೧-೨೬-೨; ೧-೧೫೧-೮). ಇತ್ಯಾದ್ಯನೇಕ ಋಕ್ಕುಗಳಲ್ಲಿ ಮನ್ಮನಾ, ಮನ್ಮಭಿಃ ಎಂಬ ಪದಗಳಿಗೆ ಶ್ರೇಷ್ಠವಾದ, ಮತ್ತು ಸ್ತುತ್ಯರ್ಹವಾದ ಮನಃಪ್ರವೃತ್ತಿಯೆಂದರ್ಥವಾಗುತ್ತದೆ. ನಿರುಕ್ತಕಾರರು,

ಉಪ ಪ್ರಾಗಾತ್ಸುಮನ್ಮೇಽಧಾಯಿ ಮನ್ಮ ದೇವಾನಾಮಾಶಾ ಉಪ ವೀತಪೃಷ್ಠಃ ।
ಅನ್ವೇನಂ ವಿಪ್ರಾ ಋಷಯೋ ಮದಂತಿ ದೇವಾನಾಂ ಪುಷ್ಟೇ ಚಕೃಮಾ ಸುಬಂಧುಂ ॥
(ಋ. ಸಂ ೧-೧೬೨-೭)

ಎಂಬ ಋಕ್ಕಿನಲ್ಲಿ ಮನ್ಮಶಬ್ದಕ್ಕೆ ಮಂತ್ರವೆಂದರ್ಥಮಾಡಿದ್ದಾರೆ. (ನಿ. ೬-೨೨) ಮನನೀಯವಾದ ಎಂದರೆ ಧ್ಯಾನಾರ್ಹವಾದ ಮಂತ್ರವೆಂದರ್ಥ. ಸಾಯಣರು ಉದಾಹೃತವಾದ ಈ ಋಕ್ಕಿನಲ್ಲಿ ಮನನೀಯವಾದ ಫಲವೆಂದರ್ಥಮಾಡಿದ್ದಾರೆ. ಎರಡನೆಯದಾಗಿ,

ತನೂನಪಾತ್ಪಥ ಋತಸ್ಯ ಯಾನಾನ್ಮಧ್ವಾ ಸಮಂಜನ್ಸ್ವದಯಾ ಸುಜಿಹ್ವ ।
ಮನ್ಮಾನಿ ಧೀಭಿರುತ ಯಜ್ಞಮೃಂಧನ್ ದೇವತ್ರಾ ಚ ಕೃಣುಹ್ಯಧ್ವರಂ ನಃ ।
(ಋ. ಸಂ. ೧೦-೧೧೦-೨)

ಎಂಬಲ್ಲಿ ಅಸ್ಮದಭಿಪ್ರೇತಾನಿ ಸ್ತೋತ್ರಾಣಿ ಎಂದರ್ಥಮಾಡಿದೆ. ಹೀಗೆಯೇ ೧-೧೪೯-೯. ನೇ, ಋಕ್ಕನ್ನುದಹರಿಸಿ (ನಿ. ೧೦-೪೨) ಅಲ್ಲಿಯೂ ಸಹ ಅದೇ ಅರ್ಥವನ್ನು ತೋರಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಮನನೀಯವಾದ ಫಲವೆಂದರ್ಥಮಾಡಬಹುದು

ನವೇದಾಃ—ಜ್ಞಾತಾರೋ ಭವತ । ಅರಿಯುವವರಾಗಿ ಎಂದು ಪ್ರಾರ್ಥಿಸಿದೆ. ಜ್ಞಾನದಲ್ಲಿಯೂ ಒಂದು ಅತಿಶಯವಾದ ಆಸಕ್ತಿಯನ್ನು ತೋರಿಸುತ್ತದೆ.

ಕಥಾ ಸಬಾಧಃ ಶಶಮಾನೋ ಅಸ್ಯ ನಶದಭಿ ದ್ರವಿಣಂ ದೀಧ್ಯಾನಃ ।
ದೇವೋ ಭುವನ್ನವೇದಾ ಮ ಋತಾನಾಂ ನಮೋ ಜಗೃಭ್ವಾ ಅಭಿ ಯಜ್ಜುಜೋಷತ್ ।
(ಋ. ಸಂ. ೪-೨೩-೪)

ಎಂಬ ಋಕ್ಕಿನಲ್ಲಿಯೂ ಪ್ರಯೋಗಿಸಲ್ಪಟ್ಟಿದೆ. ಅಲ್ಲಿ ಸಾಯಣರು ಅತಿಶಯೇನ ಜ್ಞಾತ್ವಾ ಎಂದರ್ಥಮಾಡಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಜ್ಞಾನದಲ್ಲಿರುವ ಆಸಕ್ತಿಯನ್ನೂ ಅಭಿಮಾನವನ್ನೂ ತಿಳಿಸುತ್ತದೆ. ಅಗಸ್ತ್ಯನು ತನ್ನ ನಿಜವಾದ ಶ್ರದ್ಧೆಯನ್ನು ಪೂರ್ಣವಾಗಿ ಅರಿತು ತನ್ನಲ್ಲಿ ಅಭಿಮಾನವನ್ನು ತೋರಿಸಬೇಕೆಂದು ಪ್ರಾರ್ಥಿಸುತ್ತಾನೆ.

ವ್ಯಾಕರಣಪ್ರಕ್ರಿಯಾ

ಮಮಹೇ—ಮಹ ಪೂಜಾಯಾಂ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾಗಿದೆ. ಛಂದಸಿಲುಙ್‌ಲಙ್—ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಯಾತನ—ಯಾ ಪ್ರಾಪಣೇ ಧಾತು. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ತಪ್ತನಪ್ತನಥನಾಶ್ಚ (ಪಾ ಸೂ ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ

ಸಖಾಯಃ—ಸಮಾನಂ ಖ್ಯಾಯತೇ ಜನ್ಯೈರಿತಿ ಸಖಾ. ಸಮಾನೇ ಖ್ಯಃ ಸ ಚೋದಾತ್ತಃ (ಉ. ಸೂ. ೪-೫೬) ಎಂಬುದರಿಂದ ಸಮಾನಶಬ್ದ ಉಪಪದವಾಗಿರುವಾಗ, ಖ್ಯಾ ಪ್ರಕಥನೇ. ಈ ಧಾತುವಿಗೆ ಇಣ್ ಪ್ರತ್ಯಯ. ಅದು ಡಿತ್ತಾಗುತ್ತದೆ ಯಕಾರ ಲೋಪ. ಸಮಾನ ಎಂಬುದಕ್ಕೆ ಉದಾತ್ತವಾದ ಸ ಎಂಬಾದೇಶ. ಸಂಬುದ್ಧಿಯಲ್ಲಿ ಆಮಂತ್ರಿತ ನಿಘಾತಸ್ವರ ಬರುತ್ತದೆ.

ಮನ್ಮಾನಿ—ಮನ ಜ್ಞಾನೇ. ಇದಕ್ಕೆ ಔಣಾದಿಕಮನಿನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಅಪಿವಾತಯಂತಃ—ವಾತ ಗತಿಸುಖಸೇವನಯೋಃ ಧಾತು. ಚುರಾದಿ. ಸತ್ಯಾಪಪಾಶ—(ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್. ಣಿಜಂತದ ಮೇಲೆ ಲಟ್ ಬಂದಾಗ ಅದಕ್ಕೆ ಶತ್ರಾದೇಶ. ಶಪ್ ವಿಕರಣ. ಅದನ್ನು ನಿಮಿತ್ತೀಕರಿಸಿ ಣಿಚಿಗೆ ಗುಣ. ಅಯಾದೇಶ. ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಣಿಚ್ ಸ್ವರ ಬರುತ್ತದೆ. ಪ್ರಾದಿಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ

ಭೂತ—ಭೂ ಸತ್ತಾಯಾಂ ಧಾತು. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ಲಙ್ವದ್ಭಾವವಿರುವುದರಿಂದ ತಾದೇಶ. ಬಹುಲಂ ಛಂದಸಿ ಎಂಬುದರಿಂದ ವಿಕರಣಕ್ಕೆ ಲುಕ್. ಭೂಸುವೋಸ್ತಿಙಃ (ಪಾ. ಸೂ. ೭-೩-೮೮) ಎಂಬುದರಿಂದ ಗುಣ ನಿಷೇಧ ಬರುತ್ತದೆ ತಿಙಂತನಿಘಾತಸ್ವರ ಬರುತ್ತದೆ.

ನವೇದಾಃ—ವಿದ ಜ್ಞಾನೇ ಧಾತು. ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ಪುಗಂತ-ಲಘೂಪಧಸ್ಯ ಚ (ಪಾ. ಸೂ. ೭-೩-೮೬) ಎಂಬುದರಿಂದ ಲಘೂಪಧಗುಣ. ನಭ್ರಾಣ್ನಪಾತ್—(ಪಾ. ಸೂ. ೬-೩-೭೫) ಎಂಬುದರಿಂದ ಸಮಾಸದಲ್ಲಿ ನಞ್‌ಗೆ ಪ್ರಕೃತಿಭಾವ. ನಞ್‌ಪೂರ್ವಪದಪ್ರಕೃತಿಸ್ವರ ಬರುತ್ತದೆ ॥೧೩॥

——:o:——

ಸಂಹಿತಾಪಾಠಃ

ಆ ಯದ್ದುವಸ್ಯಾದ್ದುವಸೇ ನ ಕಾರುರಸ್ಮಾಞ್ಚಕ್ರೇ ಮಾನ್ಯಸ್ಯ ಮೇಧಾ ।

ಓ ಷು ವರ್ತ್ತ ಮರುತೋ ವಿಪ್ರಮಚ್ಛೇಮಾ ಬ್ರಹ್ಮಾಣಿ ಜರಿತಾ ವೋ ಅರ್ಚತ್ ॥ ೧೪ ॥

ಪದಪಾಠಃ

ಆ । ಯತ್ । ದುವಸ್ಯಾತ್ । ದುವಸೇ । ನ । ಕಾರುಃ । ಅಸ್ಮಾನ್ । ಚಕ್ರೇ । ಮಾನ್ಯಸ್ಯ । ಮೇಧಾ । ಓ ಇತಿ । ಸು । ವರ್ತ್ತ । ಮರುತಃ । ವಿಪ್ರಂ । ಅಚ್ಛ । ಇಮಾ । ಬ್ರಹ್ಮಾಣಿ । ಜರಿತಾ । ವಃ । ಅರ್ಚತ್ ॥ ॥೧೪॥

ಸಾಯಣಭಾಷ್ಯಂ

ಹೇ ಮರುತಃ ದುವಸ್ಯಾದ್ಯುಷ್ಮತ್ಪರಿಚರಣಾರ್ಹಾತ್ಸ್ತೋತ್ರಾತ್ ತೇನ ಸ್ತೋತ್ರೇಣ ದುವಸೇ ಪರಿಚರಣಾಯ ಪರ್ಯಾಪ್ತಾ ಕಾರುಃ ಕರ್ತ್ರೀ ಸ್ತುತಿಕುಶಲಾ ಮಾನ್ಯಸ್ಯ ಮಾನನೀಯಸ್ಯ ವಿದುಷೋ ಮೇಧಾ ಬುದ್ಧಿರಸ್ಮಾನ್ । ನೇತಿ ಸಂಪ್ರತ್ಯರ್ಥೇ । ಇದಾನೀಂತನಾನಾ ಚಕ್ರೇ । ಆಭಿಮುಖ್ಯೇನ ಕರೋತಿ । ಪ್ರಾಪ್ನೋತೀತ್ಯರ್ಥಃ । ಯದ್ವಾ । ಷಷ್ಠೀಬಹುವಚನ ಇದಂ ರೂಪಂ । ದುವಸ್ಯಾನಾಂ ಪರಿಚರಣಾರ್ಹಾಣಾಂ ದುವಸೇ ಪರಿಚರಣಾಯೇತ್ಯರ್ಥಃ । ಅತೋ ಹೇ ಮರುತಃ ಯೂಯಂ ವಿಪ್ರಂ ಮೇಧಾವಿನಂ ಯಜಮಾನಂ ಮಾಮಗಸ್ತ್ಯಮಚ್ಛಾಭಿಮುಖ್ಯೇನ ಪ್ರಾಪ್ತುಂ ಸು ಸುಷ್ಠ್ವೋ ವರ್ತ್ತ । ಓ ಇತಿ ನಿಪಾತದ್ವಯಸಮುದಾಯರೂಪ ಏಕೋ ನಿಪಾತಃ । ಆಙಿತ್ಯಾಭಿಮುಖ್ಯೇನ । ಉಕಾರೋಽವಧಾರಣೇ । ಆವರ್ತಧ್ವಮೇವ । ಕಿಮರ್ಥಮೇವಮಿತಿ ಉಚ್ಯತೇ । ಇಮಾ ಬ್ರಹ್ಮಾಣೀಮಾನಿ ಪರಿವೃಢಾನಿ ಕರ್ಮಾಣ್ಯುದ್ದಿಶ್ಯ ಜರಿತಾ ಸ್ತೋತಾ ವೋ ಯುಷ್ಮಾನರ್ಚತ್ । ಅರ್ಚತಿ । ಯಸ್ಮಾದೇವಂ ತಸ್ಮಾದಾವರ್ತಧ್ವಮಿತ್ಯರ್ಥಃ ॥

ಪ್ರತಿಪದಾರ್ಥ

(ಮರುತಃ—ಎಲೈ ಮರುತ್ತುಗಳೇ) । ದುವಸ್ಯಾತ್—(ನಿಮ್ಮನ್ನು) ಉಪಚರಿಸಲು ಯೋಗ್ಯವಾದ ಸ್ತೋತ್ರಗಳಿಂದ, । ದುವಸೇ—ಆರಾಧಿಸುವುದಕ್ಕಾಗಿ । ಕಾರುಃ—ಸ್ತುತಿಕುಶಲವಾದುದೂ । ಮಾನ್ಯಸ್ಯ—ಪೂಜ್ಯನಾದ ಋಷಿಸಂಬಂಧವಾದುದೂ ಆದ । ಮೇಧಾ—ಬುದ್ಧಿಯು । ಅಸ್ಮಾನ್—ನಮ್ಮನ್ನು । ನ—ಈಗ । ಆ ಚಕ್ರೇ—ಸೇರಿದೆ. । ಮರುತಃ—ಎಲೈ ಮರುತ್ತುಗಳೇ, । ವಿಪ್ರಂ—ಮೇಧಾವಿಯಾದ ನನ್ನನ್ನು । ಅಚ್ಛ—ಅಭಿಮುಖವಾಗಿ ಬಂದು ಸೇರಲು । ಸು ಓ ವರ್ತ್ತ—ಪೂರ್ಣವಾದ ಮನಸ್ಸು ಮಾಡಿರಿ । ಇಮಾ ಬ್ರಹ್ಮಾಣಿ—ಈ ಕರ್ಮಗಳ ದ್ವಾರಾ । ಜರಿತಾ—ಸ್ತೋತೃವು । ವಃ—ನಿಮ್ಮನ್ನು । ಅರ್ಚತ್—ಪೂಜಿಸುತ್ತಾನೆ. ।

ಭಾವಾರ್ಥ

ಎಲೈ ಮರುತ್ತುಗಳೇ, ನಿಮ್ಮನ್ನು ಉಪಚರಿಸಲು ಯೋಗ್ಯವಾದ ಸ್ತೋತ್ರಗಳಿಂದ ಆರಾಧಿಸುವುದಕ್ಕಾಗಿ ಸ್ತುತಿಕುಶಲವಾದುದೂ ಪೂಜ್ಯನಾದ ಋಷಿಸಂಬಂಧವಾದುದೂ ಆದ ಬುದ್ಧಿಯು ಈಗ ನಮ್ಮನ್ನು ಸೇರಿದೆ. ಮೇಧಾವಿ

ಯೂದ ನನ್ನನ್ನುಅಭಿಮುಖವಾಗಿಬಂದು ಸೇರಲು ನೀವು ಪೂರ್ಣವಾದ ಮನಸ್ಸು ಮಾಡಿರಿ. ಸ್ತೋತೃವು ಪ್ರಸಿದ್ಧವಾದ ಈ ಕರ್ಮಗಳ ದ್ವಾರಾ ನಿಮ್ಮನ್ನು ಪೂಜಿಸುತ್ತಾನೆ.

### Englih Translation

Since the experienced intellect of a venerable (sage), competent to bestow praise upon (you), who deserve praise, has been exerted for us; do you, Maruts, come to the presence of the devout (worshipper), who, glorifying (you), worships you with these holy rites.

#### ವಿಶೇಷವಿಷಯಗಳು

ದುವಸ್ಯಾತ್ ದುವಸೇ—ಎಂಬುವಕ್ಕೆ ಎರಡು ವಿಧವಾದ ಅರ್ಥವು ಸಾಧ್ಯವಾಗುತ್ತದೆ. ಮೊದಲನೆಯದಾಗಿ, ಯುಷ್ಮತ್ಪರಿಚರಣಾರ್ಹಾತ್ ಸ್ತೋತ್ರಾತ್, ಪರಿಚರಣಾಯ । ನಿಮ್ಮ ಆರಾಧನೆಗೆ ಯೋಗ್ಯವಾದುದೂ ಮತ್ತು ಪರ್ಯಾಪ್ತವಾದುದೂ ಎಂಬುದಾಗಿಯೂ, ಎರಡನೆಯದಾಗಿ ದುವಸ್ಯಾತ್—ದುವಸ್ಯಾನಾಂ ಪರಿಚರಣಾರ್ಹಾಣಾಂ ದುವಸೇ ಪರಿಚರಣಾಯ । ಆರಾಧನೆಗೆ ಯೋಗ್ಯರಾದ ನಿಮ್ಮ ಪೂಜೆಗಾಗಿ ಎಂಬುದಾಗಿಯೂ ಅರ್ಥವನ್ನು ಹೇಳ ಬಹುದೆಂದು ತಿಳಿಸಿದೆ

ದುವಸ್ಯತಿಶಬ್ದವು ನಿರುಕ್ತದಲ್ಲಿ ಪರಿಚರಣಕರ್ಮನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೩). ನಿರುಕ್ತ ಕಾರರು,

ಪರೇಯಿವಾಂಸಂ ಪ್ರವತೋ ಮಹೀರನು ಬಹುಭ್ಯಃ ಪಂಥಾಮನುಪಸ್ಪಶಾನಂ ।
ವೈವಸ್ವತಂ ಸಂಗಮನಂ ಜನಾನಾಂ ಯಮಂ ರಾಜಾನಂ ಹವಿಷಾ ದುವಸ್ಯ ॥

(ಋ. ಸಂ. ೧೦-೧೪-೧)

ಎಂಬ ಋಕ್ಕನ್ನುದಹರಿಸಿ ಅಲ್ಲಿರುವ ದುವಸ್ಯ ಶಬ್ದಕ್ಕೆ ದುವಸ್ಯತಿಃ ರಾಧ್ನೋತಿಕರ್ಮಾ-ಪೂಜಾಕರ್ಮವೆಂದರ್ಥ ಮಾಡಿದ್ದಾರೆ. (ನಿ. ೧೦-೨೦) ರಕ್ಷಣಾರ್ಥದಲ್ಲಿ ಈ ಪದದ ಪ್ರಯೋಗವಿದೆ. ಉದಾಹರಣೆಗೆ—

ಯಾಭಿರ್ವಮ್ರಂ ವಿಪಿಪಾನಮುಪಸ್ತುತಂ ಕಲಿಂ ಯಾಭಿರ್ವಿತ್ತಜಾನಿಂ ದುವಸ್ಯಥಃ ।
ಯಾಭಿರ್ವ್ಯಶ್ವಮುತ ಪೃಥಿಮಾವತಂ ತಾಭಿರೂ ಷು ಊತಿಭಿರಶ್ವಿನಾ ಗತಂ ।

(ಋ. ಸಂ. ೧-೧೧೨-೧೫)

ಇತ್ಯಾದಿಋಕ್ಕುಗಳಲ್ಲಿ ರಕ್ಷಿಸಿದರು ಎಂಬರ್ಥವು ಸಹಜವಾಗಿದೆ.

ಕಾರುಃ—ಇಲ್ಲಿ ಕಾರುಪದವು ಮೇಧಾ ಎಂಬ ಪದಕ್ಕೆ ವಿಶೇಷಣವಾಗಿದೆ. ಕರ್ತ್ರೀ ಸ್ತುತಿಕುಶಲಾ ಸ್ತುತಿಕಾರಕವೂ ಮತ್ತು ಕುಶಲಾತ್ಮಕವೂ ಆದ ಎಂದರ್ಥಮಾಡಿದೆ. ಸಾಧಾರಣವಾಗಿ ಸ್ತುತಿಕರ್ತ್ರರ್ಥಕವಾಗಿಯೇ ಈ ಪದದ ಪ್ರಯೋಗವು ಅಧಿಕವಾಗಿರುವುದು.

ರೇಭಃ, ಜರಿತಾ ಇತ್ಯಾದಿಸ್ತೋತೃನಾಮಗಳ ನಡುವೆ ಈ ಪದವು ಪಠಿತವಾಗಿದೆ. (ನಿ. ೩-೯) ಮತ್ತು ನಿರುಕ್ತಕಾರರು,

ದೈವ್ಯಾ ಹೋತಾರಾ ಪ್ರಥಮಾ ಸುವಾಚಾ ಮಿಮಾನಾ ಯಜ್ಞಂ ಮನುಷೋ ಯಜಧ್ಯೈ ।
ಪ್ರಚೋದಯಂತಾ ವಿದಥೇಷು ಕಾರೂ ಪ್ರಾಚೀನಂ ಜ್ಯೋತಿಃ ಪ್ರದಿಶಾ ದಿಶಂತಾ ॥

(ಋ. ಸಂ. ೧೦-೧೧೦-೭)

ಎಂಬ ಋಕ್ಕಿನಲ್ಲಿ ಕರ್ತಾರೌ ಋತ್ವಿಜೌ ಯಜ್ಞಕ್ರಿಯೆಗೆ ಕರ್ತೃಗಳಾದ ಇಬ್ಬರು ಋತ್ವಿಕ್ಕುಗಳೆಂದರ್ಥಮಾಡಿದ್ದಾರೆ ಬೃಹದ್ದೇವತಾಕಾರರು ಈ ಪದವನ್ನು ಕವಿಗಳು, ಸೂಕ್ತದ್ರಷ್ಟೃಗಳಾದ ಋಷಿಗಳು ಎಂಬರ್ಥದಲ್ಲಿ ಉಪಯೋಗಿಸಿದ್ದಾರೆ

ಅಗ್ನೇಸ್ತು ಯಾನಿ ಸೂಕ್ತಾನಿ ಪಂಚನಾಮಾನಿ ಕಾರವಃ ।
ಷಡ್ವಿಂಶತಿಸ್ತಥೇಂದ್ರಸ್ಯ ಪ್ರಾಹುಃ ಸೂರ್ಯಸ್ಯ ಸಪ್ತ ಚ ॥

(ಬೃ. ದೇ. ೨-೨೨)

ಪೃಥಕ್ತ್ವೇನ ಸಮಾಸೈಸ್ತು ಯಜ್ಞೋ ಯಚ್ಛ್ಯತೇ ನೃಭಿಃ ।
ಸ್ತುವಂತ್ಯಾಪ್ರೀಷು ತೇನೇಮಂ ನರಾಶಂಸಂ ತು ಕಾರವಃ ॥

(ಬೃ. ದೇ. ೨-೨೮)

ಇತ್ಯಾದಿವಾಕ್ಯಗಳಲ್ಲಿ ಕಾರುಗಳು ಸ್ತುತಿಸಿದ್ದಾರೆ ಎಂದು ಕವಿಪರ್ಯಾಯಪದವೆಂದು ತೋರಿಸಿದ್ದಾರೆ. ಋಕ್ಸಂಹಿತೆಯಲ್ಲಿಯೂ ಸಹ,

ಪ್ರದಕ್ಷಿಣಿದಭಿ ಗೃಣಂತಿ ಕಾರವೋ ವಯೋ ವದಂತ ಋತುಥಾ ಶಕುಂತಯಃ ।
ಉಭೇ ವಾಚೌ ವದತಿ ಸಾಮಗಾ ಇವ ಗಾಯತ್ರಂ ಚ ತ್ರೈಷ್ಟುಭಂ ಚಾನು ರಾಜತಿ ॥

(ಋ. ಸಂ. ೨-೪೩-೧)

ಇತ್ಯಾದಿಋಕ್ಕುಗಳಲ್ಲಿ ಸ್ತೋತಾರಃ ಎಂದರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಸ್ತುತಿಕರ್ತರಾದ ಕವಿಗಳು ಎಂದರ್ಥ.

### ವ್ಯಾಕರಣಪ್ರಕ್ರಿಯಾ

ದುವಸ್ಯಾತ್—ದುವಸ್ ಪರಿಚರಣಕ್ರಿಯಾಯಾಮ್ ಧಾತು. ಕಂಡ್ವಾದಿಭ್ಯೋ ಯಕ್ (ಪಾ. ಸೂ. ೩-೧-೨೭) ಎಂಬುದರಿಂದ ಸ್ವಾರ್ಥದಲ್ಲಿ ಯಕ್ ಪ್ರತ್ಯಯ. ಇದರ ಮೇಲೆ ಅಚ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಕಾರುಃ—ಡುಕೃಞ್ ಕರಣೇ. ಧಾತು. ಕೃವಾಪಾ—(ಉ. ಸೂ. ೧-೧) ಎಂಬುದರಿಂದ ಉಣ್ ಪ್ರತ್ಯಯ. ಅಚೋಞ್ಣಿತಿ ಎಂಬುದರಿಂದ ಧಾತು ಋಕಾರಕ್ಕೆ ವೃದ್ಧಿ ರಪರವಾಗಿ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಚಕ್ರೇ—ಪೂರ್ವೋಕ್ತವಾದ ಧಾತುವಿನ ಲಿಟ್ ಪ್ರಥಮಪುರುಷ ಏಕವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ವರ್ತ—ವೃತು ವರ್ತನೇ. ಧಾತು ವ್ಯತ್ಯಯೋ ಬಹುಲಮ್ ಎಂಬುದರಿಂದ ಪರಸ್ಮೈಪದಿಯಾಗುತ್ತದೆ. ಲಙ್ವದ್ಭಾವವಿರುವುದರಿಂದ ಮಧ್ಯಮಪುರುಷ ಬಹುವಚನಕ್ಕೆ ತಾದೇಶ ಬಂದಾಗ ತಪ್ತನಪ್ತನ (ಪಾ. ಸೂ.

೭-೧-೪೫) ಎಂಬುದರಿಂದ ಅದಕ್ಕೆ ತಬಾದೇಶ. ಬಹುಲಂ ಛಂದಸಿ ಎಂಬುದರಿಂದ ವಿಕರಣಕ್ಕೆ ಲುಕ್. ಪ್ರತ್ಯಯ ಪಿತ್ತಾದುದರಿಂದ ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ರಪರವಾಗಿ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಇಮಾ—ಶೇಶ್ಛಂದಸಿ ಬಹುಲಮ್ (ಪಾ. ಸೂ. ೬-೧-೭೦) ಎಂಬುದರಿಂದ ನಪುಂಸಕದಲ್ಲಿ ಶಿಗೆ ಲೋಪ.

ಜರಿತಾ - ಜ್ವಷ್ ವಯೋಹಾನೌ. ಧಾತು ಇಲ್ಲಿ ಸ್ತುತ್ಯರ್ಥನಲ್ಲಿ ಪ್ರಯುಕ್ತವಾಗಿದೆ. ಕರ್ತರಿಯಲ್ಲಿ ತೃಚ್ ಪ್ರತ್ಯಯ ಆರ್ಧಧಾತುಕಸ್ಯೇಡ್ವಲಾದೇಃ ಎಂಬುದರಿಂದ ಇಡಾಗಮ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಚಿತಃ (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ಅರ್ಚತ್—ಅರ್ಚ ಪೂಜಾಯಾಂ ಧಾತು. ಛಾಂದಸವಾಗಿ ಲಙ್ ಪ್ರಥಮಪುರುಷ ಏಕವಚನಾಂತರೂಪ. ಬಹುಲಂಛಂದಸ್ಯಮಾಙ್ಯೋಗೇಪಿ (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ನಿಘಾತ ಸ್ವರ ಬರುವುದಿಲ್ಲ. ॥ ೧೪ ॥

———— :o: ————

ಸಂಹಿತಾಪಾಠಃ

ಏಷ ವಃ ಸ್ತೋಮೋ ಮರುತ ಇಯಂ ಗೀರ್ಮಾನ್ದಾರ್ಯಸ್ಯ ಮಾನ್ಯಸ್ಯ ಕಾರೋಃ ।

ಏಷಾ ಯಾಸೀಷ್ಟ ತನ್ವೇ ವಯಾಂ ವಿದ್ಯಾಮೇಷಂ ವೃಜನಂ ಜೀರದಾನುಂ॥

॥ ೧೫ ॥

ಪದಪಾಠಃ

ಏಷಃ । ವಃ । ಸ್ತೋಮಃ । ಮರುತಃ । ಇಯಂ । ಗೀಃ । ಮಾಂದಾರ್ಯಸ್ಯ । ಮಾನ್ಯಸ್ಯ । ಕಾರೋಃ ।

ಆ । ಇಷಾ । ಯಾಸೀಷ್ಟ । ತನ್ವೇ । ವಯಾಂ । ವಿದ್ಯಾಮ । ಇಷಂ । ವೃಜನಂ । ಜೀರಽದಾನುಂ ॥ ೧೫ ॥

ಸಾಯಣಭಾಷ್ಯಂ

ಅಥ ಪಂಚದಶ್ಯಾಂ ಸೂಕ್ತೋಪಕ್ರಮಮಾರಭ್ಯ ಕೃತಾಂ ಸ್ತುತಿಂ ಮರುದ್ಭ್ಯೋ ನಿವೇದ್ಯಾಭಿಮತಮಾಶಾಸ್ತೇ ॥

ಹೇ ಮರುತಃ ಏಷ ಸ್ತೋಮ ಇದಾನೀಂಕ್ರಿಯಮಾಣಪ್ರಕಾರಂ ಸ್ತೋತ್ರಂ ವೋ ಯುಷ್ಮದರ್ಥಂ। ಯುಷ್ಮತ್ಪ್ರೀಣನಾಯ ಭವತ್ವಿತ್ಯರ್ಥಃ। ತಥೇಯಂ ಗೀಃ ಸ್ತುತಿರೂಪಾ ವಾಗಪಿ ವೋ ಯುಷ್ಮದರ್ಥಾಯ। ಯಸ್ಮಾದೇವಂ ತಸ್ಮಾನ್ಮಾಂದಾರ್ಯಸ್ಯ ಸ್ತುತಿವಿಶೇಷೈರ್ಮಂದಯಿತುಃ ಸ್ತುತಿಭಿರ್ಮದಸ್ಯ ಪ್ರೇರಯಿ-

ಶುರ್ವಾ ಮಾನ್ಯಸ್ಯ ವರಪ್ರದಾನಾದಿನಾ ಮಾನನೀಯಸ್ಯ ಕಾರೋಃ ಸ್ತೋತುರಿಷೇಚ್ಛಯಾ ಯಾಸೀಷ್ಟ | ಆಗಚ್ಛೇತ | ಕಿಮರ್ಥಂ |ತನ್ವೇ ಶರೀರಾಯ | ತತ್ಪೋಷಾಯೇತ್ಯರ್ಥಃ | ವಯಾಂ ವಯಮಪೀಷಮನ್ನಂ ವೃಜನಂ ಬಲಂ ಜೀರದಾನುಂ ಜಯಶೀಲದಾನನೋತತ್ಸರ್ವಂ ವಿದ್ಯಾಮ | ಯುಷ್ಮಾಸ್ವಾಗತೇಷು ಯಜ್ಞ-ಸಂಪೂರ್ತ್ಯೇಷ್ಟ್ಯಾದಿದ್ವಾರಾ ಲಭೇಮಹಿ ||

ಪ್ರತಿಪದಾರ್ಥ

ಮರುತಃ--ಎಲೈ ಮರುತ್ತುಗಳೇ | ಮಾಂದಾರ್ಯಸ್ಯ—ನಿಮಗೆ ಸಂತೋಷಕಾರಕನೂ | ಮಾನ್ಯಸ್ಯ—ಪೂಜನೀಯನೂ ಆದ | ಕಾರೋಃ—ಸ್ತುತಿಕರ್ತನ | ಏಷಃ ಸ್ತೋಮಃ—ಈ ಸ್ತೋತ್ರವು | ವಃ—ನಿಮ್ಮನ್ನುದ್ದೇಶಿಸಿದೆ | ಇಯಂ ಗೀಃ—ಈ ಸ್ತುತಿವಾಕ್ಯೂ ಸಹ (ನಿಮ್ಮನ್ನೇ ಉದ್ದೇಶಿಸಿದೆ) | ತನ್ವೇ—ಶರೀರದ ಪೋಷಣೆಗಾಗಿ ಇಷಾ—ಅನ್ನದೊಡನೆ | ಆ ಯಾಸೀಷ್ಟ—ಬನ್ನಿರಿ | ವಯಾಂ—ನಾವೂ ಸಹ | ಇಷಂ—ಅನ್ನವನ್ನೂ ವೃಜನಂ—ಬಲವನ್ನೂ | ಜೀರದಾನುಂ—ಜಯಸಾಧನವಾದ ದಾನವನ್ನೂ | ವಿದ್ಯಾಮ—ಹೊಂದುವಂತಾಗಲಿ |

ಭಾವಾರ್ಥ

ಎಲೈ ಮರುತ್ತುಗಳೇ, ನಿಮಗೆ ಸಂತೋಷಕಾರಕನೂ, ಪೂಜನೀಯನೂ ಆದ ಸ್ತುತಿಕರ್ತನ ಈ ಸ್ತೋಮವೂ ಸ್ತುತಿವಾಕ್ಯೂ ನಿಮ್ಮನ್ನೇ ಉದ್ದೇಶಿಸಿದೆ. ನೀವು ಅನ್ನದೊಂದಿಗೆ ಬನ್ನಿರಿ. ನಾವೂ ಸಹ ಅನ್ನವನ್ನೂ, ಬಲವನ್ನೂ, ಜಯಸಾಧನವಾದ ದಾನವನ್ನೂ ಹೊಂದುವಂತೆ ಅನುಗ್ರಹಿಸಿರಿ.

Englih Translation

This praise, Maruts, is for you : this hymn is for you, (the work) of a venerable author, capable of conferring delight (by his laudations). May the praise reach you, for (the good of your) persons, so that we may (thence) obtain food, strength, and long life.

ವಿಶೇಷವಿಷಯಗಳು

ಮಾಂದಾರ್ಯಸ್ಯ ಮಾನ್ಯಸ್ಯ-ಎಂಬುದಕ್ಕೆ ಸಾಯಣರು ಆ ಪದಗಳಿಗೆ ಅವಯವಾರ್ಥಗಳನ್ನು ಹೇಳುವಾಗ ಮಾಂದಾರ್ಯಸ್ಯ ಎಂದರೆ ಹರ್ಷವನ್ನುಂಟುಮಾಡುವವನೆಂದೂ, ಮಾನ್ಯನೆಂದರೆ ಪೂಜ್ಯನೆಂದೂ ಅರ್ಥಮಾಡಿದ್ದಾರೆ. ಇವೆರಡೂ ಅಗಸ್ತ್ಯನಿಗೆ ವಿಶೇಷಣಗಳು. ಇವೆರಡೂ ಅಂಕಿತನಾಮಗಳಾಗಿಯೂ ಉಪಯೋಗಿಸಲ್ಪಟ್ಟಿವೆ. ಬೃಹದ್ದೇವತೆಯಲ್ಲಿ ಅಗಸ್ತ್ಯನ ಉತ್ಪತ್ತಿಯ ವಿಷಯವನ್ನು ತಿಳಿಸುವಾಗ,

ಮಾನೇನ ಸಂಮಿತೋ ಯಸ್ಮಾತ್ ತಸ್ಮಾನ್ಮಾನ್ಯ ಇಹೋಚ್ಯತೇ |
ಯದ್ವಾ ಕುಂಭಾದೃಷಿರ್ಜಾತಃ ಕುಂಭೇನಾಪಿ ಹಿ ಮೀಯತೇ ||

ಬೃ. ದೇ. ೫-೧೫೩)

ಪೂಜಾರ್ಹನಾಗಿರುವುದರಿಂದಲೂ ಅಥವಾ, ಮಾನ (ಅಳತೆ)ದ ಪ್ರಕಾರವನ್ನು ತಿಳಿಸುವ ಕುಂಭದಲ್ಲಿ ಉತ್ಪನ್ನನಾದ

ದರಿಂದ ಎಂದರೆ ಕುಂಭರೂಪವಾದ ಮಾನದಿಂದ ಉತ್ಪನ್ನನಾದುದರಿಂದಲಾಗಲಿ ಅಗಸ್ತ್ಯನಿಗೆ ಮಾನ್ಯನೆಂಬ ಹೆಸರು ಪ್ರಸಿದ್ಧವಾಗಿದೆಯೆಂದು ತಿಳಿಸಿದೆ.

ಇದೇ ಆನುಪೂರ್ವಿಯಲ್ಲಿ ಮಾಂದಾರ್ಯಸ್ಯ ಮಾನ್ಯಸ್ಯ ಕಾರೋಃ ಎಂಬ ಪದಗಳು ಮುಂದಿನ ಎಂಥರೆ ೧೬೬ ೧೬೭ ಮತ್ತು ೧೬೮ನೇ ಸೂಕ್ತಗಳ ಕೊನೆಯ ಋಕ್ಕುಗಳಲ್ಲಿಯೂ ಇರುತ್ತವೆ.

ಸ್ತೋಮಃ, ಗೀಃ ಎಂದು ಸ್ತುತಿಪರ್ಯಾಯವಾದ ಎರಡು ಪದಗಳಿವೆ. ಇವು ಸ್ತುತಿಯ ಪ್ರಕಾರಾಂತರ ಗಳನ್ನು ಸೂಚಿಸುತ್ತವೆ. ಸ್ತೋಮದ ಮಹತ್ತ್ವದ ವಿಷಯವನ್ನೂ ಋಗ್ವೇದ ಸಂಹಿತೆಯ ೧೧ನೇ ಭಾಗದ 50–52 ನೇ ಪುಟಗಳಲ್ಲಿ ವಿಶದವಾಗಿ ತಿಳಸಿದೆ.

ವ್ಯಾಕರಣಪ್ರಕ್ರಿಯಾ

ಇಷಾ–ಸಾವೇಕಾಚಸ್ತೃತೀಯಾದಿಃ (ಪಾ. ಸೂ. ೬-೧-೧೬೮) ಎಂಬುದರಿಂದ ತೃತೀಯಾವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಯಾಸೀಷ್ಟ–ಯಾ ಪ್ರಾಪಣೇ. ಧಾತು ವ್ಯತ್ಯಯೋ ಬಹುಲಮ್(ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲಿಙ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. ಲಿಙಃ ಸೀಯುಟ್ (ಪಾ. ಸೂ. ೩-೪-೧೦೨) ಎಂಬುದರಿಂದ ಸೀಯುಟಾಗಮ ಸುಟ್‌ತಿಥೋಃ (ಪಾ. ಸೂ. ೩-೪-೧೦೭) ಎಂಬುದರಿಂದ ಸುಟಾಗಮ, ಯಲೋಪ. ವ್ಯತ್ಯಯದಿಂದಲೇ ಏಕವಚನ ಬಂದಿದೆ. ತಿಙಂತನಿಘಾತಸ್ವರ ಬರುತ್ತದೆ.

ವಿದ್ಯಾಮ—ವಿದ್‌ಲೃ ಲಾಭೇ. ಧಾತು. ಲಿಙ್ ಉತ್ತಮಪುರುಷ ಬಹುವಚನಾಂತರೂಪ ಪಾದಾದಿ ಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಯಾಸುಟ್ ಉದಾತ್ತವೆಂಬುದರಿಂದ ಆಕಾರ ಉದಾತ್ತವಾಗುತ್ತದೆ.

ವೃಜನಮ್—ವೃಜೀ ವರ್ಜನೇ. ಧಾತು. ಕ್ಯೂಪ್ಯೂವೃಜಿ—(ಉ. ಸೂ. ೨-೩೪೯) ಎಂಬುದರಿಂದ ಕ್ಯು ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಯುವೋರನಾಕೌ (ಪಾ. ಸೂ. ೭-೧-೧) ಎಂಬುದರಿಂದ ಅನಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ಜೀರದಾನುಮ್—ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ॥ ೧೫ ॥

ಇಲ್ಲಿಗೆ ೧೬೫ನೇ ಸೂಕ್ತ ಸಮಾಪ್ತವಾದುದು.



ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕಶ್ರೀವೀರಬುಕ್ಕಭೂಪಾಲ-

ಸಾಮ್ರಾಜ್ಯಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥ-

ಪ್ರಕಾಶೇ ಋಕ್ಸಂಹಿತಾಭಾಷ್ಯೇ ದ್ವಿತೀಯಾಷ್ಟಕೇ ತೃತೀಯೋಽಧ್ಯಾಯಃ

॥ ಸಮಾಪ್ತಃ ॥

ಶ್ರೀಃ

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ

ಋಗ್ವೇದಸಂಹಿತೆಯ ದ್ವಿತೀಯಾಷ್ಟಕದಲ್ಲಿ

ಮೂರನೆಯ ಅಧ್ಯಾಯವು ಸಮಾಪ್ತವಾದುದು.

———:o:———

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।

ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥



———:o:———

